ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ವೈಷ್ಣವಖಂಡ

## ೩—೪

## ಬದರಿಕಾಶ್ರಮಮಾಹಾತ್ಮ್ಯ

ಮತ್ತು

## ಕಾರ್ತಿಕಮಾಸಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೭

# ಅರಿಕೆ

ಶ್ರೀ ಸ್ಕಾಂದಮಹಾಪುರಾಣದ ದ್ವಿತೀಯ ಮೂಲಖಂಡವಾದ ವೈಷ್ಣವ ಖಂಡದ ತೃತೀಯ ಚತುರ್ಥ ಭಾಗಗಳಾದ 'ಬದರಿಕಾಶ್ರಮಮಾಹಾತ್ಮ್ಯ' ಮತ್ತು 'ಕಾರ್ತಿಕಮಾಸಮಾಹಾತ್ಮ್ಯ'ಗಳು ಈ ಸಂಪುಟದಲ್ಲಿ ಸಮಾಪ್ತವಾಗಿ ರುತ್ತವೆ.

ಬದರಿಕಾಶ್ರಮಮಾಹಾತ್ಮ್ಯದಲ್ಲಿ ಬದರೀಯಾತ್ರಾವಿಧಾನ, ಆ ಕ್ಷೇತ್ರದ ಉತ್ಪತ್ತಿ, ಅಲ್ಲಿಯ ತೀರ್ಥಮಾಹಾತ್ಮ್ಯಗಳು ಮುಂತಾದ ವಿಷಯಗಳು ವಿವೃತ ವಾಗಿರುವುವು. ಕಾರ್ತಿಕಮಾಸಮಾಹಾತ್ಮ್ಯದಲ್ಲಿ, ಆ ಮಾಸದಲ್ಲಿ ಮಾನವನು ವ್ರತಿಯಾಗಿ ಮಾಡಬೇಕಾದ ವಿವಿಧ ಕರ್ತವ್ಯವಿಧಿಗಳನ್ನು ವರ್ಣಿಸಿರುವುದಲ್ಲದೆ, ವತ್ಸದ್ವಾದಶೀ, ಯಮತ್ರಯೋದಶೀ, ನರಕಚತುರ್ದಶೀ, ಕೌಮುದೀ ಮಹೋತ್ಸವ, ಬಲಿಪಾಡ್ಯಮಿ, ಗೋಕ್ರೀಡೋತ್ಸವ, ಯಮದ್ವಿತೀಯಾ, ಭೀಷ್ಮಪಂಚಕ, ಕಾರ್ತಿಕೋದ್ಯಾಪನವಿಧಿ, ವೈಕುಂಠಚತುರ್ದಶೀ ಮುಂತಾದ ವ್ರತಗಳೂ ವಿಶೇಷವಾಗಿ ವರ್ಣಿತಗಳಾಗಿರುವುವು.

ಈ ಮಾಹಾತ್ಮ್ಯದಲ್ಲಿ ವ್ರತವನ್ನು ತೊಟ್ಟವರು ಮುಖ್ಯವಾಗಿ ಅನುಸರಿಸ ಬೇಕಾದ ನಿಯಮಗಳನ್ನೂ, ಬಿಡಬೇಕಾದುವುಗಳನ್ನೂ ಪರಿಷ್ಕಾರವಾಗಿ ಹೇಳಿದೆ. ಇದನ್ನು ಸಂಗ್ರಹವಾಗಿ ಇಲ್ಲಿ ಕೊಡುವುದು ಅನುಚಿತವಾಗಲಾರದು.

ನಿಯಮಪರನಾಗಿ ಪುರುಷಾರ್ಥವನ್ನು ಬಯಸಿ ವ್ರತವನ್ನಾಚರಿಸುವ ಮಾನವನು ಕಾರ್ತಿಕದಲ್ಲಿ ಪ್ರತಿದಿನವೂ ಉಷಃಕಾಲಕ್ಕೆದ್ದು ಸ್ನಾನಮಾಡಬೇಕು. ರಾಧಾದಾಮೋದರ ಪೂಜೆ, ವಿಷ್ಣು ಶಿವನಾಮಸ್ಮರಣ, ಇಂದ್ರಿಯನಿಗ್ರಹ, ಮನೋನಿಗ್ರಹ, ಭೂತದಯಾ, ಈಶ್ವರಧ್ಯಾನ ಪೂಜನಗಳು, ಇವುಗಳನ್ನು ತಪ್ಪದೆ ನಡೆಸಬೇಕು. ಸತ್ಯವನ್ನೇ ನುಡಿಯತಕ್ಕುದು, ಈಶ್ವರನಿಗೆ ನಿವೇದಿಸಿದ ಅನ್ನವನ್ನೇ ಭುಜಿಸತಕ್ಕುದು, ನಕ್ತವ್ರತವನ್ನಾಚರಿಸತಕ್ಕುದೂ ಬಹು ಮುಖ್ಯ; ಧಾರಣೆ ಪಾರಣೆಗಳು, ಮೌನ, ಬ್ರಹ್ಮಚರ್ಯ, ಸತ್ಪುರುಷರ ಸಂಗ ಇವು ಕಾರ್ತಿಕವ್ರತಿಗೆ ಅತಿ ಮುಖ್ಯವಾದುವು. ಧಾತ್ರೀಪೂಜೆ, ನಿತ್ಯಪುರಾಣಶ್ರವಣ, ಭೂದಾನ, ಮಾತಾಪಿತೃಸೇವೆ, ಗುರುಸೇವೆ, ದೇವಾಲಯಗಮನ, ದೇವತಾದರ್ಶನ, ದೀಪದಾನ, ಗೋಪೂಜೆ, ತುಲಸೀಪೂಜೆ, ದೇವಬ್ರಾಹ್ಮಣಪೂಜನ, ಬ್ರಾಹ್ಮಣ ಭೋಜನ, ದೇವತುಲಸೀ ಅಶ್ವತ್ಥಗಳಿಗೆ ಲಕ್ಷಪ್ರದಕ್ಷಿಣ, ಅನ್ನದಾನ, ಅನಾಥ ರಕ್ಷಣ ಇವೇ ಮೊದಲಾದ ಸತ್ಕಾರ್ಯಗಳು ಕಾರ್ತಿಕವ್ರತಿಗೆ ಪರಮಾನುಷ್ಠೇಯ ಧರ್ಮನಿಯಮಗಳು.

ಇನ್ನು ಕಾರ್ತಿಕವ್ರತಿಯು ಅವಶ್ಯವಾಗಿಯೂ ಬಿಡಬೇಕಾದ ಕೆಲವು ವಿಷಯ ಗಳನ್ನು ಪ್ರಸ್ತಾಪಿಸಲಾಗುವುದು: ಇತರರ ದ್ರವ್ಯಕ್ಕೆ ಆಶೆಪಡುವುದು, ಹಣ

ತೆಗೆದುಕೊಂಡು ಇತರರ ಸೇವೆಮಾಡುವುದು, ಇತರರನ್ನು ಹಳಿಯುವುದು, ಇತರರ ಹಾಸಿಗೆಯಲ್ಲಿ ಶಯನ, ಪರಾನ್ನಸೇವನ, ನಿಷಿದ್ಧಪದಾರ್ಥ ಭೋಜನ ಇವು ಪಾಪಹೇತುಗಳಾದವುಗಳು; ಇವುಗಳನ್ನು ಬಿಟ್ಟುಬಿಡಬೇಕು. ಪಾಪಿಗಳ ಸಹವಾಸ, ಪರಸ್ತ್ರೀಗಮನ, ಇತರರ ಮೇಲ್ಮೆಯನ್ನುಕಂಡು ಅಸೂಯೆಪಡುವುದು, ಇತರರ ತಪ್ಪುಗಳನ್ನು ಎತ್ತಿ ಆಡುವುದು, ಇತರರಿಗೆ ಕೇಡುಕೋರುವುದು, ಕೆಲಸಕ್ಕೆಬಾರದ ಮಾತುಗಳನ್ನಾಡುವುದು, ಹೋಗಬಾರದೆಡೆಗೆ ಹೋಗುವುದು, ಅಸತ್‌ಶಾಸ್ತ್ರಶ್ರವಣ, ಸತ್‌ಶಾಸ್ತ್ರದಲ್ಲಿ ಅಪನಂಬಿಕೆ, ಕಳ್ಳತನ, ಸುಳ್ಳು, ಕೆಡುನುಡಿಯುವುದು ಇವೇ ಮೊದಲಾದುವು ವ್ರತಿಯ ನಿಯಮಗಳಿಗೆ ಭಂಗ ತರುವಂತಹುವು; ಇವುಗಳನ್ನು ವರ್ಜ್ಯಮಾಡತಕ್ಕುದು.

ಮೇಲೆ ಸಂಗ್ರಹವಾಗಿ ನಿರೂಪಿಸಿದ ಧರ್ಮಾಧರ್ಮ ವಿವೇಕವೆಲ್ಲವೂ ನಮ್ಮ ಪ್ರಾಚೀನಾರ್ಯರ ನಿಯಮಜೀವನವನ್ನು ಪ್ರತಿಬಿಂಬಿಸುವುದಾಗಿದೆಯಲ್ಲದೆ ಜಗತ್ತೇ ಇವುಗಳನ್ನು ಅನುಸರಿಸಿ ಶಾಂತಿಯನ್ನು ಪಡೆಯಲು ತಕ್ಕುದಾಗಿಯೂ ಇರುವುದು. ಇದಿಷ್ಟೇ ಅಲ್ಲದೆ ಈ ಪ್ರಸಕ್ತ ಸಂಪುಟದಲ್ಲಿ ವಿವಿಧ ಕಥಾಪ್ರಸಂಗಗಳ ಮೂಲಕ ಈ ಧರ್ಮಗಳನ್ನೇ ಮತ್ತಷ್ಟು ಸುಂದರವಾಗಿ ಪ್ರತಿಪಾದಿಸಿರುವುದು ಇದರ ವೈಶಿಷ್ಟ್ಯ. ಸ್ತ್ರೀಬಾಲವೃದ್ಧರಾದಿಯಾಗಿ ಎಲ್ಲರಿಗೂ ಇದು ಬೋಧಪ್ರದ ವಾಗಿರುವುದೆಂದರೆ ಅತಿಶಯೋಕ್ತಿಯಾಗಲಾರದು.

ಈ ಸಂಪುಟದ ಅನುವಾದ ಕಾರ್ಯದಲ್ಲಿ ನನ್ನ ಮಿತ್ರರಾದ ಶ್ರೀ ಎಲ್. ಗುಂಡಪ್ಪ, ಎಂ.ಎ. ಅವರು ನನಗೆ ತುಂಬ ಸಹಾಯಮಾಡಿರುತ್ತಾರೆ. ಅದಕ್ಕಾಗಿ ಅವರಿಗೆ ವಂದನೆಗಳು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರ ರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಸಿ.ಬಿ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸ ಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

## ಬದರಿಕಾಶ್ರಮಮಾಹಾತ್ಮ್ಯ



## ಕಾರ್ತಿಕಮಾಸಮಾಹಾತ್ಮ್ಯ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

ಶ್ರೀಬದರೀನಾಥಾಯ ನಮಃ

## ಅಥ ಶ್ರೀ ಬದರಿಕಾಶ್ರಮಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಬದರೀಕ್ಷೇತ್ರ ಶ್ರೇಷ್ಠತ್ವನಿರೂಪಣವರ್ಣನಂ

**ಶೌನಕ ಉವಾಚ :—**

**ಸೂತ ಸೂತ ಮಹಾಭಾಗ ಸರ್ವಧರ್ಮವಿದಾಂ ವರ ।**
**ಸರ್ವಶಾಸ್ತ್ರಾರ್ಥತತ್ತ್ವಜ್ಞ ಪುರಾಣೇ ಪರಿನಿಷ್ಠಿತ ॥ ೧ ॥**
**ವ್ಯಾಸಃ ಸತ್ಯವತೀಪುತ್ರೋ ಭಗವಾನ್ವಿಷ್ಣುರವ್ಯಯಃ ।**
**ತಸ್ಯ ಯತ್ಪ್ರಿಯಶಿಷ್ಯಸ್ತ್ವಂ ತ್ವತ್ತೋ ವೇತ್ತಾ ನ ಕಶ್ಚನ ॥ ೨ ॥**

---

### ಕನ್ನಡದ ಅನುವಾದ

ಬದರಿಕಾಶ್ರಮದ ಶ್ರೇಷ್ಠತ್ವನಿರೂಪಣವರ್ಣನ

೧. ಶೌನಕನು ಪ್ರಶ್ನೆಮಾಡುತ್ತಾನೆ:—ಎಲೈ ಸೂತನೆ! ನೀನೇ ಮಹಾ ಪುಣ್ಯಶಾಲಿಯು; ಸಕಲ ಧರ್ಮಗಳನ್ನೂ ತಿಳಿದವರಲ್ಲಿ ಉತ್ತಮನಾದವನು; ಸರ್ವಶಾಸ್ತ್ರಾರ್ಥಗಳ ತತ್ತ್ವಗಳನ್ನೂ ಅರಿತವನು; ಪುರಾಣೇತಿಹಾಸಗಳಲ್ಲಿ ಚೆನ್ನಾಗಿ ಪರಿಶ್ರಮವುಳ್ಳವನು.

೨. ಎಲೈ ಪೌರಾಣಿಕನೇ! ಸತ್ಯವತೀಸುತನಾದ ವ್ಯಾಸಮಹರ್ಷಿಯು ಶಾಶ್ವತನಾದ ಮಹಾವಿಷ್ಣುವಿನ ಅಂಶವೆಂದೇ ಹೇಳುವರು. ಆತನಿಗೆ ನೀನು ಅತ್ಯಂತ ಪ್ರೀತಿಪಾತ್ರನಾದ ಶಿಷ್ಯನಾಗಿರುವುದರಿಂದ ನಿನಗಿಂತಲೂ ಶಾಸ್ತ್ರಜ್ಞರಾದವರು ಮತ್ತೊಬ್ಬರಿಲ್ಲ.

ಪ್ರಾಪ್ತೇ ಕಲಿಯುಗೇ ಘೋರೇ ಸರ್ವಧರ್ಮಬಹಿಷ್ಕೃತೇ ।
ಜನಾ ವೈ ದುಷ್ಟಕರ್ಮಾಣಃ ಸರ್ವಧರ್ಮವಿವರ್ಜಿತಾಃ ॥ ೩ ॥
ಕ್ಷುದ್ರಾಯುಷಃ ಕ್ಷುದ್ರಪ್ರಾಣಬಲವೀರ್ಯತಪಃಕ್ರಿಯಾಃ ।
ಅಧರ್ಮನಿರತಾಃ ಸರ್ವೇ ವೇದಶಾಸ್ತ್ರವಿವರ್ಜಿತಾಃ ॥ ೪ ॥
ತೀರ್ಥಾಟನತಪೋದಾನಹರಿಭಕ್ತಿವಿವರ್ಜಿತಾಃ ।
ಕಥಮೇಷಾಮಲ್ಪಕಾನಾಮುದ್ಧಾರೋಽಲ್ಪಪ್ರಯತ್ನತಃ ॥ ೫ ॥
ತೀರ್ಥಾನಾಮುತ್ತಮಂ ತೀರ್ಥಂ ಕ್ಷೇತ್ರಾಣಾಮುತ್ತಮಂ ತಥಾ ।
ಮುಮುಕ್ಷೂಣಾಂ ಕುತಃ ಸಿದ್ಧಿಃ ಕುತ್ರ ವಾ ಋಷಿಸಂಚಯಃ ॥ ೬ ॥
ಕುತ್ರ ವಾಽಲ್ಪಪ್ರಯತ್ನೇನ ತಪೋಮಂತ್ರಾಶ್ಚ ಸಿದ್ಧಿದಾಃ ।
ಕುತ್ರ ವಾ ವಸತಿ ಶ್ರೀಮಾನ್ ಜಗತಾಮೀಶ್ವರೇಶ್ವರಃ ।
ಭಕ್ತಾನಾಮನುರಕ್ತಾನಾಮನುಗ್ರಹಕೃಪಾಲಯಃ ॥ ೭ ॥

---

೩–೪. ಘೋರವಾದುದೂ ಸಕಲಧರ್ಮವರ್ಜಿತವಾದುದೂ ಎನಿಸಿದ ಕಲಿಯುಗವು ಪ್ರಾಪ್ತವಾಗಲು ಲೋಕದ ಜನರೆಲ್ಲರೂ ಐಹಿಕಾಮುಷ್ಮಿಕಗಳೆರಡಕ್ಕೂ ಪ್ರಯೋಜನಕ್ಕೆಬಾರದ ಹೇಯವಾದ ಕರ್ಮಗಳಲ್ಲಿಯೇ ನಿರತರಾಗಿ ಶಾಸ್ತ್ರೋದಿತಗಳಾದ ಸಕಲ ಸದ್ಧರ್ಮಗಳನ್ನೂ ಕೈಬಿಡುವರು. ಆದುದರಿಂದ ಅವರು ಅಲ್ಪಾಯುಷ್ಯವಂತರಾಗುವರು. ಸ್ವಲ್ಪಗಳಾದ ಪ್ರಾಣ, ಬಲ, ವೀರ್ಯ, ತಪಸ್ಸು, ಕರ್ಮಗಳಿಂದೊಡಗೂಡಿರುವರು. ಸಕಲರೂ ಅಧರ್ಮಕಾರ್ಯಗಳಲ್ಲಿಯೇ ನಿರತರಾಗಿ ವೇದಶಾಸ್ತ್ರಗಳನ್ನೇ ಮರೆತುಬಿಡುವರು.

೫. ತೀರ್ಥಯಾತ್ರೆಗಳು, ತಪಸ್ಸು, ದಾನಕಾರ್ಯಗಳು, ಧರ್ಮಗಳು, ವಿಷ್ಣುಭಕ್ತಿ ಇವೇ ಮೊದಲಾದ ಸಕಲ ಸತ್ಕರ್ಮಗಳಿಂದ ಬಾಹಿರರಾಗಿರುವರು. ಕ್ಷುದ್ರರಾದ ಈ ಮಾನವರಿಗೆ ಸ್ವಲ್ಪ ಪ್ರಯತ್ನದಿಂದಲೇ ಉದ್ಧಾರವಾಗುವ ಮಾರ್ಗವಾವುದು?

೬. ಎಲೈ ಮಹರ್ಷಿಯೇ! ತೀರ್ಥಗಳಲ್ಲಿ ಉತ್ತಮವಾದ ತೀರ್ಥವು ಯಾವುದು? ಕ್ಷೇತ್ರಗಳಲ್ಲೆಲ್ಲ ಶ್ರೇಷ್ಠವಾದ ಕ್ಷೇತ್ರವಾವುದು? ಮೋಕ್ಷಾಭಿಲಾಷಿಗಳಿಗೆ ಎಲ್ಲಿ ತಪಸ್ಸಿದ್ಧಿಯುಂಟಾಗುವುದು? ಮಹರ್ಷಿಗಳ ಸಮೂಹವು ಎಲ್ಲಿ ನೆರೆದಿರುತ್ತದೆ?

೭. ಅಲ್ಪಪ್ರಯತ್ನ ಮಾತ್ರದಿಂದಲೇ ಯಾವ ಸ್ಥಳದಲ್ಲಿ ತಪಸ್ಸೂ ಮಂತ್ರಗಳೂ ಶೀಘ್ರ ಫಲಗಳನ್ನು ಕೊಡುವುವು? ಷಡ್ಗುಣೈಶ್ವರ್ಯಪೂರಿತನೂ, ಲೋಕೇಶ್ವರರಿಗೆ ನಾಯಕನೂ, ತನ್ನಲ್ಲಿಯೇ ಅನುರಕ್ತರಾದ ಭಕ್ತರಿಗೆ ಅನುಗ್ರಹವನ್ನು ಮಾಡುವ ಕೃಪಾಸಮುದ್ರನೂ ಆದ ಸ್ವಾಮಿಯು ನಿತ್ಯವೂ ಎಲ್ಲಿ ವಾಸಮಾಡುತ್ತಿರುವನು?

ಏತದನ್ಯಚ್ಚ ಸರ್ವಂ ಮೇ ಪರಾರ್ಥೈಕಪ್ರಯೋಜನಂ ।
ಬ್ರೂಹಿ ಭದ್ರಾಯ ಲೋಕಾನಾಮನುಗ್ರಹವಿಚಕ್ಷಣ ॥ ೮ ॥

ಸೂತ ಉವಾಚ :—

ಸಾಧು ಸಾಧು ಮಹಾಭಾಗ ಭವಾನ್ ಪರಹಿತೇ ರತಃ ।
ಹರಿಭಕ್ತಿಕೃತಾಸಕ್ತಿಪ್ರಕ್ಷಾಲಿತಮನೋಮಲಃ ॥ ೯ ॥
ಅಥ ಮೇ ದೇವಕೀಪುತ್ರೋ ಹೃತ್ಪದ್ಮಮಧಿರೋಹತಿ ।
ಪ್ರಸಂಗಾತ್ ತವ ವಿಪ್ರರ್ಷೇ ದುರ್ಲಭಃ ಸಾಧುಸಂಗಮಃ ॥ ೧೦ ॥

ಹರತಿ ದುಷ್ಕೃತಸಂಚಯಮುತ್ತಮಾಂ
ಗತಿಮಲಂ ತನುತೇ ತನುಮಾನಿನಾಂ ।
ಅಧಿಕಪುಣ್ಯವಶಾದವಶಾತ್ಮನಾಂ
ಜಗತಿ ದುರ್ಲಭಸಾಧುಸಮಾಗಮಃ ॥ ೧೧ ॥
ಹರತಿ ಹೃದಯಬಂಧಂ ಕರ್ಮಪಾಶಾರ್ದಿತಾನಾಂ
ವಿತರತಿ ಪದಮುಚ್ಚೈರಲ್ಪಜಲ್ಪೈಕಭಾಜಾಂ ।
ಜನನಮರಣಕರ್ಮಶ್ರಾಂತವಿಶ್ರಾಂತಿಹೇತು
ಸ್ತ್ರಿಜಗತಿ ಮನುಜಾನಾಂ ದುರ್ಲಭಃ ಸತ್ಪ್ರಸಂಗಃ ॥ ೧೨ ॥

---

೮. ಲೋಕಾನುಗ್ರಹ ಕಾರ್ಯದಲ್ಲಿ ವಿಚಕ್ಷಣನೆನಿಸಿದ ಎಲೈ ಸೂತನೆ! ಪರಮಮಂಗಳಪ್ರದವೂ, ಮೋಕ್ಷವೆಂಬ ಒಂದೇ ಉತ್ತಮ ಪ್ರಯೋಜನವುಳ್ಳದುದೂ ಆದ ಈ ಚರಿತ್ರೆಯನ್ನೂ ಇತರ ವಿಷಯಗಳನ್ನೂ ವಿಸ್ತಾರವಾಗಿ ತಿಳಿಸು.

೯. ಸೂತನು ಹೇಳುತ್ತಾನೆ:—ಮಹಾಭಾಗ್ಯಶಾಲಿಯಾದ ಎಲೈ ಶೌನಕನೆ! ನಿನ್ನ ಪ್ರಶ್ನೆಯು ಬಹಳ ಸಾಧುವಾದುದಾಗಿದೆ. ನೀನು ಯಾವಾಗಲೂ ಪರಹಿತದಲ್ಲಿಯೇ ಆಸಕ್ತನಾಗಿರುವೆ. ವಿಷ್ಣುಭಕ್ತಿಯಲ್ಲಿರುವ ಆಸಕ್ತಿಯಿಂದ ನಿನ್ನ ಮನಸ್ಸಿನ ದೋಷಗಳೆಲ್ಲವನ್ನೂ ನಿರ್ಮೂಲಗೊಳಿಸಿರುವೆ.

೧೦. ಓ ಬ್ರಾಹ್ಮಣೋತ್ತಮಾ! ನಿನ್ನೊಡನೆ ಮಾಡುತ್ತಿರುವ ಈ ಪ್ರಸಂಗದ ಫಲದ ರೂಪವಾಗಿ ಶ್ರೀಕೃಷ್ಣನು ನನ್ನ ಹೃದಯಕಮಲದಲ್ಲಿ ರೂಪವನ್ನು ತೋರಿಸುತ್ತಿರುವನು. ಸಾಧುಗಳ ಸಂಪರ್ಕವೆಂಬುದು ಅತ್ಯಂತ ದುರ್ಲಭವೇ ಸರಿ.

೧೧. ಸಾಧು ಸಮಾಗಮವು ಸಮಸ್ತ ಪಾಪಗಳ ಸಮೂಹವನ್ನು ನಾಶ ಮಾಡುವುದು ; ದೇಹಾಭಿಮಾನವುಳ್ಳ ಭಕ್ತರಿಗೆ ಉತ್ತಮಲೋಕವಾಸವನ್ನು ಸಂಪಾದಿಸಿಕೊಡುವುದು. ಇದು ಅತ್ಯಧಿಕವಾದ ಪುಣ್ಯದಫಲವಾಗಿ ಲಭಿಸುವುದೇ ಹೊರತು ಇಂದ್ರಿಯಪರವಶರಾದ ಮಾನವರಿಗೆ ಲೋಕದಲ್ಲಿ ದುರ್ಲಭವಾಗಿರುವುದು.

೧೨. ಸಜ್ಜನರ ಸಹವಾಸವು ಕರ್ಮಪಾಶಗಳಲ್ಲಿ ಸಿಕ್ಕಿ ಬಳಲುತ್ತಿರುವವರ

ಸೂತ ಉವಾಚ :—

ಅಯಂ ಪ್ರಶ್ನಃ ಪುರಾ ಸಾಧೋ ಸ್ಕಂದೇನಾಕಾರಿ ಸರ್ವತಃ ।
ಕೈಲಾಸಶಿಖರೇ ರಮ್ಯೇ ಋಷೀಣಾಂ ಪರಿಶೃಣ್ವತಾಂ ।
ಪುರತೋ ಗಿರಿಜಾಭರ್ತುಃ ಕರ್ತುಂ ನಿಃಶ್ರೇಯಸಂ ಸತಾಂ ॥ ೧೩ ॥

ಸ್ಕಂದ ಉವಾಚ :—

ಭಗವನ್ ಸರ್ವಲೋಕಾನಾಂ ಕರ್ತಾ ಹರ್ತಾ ಪಿತಾ ಗುರುಃ ।
ಕ್ಷೇಮಾಯ ಸರ್ವಜಂತೂನಾಂ ತಪಸೇ ಕೃತನಿಶ್ಚಯಃ ॥ ೧೪ ॥
ಕಲಿಕಾಲೇ ಹ್ಯನುಪ್ರಾಪ್ತೇ ವೇದಶಾಸ್ತ್ರವಿವರ್ಜಿತೇ ।
ಕುತ್ರ ವಾ ವಸತಿ ಶ್ರೀಮಾನ್ ಭಗವಾನ್ ಸಾತ್ವತಾಂ ಪತಿಃ ॥ ೧೫ ॥
ಕ್ಷೇತ್ರಾಣಿ ಕಾನಿ ಪುಣ್ಯಾನಿ ತೀರ್ಥಾನಿ ಸರಿತಸ್ತಥಾ ।
ಕೇನ ವಾ ಪ್ರಾಪ್ಯತೇ ಸಾಕ್ಷಾತ್ ಭಗವಾನ್ ಮಧುಸೂದನಃ ।
ಶ್ರದ್ಧಧಾನಾಯ ಭಗವನ್ ಕೃಪಯಾ ವದ ಮೇ ಪಿತಃ ॥ ೧೬ ॥

---

ಹೃದಯಬಂಧವನ್ನು ಬಿಡಿಸುವುದು. ಸ್ವಲ್ಪವಾದ ಸಂಭಾಷಣಾದಿಗಳನ್ನು ಮಾಡಿದವರಿಗೂ ಸಹ ಉತ್ತಮವಾದ ಸ್ಥಾನವನ್ನು ಸಾಧ್ಯವಾಗಿ ಮಾಡುವುದು. ಜನನ, ಮರಣ, ಕರ್ಮಗಳಿಂದ ಶ್ರಾಂತರಾದವರಿಗೆ ವಿಶ್ರಾಂತಿಯನ್ನು ಕೊಡುವುದು. ಇಂತಹ ಸತ್ಸಹವಾಸವು ಮೂರುಲೋಕಗಳ ನಿವಾಸಿಗಳಿಗೂ ಕಷ್ಟದಿಂದ ಮಾತ್ರವೇ ಲಭ್ಯವಾಗಿರುವುದು.

೧೩. ಸಾಧುವಾದ ಎಲೈ ಶೌನಕನೇ! ಪೂರ್ವದಲ್ಲಿ ಕೈಲಾಸಪರ್ವತದ ಶಿಖರದಲ್ಲಿ ಪರಮೇಶ್ವರನು ಗಿರಿಜಾಸಮೇತನಾಗಿ ಕುಳಿತಿರಲು, ಮಹರ್ಷಿಗಳೆಲ್ಲರೂ ಕುತೂಹಲದಿಂದ ಕೇಳುತ್ತಿರುವ ಸಮಯದಲ್ಲಿ ಷಣ್ಮುಖಸ್ವಾಮಿಯು ಸತ್ಪುರುಷರನ್ನು ಮೋಕ್ಷ ಮಾರ್ಗದಲ್ಲಿ ನಿರತರನ್ನಾಗಿ ಮಾಡುವ ಅಭಿಲಾಷೆಯಿಂದ ಈ ಪ್ರಶ್ನೆಯನ್ನೇ ಮಹೇಶ್ವರನನ್ನು ಕೇಳಿದನು.

೧೪. ಸ್ಕಂದನು ಹೇಳುತ್ತಾನೆ:—ಸ್ವಾಮಿಯೆ! ನೀನು ಸಕಲಲೋಕಗಳಿಗೂ ಸೃಷ್ಟಿ ಸ್ಥಿತಿ ಲಯಗಳನ್ನುಂಟುಮಾಡುವವನು. ನನಗೆ ತಂದೆಯೂ ಗುರುವೂ ಆಗಿರುವೆ. ಸಕಲ ಪ್ರಾಣಿಗಳ ಕ್ಷೇಮಕ್ಕೋಸ್ಕರ ತಪಸ್ಸನ್ನು ಮಾಡಲು ನಿಶ್ಚಯಿಸಿರುವೆ.

೧೫. ವೇದಶಾಸ್ತ್ರಗಳು ಪ್ರಮಾಣಗಳೆನಿಸದ ಕಲಿಕಾಲವು ಸಂಪ್ರಾಪ್ತವಾಗಲು ಸಜ್ಜನ ಸಂರಕ್ಷಕನಾದ ಶ್ರೀಮನ್ನಾರಾಯಣನು ಎಲ್ಲಿ ವಾಸಮಾಡುತ್ತಿರುವನು?

೧೬. ಯಾವ ಕ್ಷೇತ್ರಗಳೂ, ತೀರ್ಥಗಳೂ, ನದಿಗಳೂ ಅಗ ಪುಣ್ಯತಮಗಳೆನಿಸುವುವು? ಮಧುಸೂದನನು ಯಾರಿಗೆ ಸಾಕ್ಷಾತ್ಕಾರವನ್ನು ಕೃಪೆಮಾಡು

ಶ್ರೀ ಮಹಾದೇವ ಉವಾಚ:—
ಬಹೂನಿ ಸಂತಿ ತೀರ್ಥಾನಿ ಕ್ಷೇತ್ರಾಣಿ ಚ ಷಡಾನನ ।
ಹರಿವಾಸನಿವಾಸೈಕಪರಾಣಿ ಪರಮಾರ್ಥಿನಾಂ ॥ ೧೭ ॥
ಕಾಮ್ಯಾನಿ ಕಾನಿಚಿತ್ ಸಂತಿ ಕಾನಿಚಿನ್ಮುಕ್ತಿದಾನ್ಯಪಿ ।
ಇಹಾಮುತ್ರಾರ್ಥದಾನ್ಯೇವ ಬಹುಪುಣ್ಯಪ್ರದಾನಿ ವೈ ॥ ೧೮ ॥
ಗಂಗಾ ಗೋದಾವರೀ ರೇವಾ ತಪತೀ ಯಮುನಾ ಸರಿತ್ ।
ಕ್ಷಿಪ್ರಾ ಸರಸ್ವತೀ ಪುಣ್ಯಾ ಗೌತಮೀ ಕೌಶಿಕೀ ತಥಾ ॥ ೧೯ ॥
ಕಾವೇರೀ ತಾಮ್ರಪರ್ಣೀ ಚ ಚಂದ್ರಭಾಗಾ ಮಹೇಂದ್ರಜಾ ।
ಚಿತ್ರೋತ್ಪಲಾ ವೇತ್ರವತೀ ಸರಯೂಃ ಪುಣ್ಯವಾಹಿನೀ ॥ ೨೦ ॥
ಚರ್ಮಣ್ವತೀ ಶತದ್ರೂಶ್ಚ ಪಯಸ್ವಿನೀ ಅತ್ರಿಸಂಭವಾ ।
ಗಂಡಿಕಾ ಬಾಹುದಾ ಸರ್ವಾಃ ಪುಣ್ಯಾಃ ಸಿಂಧುಸರಸ್ವತೀ ॥ ೨೧ ॥
ಭುಕ್ತಿಮುಕ್ತಿಪ್ರದಾಶ್ಚೈತಾಃ ಸೇವ್ಯಮಾನಾಃ ಮುಹುರ್ಮುಹುಃ ।
ಅಯೋಧ್ಯಾ ದ್ವಾರಿಕಾ ಕಾಶೀ ಮಧುರಾಽವಂತಿಕಾ ತಥಾ ॥ ೨೨ ॥
ಕುರುಕ್ಷೇತ್ರಂ ರಾಮತೀರ್ಥಂ ಕಾಂಚೀ ಚ ಪುರುಷೋತ್ತಮಂ ।
ಪುಷ್ಕರಂ ದುರ್ದುರಂ ಕ್ಷೇತ್ರಂ ವಾರಾಹಂ ವಿಧಿನಿರ್ಮಿತಂ ।
ಬದರ್ಯಾಖ್ಯಂ ಮಹಾಪುಣ್ಯಂ ಕ್ಷೇತ್ರಂ ಸರ್ವಾರ್ಥಸಾಧನಂ ॥ ೨೩ ॥

---

ವನು? ಈ ವಿಷಯಗಳೆಲ್ಲವನ್ನೂ ಕೇಳಬೇಕೆಂಬ ಶ್ರದ್ಧೆಯುಳ್ಳ ನನಗೆ ಕೃಪೆಯಿಂದ ವಿಸ್ತಾರವಾಗಿ ನಿರೂಪಿಸುವವನಾಗು.

೧೭. ಮಹಾದೇವನು ಹೇಳುತ್ತಾನೆ:—ಎಲೈ ಷಣ್ಮುಖನೆ! ಪರಮಾತ್ಮನು ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಆತನು ನೆಲಸಿರುವ ಏಕಾಂತಸ್ಥಳಗಳೂ, ತೀರ್ಥಗಳೂ, ಕ್ಷೇತ್ರಗಳೂ ಅಸಂಖ್ಯಾತಗಳಾಗಿರುವುವು.

೧೮. ಅವುಗಳಲ್ಲಿ ಕೆಲವು ಐಹಿಕಾಮುಷ್ಮಿಕ ಸೌಖ್ಯಗಳನ್ನು ಕೊಡುವುವು. ಹಲವು ಮೋಕ್ಷವನ್ನು ಸಂಪಾದಿಸಿಕೊಡುವುವು. ಇಹದಲ್ಲಿಯೂ ಪರದಲ್ಲಿಯೂ ಈಪ್ಸಿತಗಳನ್ನೂ ಬಹಳವಾದ ಪುಣ್ಯವನ್ನೂ ಉಂಟುಮಾಡುವುವು.

೧೯–೨೩. ಗಂಗೆ, ಗೋದಾವರಿ, ರೇವಾ, ತಪತಿ, ಯಮುನಾ, ಕ್ಷಿಪ್ರಾ, ಸರಸ್ವತಿ, ಪಾವನವಾದ ಗೌತಮೀ, ಕೌಶಿಕೆ, ಕಾವೇರಿ, ತಾಮ್ರಪರ್ಣಿ, ಚಂದ್ರ ಭಾಗಾ, ಮಹೇಂದ್ರಜಾ, ಚಿತ್ರೋತ್ಪಲಾ, ವೇತ್ರವತಿ, ಪುಣ್ಯಪ್ರವಾಹಿನಿಯಾದ ಸರಯೂ, ಚರ್ಮಣ್ವತಿ, ಶತದ್ರು, ಪಯಸ್ವಿನಿ, ಅತ್ರಿಜಾ, ಗಂಡಕಾ, ಬಾಹುದಾ, ಸಿಂಧು, ಸರಸ್ವತಿಗಳೆಂಬ ಎಲ್ಲ ನದಿಗಳೂ ಪುಣ್ಯಪ್ರದಗಳು. ಇವುಗಳೆಲ್ಲವೂ ಮಾನವರಿಗೆ ಸೌಖ್ಯಗಳನ್ನೂ ಮೋಕ್ಷವನ್ನೂ ಕೊಡುವುದರಿಂದ ಇವುಗಳ

ಅಯೋಧ್ಯಾಂ ವಿಧಿವದ್ದೃಷ್ಟ್ವಾ ಪುರೀಂ ಮುಕ್ತ್ಯೇಕಸಾಧನೀಂ ।
ಸರ್ವಪಾಪವಿನಿರ್ಮುಕ್ತಾಃ ಪ್ರಯಾಂತಿ ಹರಿಮಂದಿರಂ ॥ ೨೪ ॥
ವಿವಿಧವಿಷ್ಣುನಿಷೇವಣಪೂರ್ವಕಾ
ಶ್ಚರಿತಪೂಜನನರ್ತನಕೀರ್ತನಾಃ ।
ಗೃಹಮುಪಾಸ್ಯ ಹರೇರನುಚಿಂತನಾ
ಜ್ಜಿತಗೃಹಾರ್ಜಿತಮೃತ್ಯುಪರಾಕ್ರಮಾಃ ॥ ೨೫ ॥
ಸ್ವರ್ಗದ್ವಾರೇ ನರಃ ಸ್ನಾತ್ವಾ ದೃಷ್ಟ್ವಾ ರಾಮಾಲಯಂ ಶುಚಿಃ ।
ನ ತಸ್ಯ ಕೃತ್ಯಂ ಪಶ್ಯಾಮಿ ಕೃತಕೃತ್ಯೋ ಭವೇದ್ಯತಃ ॥ ೨೬ ॥
ದ್ವಾರಕಾಯಾಂ ಹರಿಃ ಸಾಕ್ಷಾತ್ ಸ್ವಾಲಯಂ ನೈವ ಮುಂಚತಿ ।
ಅದ್ಯಾಪಿ ಭವನಂ ಕೈಶ್ಚಿತ್ ಪುಣ್ಯವದ್ಭಿಃ ಪ್ರದೃಶ್ಯತೇ ॥ ೨೭ ॥

---

ಸೇವೆಯನ್ನು ಪುನಃ ಪುನಃ ಮನುಷ್ಯರು ಮಾಡಬೇಕು. ಅಯೋಧ್ಯೆ, ದ್ವಾರಕೆ, ಕಾಶಿ, ಮಧುರೆ, ಅವಂತಿ, ಕುರುಕ್ಷೇತ್ರ, ರಾಮತೀರ್ಥ, ಕಂಚಿ, ಪುರುಷೋತ್ತಮ ಕ್ಷೇತ್ರ, ಪುಷ್ಕರ, ದುರ್ದುರ, ಬ್ರಹ್ಮನಿರ್ಮಿತವಾದ ವರಾಹಕ್ಷೇತ್ರ ಇವುಗಳು ಉತ್ತಮ ಕ್ಷೇತ್ರಗಳೆನಿಸಿರುವುವು. ಅಲ್ಲದೆ ಮಹಾಪುಣ್ಯಪ್ರದಾಯಕವಾದ ಬದರೀಕ್ಷೇತ್ರವು ಸಕಲಾಭೀಷ್ಟಗಳನ್ನೂ ಸಾಧಿಸುವ ಉಪಾಯವಾಗಿರುವುದು.

೨೪. ಮೋಕ್ಷಪದವಿಗೆ ಅನನ್ಯಸಾಧನವೆನಿಸಿದ ಅಯೋಧ್ಯಾನಗರಿಯನ್ನು ವಿಧ್ಯುಕ್ತಪ್ರಕಾರದಿಂದ ದರ್ಶನಮಾಡಲು ಜನರು ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ವಿಷ್ಣುನಿವಾಸವಾದ ವೈಕುಂಠವನ್ನು ಸೇರುವರು.

೨೫. ಈ ವಿವಿಧ ಕ್ಷೇತ್ರಗಳಲ್ಲಿ ಸನ್ನಿಹಿತನಾಗಿರುವ ಮಹಾವಿಷ್ಣುವಿನ ಮೂರ್ತಿಗಳಿಗೆ ಸ್ನಾನಪೂರ್ವಕವಾಗಿ ಪೂಜೆ, ನರ್ತನ, ಕೀರ್ತನಗಳ ಸೇವೆಗಳನ್ನು ಸಲ್ಲಿಸುವುದರಿಂದ ಮನುಜರು ಸಂಸಾರಬಂಧವನ್ನು ಕಳಚಿ ನಿರಂತರವೂ ಹರಿಧ್ಯಾನಪರಾಯಣರಾಗಿರುವುದರಿಂದ ಸಂಸಾರದಲ್ಲಿ ಅವಶ್ಯಕವಾಗಿ ಸಂಭವಿಸುವ ಮರಣವನ್ನೂ ಜಯಿಸಬಲ್ಲ ಪರಾಕ್ರಮವುಳ್ಳವರಾಗಿರುವರು.

೨೬. ಸ್ವರ್ಗದ್ವಾರದಲ್ಲಿ ಸ್ನಾನವನ್ನು ಮಾಡಿಕೊಂಡು ಶುಚಿರ್ಭೂತನಾಗಿ ಯಾವನು ಶ್ರೀರಾಮಾಲಯವನ್ನು ನೋಡುವನೊ, ಅವನು ಮತ್ತೆ ಯಾವ ಸಾಧನವನ್ನೂ ಮಾಡಬೇಕಾದುದಿಲ್ಲ. ಅಷ್ಟರಿಂದಲೇ ಆ ಮನುಜನು ಕೃತಕೃತ್ಯನಾಗುವನು.

೨೭. ದ್ವಾರಕೆಯಲ್ಲಿ ನಿತ್ಯಸನ್ನಿಹಿತನಾದ ಶ್ರೀಹರಿಯು ತನ್ನ ಮಂದಿರವನ್ನು ಎಂದಿಗೂ ತ್ಯಜಿಸುವುದಿಲ್ಲ. ಇಂದಿಗೂ ಸಹ ಆತನ ದಿವ್ಯಭವನವು ಮಹಾಪುಣ್ಯಶಾಲಿಗಳಾದ ಕೆಲವರಿಗೆ ದೃಗ್ಗೋಚರವಾಗುವುದು.

ಗೋಮತ್ಯಾಂ ತು ನರಃ ಸ್ನಾತ್ವಾ ದೃಷ್ಟ್ವಾ ಕೃಷ್ಣಮುಖಾಂಬುಜಂ ।
ಮುಕ್ತಿಃ ಪ್ರಜಾಯತೇ ಪುಂಸೋ ವಿನಾ ಸಾಂಖ್ಯಂ ಷಡಾನನ ॥ ೨೮ ॥
ಅಸೀವರುಣಯೋರ್ಮಧ್ಯೇ ಪಂಚಕ್ರೋಶ್ಯಾಂ ಮಹಾಫಲಂ ।
ಅಮರಾ ಮೃತ್ಯುಮಿಚ್ಛಂತಿ ಕಾ ಕಥಾ ಇತರೇ ಜನಾಃ ॥ ೨೯ ॥
ಮಣಿಕರ್ಣ್ಯಾಂ ಜ್ಞಾನವಾಪ್ಯಾಂ ವಿಷ್ಣುಪಾದೋದಕೇ ತಥಾ ।
ಹ್ರದೇ ಪಂಚನದೇ ಸ್ನಾತ್ವಾ ನ ಮಾತುಃ ಸ್ತನಪೋ ಭವೇತ್ ॥ ೩೦ ॥
ಪ್ರಸಂಗೇನಾಪಿ ವಿಶ್ವೇಶಂ ದೃಷ್ಟ್ವಾ ಕಾಶ್ಯಾಂ ಷಡಾನನ ।
ಮುಕ್ತಿಃ ಪ್ರಜಾಯತೇ ಪುಂಸಾಂ ಜನ್ಮಮೃತ್ಯುವಿವರ್ಜಿತಾ ॥ ೩೧ ॥
ಬಹುನಾ ಕಿಮಿಹೋಕ್ತೇನ ನೈತತ್ಕ್ಷೇತ್ರಸಮಂ ಕ್ವಚಿತ್ ।
ತಪೋಪವಾಸನಿರತೋ ಮಥುರಾಯಾಂ ಷಡಾನನ ।
ಜನ್ಮಸ್ಥಾನಂ ಸಮಾಸಾದ್ಯ ಸರ್ವಪಾಪೈಃ ಪ್ರಮುಚ್ಯತೇ ॥ ೩೨ ॥
ವಿಶ್ರಾಂತಿತೀರ್ಥೇ ವಿಧಿವತ್ಸ್ನಾತ್ವಾ ಕೃತ್ವಾ ತಿಲೋದಕಂ ।
ಪಿತೄನುದ್ಧೃತ್ಯ ನರಕಾದ್ವಿಷ್ಣುಲೋಕಂ ಪ್ರಗಚ್ಛತಿ ॥ ೩೩ ॥

---

೨೮. ಎಲೈ ಷಣ್ಮುಖನೆ! ಗೋಮತೀನದಿಯಲ್ಲಿ ಮಿಂದು ಯಾವ ಮಾನವನು ಶ್ರೀಕೃಷ್ಣನ ಮುಖಕಮಲವನ್ನು ನೋಡುವನೊ, ಆ ಮನುಷ್ಯನಿಗೆ ತತ್ವಜ್ಞಾನವಿಲ್ಲದೆಯೇ ಶಾಶ್ವತಮೋಕ್ಷವು ಲಭಿಸುವುದು.

೨೯. ಅಸಿ ಮತ್ತು ವರುಣಾ ನದಿಗಳ ಮಧ್ಯದಲ್ಲಿರುವ ಐದು ಕ್ರೋಶಗಳ ವಿಸ್ತಾರವುಳ್ಳ ಭೂಪ್ರದೇಶವು ಮಹಾಫಲದಾಯಕವಾದುದು. ದೇವತೆಗಳೂ ಮನುಷ್ಯಜನ್ಮವನ್ನು ಹೊಂದಿ ಅಲ್ಲಿ ಸಾಯಲೆಳಸುವರೆಂದ ಮೇಲೆ ಉಳಿದ ಸಾಮಾನ್ಯ ನರರ ಮಾತನ್ನು ಹೇಳಲೇಕೆ!

೩೦. ಮಣಿಕರ್ಣಿಕಾ, ಜ್ಞಾನವಾಪಿ, ವಿಷ್ಣುಪಾದಗಳ ತೀರ್ಥಗಳಲ್ಲಿಯೂ ಪಂಚನದವೆಂಬ ತಟಾಕದಲ್ಲಿಯೂ ಸ್ನಾನಮಾಡಿದ ಮಾನವನು ಮತ್ತೆ ತಾಯಿಯ ಸ್ತನ್ಯವನ್ನು ಪಾನಮಾಡುವುದಿಲ್ಲ.

೩೧. ಎಲೈ ಷಡಾನನನೆ! ಪ್ರಾಸಂಗಿಕವಾಗಿಯಾದರೂ ಯಾವನು ವಿಶ್ವೇಶ್ವರನ ದರ್ಶನವನ್ನು ಮಾಡುವನೊ, ಆತನಿಗೆ ಜನನಮರಣರಹಿತವಾದ ಮೋಕ್ಷಪದವಿಯು ಲಭಿಸುವುದು.

೩೨. ಈ ವಿಷಯದಲ್ಲಿ ಹೆಚ್ಚಾಗಿ ಹೇಳತಕ್ಕುದೇನು? ಕಾಶಿಗೆ ಸಮಾನವಾದ ಕ್ಷೇತ್ರವು ಮತ್ತೊಂದಿಲ್ಲವು. ತಪಸ್ಸು, ಉಪವಾಸ ಮುಂತಾದ ವ್ರತಗಳಿಂದ ಕೂಡಿದ ಮನುಜನು ಮಥುರಾನಗರಿಯಲ್ಲಿ ಶ್ರೀಕೃಷ್ಣನ ಜನ್ಮಸ್ಥಾನವನ್ನು ಸೇರಲು ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

೩೩. ವಿಶ್ರಾಂತಿ ತೀರ್ಥದಲ್ಲಿ ಸ್ನಾನಮಾಡಿ ಯಾವನು ವಿಧಿಯನ್ನನುಸರಿಸಿ

ಯದಿ ಕುರ್ಯಾತ್ಪ್ರಮಾದೇನ ಪಾತಕಂ ತತ್ರ ಮಾನವಃ ।
ವಿಶ್ರಾಂತೇ ಸ್ನಾನಮಾಸಾದ್ಯ ಭಸ್ಮೀಭವತಿ ತತ್ಕ್ಷಣಾತ್ ॥ ೩೪ ॥
ಅವಂತ್ಯಾಂ ವಿಧಿವತ್ಸ್ನಾತ್ವಾ ಶಿಪ್ರಾಯಾಂ ಮಾಧವೇ ನರಾಃ ।
ಪಿಶಾಚತ್ವಂ ನ ಪಶ್ಯಂತಿ ಜನ್ಮಾಂತರಶತೈರಪಿ ॥ ೩೫ ॥
ಕೋಟಿತೀರ್ಥೇ ನರಃ ಸ್ನಾತ್ವಾ ಭೋಜಯಿತ್ವಾ ದ್ವಿಜೋತ್ತಮಾನ್ ।
ಮಹಾಕಾಲಂ ಹರಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೩೬ ॥
ಮುಕ್ತಿಕ್ಷೇತ್ರಮಿದಂ ಸಾಕ್ಷಾತ್ ಮಮ ಲೋಕೈಕಸಾಧನಂ ।
ದಾನಾದ್ದರಿದ್ರತಾಹಾನಿಃ ಇಹಲೋಕೇ ಪರತ್ರ ಚ ॥ ೩೭ ॥
ಕುರುಕ್ಷೇತ್ರೇ ರಾಮತೀರ್ಥೇ ಸ್ವರ್ಣಂ ದತ್ವಾ ಸ್ವಶಕ್ತಿತಃ ।
ಸೂರ್ಯೋಪರಾಗೇ ವಿಧಿವತ್ಸ ನರೋ ಮುಕ್ತಿಭಾಗ್ಭವೇತ್ ॥ ೩೮ ॥
ಯೇ ತತ್ರ ಪರಿಗೃಹ್ಣಂತಿ ನರಾಃ ಲೋಭವಶಂಗತಾಃ ।
ಪುರುಷತ್ವಂ ನ ತೇಷಾಂ ವೈ ಕಲ್ಪಕೋಟಿಶತೈರಪಿ ॥ ೩೯ ॥

---

ತಿಲೋದಕವನ್ನು ಕೊಡುವನೊ, ಅವನು ಪಿತೃಗಳೆಲ್ಲರನ್ನೂ ಉದ್ಧಾರ ಮಾಡಿ ತಾನೂ ವೈಕುಂಠವನ್ನು ಕುರಿತು ಪ್ರಯಾಣಮಾಡುವನು.

೩೪. ಪ್ರಮಾದವಶದಿಂದ ಅಲ್ಲಿ ಪಾತಕವನ್ನು ಮಾಡಿದರೂ ಮನುಷ್ಯನು ವಿಶ್ರಾಂತಿ ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದ ಪಾಪವು ತತ್ಕ್ಷಣದಲ್ಲಿಯೇ ಭಸ್ಮೀಭೂತವಾಗುವುದು.

೩೫. ವೈಶಾಖ ಮಾಸದಲ್ಲಿ ಅವಂತೀ ನಗರಿಗೆ ಹೋಗಿ ಶೀಪ್ರಾನದಿಯಲ್ಲಿ ವಿಧ್ಯುಕ್ತರೀತಿಯಿಂದ ಸ್ನಾನವನ್ನು ಮಾಡಲು ನೂರಾರು ಜನ್ಮಗಳಲ್ಲಿಯೂ ಮನುಷ್ಯನಿಗೆ ಪಿಶಾಚತ್ವವು ಪ್ರಾಪ್ತವಾಗುವುದಿಲ್ಲ.

೩೬. ಕೋಟಿ ತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿ ಬ್ರಾಹ್ಮಣೋತ್ತಮರಿಗೆ ಭೋಜನವನ್ನಿತ್ತು ಮಹಾಕಾಲರೂಪಿಯಾದ ಪರಮೇಶ್ವರನನ್ನು ನೋಡಲು ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೩೭. ಈ ಕೋಟಿ ತೀರ್ಥವೇ ಮುಕ್ತಿ ಕ್ಷೇತ್ರವೆಂದು ಪ್ರಸಿದ್ಧವಾಗಿ ನನ್ನ ಲೋಕವನ್ನು ಹೊಂದಲು ಏಕಾಂತಸಾಧನವಾಗಿರುವುದು. ಇಲ್ಲಿ ಉಚಿತ ದಾನವನ್ನು ಮಾಡುವುದರಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ದಾರಿದ್ರ್ಯವು ಕೊನೆಗಾಣುವುದು.

೩೮. ಕುರುಕ್ಷೇತ್ರದಲ್ಲಿಯೂ ರಾಮತೀರ್ಥದಲ್ಲಿಯೂ ಸೂರ್ಯಗ್ರಹಣದ ಕಾಲದಲ್ಲಿ ವಿಧಿವಿಹಿತವಾದ ಸ್ವರ್ಣದಾನವನ್ನು ಶಕ್ತ್ಯನುಸಾರವಾಗಿ ಮಾಡಲು ಮನುಷ್ಯನು ಮೋಕ್ಷಕ್ಕೆ ಭಾಗಿಯಾಗುವನು.

೩೯. ಯಾರು ಅಲ್ಲಿ ಲೋಭಪರವಶರಾಗಿ ದಾನವನ್ನು ಪ್ರತಿಗ್ರಹಿಸುವರೊ

**ಹರಿಕ್ಷೇತ್ರೇ ಹರಿಂ ದೃಷ್ಟ್ವಾ ಸ್ನಾತ್ವಾ ಪಾದೋದಕೇ ಜನಃ ।**
**ಸರ್ವಪಾಪವಿನಿರ್ಮುಕ್ತೋ ಹರಿಣಾ ಸಹ ಮೋದತೇ ॥ ೪೦ ॥**
**ಖಗಗಣಾ ವಿವಿಧಾನಿ ವಸಂತ್ಯಹೋ**
**ಋಷಿಗಣಾಃ ಫಲಮೂಲದಲಾಶನಾಃ ।**
**ಪವನಸಂಯಮನಕ್ರಮನಿರ್ಜಿತೇಂ-**
**ದ್ರಿಯಪರಾಕ್ರಮಣಾ ಮುನಯಸ್ತ್ವಿಹ ॥ ೪೧ ॥**
**ವಿಷ್ಣುಕಾಂಚ್ಯಾಂ ಹರಿಃ ಸಾಕ್ಷಾತ್ ಶಿವಕಾಂಚ್ಯಾಂ ಶಿವಃ ಸ್ವಯಂ ।**
**ಅಭೇದಾದುಭಯೋರ್ಭಕ್ತ್ಯಾ ಮುಕ್ತಿಃ ಕರತಲೇ ಸ್ಥಿತಾ ।**
**ವಿಭೇದಜನನಾತ್ಪುಂಸಾಂ ಜಾಯತೇ ಕುತ್ಸಿತಾ ಗತಿಃ ॥ ೪೨ ॥**
**ಸಕೃದ್ದೃಷ್ಟ್ವಾ ಜಗನ್ನಾಥಂ ಮಾರ್ಕಂಡೇಯಹ್ರದೇ ಪ್ಲುತಃ ।**
**ವಿನಾ ಜ್ಞಾನೇನ ಯೋಗೇನ ನ ಮಾತುಃ ಸ್ತನಪೋ ಭವೇತ್ ॥ ೪೩ ॥**

---

ಆ ಮನುಷ್ಯರು ನೂರುಕೋಟಿ ಕಲ್ಪಗಳಾದರೂ ಮತ್ತೆ ಮನುಷ್ಯಜನ್ಮವನ್ನು ಹೊಂದಲಾರರು.

೪೦. ಹರಿದ್ವಾರದಲ್ಲಿ ಶ್ರೀಹರಿಯ ದರ್ಶನವನ್ನು ಮಾಡಿಕೊಂಡು ಹರಿಯ ಪಾದೋದಕವೆನಿಸಿದ ಗಂಗೆಯಲ್ಲಿ ಸ್ನಾನ ಮಾಡಲು ಜನರು ಸಮಸ್ತ ಪಾಪಗಳಿಂದಲೂ ಮುಕ್ತರಾಗಿ ಮಹಾ ವಿಷ್ಣುವಿನೊಡನೆ ವೈಕುಂಠದಲ್ಲಿ ಆನಂದಿಸುವರು.

೪೧. ಇಲ್ಲಿ ಅನೇಕ ವಿಧಗಳಾದ ಪಕ್ಷಿಗಣಗಳು ವಾಸಮಾಡುವುವು. ಫಲ, ಮೂಲಪರ್ಣಗಳನ್ನೇ ಭಕ್ಷಿಸುತ್ತಿರುವ ಮಹರ್ಷಿ ಸಮೂಹಗಳೂ ಇಲ್ಲಿ ನೆರೆದಿರುವುವು. ಶ್ವಾಸನಿರೋಧಸಹಿತವಾದ ಪ್ರಾಣಾಯಾಮದ ಕ್ರಮದಿಂದ ಇಂದ್ರಿಯಗಳನ್ನು ಜಯಿಸಿ ಧೀರರೆನಿಸಿದ ಮುನಿಗಳೂ ಇಲ್ಲಿ ಅನೇಕರು ವಾಸಿಸುತ್ತಿರುವರು.

೪೨. ವಿಷ್ಣುಕಂಚಿಯಲ್ಲಿ ಮಹಾವಿಷ್ಣುವೂ ಶಿವಕಂಚಿಯಲ್ಲಿ ಸದಾ ಶಿವನೂ ಸನ್ನಿಹಿತರಾಗಿರುವರು. ಇವರಲ್ಲಿ ಅಭೇದವನ್ನು ಚಿಂತಿಸಿ ಯಾವನು ಭಕ್ತಿಭಾವದಿಂದ ನಡೆದುಕೊಳ್ಳುವನೊ, ಅವನಿಗೆ ಮೋಕ್ಷವು ಕರತಲಗತವಾಗಿರುವುದು. ಇವರಿಬ್ಬರಲ್ಲಿ ಭೇದವನ್ನೆಣಿಸುವುದರಿಂದ ಮನುಷ್ಯರಿಗೆ ನೀಚಗತಿಯುಂಟಾಗುವುದು.

೪೩. ಮಾರ್ಕಂಡೇಯ ತಟಾಕದಲ್ಲಿ ಸ್ನಾನವನ್ನು ಮಾಡಿ ಒಮ್ಮೆಯಾದರೂ ಯಾವನು ಜಗನ್ನಾಥನನ್ನು ನೋಡುವನೊ, ಅವನು ಜ್ಞಾನ ಮತ್ತು ಯೋಗಗಳೆಂಬ ಸಾಧನೆಗಳಿಲ್ಲದೆಯೇ ಮುಕ್ತನಾಗಿ ತಾಯಿಯ ಸ್ತನ್ಯವನ್ನು ಮತ್ತೆ ಪಾನಮಾಡುವುದಿಲ್ಲ.

**ರೋಹಿಣ್ಯಾಮುದಧೌ ಸ್ನಾತ್ವಾ ಇಂದ್ರದ್ಯುಮ್ನಹ್ರದೇ ತಥಾ ।**
**ಭುಕ್ತ್ವಾ ನಿವೇದಿತಂ ವಿಷ್ಣೋರ್ವೈಕುಂಠೇ ವಸತಿಂ ಲಭೇತ್ ॥ ೪೪ ॥**
**ದಶಯೋಜನವಿಸ್ತೀರ್ಣಂ ಕ್ಷೇತ್ರಂ ಶಂಖೋಪರಿಸ್ಥಿತಂ ।**
**ಚತುರ್ಭುಜತ್ವಮಾಯಾಂತಿ ಕೀಟಾ ಅಪಿ ನ ಸಂಶಯಃ ॥ ೪೫ ॥**
**ಕಾರ್ತಿಕ್ಯಾಂ ಪುಷ್ಕರೇ ಸ್ನಾತ್ವಾ ಶ್ರಾದ್ಧಂ ಕೃತ್ವಾ ಸದಕ್ಷಿಣಂ ।**
**ಭೋಜಯಿತ್ವಾ ದ್ವಿಜಾನ್ಭಕ್ತ್ಯಾ ಬ್ರಹ್ಮಲೋಕೇ ಮಹೀಯತೇ ॥ ೪೬ ॥**
**ಸಕೃತ್ಸ್ನಾತ್ವಾ ಹ್ರದೇ ತಸ್ಮಿನ್ಯೂಪಂ ದೃಷ್ಟ್ವಾ ಸಮಾಹಿತಃ ।**
**ಸರ್ವಪಾಪವಿನಿರ್ಮುಕ್ತೋ ಜಾಯತೇ ದ್ವಿಜಸತ್ತಮಃ ॥ ೪೭ ॥**
**ಷಷ್ಟಿರ್ವರ್ಷಸಹಸ್ರಾಣಿ ಯೋಗಾಭ್ಯಾಸೇನ ಯತ್ಫಲಂ ।**
**ಸೌಕರೇ ವಿಧಿವತ್ಸ್ನಾತ್ವಾ ಪೂಜಯಿತ್ವಾ ಹರಿಂ ಶುಚಿಃ ॥ ೪೮ ॥**
**ಸಪ್ತಜನ್ಮಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ।**
**ತೀರ್ಥರಾಜಂ ಮಹಾಪುಣ್ಯಂ ಸರ್ವತೀರ್ಥನಿಷೇವಿತಂ ॥ ೪೯ ॥**

---

೪೪. ರೋಹಿಣೀ ನಕ್ಷತ್ರದ ದಿನದಲ್ಲಿ ಸಮುದ್ರದಲ್ಲಿಯೂ ಇಂದ್ರದ್ಯುಮ್ನ ತಟಾಕದಲ್ಲಿಯೂ ಸ್ನಾನಗಳನ್ನು ಮಾಡಿ ಶ್ರೀಜಗನ್ನಾಥನ ಪ್ರಸಾದವನ್ನು ಸ್ವೀಕರಿಸುವ ಮನುಷ್ಯನು ವೈಕುಂಠದಲ್ಲಿ ಶಾಶ್ವತವಾದ ಆವಾಸವನ್ನು ಪಡೆಯುವನು.

೪೫. ಈ ಕ್ಷೇತ್ರವು ಹತ್ತು ಯೋಜನಗಳ ವಿಸ್ತಾರವುಳ್ಳದಾಗಿ ಶಂಖಾಕಾರದಿಂದಿರುವುದು. ಇಲ್ಲಿ ವಾಸಮಾಡುವ ಕ್ರಿಮಿಕೀಟಗಳೂ ಕೂಡ ಚತುರ್ಭುಜಗಳುಳ್ಳ ವಿಷ್ಣುಕಿಂಕರರಾಗಿ ವೈಕುಂಠದಲ್ಲಿ ಭಾಗಿಗಳಾಗುವುದರಲ್ಲಿ ಸಂದೇಹವಿಲ್ಲವು.

೪೬. ಕೃತ್ತಿಕಾ ಪೌರ್ಣಮಿಯ ದಿವಸ ಪುಷ್ಕರಕ್ಷೇತ್ರದಲ್ಲಿ ಸ್ನಾನಮಾಡಿ ದಕ್ಷಿಣೆಯೊಡಗೂಡಿದ ಶ್ರಾದ್ಧವನ್ನಾಚರಿಸಿ ಭಕ್ತಿಯುಕ್ತನಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಲು ಮನುಷ್ಯನು ಬ್ರಹ್ಮಲೋಕದಲ್ಲಿಯೂ ಪೂಜ್ಯಸ್ಥಾನವನ್ನು ಹೊಂದುವನು.

೪೭. ಆ ತೀರ್ಥದಲ್ಲಿ ಒಂದು ಸಲ ಸ್ನಾನಮಾಡಿ ಶಾಂತಮನಸ್ಕನಾಗಿ ಯೂಪವನ್ನು ದರ್ಶನಮಾಡಲು ಬ್ರಾಹ್ಮಣೋತ್ತಮನು ಸಕಲಪಾತಕಗಳಿಂದಲೂ ಮುಕ್ತನಾಗುವನು.

೪೮. ವರಾಹಕ್ಷೇತ್ರದಲ್ಲಿ ವಿಧಿವತ್ತಾಗಿ ಸ್ನಾನವನ್ನಾಚರಿಸಿ ಶುಚಿಯಾಗಿ ಶ್ರೀಹರಿಯನ್ನು ಪೂಜಿಸಲು ಅರುವತ್ತುಸಾವಿರ ವರ್ಷಗಳ ಯೋಗಾಭ್ಯಾಸದಿಂದ ಲಭಿಸುವ ಫಲವು ಪ್ರಾಪ್ತವಾಗುವುದು.

೪೯. ಏಳು ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ತತ್ಕ್ಷಣದಲ್ಲಿಯೇ

ಕಾಮಿನಾಂ ಸರ್ವಜಂತೂನಾಮಿಪ್ಸಿತಂ ಕರ್ಮಭಿರ್ಭವೇತ್ ।
ವೇಣ್ಯಾಂ ಸ್ನಾತ್ವಾ ಶುಚಿರ್ಭೂತ್ವಾ ಕೃತ್ವಾ ಮಾಧವದರ್ಶನಂ ।
ಭುಕ್ತ್ವಾ ಪುಣ್ಯವತಾಂ ಭೋಗಾನಂತೇ ಮಾಧವತಾಂ ವ್ರಜೇತ್ ॥ ೫೦ ॥
ಮಾಘೇ ಮಾಸಿ ನರಃ ಸ್ನಾತ್ವಾ ತ್ರಿವೇಣ್ಯಾಂ ಭಕ್ತಿಭಾವಿತಃ ।
ಬದರೀಕೀರ್ತನಾತ್ಪುಣ್ಯಂ ತತ್ಸಮಾಪ್ನೋತಿ ಮಾನವಃ ॥ ೫೧ ॥
ದಶಾಶ್ವಮೇಧಿಕಂ ತೀರ್ಥಂ ದಶಯಜ್ಞಫಲಪ್ರದಂ ।
ಸಂಕ್ಷೇಪಾತ್ಕಥಿತಂ ಪುತ್ರ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೫೨ ॥

ಸ್ಕಂದ ಉವಾಚ:—

ಬದರ್ಯಾಖ್ಯಂ ಹರೇಃ ಕ್ಷೇತ್ರಂ ತ್ರಿಷು ಲೋಕೇಷು ದುರ್ಲಭಂ ।
ಕ್ಷೇತ್ರಸ್ಯ ಸ್ಮರಣಾದೇವ ಮಹಾಪಾತಕಿನೋ ನರಾಃ ।
ವಿಮುಕ್ತಕಿಲ್ಬಿಷಾಃ ಸದ್ಯೋ ಮರಣಾನ್ಮುಕ್ತಿಭಾಗಿನಃ ॥ ೫೩ ॥

---

ನಾಶವಾಗುವುವು. ಈ ಉತ್ತಮತೀರ್ಥವು ಅತ್ಯಂತ ಪುಣ್ಯದಾಯಕವಾಗಿ ಸಕಲತೀರ್ಥಗಳ ಸಾನ್ನಿಧ್ಯವನ್ನೂ ಒಳಕೊಂಡಿರುವುದು.

೫೦. ಇಲ್ಲಿ ಸತ್ಕರ್ಮಗಳನ್ನು ಮಾಡುವುದರಿಂದ ಫಲಾಭಿಸಂಧಿಗಳಾದ ಸಕಲ ಪ್ರಾಣಿಗಳಿಗೂ ಇಷ್ಟಾರ್ಥಗಳು ಕೈಗೂಡುವುವು. ತ್ರಿವೇಣಿಯಲ್ಲಿ ಸ್ನಾನವನ್ನು ಮಾಡಿಕೊಂಡು ಶುಚಿರ್ಭೂತನಾಗಿ ಶ್ರೀಮನ್ನಾರಾಯಣನ ದರ್ಶನವನ್ನು ಮಾಡಲು ಮಾನವನು ಪುಣ್ಯಶಾಲಿಗಳ ಸಕಲ ಭೋಗಗಳನ್ನೂ ಈ ಲೋಕದಲ್ಲಿ ಅನುಭವಿಸಿ ದೇಹಾವಸಾನದಲ್ಲಿ ಮಹಾ ವಿಷ್ಣುವಿನ ಸಾರೂಪ್ಯವನ್ನು ಹೊಂದಿ ಸುಖಿಸುವನು.

೫೧. ಮಾಘಮಾಸದಲ್ಲಿ ತ್ರಿವೇಣೀಸಂಗಮದಲ್ಲಿ ಭಕ್ತಿಯುಕ್ತನಾಗಿ ಸ್ನಾನವನ್ನಾಚರಿಸಿ ಬದರೀಕ್ಷೇತ್ರದ ಮಾಹಾತ್ಮ್ಯೆಯನ್ನು ಕೀರ್ತನಮಾಡಲು ಮಾನವನು ಅದೇ ಫಲವನ್ನೇ ಹೊಂದುವನು.

೫೨. ದಶಾಶ್ವಮೇಧ ತೀರ್ಥದಲ್ಲಿ ಮಾಡಿದ ಸ್ನಾನದಿಂದ ಹತ್ತು ಯಜ್ಞಗಳನ್ನು ಮಾಡಿದ ಸುಕೃತವು ಲಭಿಸುವುದು. ಎಲೈ ಷಣ್ಮುಖನೆ! ಇಂತು ತೀರ್ಥಗಳ ಮಹಿಮೆಗಳನ್ನು ಸಂಕ್ಷೇಪವಾಗಿ ತಿಳಿಸಿರುವೆನು. ಮತ್ತೆ ಯಾವುದನ್ನು ಕೇಳಲು ಅಪೇಕ್ಷಿಸುತ್ತಿರುವೆ?

೫೩. ಷಣ್ಮುಖನು ಹೇಳುತ್ತಾನೆ:—ಶ್ರೀಹರಿಯ ನಿವಾಸವಾದ ಬದರೀನಾಮಕವಾದ ಕ್ಷೇತ್ರವು ಮೂರು ಲೋಕಗಳಲ್ಲಿಯೂ ಅಪ್ರತಿಮವಾಗಿರುವುದು. ಆ ಕ್ಷೇತ್ರದ ಸ್ಮರಣೆಯ ಮಾತ್ರದಿಂದಲೇ ಮಹಾ ಪಾತಕಗಳನ್ನು ಮಾಡಿದ ಮನುಷ್ಯರೂ ಸಹ ತಮ್ಮ ಪಾತಕಗಳನ್ನು ಕಳೆದುಕೊಂಡು ಜನ್ಮಮರಣರೂಪವಾದ ಸಂಸಾರದಿಂದ ಮೋಕ್ಷವನ್ನು ಪಡೆಯುವರು.

ಅನ್ಯತೀರ್ಥೇ ಕೃತಂ ಯೇನ ತಪಃ ಪರಮದಾರುಣಂ ।
ತತ್ಸಮಾ ಬದರೀಯಾತ್ರಾ ಮನಸಾಪಿ ಪ್ರಜಾಯತೇ ॥ ೫೪ ॥
ಬಹೂನಿ ಸಂತಿ ತೀರ್ಥಾನಿ ದಿವಿ ಭೂಮೌ ರಸಾತಲೇ ।
ಬದರೀಸದೃಶಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೫೫ ॥
ಅಶ್ವಮೇಧಸಹಸ್ರಾಣಿ ವಾಯುಭೋಜ್ಯೇ ಚ ಯತ್ಫಲಂ ।
ಕ್ಷೇತ್ರಾಂತರೇ ವಿಶಾಲಾಯಾಂ ತತ್ಫಲಂ ಕ್ಷಣಮಾತ್ರತಃ ॥ ೫೬ ॥
ಕೃತೇ ಮುಕ್ತಿಪ್ರದಾ ಪ್ರೋಕ್ತಾ ತ್ರೇತಾಯಾಂ ಯೋಗಸಿದ್ಧಿದಾ ।
ವಿಶಾಲಾ ದ್ವಾಪರೇ ಪ್ರೋಕ್ತಾ ಕಲೌ ಬದರಿಕಾಶ್ರಮಃ ॥ ೫೭ ॥
ಸ್ಥೂಲಸೂಕ್ಷ್ಮಶರೀರಂ ತು ಜೀವಸ್ಯ ವಸತಿಸ್ಥಲಂ ।
ತದ್ವಿನಾಶಯತಿ ಜ್ಞಾನಾದ್ವಿಶಾಲಾ ತೇನ ಕಥ್ಯತೇ ॥ ೫೮ ॥
ಅಮೃತಂ ಸ್ರವತೇ ಯಾ ಹಿ ಬದರೀತರುಯೋಗತಃ ।
ಬದರೀ ಕಥ್ಯತೇ ಪ್ರಾಜ್ಞೈಃ ಋಷೀಣಾಂ ಯತ್ರ ಸಂಚಯಃ ॥ ೫೯ ॥

---

೫೪–೫೫. ಇತರ ತೀರ್ಥಗಳಲ್ಲಿ ಅತ್ಯಂತ ಘೋರವಾದ ತಪಸ್ಸನ್ನುಮಾಡುವುದರಿಂದ ಯಾವ ಫಲವು ಲಭಿಸುವುದೊ, ಅದಕ್ಕೆ ಸಮಾನವಾದ ಪುಣ್ಯವು ಬದರೀಸ್ಮರಣರೂಪವಾದ ಕೇವಲ ಮಾನಸಿಕ ಯಾತ್ರೆಯಿಂದಲೇ ಪ್ರಾಪ್ತವಾಗುವುದು. ಸ್ವರ್ಗ ಮರ್ತ್ಯ ಪಾತಾಲಲೋಕಗಳಲ್ಲಿ ಅಸಂಖ್ಯಾತಗಳಾದ ತೀರ್ಥಗಳಿರುವುವು. ಆದರೆ ಬದರೀಕ್ಷೇತ್ರಕ್ಕೆ ಸಮಾನವಾದ ತೀರ್ಥವು ಎಲ್ಲಿಯೂ ಇರಲಿಲ್ಲ; ಮತ್ತೆಲ್ಲಿಯೂ ಉಂಟಾಗಲಾರದು.

೫೬. ಒಂದು ಸಾವಿರ ಅಶ್ವಮೇಧಗಳಿಂದಲೂ, ಇತರ ಕ್ಷೇತ್ರಗಳಲ್ಲಿ ವಾಯುಭಕ್ಷಣಾದಿವ್ರತಗಳಿಂದಲೂ ಯಾವ ಫಲವುಂಟೊ, ಅದೆಲ್ಲವೂ ವಿಶಾಲಾ ಕ್ಷೇತ್ರದಲ್ಲಿ ಒಂದು ಕ್ಷಣಮಾತ್ರ ವಾಸಮಾಡುವುದರಿಂದ ಲಭಿಸುವುದು.

೫೭. ಕೃತಯುಗದಲ್ಲಿ ಈ ಕ್ಷೇತ್ರಕ್ಕೆ ಮುಕ್ತಿಪ್ರದೆಯೆಂದು ಹೆಸರಿದ್ದಿತು. ತ್ರೇತಾಯುಗದಲ್ಲಿ ಯೋಗಸಿದ್ಧಿಪ್ರದೆಯೆಂದು ಪ್ರಸಿದ್ಧವಾಗಿದ್ದಿತು. ದ್ವಾಪರದಲ್ಲಿ ವಿಶಾಲೆಯೆಂದೂ, ಕಲಿಯುಗದಲ್ಲಿ ಬದರಿಕಾಶ್ರಮವೆಂದೂ ವಿಖ್ಯಾತವಾಗಿರುವುದು.

೫೮. ಜೀವನಿಗೆ ಸ್ಥೂಲ ಸೂಕ್ಷ್ಮ ಶರೀರಗಳೆರಡೂ ವಾಸಸ್ಥಳಗಳಾಗಿರುವುವು. ಆತ್ಮಜ್ಞಾನವನ್ನುಂಟುಮಾಡಿ ಇವುಗಳಲ್ಲಿನ ಅಭಿಮಾನವನ್ನು ನಾಶಗೊಳಿಸುವುದರಿಂದ ಈ ಕ್ಷೇತ್ರಕ್ಕೆ ವಿಶಾಲಾ ಎಂಬ ಹೆಸರುಂಟಾಗಿರುವುದು.

೫೯. ಬದರೀವೃಕ್ಷಗಳಿಂದೊಡಗೂಡಿ ಯಾವಾಗಲೂ ಅಮೃತವನ್ನು ಸುರಿಸುತ್ತಿರುವುದರಿಂದ ಈ ಕ್ಷೇತ್ರಕ್ಕೆ ಬದರಿಯೆಂದು ಹೆಸರು. ಇಲ್ಲಿಯೇ ಸಕಲ ಮಹರ್ಷಿಗಳ ಸಮೂಹಗಳೂ ಯಾವಾಗಲೂ ಬಂದು ನೆರದಿರುವುವು.

ತ್ಯಜೇತ್ಸರ್ವಾಣಿ ತೀರ್ಥಾನಿ ಕಾಲೇ ಕಾಲೇ ಯುಗೇ ಯುಗೇ ।
ಬದರೀಂ ಭಗವಾನ್ವಿಷ್ಣುರ್ನ ಮುಂಚತಿ ಕದಾಚನ ॥ ೬೦ ॥
ಸರ್ವತೀರ್ಥಾವಗಾಹೇನ ತಪೋಯೋಗಸಮಾಧಿತಃ ।
ತತ್ಫಲಂ ಪ್ರಾಪ್ಯತೇ ಸಮ್ಯಗ್ಬದರೀದರ್ಶನಾನ್ನೃಹ ॥ ೬೧ ॥
ಷಷ್ಟಿರ್ವರ್ಷಸಹಸ್ರಾಣಿ ಯೋಗಾಭ್ಯಾಸೇನ ಯತ್ಫಲಂ ।
ವಾರಾಣಸ್ಯಾಂ ದಿನೈಕೇನ ತತ್ಫಲಂ ಬದರೀಂ ಗತಾ ॥ ೬೨ ॥
ತೀರ್ಥಾನಾಂ ವಸತಿರ್ಯತ್ರ ದೇವಾನಾಂ ವಸತಿಸ್ತಥಾ ।
ಋಷೀಣಾಂ ವಸತಿರ್ಯತ್ರ ವಿಶಾಲಾ ತೇನ ಕಥ್ಯತೇ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯಸಂವಾದೇ "ಬದರೀಕ್ಷೇತ್ರ ಶ್ರೇಷ್ಠತ್ವನಿರೂಪಣವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೬೦. ಶ್ರೀಮನ್ನಾರಾಯಣನು ಕಾಲಭೇದಗಳನ್ನೂ, ಯುಗಭೇದಗಳನ್ನೂ ಅನುಸರಿಸಿ ಇತರ ಕ್ಷೇತ್ರಗಳನ್ನು ತ್ಯಜಿಸುತ್ತಿರುವನು. ಆದರೆ ಬದರಿಕಾಶ್ರಮವನ್ನು ಮಾತ್ರ ಯಾವಾಗಲೂ ತ್ಯಜಿಸುವುದಿಲ್ಲ.

೬೧. ಎಲೈ ಷಡಾನನನೆ! ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡುವುದರಿಂದಲೂ ತಪಸ್ಸು, ಯೋಗಾಭ್ಯಾಸ, ಸಮಾಧಿಗಳಿಂದಲೂ ಯಾವ ಫಲವು ಲಭಿಸುವುದೊ, ಬದರೀಕ್ಷೇತ್ರವನ್ನು ಚೆನ್ನಾಗಿ ದರ್ಶನಮಾಡುವುದರಿಂದ ಮನುಷ್ಯರಿಗೆ ಆ ಫಲವೇ ಕೈಗೂಡುವುದು.

೬೨. ಅರುವತ್ತುಸಾವಿರ ವರ್ಷಗಳ ಯೋಗಾಭ್ಯಾಸದಿಂದ ಯಾವ ಫಲವುಂಟೊ, ಕಾಶೀಕ್ಷೇತ್ರದ ಒಂದು ದಿವಸದ ಸೇವೆಯಿಂದ ಯಾವ ಪುಣ್ಯವು ಲಭಿಸುವುದೊ, ಬದರೀಕ್ಷೇತ್ರವನ್ನು ಪ್ರವೇಶಿಸಿದ ಮಾತ್ರದಿಂದಲೇ ಆ ಫಲವೆಲ್ಲವೂ ಸಂಪ್ರಾಪ್ತವಾಗುವುದು.

೬೩. ಈ ಕ್ಷೇತ್ರದಲ್ಲಿಯೇ ಸಕಲ ತೀರ್ಥಾಭಿಮಾನಿ ದೇವತೆಗಳೂ, ಇಂದ್ರಾದಿ ಸಕಲ ದೇವತೆಗಳೂ, ಸಮಸ್ತ ಮಹರ್ಷಿಗಳೂ ವಾಸಮಾಡುತ್ತಿರುವುದರಿಂದಲೇ ಈ ಪ್ರದೇಶಕ್ಕೆ ವಿಶಾಲಾ ಎಂಬ ಹೆಸರು ಪ್ರಸಿದ್ಧವಾಗಿರುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮಮಾಹಾತ್ಮ್ಯದ ಶಿವಕಾರ್ತಿಕೇಯಸಂವಾದದಲ್ಲಿ "ಬದರಿಕಾಶ್ರಮದ ಶ್ರೇಷ್ಠತ್ವನಿರೂಪಣವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

### ಅಗ್ನಿಕೃತಭಗವತ್ಸ್ತುತಿವರ್ಣನಂ

ಸ್ಕಂದ ಉವಾಚ :—

**ಕಥಮೇತತ್ಸಮುತ್ಪನ್ನಂ ಕೈರ್ವಾ ಕ್ಷೇತ್ರಂ ನಿಷೇವಿತಂ ।**
**ಕೋ ವಾ ತಸ್ಯಾಪ್ಯಧೀಶಃ ಸ್ಯಾದೇತದ್ವಿಸ್ತರತೋ ವದ ॥ ೧ ॥**

ಶಿವ ಉವಾಚ :—

**ಅನಾದಿಸಿದ್ಧಮೇತತ್ತು ಯಥಾ ವೇದೋ ಹರೇಸ್ತನುಃ ।**
**ಅಧಿಷ್ಠಾತಾ ಹರಿಃ ಸಾಕ್ಷಾತ್ ನಾರದಾದ್ಯೈರ್ನಿಷೇವಿತಂ ॥ ೨ ॥**
**ಪುರಾ ಕೃತಯುಗಸ್ಯಾದೌ ಸ್ವೀಯಾಂ ದುಹಿತರಂ ವಿಧಿಃ ।**
**ರೂಪಯೌವನಸಂಪನ್ನಾಂ ಸ ತಾಂ ಯಭಿತುಮುದ್ಯತಃ ॥ ೩ ॥**
**ತಂ ದೃಷ್ಟ್ವಾ ತಾದೃಶಂ ರೋಷಾಚ್ಛಿರಃ ಖಡ್ಗೇನ ಪಂಚಧಾ ।**
**ಚಿಚ್ಛೇದಾಽಹಂ ಕಪಾಲಂ ತದ್ಬ್ರಹ್ಮಹತ್ಯಾ ಸಮುದ್ಯತೌ ॥ ೪ ॥**

---

### ಕನ್ನಡದ ಅನುವಾದ

#### ಅಗ್ನಿಕೃತಭಗವತ್ಸ್ತುತಿವರ್ಣನ

೧. ಸ್ಕಂದಸ್ವಾಮಿಯು ಕೇಳುತ್ತಾನೆ:—ಎಲೈ ತಂದೆಯೆ! ಈ ಕ್ಷೇತ್ರವು ಹೇಗೆ ಉಂಟಾಯಿತು? ಹಿಂದೆ ಯಾರಿಂದ ಸೇವಿಸಲ್ಪಟ್ಟಿತು? ಈ ತೀರ್ಥಕ್ಕೆ ಅಧಿಪತಿಯು ಯಾರು? ಈ ವಿಷಯಗಳೆಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳುವವನಾಗು.

೨. ಶಿವನು ಹೇಳುತ್ತಾನೆ:—ವೇದಗಳಂತೆಯೇ ಶ್ರೀಮನ್ನಾರಾಯಣನ ಶರೀರವೆನಿಸಿರುವ ಈ ಕ್ಷೇತ್ರವು ಅನಾದಿಕಾಲದಿಂದಲೂ ಪ್ರಸಿದ್ಧವಾಗಿರುವುದು. ಇದಕ್ಕೆ ಸಾಕ್ಷಾತ್ ಶ್ರೀಹರಿಯೇ ಅಧಿಷ್ಠಾನದೇವತೆಯು. ನಾರದನೇ ಮೊದಲಾದ ಅನೇಕ ಮಹರ್ಷಿಗಳು ಇಲ್ಲಿ ಪರಮಾತ್ಮನನ್ನು ಹಿಂದೆ ಸೇವಿಸಿರುವರು.

೩. ಪೂರ್ವದಲ್ಲಿ ಕೃತಯುಗವು ಪ್ರಾರಂಭವಾಗಲು ಬ್ರಹ್ಮನು ಸರ್ವಾಂಗ ಸಂಪನ್ನೆಯಾದ ಸರಸ್ವತಿಯನ್ನು ಸೃಷ್ಟಿಸಿ ಆಕೆಯ ರೂಪಯೌವನಗಳಿಗೆ ಮುಗ್ಧನಾಗಿ ಆಕೆಯನ್ನು ಸೇರಲು ಪ್ರಯತ್ನಿಸಿದನು.

೪. ಈ ಅನೀತಿಯ ಕಾರ್ಯವನ್ನು ಮಾಡಲೆಳಸಿದ ಬ್ರಹ್ಮನನ್ನು ಕಂಡು ನಾನು ಖಡ್ಗಹಸ್ತನಾಗಿ ರೋಷದಿಂದ ಆತನ ತಲೆಯನ್ನು ಐದುಭಾಗಗಳಾಗಿ ಕಡಿದುಹಾಕಲು ಒಂದು ಭಾಗದ ಕಪಾಲವು ಬ್ರಹ್ಮಹತ್ಯಾರೂಪದಿಂದ ನನ್ನ ಕೈಯಲ್ಲಿಯೇ ಅಂಟಿಕೊಂಡಿತು.

ಹಸ್ತೇ ಕೃತ್ವಾ ಜಗಾಮಾಶು ತತ್ರ ತೀರ್ಥಾನಿ ಸೇವಿತುಂ ।
ದಿವಿ ಭೂಮೌ ಚ ಪಾತಾಲೇ ತಪಶ್ಚರಣಪೂರ್ವಕಂ ॥ ೫ ॥
ನ ಗತಾ ಬ್ರಹ್ಮಹತ್ಯಾ ಮೇ ಕಪಾಲಂ ತಾದೃಶಂ ಹರೇಃ ।
ತದಾ ವೈಕುಂಠಮಗಮಂ ದ್ರಷ್ಟುಂ ಲಕ್ಷ್ಮೀಪತಿಂ ಹರಿಂ ॥ ೬ ॥
ವಿನಯಾವನತೋ ಭೂತ್ವಾ ನಮಸ್ಕೃತ್ಯ ಪುನಃ ಪುನಃ ।
ಸರ್ವಮಾಖ್ಯಾತವಾನ್ ತಸ್ಮೈ ವ್ಯಸನಂ ಕರುಣಾತ್ಮನೇ ॥ ೭ ॥
ತಸ್ಯೋಪದಿಷ್ಟಮಾದಾಯ ಬದರೀಂ ಸಮುಪಾಗತಃ ।
ತತ್‌ಕ್ಷಣಾದ್ಬ್ರಹ್ಮಹತ್ಯಾ ಮೇ ವೇಪಮಾನಾ ಮುಹುರ್ಮುಹುಃ ॥ ೮ ॥
ಅಂತರ್ಹಿತಂ ಕಪಾಲಂ ತತ್ಕರಾದ್ವಿಗಲಿತಂ ಮಮ ॥ ೯ ॥
ತತಃ ಪ್ರಭೃತಿ ತತ್ಕ್ಷೇತ್ರಂ ಪಾರ್ವತ್ಯಾ ಸಹ ಸಾದರಂ ।
ತಿಷ್ಠಾಮಿ ತಪ ಆಸ್ಥಾಯ ಋಷೀಣಾಂ ಪ್ರೀತಿಮಾವಹನ್ ॥ ೧೦ ॥
ವಾರಾಣಸ್ಯಾಂ ಯಥಾ ಪ್ರೀತಿಃ ಶ್ರೀಶೈಲಶಿಖರೇ ತಥಾ ।
ಕೈಲಾಸೇ ಶಿವಯಾ ಸಾರ್ಧಂ ತತೋಽನಂತಗುಣಾಧಿಕಾ ॥ ೧೧ ॥

---

೫. ಅದನ್ನು ಕೈಯಲ್ಲಿಯೇ ಹಿಡಿದುಕೊಂಡು ಬ್ರಹ್ಮಹತ್ಯೆಯ ನಿವಾರಣೆಗಾಗಿ ನಾನು ಆಕಾಶ, ಭೂಮಿ, ಪಾತಾಲಗಳಲ್ಲಿರುವ ಸಕಲ ತೀರ್ಥಗಳನ್ನೂ ತಪಶ್ಚರಣದೊಡನೆ ಸೇವಿಸಲು ಶೀಘ್ರವಾಗಿ ಉದ್ಯುಕ್ತನಾದೆನು.

೬. ಆದರೆ ಆ ಬ್ರಹ್ಮಹತ್ಯೆಯೂ ಕೈಯೊಳಗಿನ ಕಪಾಲವೂ ನನ್ನನ್ನು ಬಿಡಲಾರದಾದುವು. ಆಗ ಲಕ್ಷ್ಮೀರಮಣನಾದ ಶ್ರೀಮನ್ನಾರಾಯಣನನ್ನು ನೋಡಲು ವೈಕುಂಠಕ್ಕೆ ಹೊರಟೆನು.

೭. ಅಲ್ಲಿ ಅತ್ಯಂತ ವಿನಯದಿಂದ ಕೂಡಿದವನಾಗಿ ಮತ್ತೆ ಮತ್ತೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ಕರುಣಾಸಮುದ್ರನಾದ ಆತನಲ್ಲಿ ನನಗೆ ಸಂಭವಿಸಿದ ದುಃಖವನ್ನೆಲ್ಲ ಹೇಳಿಕೊಂಡೆನು.

೮-೯. ಆತನಿಂದ ಉಪದೇಶಿಸಲ್ಪಟ್ಟ ಮಾರ್ಗವನ್ನನುಸರಿಸಿ ನಾನು ಬದರಿಕಾಶ್ರಮವನ್ನು ಸೇರಿದೆನು. ಆ ಕ್ಷಣದಲ್ಲಿಯೇ ಬ್ರಹ್ಮಹತ್ಯೆಯು ಮತ್ತೆ ಮತ್ತೆ ಭಯದಿಂದ ಕಂಪಿಸುತ್ತ ನನ್ನನ್ನು ಬಿಟ್ಟು ಅಂತರ್ಧಾನವನ್ನು ಹೊಂದಿತು. ಬ್ರಹ್ಮಕಪಾಲವೂ ನನ್ನ ಕೈಯಿಂದ ಕೆಳಕ್ಕೆ ಬಿದ್ದಿತು.

೧೦. ಅಂದಿನಿಂದ ನಾನು ಪರ್ವತೀ ಸಮೇತನಾಗಿ ತಪಸ್ಸನ್ನಾಚರಿಸುತ್ತ ಮಹರ್ಷಿಗಳಿಗೆ ಸಂತೋಷವನ್ನುಂಟುಮಾಡುವವನಾಗಿ ಆ ಕ್ಷೇತ್ರದಲ್ಲಿಯೇ ನೆಲಸಿರುವೆನು.

೧೧. ಕಾಶೀಕ್ಷೇತ್ರದಲ್ಲಿ ನನಗೆ ಯಾವ ಅಭಿಮಾನವಿರುವುದೊ, ಶ್ರೀಶೈಲ ಪರ್ವತದಲ್ಲಿ ಯಾವ ಪ್ರೀತಿಯಿರುವುದೊ, ಪಾರ್ವತೀಸಹಿತನಾಗಿ ನೆಲಸಿರುವ

ಅನ್ಯತ್ರ ಮರಣಾನ್ಮುಕ್ತಿಃ ಸ್ವಧರ್ಮವಿಧಿಪೂರ್ವಕಾತ್ ।
ಬದರೀದರ್ಶನಾದೇವ ಮುಕ್ತಿಃ ಪುಂಸಾಂ ಕರೇ ಸ್ಥಿತಾ ॥ ೧೨ ॥
ಹರೇಶ್ಚರಣಸಾನ್ನಿಧ್ಯಂ ಯತ್ರ ವೈಶ್ವಾನರಃ ಸ್ವಯಂ ।
ತತ್ರ ಕೇದಾರರೂಪೇಣ ಮಮ ಲಿಂಗಂ ಪ್ರತಿಷ್ಠಿತಂ ॥ ೧೩ ॥
ಕೇದಾರದರ್ಶನಾತ್ಸ್ಪರ್ಶಾದರ್ಚನಾದ್ಭಕ್ತಿಭಾವತಃ ।
ಕೋಟಿಜನ್ಮಕೃತಂ ಪಾಪಂ ಭಸ್ಮೀಭವತಿ ತತ್ಕ್ಷಣಾತ್ ॥ ೧೪ ॥
ಕಲಾಮಾತ್ರೇಣ ತಿಷ್ಠಾಮಿ ತತ್ರ ಕ್ಷೇತ್ರೇ ವಿಶೇಷತಃ ।
ಕಲಾ ಪಂಚದಶೈವಾತ್ರ ಮೂರ್ತಿಮಧ್ಯೇ ಹ್ಯವಸ್ಥಿತಂ ॥ ೧೫ ॥
ಜಿತಕೃತಾಂತಭಯಾಃ ಶಿವಯೋಗಿನಃ
ಕೃತಮೃಗಾಜಿನಕೃತ್ತಿಸುವಾಸಸಃ ।
ವರವಿಭೂತಿಜಟಾನ್ವಿತಭೂಷಣಾಃ
ಸ್ವಯಮುಪಾಸತ ಏವ ಜಟಾಧರಂ ॥ ೧೬ ॥

---

ಕೈಲಾಸದಲ್ಲಿ ಯಾವ ಅಭಿಲಾಷೆಯಿರುವುದೊ, ಅವುಗಳಿಗಿಂತ ಅನಂತ ಗುಣಗಳಷ್ಟು ಅಧಿಕವಾದ ಪ್ರೀತಿಯು ನನಗೆ ಬದರಿಕಾಶ್ರಮದಲ್ಲಿರುವುದು.

೧೨. ಇತರ ಕ್ಷೇತ್ರಗಳಲ್ಲಿ ಸ್ವಧರ್ಮಗಳನ್ನು ಪಾಲನೆಮಾಡುತ್ತ ಮೃತರಾದವರಿಗೆ ಮಾತ್ರ ಮೋಕ್ಷವು ಲಭಿಸುವುದು. ಆದರೆ ಸಕಲ ಮಾನವರಿಗೂ ಬದರೀಕ್ಷೇತ್ರದ ದರ್ಶನಮಾತ್ರದಿಂದಲೇ ಮುಕ್ತಿಯು ಕರತಲಗತವಾಗುವುದು.

೧೩. ಅಲ್ಲಿ ಶ್ರೀಹರಿಯ ಪಾದಾರವಿಂದಗಳ ಸಾನ್ನಿಧ್ಯವೂ ಅಗ್ನಿದೇವನ ಪ್ರಸನ್ನತೆಯೂ ಯಾವಾಗಲೂ ಇರುವುವು. ಅಲ್ಲಿಯೇ ಕೇದಾರಲಿಂಗವೆಂಬ ಹೆಸರಿನಿಂದ ನನ್ನ ರೂಪವೂ ಪ್ರತಿಷ್ಠಿಸಲ್ಪಟ್ಟಿರುವುದು.

೧೪. ಕೇದಾರೇಶ್ವರನನ್ನು ನೋಡುವುದರಿಂದಲೂ, ಸ್ಪರ್ಶಮಾಡುವುದರಿಂದಲೂ, ಪೂಜಿಸುವುದರಿಂದಲೂ ಭಕ್ತಿಯುಕ್ತನಾದ ಪುರುಷನು ಕೋಟಿ ಜನ್ಮಗಳಲ್ಲಿ ಮಾಡಿದ ಪಾತಕಗಳನ್ನೂ ಒಂದು ಕ್ಷಣದಲ್ಲಿಯೇ ಭಸ್ಮಮಾಡಿಕೊಳ್ಳಲು ಶಕ್ತನಾಗುವನು.

೧೫. ಆ ಕ್ಷೇತ್ರದಲ್ಲಿ ವಿಶೇಷವಾಗಿ ಒಂದು ಕಲೆಯಿಂದ ಮಾತ್ರ ಸನ್ನಿಹಿತನಾಗಿರುವೆನು. ಆದರೆ ಆ ಮೂರ್ತಿಯಲ್ಲಿ ಮಿಕ್ಕ ಹದಿನೈದು ಕಲೆಗಳೂ ನೆಲಸಿರುವುವು.

೧೬. ಯಮನ ಭಯವನ್ನು ಗೆದ್ದವರೂ, ಮೃಗಚರ್ಮಗಳಿಂದ ದೇಹಗಳನ್ನು ಆಚ್ಛಾದನ ಮಾಡಿಕೊಳ್ಳುವವರೂ, ಶ್ರೇಷ್ಠವಾದ ವಿಭೂತಿ ಮತ್ತು ಜಡೆಗಳಿಂದ ಅಲಂಕೃತರಾದವರೂ, ಆದ ಶಿವಯೋಗಿಗಳನೇಕರು ಅಲ್ಲಿ ಮಹೇಶ್ವರನನ್ನು ತಾವೇ ನಿತ್ಯವೂ ಉಪಾಸನೆಮಾಡುತ್ತಿರುವರು.

ಫಲದಲಾಂಬುಸಮೀರಣತೋಷಿತಾಃ
ಶಿವಮನೋಜಿತಮೃತ್ಯುಪರಿಶ್ರಮಾಃ ।
ಗಿರಿವರಸ್ಥಿತನಿರ್ಜಿತಮಾನಸಾಃ
ಪ್ರಸರನಿರ್ಮಲಬುದ್ಧಿಮಹೋದಯಾಃ ॥ ೧೭ ॥
ಕಮಲಕೋಮಲಕಾಂತಿಮುಖಾಂಬುಜಾಃ
ಶಿವಕೃಪಾರ್ಜಿತನಿರ್ಭರವೈರಿಣಃ ।
ಕರಧೃತಾಂಜಲಿಮೌಲಿಶಿವೇಕ್ಷಣಾಃ
ಶಿವಮುಪಾಸತ ಏವ ನಿಶಾಮುಖೇ ॥ ೧೮ ॥
ಕರಧೃತಜಪಮಾಲಾಃ ಶಾಂತಿಸಂತೋಷಭಾಜಃ
ಕೃತನತಿಪರನಿತ್ಯಪ್ರಾರ್ಥನಾಶ್ಚಂದ್ರಮೌಳೌ ।
ಹರಚರಣಸರೋಜಧ್ಯಾನವಿಜ್ಞಾನಮೂರ್ತಿ
ವ್ಯಥಿತಜನಮನೋಜಾಃ ಸರ್ವಭಾವಾನ್ನಿತಾಂತಂ ॥ ೧೯ ॥
ವಾರಾಣಸ್ಯಾಂ ಮೃತಾನಾಂ ಚ ತಾರಕಂ ಬ್ರಹ್ಮಸಂಜ್ಞಕಂ ।
ಜನಾನಾಂ ಪೂಜನಾತ್ತತ್ರ ಮಮ ಲಿಂಗಸ್ಯ ಜಾಯತೇ ॥ ೨೦ ॥

---

೧೭. ಫಲಗಳು, ಪತ್ರಗಳು, ನೀರು, ಗಾಳಿಗಳನ್ನೇ ಆಹಾರಮಾಡಿಕೊಂಡು ಶಿವನಲ್ಲಿಯೇ ಏಕಾಗ್ರವಾದ ಮನಸ್ಸಿನಿಂದ ಮರಣವೆಂಬ ಕ್ಲೇಶವನ್ನು ಗೆದ್ದವರಾಗಿ, ಪರ್ವತೋತ್ತಮವೆನಿಸಿದ ಹಿಮಾಲಯದಲ್ಲಿ ಜಿತಮನಸ್ಕರಾಗಿ ವಾಸಿಸುವವರಾದ ಯೋಗಿಗಳು ಅಪಾರವೂ, ಪರಿಶುದ್ಧವೂ ಆದ ಬುದ್ಧಿಯಿಂದ ಯುಕ್ತರಾಗಿರುವರು.

೧೮. ಎಳೆಯ ಕಮಲದ ಕಾಂತಿಯಿಂದ ಕೂಡಿದ ಮುಖಗಳುಳ್ಳವರೂ, ಪರಮೇಶ್ವರನ ಕೃಪೆಯಿಂದ ದುಸ್ಸಹಗಳಾದ ಕಾಮಕ್ರೋಧಾದಿ ಶತ್ರುಗಳನ್ನು ಜಯಿಸಿದವರೂ, ತಲೆಯಲ್ಲಿ ಕೈಗಳನ್ನು ಜೋಡಿಸಿಕೊಂಡು ಶಿವನನ್ನೇ ನೋಡುತ್ತಿರುವವರೂ ಆದ ಶಿವಭಕ್ತರು ಸಾಯಂಕಾಲಗಳಲ್ಲಿ ಪರಶಿವನನ್ನೇ ಉಪಾಸಿಸುತ್ತಿರುವರು.

೧೯–೨೦. ಕೈಗಳಲ್ಲಿ ಜಪಮಾಲೆಗಳನ್ನು ಹಿಡಿದುಕೊಂಡು, ಯಾವಾಗಲೂ ಶಾಂತಿ ಸಂತೋಷಗಳಿಂದ ಕೂಡಿದ ಮನಸ್ಸುಳ್ಳವರಾಗಿ, ಪ್ರತಿದಿವಸವೂ, ಚಂದ್ರಶೇಖರನಿಗೆ ನಮಸ್ಕಾರಪೂರ್ವಕವಾಗಿ ಪ್ರಾರ್ಥನೆಗಳನ್ನು ಮಾಡುತ್ತ, ಯಾವಾಗಲೂ ಸಾರ್ವಾತ್ಮ್ಯಭಾವವನ್ನು ಹೊಂದಿದವರಾದುದರಿಂದ, ಪರಮೇಶ್ವರನ ಪಾದಕಮಲಗಳ ಧ್ಯಾನ ಮತ್ತು ವಿಜ್ಞಾನಗಳೇ ಮೂರ್ತಿಗೊಂಡಂತೆ ತೋರುತ್ತ ಸಕಲ ಜನರ ಮನಸ್ಸಿನ ವಿಕಾರಗಳನ್ನೂ ನಾಶಮಾಡುತ್ತ ಶಿವಭಕ್ತರು ಅಲ್ಲಿ ನೆಲಸಿರುವರು. ಕಾಶೀಕ್ಷೇತ್ರದಲ್ಲಿ ನನ್ನ ಲಿಂಗವನ್ನೇ ಪೂಜೆಮಾಡುವ ಜನರಿಗೆ

**ವಹ್ನಿತೀರ್ಥಂ ಪರಿಭ್ರಾಜದ್ಭಗವಚ್ಚರಣಾಂತಿಕೇ ।**
**ಕೇದಾರಾಖ್ಯಂ ಮಹಾಲಿಂಗಂ ದೃಷ್ಟ್ವಾ ನೋ ಜನ್ಮಭಾಗ್ಭವೇತ್ ॥ ೨೧ ॥**

**ಸ್ಕಂದ ಉವಾಚ:—**

**ಕಥಂ ವೈಶ್ವಾನರಃ ಶ್ರೀಮಾನ್ ಸರ್ವಲೋಕೈಕಕಾರಣಂ ।**
**ಬದರೀಮನುಸಂತಸ್ಥೌ ತನ್ಮೇ ವದ ಮಹಾಮತೇ ॥ ೨೨ ॥**

**ಶಿವ ಉವಾಚ:—**

**ಪುರಾ ಸಮಾಜಃ ಸಮಭೂದೃಷೀಣಾಂ ಊರ್ಧ್ವರೇತಸಾಂ ।**
**ಗಂಗಾ ಭಗವತೀ ಯತ್ರ ಕಾಲಿಂದ್ಯಾ ಸಹ ಸಂಗತಾ ॥ ೨೩ ॥**
**ದಶಾಶ್ವಮೇಧಿಕಂ ನಾಮ ತೀರ್ಥಂ ತ್ರೈಲೋಕ್ಯವಿಶ್ರುತಂ ।**
**ಬಭೂವ ತತ್ರ ಭಗವಾನ್ ಹುತಭುಕ್ಪ್ರಶ್ರಯಾನತಃ ।**
**ಋಷೀಣಾಮಗ್ರತಃ ಸ್ಥಿತ್ವಾ ಪ್ರಷ್ಟುಂ ಸಮುಪಚಕ್ರಮೇ ॥ ೨೪ ॥**

**ವೈಶ್ವಾನರ ಉವಾಚ:—**

**ದೃಷ್ಟ್ವಾ ದೃಷ್ಟ್ಯೈಕದೃಜ್ಞಾನಾ ಭವಂತೋ ಬ್ರಹ್ಮವಿತ್ತಮಾಃ ।**
**ದೀನಾರ್ಥೇ ಕರುಣಾಪೂರ್ಣಾ ಹೃದಯಾರ್ದ್ರಾ ದಯಾಲವಃ ॥ ೨೫ ॥**

---

ಅಲ್ಲಿಯೇ ಮರಣವುಂಟಾಗಲು ಬ್ರಹ್ಮಪ್ರಾಪ್ತಿಗೆ ಉಪಾಯವಾದ ತಾರಕ ಮಂತ್ರೋಪದೇಶವಾಗುವುದು.

೨೧. ಭಗವಂತನ ಚರಣಗಳ ಸಮೀಪದಲ್ಲಿರುವ ಅಗ್ನಿತೀರ್ಥವನ್ನು ಸೇವಿಸಿ ಕೇದಾರೇಶ್ವರಲಿಂಗವನ್ನು ನೋಡಲು ಮನುಷ್ಯನು ಮತ್ತೆ ಜನ್ಮವನ್ನು ಹೊಂದುವುದಿಲ್ಲವು.

೨೨. ಸ್ಕಂದನು ಪ್ರಶ್ನೆಮಾಡುತ್ತಾನೆ:—ಅಗ್ನಿದೇವನು ಸಕಲ ಲೋಕಗಳ ಕಾರಣವಾದ ಬದರಿಕಾಶ್ರಮವನ್ನು ಹೇಗೆ ಸೇವಿಸುವವನಾದನು? ಮಹಾಪ್ರಾಜ್ಞನಾದ ನೀನು ಅದನ್ನೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸು.

೨೩. ಶಿವನು ಹೇಳುತ್ತಾನೆ:—ಗಂಗಾ ಯಮುನಾ ನದಿಗಳ ಸಂಗಮ ಪ್ರದೇಶದಲ್ಲಿ ಹಿಂದೊಮ್ಮೆ ಊರ್ಧ್ವರೇತಸ್ಕರಾದ ಸಕಲ ಮಹರ್ಷಿಗಳ ಕೂಟವೊಂದು ಸೇರಿದ್ದಿತು.

೨೪. ಅಲ್ಲಿಯೇ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ದಶಾಶ್ವಮೇಧ ತೀರ್ಥವು ನೆಲಸಿದ್ದಿತು. ಅಲ್ಲಿ ಅಗ್ನಿದೇವನು ಭಕ್ತಿಯಿಂದ ನಮ್ರನಾಗಿ ಮಹರ್ಷಿಗಳ ಸಮ್ಮುಖದಲ್ಲಿ ನಿಂತು ಪ್ರಶ್ನೆಮಾಡಲುಪಕ್ರಮಿಸಿದನು.

೨೫. ಅಗ್ನಿಯು ಹೇಳುತ್ತಾನೆ:—ಬ್ರಹ್ಮಜ್ಞಾನಿಶ್ರೇಷ್ಠರುಗಳಿರಾ! ನೀವುಗಳೆಲ್ಲರೂ ಏಕಾಗ್ರವಾದ ದೃಷ್ಟಿಯಿಂದ ಜ್ಞಾನವನ್ನು ಸಂಪಾದಿಸಿರುವಿರಿ. ದೀನರ ವಿಷಯದಲ್ಲಿ ಕೃಪಾಳುಗಳೂ, ಆರ್ದ್ರಹೃದಯರೂ, ದಯಾವಂತರೂ ಆಗಿರುವಿರಿ.

ಸರ್ವದುರ್ಲಕ್ಷಣೋದ್ಭೂತಪಾತಕಾಲಿಪ್ತತೇಜಸಃ ।
ಕಥಂ ಸ್ಯಾನ್ನಿರಯಾನ್ಮುಕ್ತಿಃ ಮಮ ಬ್ರಹ್ಮವಿದುತ್ತಮಾಃ ॥ ೨೬ ॥
ಸರ್ವೇಷಾಂ ಋಷಿವರ್ಯಾಣಾಮಾಜಗಾಮ ಮುನೀಶ್ವರಃ ।
ಗಂಗಾಂಭಸಿ ಸಮಾಪ್ಲುತ್ಯ ವಾಕ್ಯಂ ಚೇದಮುವಾಚ ಹ ॥ ೨೭ ॥

ವ್ಯಾಸ ಉವಾಚ:—

ಅಸ್ತ್ಯೇಕಃ ಪರಮೋಪಾಯಃ ಭವತಃ ಪಾಪನಿಷ್ಕೃತೌ ।
ಸರ್ವಭಕ್ಷ್ಯಾಖ್ಯದೋಷಸ್ಯ ಬದರೀಂ ಶರಣಂ ಶ್ರಯಃ ॥ ೨೮ ॥
ಯತ್ರಾऽಸ್ತೇ ಭಗವಾನ್ಸಾಕ್ಷಾದ್ದೇವದೇವೋ ಜನಾರ್ದನಃ ।
ಭಕ್ತಾನಾಮಪ್ಯಭಕ್ತಾನಾಮಘಹಾ ಮಧುಸೂದನಃ ॥ ೨೯ ॥
ತತ್ರ ಗಂಗಾಂಭಸಿ ಸ್ನಾತ್ವಾ ಕೃತ್ವಾ ಪ್ರದಕ್ಷಿಣಾಂ ಹರೇಃ ।
ದಂಡವತ್ಪ್ರಣಿಪಾತೇನ ಸರ್ವಪಾಪಕ್ಷಯೋ ಭವೇತ್ ॥ ೩೦ ॥
ತತೋ ವ್ಯಾಸಮುಖಾಚ್ಛ್ರುತ್ವಾ ಋಷೀಣಾಮನುವಾದತಃ ।
ಉತ್ತರಾಭಿಮುಖೋ ವಹ್ನಿಃ ಗಂಧಮಾದನಮಾಯಯೌ ॥ ೩೧ ॥

---

೨೬. ನೀವು ಸಕಲದುರ್ಲಕ್ಷಣಯುಕ್ತಗಳಾದ ಪಾತಕಗಳನ್ನೆಲ್ಲ ಮನಸ್ಸಿನಿಂದ ದೂರಮಾಡಿರುವಿರಿ; ಬ್ರಹ್ಮಜ್ಞರಲ್ಲಿ ಉತ್ತಮರೆನಿಸಿರುವಿರಿ. ನನಗೆ ನರಕದಿಂದ ಮೋಕ್ಷವು ಉಂಟಾಗುವುದೆಂತೆಂಬುದನ್ನು ತಿಳಿಸಿರಿ.

೨೭. ಇಷ್ಟರಲ್ಲಿ ಗಂಗೆಯಲ್ಲಿ ಸ್ನಾನವನ್ನು ಮುಗಿಸಿಕೊಂಡು ಮಹರ್ಷಿಯಾದ ವ್ಯಾಸನು ಸಕಲ ಋಷಿಮುಖ್ಯರಿದ್ದಲ್ಲಿಗೆ ಪ್ರಾಪ್ತನಾಗಿ ಮುಂದೆ ಹೇಳುವಂತೆ ಮಾತನಾಡತೊಡಗಿದನು.

೨೮. ವ್ಯಾಸನು ಹೇಳುತ್ತಾನೆ:— ಸರ್ವಭಕ್ಷಕನಾಗಿರುವ ನಿನ್ನ ದೋಷವನ್ನು ಕಳೆದುಕೊಳ್ಳುವುದಕ್ಕಾಗಿ ಒಂದೇ ಉಪಾಯವಿರುವುದು. ಆ ಪರಮೋಪಾಯವು ಬದರೀಕ್ಷೇತ್ರದ ಸೇವೆಯು.

೨೯. ಅಲ್ಲಿ ಷಡ್ಗುಣೈಶ್ವರ್ಯವಂತನೂ, ದೇವತಾ ಸಾರ್ವಭೌಮನೂ ಆದ ಜನಾರ್ದನನು ವಾಸಮಾಡುತ್ತಿರುವನು. ಆ ಮಧುಸೂದನನು ಭಕ್ತರಿಗೂ, ಇತರರಿಗೂ ಸಕಲಪಾಪಗಳನ್ನೂ ನಿರ್ಮೂಲಗೊಳಿಸುವನು.

೩೦. ಅಲ್ಲಿ ಗಂಗಾನದಿಯಲ್ಲಿ ಸ್ನಾನವನ್ನುಮಾಡಿ ಬದರೀನಾರಾಯಣನಿಗೆ ಪ್ರದಕ್ಷಿಣೆಯನ್ನುಮಾಡಿ ಸಾಷ್ಟಾಂಗಪ್ರಣಾಮವನ್ನು ಮಾಡಲು ಸಕಲ ದೋಷಗಳ ಕ್ಷಯವುಂಟಾಗುವುದು.

೩೧. ವ್ಯಾಸಮಹರ್ಷಿಯಾಡಿದ ಈ ಮಾತುಗಳನ್ನು ಕೇಳಿ ಮಹರ್ಷಿಗಳೆಲ್ಲರೂ ಅನುಮೋದಿಸಿದರು. ಅವರನ್ನು ಬೀಳ್ಕೊಂಡು ಅಗ್ನಿಯು ಉತ್ತರದಿಕ್ಕಿಗೆ ಪ್ರಯಾಣವನ್ನು ಮಾಡಿ ಗಂಧಮಾದನ ಪರ್ವತವನ್ನು ಸೇರಿದನು.

ತತೋ ಬದರಿಕಾಂ ಪ್ರಾಪ್ಯ ಸ್ನಾತ್ವಾ ಗಂಗಾಂಭಸಿ ಸ್ವಯಂ ।
ನಾರಾಯಣಾಶ್ರಮಂ ಗತ್ವಾ ನತ್ವಾ ಪ್ರೋವಾಚ ಭಕ್ತಿಮಾನ್ ॥ ೩೨ ॥

ಅಗ್ನಿರುವಾಚ :—

ವಿಶುದ್ಧವಿಜ್ಞಾನಘನಂ ಪುರಾಣಂ
ಸನಾತನಂ ವಿಶ್ವಸೃಜಾಂ ಪತಿಂ ಗುರುಂ ।
ಅನೇಕಮೇಕಂ ಜಗದೇಕನಾಥಂ
ನಮಾಮ್ಯನಂತಾಶ್ರಿತಶುದ್ಧಬುದ್ಧಿಂ ॥ ೩೩ ॥
ಮಾಯಾಮಯೀಂ ಶಕ್ತಿಮುಪೇತ್ಯ ವಿಶ್ವ
ಕರ್ತಾರಮುದ್ದಿಶ್ಯ ರಜೋಪಯುಕ್ತಂ ।
ಸತ್ವೇನ ಚಾಸ್ಯ ಸ್ಥಿತಿಹೇತುಮುಗ್ರಂ
ಅಥೋತಮೋಭಿರ್ಗ್ರಸಿತಾರಮೀಡೇ ॥ ೩೪ ॥
ಅವಿದ್ಯಯಾ ವಿಶ್ವವಿಮೋಹಿತಾತ್ಮಾ
ವಿದ್ಯೈಕರೂಪಂ ವಿತತಂ ತ್ರಿಲೋಕ್ಯಾಂ ।
ವಿದ್ಯಾಶ್ರಿತತ್ವಾತ್ಸಕಲಜ್ಞಮೀಶಂ
ತ್ವವಿದ್ಯಯಾ ಜೀವಮಹಂ ಪ್ರಪದ್ಯೇ ॥ ೩೫ ॥

---

೩೨. ಅಲ್ಲಿಂದ ಬದರಿಕಾಶ್ರಮವನ್ನು ಸೇರಿ ಗಂಗೆಯ ಪ್ರವಾಹದಲ್ಲಿ ಸ್ನಾನ ಮಾಡಿ ನಾರಾಯಣಾಶ್ರಮಕ್ಕೆ ಹೋಗಿ ನಮಸ್ಕರಿಸಿ ಇಂತೆಂದು ಸ್ತೋತ್ರ ಮಾಡಲುಪಕ್ರಮಿಸಿದನು.

೩೩. ಅಗ್ನಿಯು ಹೇಳುತ್ತಾನೆ:—"ಎಲೈ ಪರಮಾತ್ಮನೇ! ನಿಷ್ಕಲ್ಮಷವಾದ ವಿಜ್ಞಾನಪರಿಪೂರ್ಣನೂ, ಅನಾದಿಪುರುಷನೂ, ಸನಾತನನೂ, ಬ್ರಹ್ಮಾದಿ ದೇವತೆಗಳಿಗೆ ಸ್ವಾಮಿಯಾದವನೂ, ಲೋಕಗುರುವೂ, ಬಹುರೂಪನೂ, ಅದ್ವಿತೀಯನೂ, ಜಗದೇಕನಾಯಕನೂ, ಅಪಾರವಾದ ಶುದ್ಧಜ್ಞಾನಕ್ಕೆ ಆಶ್ರಯನಾದವನೂ ಆದ ನಿನಗೆ ನಮಸ್ಕರಿಸುವೆನು.

೩೪. ಮಾಯಾರೂಪವಾದ ತನ್ನ ಶಕ್ತಿಯ ಪ್ರಭಾವದಿಂದ ಲೋಕಸೃಷ್ಟಿಗಾಗಿ ರಜೋಗುಣಪ್ರಧಾನನಾಗುವವನೂ, ಸತ್ತ್ವಗುಣದಿಂದ ಬ್ರಹ್ಮಾಂಡದ ಸ್ಥಿತಿಯನ್ನುಂಟುಮಾಡುವವನೂ, ಅಂತ್ಯದಲ್ಲಿ ತಮೋಗುಣದಿಂದ ಸಮಸ್ತವನ್ನೂ ನಿಶ್ಶೇಷವಾಗಿ ಗ್ರಸನಮಾಡುವವನೂ ಆದ ನಿನ್ನನ್ನು ಸ್ತೋತ್ರ ಮಾಡುವೆನು.

೩೫. ಅವಿದ್ಯೆಯ ಬಲದಿಂದ ಬ್ರಹ್ಮಾಂಡದ ರೂಪವಾದ ಭ್ರಾಂತಿಯನ್ನುಂಟು ಮಾಡುತ್ತಿರುವ ಆತ್ಮಸ್ವರೂಪನೂ, ವಿದ್ಯೆಯ ಘನರೂಪನಾಗಿ ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವವನೂ, ವಿದ್ಯೆಗೆ ಆಶ್ರಯನಾದುದರಿಂದ ಸರ್ವಜ್ಞನೆನಿಸಿ

ಭಕ್ತೇಚ್ಛಯಾಽವಿಷ್ಕೃತದೇಹಯೋಗ
ಮಾಭೋಗಭೋಗಾರ್ಪಿತಯೋಗಯೋಗಂ ।
ಕೌಶೇಯಪೀತಾಂಬರಜುಷ್ಟಶಕ್ತಿಂ
ವಿಚಿತ್ರಶಕ್ತ್ಯಷ್ಟಮಯೇಷ್ಟಮೀಡೇ ॥ ೩೬ ॥

ಅಥ ಪ್ರಸನ್ನೋ ಭಗವಾನ್ಸ್ತುತಃ ಸರ್ವಹೃದಿ ಸ್ಥಿತಃ ।
ಪ್ರೋವಾಚ ಮಧುರಂ ವಾಕ್ಯಂ ಪಾವಕಂ ಪಾವನಾರ್ಥಿನಂ ॥ ೩೭ ॥

ಶ್ರೀ ನಾರಾಯಣ ಉವಾಚ :—

ವರಂ ವರಯ ಭದ್ರಂ ತೇ ವರದೋಽಹಮುಪಾಗತಃ ।
ಸ್ತವೇನಾನೇನ ತುಷ್ಟೋಽಸ್ಮಿ ವಿನಯೇನ ತವಾನಘ ॥ ೩೮ ॥

ಅಗ್ನಿರುವಾಚ :—

ಜ್ಞಾತಂ ಭಗವತಾ ಸರ್ವಂ ಯದರ್ಥಮಹಮಾಗತಃ ।
ತಥಾಪಿ ಕಥಯಾಮ್ಯೇತದೀಶ್ವರಾಜ್ಞಾನುಪಾಲನಂ ॥ ೩೯ ॥

---

ದವನೂ, ಜಗನ್ನಾಥನೂ, ಅವಿದ್ಯೆಯಿಂದ ಜೀವಭಾವವನ್ನು ಹೊಂದಿದವನೂ ಆದ ನಿನಗೆ ಶರಣುಹೊಗುವೆನು.

೩೬. ಭಕ್ತರ ಇಚ್ಛೆಗಳನ್ನನುಸರಿಸಿ ದೇಹಸಂಬಂಧವನ್ನು ಪಡೆಯುವವನೂ, ಅಪಾರವಾದ ಭೋಗಗಳನ್ನೂ ಯೋಗಸಿದ್ಧಿಯನ್ನೂ ಕೃಪೆಮಾಡುವವನೂ, ರೇಷ್ಮೆಯ ಪೀತಾಂಬರದ ರೂಪವಾದ ಶಕ್ತಿಯಿಂದ ಕೂಡಿದವನೂ, ವಿಚಿತ್ರಗಳಾದ ಅಷ್ಟಶಕ್ತಿಗಳಿಂದ ಸಕಲರಿಗೂ ಪ್ರಿಯತಮನಾದವನೂ ಆದ ನಿನ್ನನ್ನು ಸ್ತೋತ್ರ ಮಾಡುವೆನು.''

೩೭. ಇಂತು ಪಾವನತ್ವವನ್ನೆಳಸಿ ಸ್ತೋತ್ರವನ್ನು ಮಾಡುತ್ತಿರುವ ಅಗ್ನಿದೇವನಿಗೆ, ಸಕಲರ ಹೃದಯಗಳಲ್ಲಿಯೂ ವಾಸಮಾಡುತ್ತಿರುವ ಶ್ರೀಮನ್ನಾರಾಯಣನು ಪ್ರಸನ್ನನಾಗಿ ಆತನಿಗೆ ಮೃದುಮಧುರವಾದ ಮಾತನ್ನು ಹೇಳತೊಡಗಿದನು.

೩೮. ನಾರಾಯಣನು ಹೇಳುತ್ತಾನೆ:—"ಎಲೈ ನಿಷ್ಪಾಪನೆ! ನಿನ್ನ ಸ್ತೋತ್ರದಿಂದಲೂ, ಭಕ್ತಿಯಿಂದಲೂ ಸಂತೋಷಗೊಂಡಿರುವೆನು. ಇದೋ, ನಿನಗೆ ವರವನ್ನು ಕೊಡಲು ಪ್ರತ್ಯಕ್ಷನಾಗಿರುವೆನು. ಬೇಕಾದ ವರವನ್ನು ಕೇಳಿಕೊ. ಅದರಿಂದ ನಿನಗೆ ಉತ್ತರ ಶ್ರೇಯಸ್ಸುಂಟಾಗುವುದು.''

೩೯. ಅಗ್ನಿಯು ಹೇಳುತ್ತಾನೆ:—"ಎಲೈ ಸ್ವಾಮಿಯೆ! ನಾನು ಯಾವ ಅಭಿಲಾಷೆಯಿಂದ ಇಲ್ಲಿಗೆ ಬಂದಿರುವೆನೆಂಬ ವಿಷಯವೆಲ್ಲವೂ ಸರ್ವಜ್ಞನಾದ ನಿನಗೆ ತಿಳಿದೇ ಇರುವುದು. ಆದರೂ ಲೋಕೇಶ್ವರನಾದ ನಿನ್ನ ಆಜ್ಞೆಯನ್ನನುಸರಿಸಿ ನನ್ನ ಮನಸ್ಸಿನಲ್ಲಿರುವುದನ್ನು ಕೇಳಿಕೊಳ್ಳುವೆನು.

ಸರ್ವಭಕ್ಷ್ಯೋ ಭವಾಮ್ಯೇವ ನಿಷ್ಕೃತಿಸ್ತು ಕಥಂ ಭವೇತ್ ।
ಅತ್ಯಂತಭಯಸಂಪತ್ತಿಃ ಏತಸ್ಮಾಜ್ಜಾಯತೇ ಮಮ ॥ ೪೦ ॥

ನಾರಾಯಣ ಉವಾಚ :—

ಕ್ಷೇತ್ರದರ್ಶನಮಾತ್ರೇಣ ಪ್ರಾಣಿನಾಂ ನಾಸ್ತಿ ಪಾತಕಂ ।
ಮತ್ಪ್ರಸಾದಾತ್ಪಾತಕಂ ತು ತ್ವಯಿ ಮಾಸ್ತು ಕದಾಚನ ॥ ೪೧ ॥
ತತಃ ಪ್ರಭೃತಿ ಭೂತಾತ್ಮಾ ಪಾವಕಃ ಸರ್ವತೋ ಭೃಶಂ
ಕಲಯಾವಸ್ಥಿತಶ್ಚಾತ್ರ ಸರ್ವದೋಷವಿವರ್ಜಿತಃ ॥ ೪೨ ॥
ಯ ಏತತ್ಪ್ರಾತರುತ್ಥಾಯ ಶೃಣೋತಿ ಶ್ರಾವಯೇಚ್ಛುಚಿಃ ।
ಅಗ್ನಿತೀರ್ಥಕೃತಂ ಸ್ನಾನಂ ಫಲಂ ಪ್ರಾಪ್ನೋತ್ಯಸಂಶಯಂ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯಸಂವಾದೇ "ಅಗ್ನಿಕೃತಭಗವತ್ಸ್ತುತಿವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

೪೦. ನಾನು ಸರ್ವ ಭಕ್ಷಕನಾಗಿರುವುದರಿಂದ ಅಶುದ್ಧ ಪದಾರ್ಥಗಳನ್ನು ಸೇವಿಸಿ ಅಪವಿತ್ರನಾಗಿರುವೆನು. ಈ ಪಾಪಕ್ಕೆ ಪ್ರಾಯಶ್ಚಿತ್ತವು ಉಂಟಾಗುವುದು ಹೇಗೆ? ಈ ಕಾರಣದಿಂದ ನನಗೆ ಅತ್ಯಂತವಾದ ಭಯವೆಂಬುದು ಸಂಭವಿಸುತ್ತಿರುವುದು."

೪೧. ನಾರಾಯಣನು ಹೇಳುತ್ತಾನೆ:—"ಎಲೈ ಅಗ್ನಿಯೆ! ಈ ಬದರೀ ಕ್ಷೇತ್ರದ ದರ್ಶನದ ಮಾತ್ರದಿಂದಲೇ ಸಕಲ ಪ್ರಾಣಿಗಳ ಪಾತಕಗಳೂ ನಿರ್ಮೂಲವಾಗುವುವು. ಆದರೆ ನಿನಗೆ ಮಾತ್ರ ನನ್ನ ಅನುಗ್ರಹದ ಫಲವಾಗಿ ಆಶೌಚವೆಂಬುದು ಎಂದಿಗೂ ಉಂಟಾಗದಿರಲಿ."

೪೨. ಅಂದು ಮೊದಲ್ಗೊಂಡು ಭೂತಗಳ ಅಂತರ್ಯಾಮಿಯಾದ ಅಗ್ನಿದೇವನು ಎಲ್ಲೆಲ್ಲಿಯೂ ವ್ಯಾಪಿಸಿ ಸಕಲದೋಷಗಳಿಂದ ರಹಿತನಾಗಿ ತನ್ನ ಒಂದು ಅಂಶದಿಂದ ಇಲ್ಲಿ ಮಾತ್ರ ಯಾವಾಗಲೂ ನೆಲಸಿರುವನು.

೪೩. ಯಾವನು ಪ್ರಾತಃಕಾಲದಲ್ಲೆದ್ದು ಶುಚಿಯಾಗಿ ಈ ಪ್ರಕರಣವನ್ನು ಕೇಳುವನೊ, ಇತರರಿಗೆ ಕೇಳಿಸುವನೊ, ಅವನು ಅಗ್ನಿತೀರ್ಥದಲ್ಲಿ ಸ್ನಾನ ಮಾಡಿದ ಸುಕೃತವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮಮಾಹಾತ್ಮ್ಯದ ಶಿವಕಾರ್ತಿಕೇಯಸಂವಾದದಲ್ಲಿ "ಅಗ್ನಿಕೃತಭಗವತ್ಸ್ತುತಿವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಅಗ್ನಿತೀರ್ಥ, ನಾರದಶಿಲಾ, ಮಾರ್ಕಂಡೇಯಶಿಲಾದಿಮಾಹಾತ್ಮ್ಯವರ್ಣನಂ

ಸ್ಕಂದ ಉವಾಚ:—

ಭಗವನ್ಸರ್ವಭೂತಸ್ಥ ಸರ್ವಧರ್ಮವಿಶಾರದ ।
ಅಗ್ನಿತೀರ್ಥಸ್ಯ ಮಾಹಾತ್ಮ್ಯಂ ಕೃಪಯಾ ವದ ಮೇ ಪಿತಃ ॥ ೧ ॥

ಶಿವ ಉವಾಚ:—

ಅಗ್ನಿಗುಹ್ಯತಮಂ ತೀರ್ಥಂ ಸರ್ವತೀರ್ಥನಿಷೇವಿತಂ ।
ಸಂಕ್ಷೇಪಾತ್ಕಥಯಾಮ್ಯೇತತ್ತ್ವಾದರವಶಾದಹಂ ॥ ೨ ॥
ಮಹಾಪಾತಕಿನೋ ಯೇ ಚ ಅತಿಪಾತಕಿನಸ್ತಥಾ ।
ಸ್ನಾನಮಾತ್ರೇಣ ಶುಧ್ಯಂತಿ ವಿನಾಯಾಸೇನ ಪುತ್ರಕ ॥ ೩ ॥
ಪ್ರಾಯಶ್ಚಿತ್ತೇನ ಯತ್ಪಾಪಂ ನ ಗಚ್ಛೇನ್ಮರಣಾಂತಿಕಂ ।
ಸ್ನಾನಮಾತ್ರೇಣ ತೀರ್ಥಸ್ಯ ಪಾವಕಸ್ಯ ವಿಶುಧ್ಯತಿ ॥ ೪ ॥

---

## ಕನ್ನಡದ ಅನುವಾದ

### ಅಗ್ನಿತೀರ್ಥ-ನಾರದಶಿಲಾ-ಮಾರ್ಕಂಡೇಯಶಿಲಾಮಹಾತ್ಮ್ಯವರ್ಣನ

೧. ಸ್ಕಂದನು ಹೇಳುತ್ತಾನೆ:— ಎಲೈ ಸ್ವಾಮಿಯೆ! ಸಕಲಪ್ರಾಣಿಗಳಲ್ಲಿಯೂ ನೆಲಸಿ ನೀನು ಸರ್ವಧರ್ಮಗಳನ್ನೂ ತಿಳಿದ ಪ್ರಾಜ್ಞನಾಗಿರುವೆ. ತಂದೆಯೆ! ನನ್ನಲ್ಲಿ ಕೃಪೆಯಿಟ್ಟು ಅಗ್ನಿತೀರ್ಥದ ಮಾಹಾತ್ಮ್ಯವನ್ನು ವಿಸ್ತಾರವಾಗಿ ನಿರೂಪಿಸುವವನಾಗು.

೨. ಶಿವನು ಹೇಳುತ್ತಾನೆ:—ಈ ತೀರ್ಥವು ಅತ್ಯಂತ ಏಕಾಂತವಾಗಿರುವುದು. ಸಕಲ ತೀರ್ಥಗಳಿಂದಲೂ ಸೇವಿಸಲ್ಪಡುತ್ತಿರುವುದು. ನಿನ್ನಲ್ಲಿರುವ ಪ್ರೀತಿಯಿಂದ ನಾನು ಈ ತೀರ್ಥದ ಮಾಹಾತ್ಮ್ಯೆಯನ್ನು ಸಂಕ್ಷೇಪವಾಗಿ ತಿಳಿಸುತ್ತೇನೆ.

೩. ಎಲೈ ಪುತ್ರನೆ! ಮಹಾಪಾತಕಗಳನ್ನು ಮಾಡಿದವರೂ, ಅತಿಪಾತಕಿಗಳೂ ಸಹ ಯಾವ ಆಯಾಸವೂ ಇಲ್ಲದೆಯೇ ಇಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಪರಿಶುದ್ಧರಾಗುವರು.

೪. ಮರಣಾಂತವಾದ ಯಾವ ಪ್ರಾಯಶ್ಚಿತ್ತದಿಂದಲೂ ಯಾವ ಪಾಪಗಳು ಕಳೆಯಲಾರವೊ, ಅವುಗಳೂ ಸಹ ಈ ಅಗ್ನಿ ತೀರ್ಥದಲ್ಲಿ ಮಾಡಿದ ಸ್ನಾನದ ಮಾತ್ರದಿಂದಲೇ ನಾಶವನ್ನು ಹೊಂದುವುವು.

ಅತ್ಯಂತಮಲಸಂಬದ್ಧಂ ಯಥಾ ಶುಧ್ಯತಿ ಹಾಟಕಂ ।
ತಥಾಽಗ್ನಿತೀರ್ಥಮಾಸಾದ್ಯ ದೇಹೀ ಪಾಪೈರ್ವಿಶುಧ್ಯತೇ ॥ ೫ ॥
ಕುಶಾಗ್ರೇಣೋದಬಿಂದುಂ ಚ ಪೀತ್ವಾ ವರ್ಷತ್ರಯಂ ನರಃ ।
ಅನ್ಯಕ್ಷೇತ್ರೇ ತಪಃ ಕೃತ್ವಾ ತದತ್ರ ಸ್ನಾನಮಾತ್ರತಃ ॥ ೬ ॥
ಬ್ರಾಹ್ಮಣಾನ್ಭೋಜಯಿತ್ವಾಽಸ್ಮಿನ್ಯಥಾ ವಿಭವಸಂಭವೈಃ ।
ದರಿದ್ರತಾ ಕುಲೇ ತೇಷಾಂ ನ ಕದಾಚಿತ್ಪ್ರಜಾಯತೇ ॥ ೭ ॥
ಉಪವಾಸೇನ ಯಃ ಪ್ರಾಣಾನ್ವಹ್ನಿತೀರ್ಥೇ ತ್ಯಜೇನ್ನರಃ ।
ಸ ಭಿತ್ವಾ ಸೂರ್ಯಲೋಕಾದೀನ್ ವಿಷ್ಣುಲೋಕಂ ಪ್ರಪದ್ಯತೇ ॥ ೮ ॥
ಚಾಂದ್ರಾಯಣಸಹಸ್ರೈಸ್ತು ಕೃಚ್ಛ್ರೈಃ ಕೋಟಿಭಿರೇವ ಚ ।
ಯತ್ಫಲಂ ಲಭತೇ ಮರ್ತ್ಯಃ ಸ್ನಾನಾದ್ವೈ ವಹ್ನಿತೀರ್ಥಕೇ ॥ ೯ ॥
ಪಂಚಧಾ ಯೇ ಪ್ರಕುರ್ವಂತಿ ಪಾಪಮಸ್ಮಿನ್ಷಡಾನನ ।
ಜಪೇನ ಪವನಾಯಾಮೈಃ ವಿಶುದ್ಧಿರಿತಿ ಮೇ ಮತಿಃ ॥ ೧೦ ॥

---

೫. ಹೆಚ್ಚಿನ ಕಲ್ಮಷಗಳಿಂದ ಕೂಡಿದ ಚಿನ್ನವು ಬೆಂಕಿಯಲ್ಲಿ ಪುಟಕ್ಕೆ ಹಾಕುವುದರಿಂದ ಹೇಗೆ ಪರಿಶುದ್ಧವಾಗುವುದೊ, ಹಾಗೆಯೇ ಪ್ರತಿಯೊಬ್ಬ ಮನುಷ್ಯನೂ ಅಗ್ನಿ ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದ ಶುದ್ಧನಾಗುವನು.

೬–೭. ಇತರ ಕ್ಷೇತ್ರಗಳಲ್ಲಿ ಕುಶಾಗ್ರದಿಂದ ಮಾತ್ರ ಜಲಬಿಂದುಗಳನ್ನು ಸೇವಿಸುತ್ತ ಮೂರು ವರ್ಷಗಳವರೆಗೂ ತಪಸ್ಸನ್ನು ಮಾಡುವುದರಿಂದ ಯಾವ ಪುಣ್ಯವು ಲಭಿಸುವುದೊ, ಅದನ್ನು ಇಲ್ಲಿ ಸ್ನಾನಮಾತ್ರದಿಂದ ಮನುಷ್ಯರು ಸಂಪಾದಿಸಬಹುದು. ಯಾರು ಈ ತೀರ್ಥದಲ್ಲಿ ತಮ್ಮ ಶಕ್ತ್ಯೈಶ್ವರ್ಯಗಳಿಗೆ ಅನುಸಾರವಾಗಿ ಬ್ರಾಹ್ಮಣರಿಗೆ ಭೋಜನೋಪಚಾರಗಳನ್ನು ಮಾಡಿಸುವರೊ, ಅವರ ವಂಶದಲ್ಲಿ ಎಂದೂ ಯಾರಿಗೂ ದಾರಿದ್ರ್ಯದ ದುಃಖವು ಸಂಭವಿಸುವುದಿಲ್ಲ.

೮. ಯಾವ ಮಾನವನು ಉಪವಾಸದಿಂದ ಪ್ರಾಯೋಪವೇಶವನ್ನು ಮಾಡಿ ಅಗ್ನಿ ತೀರ್ಥದಲ್ಲಿ ದೇಹವನ್ನು ತ್ಯಜಿಸುವನೊ, ಅವನು ಸೂರ್ಯಲೋಕವೇ ಮೊದಲಾದ ಸಕಲ ಭೋಗಸ್ಥಾನಗಳನ್ನೂ ಭೇದಿಸಿಕೊಂಡು ಹೋಗಿ ಶಾಶ್ವತವಾದ ವಿಷ್ಣುಲೋಕವನ್ನು ಹೊಂದುವನು.

೯. ಒಂದು ಸಾವಿರ ಚಾಂದ್ರಾಯಣವ್ರತಗಳಿಂದಲೂ, ಕೋಟಿ ಕೃಚ್ಛ್ರ ಪ್ರಾಯಶ್ಚಿತ್ತಗಳಿಂದಲೂ ಮನುಷ್ಯನು ಯಾವ ಫಲವನ್ನು ಹೊಂದುವನೊ, ಅದನ್ನೇ ಅಗ್ನಿ ತೀರ್ಥದಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದ ಪಡೆಯುವನು.

೧೦. ಎಲೈ ಷಣ್ಮುಖಸ್ವಾಮಿಯೆ! ಯಾರು ಪಂಚಮಹಾಪಾತಕಗಳನ್ನು ಮಾಡಿರುವರೊ, ಅವರಿಗೂ ಸಹ ಇಲ್ಲಿ ಜಪಪ್ರಾಣಾಯಾಮಗಳನ್ನು ಮಾಡುವುದರಿಂದ ಪಾಪಶುದ್ಧಿಯುಂಟಾಗುವುದೆಂಬುದಾಗಿ ನನ್ನ ಅಭಿಪ್ರಾಯವು.

ಜ್ಞಾನೇನ ಮೋಹವಶತಃ ಪಾಪಂ ಕುರ್ವಂತಿ ಯೇಽಧಮಾಃ ।
ಪೈಶಾಚೀಂ ಯೋನಿಮಾಯಾಂತಿ ಯಾವದಿಂದ್ರಾಶ್ಚತುರ್ದಶ ॥ ೧೧ ॥
ಅನಾಶ್ರಮೀ ಚಾಶ್ರಮೀ ವಾ ಯಾವದ್ದೇಹಸ್ಯ ಧಾರಣಂ ।
ನ ತೀರ್ಥೇ ಪಾವಕೇ ಕುರ್ಯಾತ್ಪಾತಕಂ ಬುದ್ಧಿಪೂರ್ವಕಂ ॥ ೧೨ ॥
ಸ್ನಾನಂ ದಾನಂ ಜಪೋ ಹೋಮಃ ಸಂಧ್ಯಾ ದೇವಾರ್ಚನಂ ತಥಾ ।
ಅತ್ರಾಽನಂತಗುಣಂ ಪ್ರೋಕ್ತಮನ್ಯತೀರ್ಥಾತ್ಷಡಾನನ ॥ ೧೩ ॥
ಬಹೂನಿ ಸಂತಿ ತೀರ್ಥಾನಿ ಪಾವನಾನಿ ಮಹಾಂತ್ಯಪಿ ।
ವಹ್ನಿತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೧೪ ॥
ನ ಬ್ರಹ್ಮಾ ನ ಶಿವಃ ಶೇಷೋ ನ ದೇವಾ ನ ಚ ತಾಪಸಾಃ ।
ಶಕ್ನುವಂತಿ ಫಲಂ ನಾಲಂ ವಕ್ತುಂ ಪಾವಕತೀರ್ಥಜಂ ॥ ೧೫ ॥
ಕಿಂ ತೇಷಾಂ ಬಹುಭಿರ್ಯಜ್ಞೈಃ ಕಿಂ ದಾನೈರ್ನಿಯಮೈರ್ಯಮೈಃ ।
ಯೇಷಾಂ ಪಾವಕತೀರ್ಥೇಽಸ್ಮಿನ್ಸ್ನಾನಂ ದಶದಿನಂ ಭವೇತ್ ॥ ೧೬ ॥

---

೧೧. ಬುದ್ಧಿಪೂರ್ವಕವಾಗಿಯಾಗಲಿ ಮೋಹಾವಿಷ್ಟರಾಗಿಯಾಗಲಿ ಯಾವ ನೀಚಮಾನವರು ಪಾಪಗಳನ್ನು ಮಾಡುವರೊ, ಅವರು ಹದಿನಾಲ್ಕು ಮಹೇಂದ್ರ ಕಲ್ಪಗಳವರೆಗೂ ಪಿಶಾಚಯೋನಿಗಳಲ್ಲಿ ಜನ್ಮಗಳನ್ನು ಪಡೆದು ದುಃಖವನ್ನನು ಭವಿಸುವರು.

೧೨. ಆಶ್ರಮಬಾಹಿರರಾದ ಮ್ಲೇಚ್ಛಾದಿಗಳಾಗಲಿ, ಆಶ್ರಮ ನಿಷ್ಠರಾಗಲಿ ತಮ್ಮ ದೇಹಗಳಿರುವವರೆಗೂ ಈ ಅಗ್ನಿತೀರ್ಥದಲ್ಲಿ ಬುದ್ಧಿಪೂರ್ವಕವಾಗಿ ಯಾವ ಪಾಪಕೃತ್ಯವನ್ನೂ ಮಾಡಬಾರದು.

೧೩. ಓ ಷಡಾನನ! ಇತರ ಕ್ಷೇತ್ರಗಳಲ್ಲಿ ಮಾಡಿದುದಕ್ಕಿಂತಲೂ ಇಲ್ಲಿ ಮಾಡಿದ ತೀರ್ಥಸ್ನಾನ, ದಾನ, ಜಪ, ಹೋಮ, ಸಂಧ್ಯಾದಿ ನಿತ್ಯಕರ್ಮ, ದೇವತಾರ್ಚನೆಗಳು ಅನಂತಗುಣಿತವಾದ ಫಲವನ್ನು ಕೊಡುವುವೆಂದು ಹೇಳಲ್ಪಟ್ಟಿರುವುದು.

೧೪. ಪವಿತ್ರಗಳೂ, ಮಾಹಾತ್ಮ್ಯಯುಳ್ಳವುಗಳೂ ಆದ ಅನೇಕ ತೀರ್ಥಗಳು ಲೋಕದಲ್ಲಿರುವುವು. ಆದರೆ ಅಗ್ನಿತೀರ್ಥಕ್ಕೆ ಸಮಾನವಾದ ಮತ್ತೊಂದು ತೀರ್ಥವು ಹಿಂದೆಲ್ಲಿಯೂ ಇರಲಿಲ್ಲವು; ಮುಂದೆಯೂ ಉಂಟಾಗಲಾರದು.

೧೫. ಈ ಅಗ್ನಿತೀರ್ಥದ ಮಾಹಾತ್ಮ್ಯೆಯನ್ನು ಸಂಪೂರ್ಣವಾಗಿ ತಿಳಿಸಲು ಬ್ರಹ್ಮದೇವನೂ, ಮಹೇಶ್ವರನೂ, ಆದಿಶೇಷನೂ, ದೇವತಾಗಣಗಳೂ, ತಪಸ್ವಿ ಜನರೂ ಸಹ ಶಕ್ತರಾಗಲಾರರು.

೧೬. ಯಾವ ಮನುಷ್ಯರಿಗೆ ಇಲ್ಲಿ ಹತ್ತು ದಿನಗಳವರೆಗಿನ ತೀರ್ಥಸ್ನಾನದ ಪುಣ್ಯವು ಲಭಿಸುವುದೊ, ಅವರಿಗೆ ಬೇರೆ ಅನೇಕ ಯಜ್ಞಗಳಿಂದಲೂ ದಾನಗ

ಉಪವಾಸೇನ ಯಃ ಪ್ರಾಣಾನ್ವಹ್ನಿತೀರ್ಥೇ ಜಯೇನ್ನರಃ ।
ಉಪವಾಸತ್ರಯಂ ಕೃತ್ವಾ ಪೂಜಯಿತ್ವಾ ಜನಾರ್ದನಂ ।
ನರಃ ಪಾವಕತೀರ್ಥೇಽಸ್ಮಿನ್ಸಭವೇತ್ಪಾವಕೋಪಮಃ ॥ ೧೭ ॥
ಶಿಲಾಪಂಚಕಮಧ್ಯಸ್ಥಂ ಸಾನ್ನಿಧ್ಯಂ ನಿತ್ಯದಾ ಹರೇಃ ।
ತತ್ರೈವ ಪಾವಕಂ ತೀರ್ಥಂ ಸರ್ವಪಾಪಪ್ರಣಾಶನಂ ॥ ೧೮ ॥

ಸ್ಕಂದ ಉವಾಚ :—

ಕಥಂ ತತ್ರ ಶಿಲಾಃ ಪಂಚ ಕೇನ ವಾ ತತ್ರ ನಿರ್ಮಿತಾಃ ।
ಕಿಂ ಪುಣ್ಯಂ ಕಿಂ ಫಲಂ ತಾಸಾಂ ವಕ್ತುಮರ್ಹಸ್ಯಶೇಷತಃ ॥ ೧೯ ॥

ಶಿವ ಉವಾಚ :—

ನಾರದೀ ನಾರಸಿಂಹೀ ಚ ವಾರಾಹೀ ಗಾರುಡೀ ತಥಾ ।
ಮಾರ್ಕಂಡೇಯೀತಿ ವಿಖ್ಯಾತಾಃ ಶಿಲಾಃ ಸರ್ವಾರ್ಥಸಿದ್ಧಿದಾಃ ॥ ೨೦ ॥
ನಾರದೋ ಭಗವಾಂಸ್ತೇಪೇ ತಪಃ ಪರಮದಾರುಣಂ ।
ದರ್ಶನಾರ್ಥಂ ಮಹಾವಿಷ್ಣೋಃ ಶಿಲಾಯಾಂ ವಾಯುಭೋಜನಃ ॥ ೨೧ ॥

---

ಳಿಂದಲೂ, ಕರ್ಮೇಂದ್ರಿಯಜ್ಞಾನೇಂದ್ರಿಯಗಳ ನಿಗ್ರಹದಿಂದಲೂ ಸಾಧಿಸಲ್ಪಡಬೇಕಾದುದು ಯಾವುದಿರುವುದು ?

೧೭. ಅಗ್ನಿತೀರ್ಥದಲ್ಲಿ ಉಪವಾಸವನ್ನುಮಾಡಿ ಯಾವ ಮನುಷ್ಯನು ಪಂಚಪ್ರಾಣಗಳನ್ನು ಜಯಿಸುವನೊ, ಯಾವನು ಮೂರು ಉಪವಾಸಗಳನ್ನು ಮಾಡಿ ಶ್ರೀಮನ್ನಾರಾಯಣನನ್ನು ಪೂಜಿಸುವನೊ, ಅವನು ಈ ಅಗ್ನಿ ತೀರ್ಥದಲ್ಲಿ ಅಗ್ನಿದೇವನಂತೆಯೇ ತೇಜಸ್ಸಿನಿಂದ ಕೂಡಿದವನಾಗುವನು.

೧೮. ಇಲ್ಲಿರುವ ಐದು ಶಿಲೆಗಳ ಮಧ್ಯಪ್ರದೇಶದಲ್ಲಿಯೇ ಶ್ರೀ ಹರಿಯ ಸಾನ್ನಿಧ್ಯವು ಸರ್ವಕಾಲಗಳಲ್ಲಿಯೂ ಇರುವುದು. ಅಲ್ಲಿಯೇ ಸಕಲಪಾಪಗಳನ್ನೂ ನಿಶ್ಶೇಷವಾಗಿ ಕಳೆಯುವ ಅಗ್ನಿತೀರ್ಥವೂ ನೆಲಸಿರುವುದು.

೧೯. ಸ್ಕಂದನು ಕೇಳುತ್ತಾನೆ:—ಎಲೈ ತಂದೆಯೆ! ಅಲ್ಲಿ ಐದು ಶಿಲೆಗಳು ಹೇಗೆ ಉಂಟಾದುವು? ಯಾರಿಂದ ನಿರ್ಮಿಸಲ್ಪಟ್ಟುವು? ಅವುಗಳಿಂದ ಲಭಿಸುವ ಪುಣ್ಯವು ಯಾವುದು? ಫಲವೇನು? ಈ ವಿಷಯಗಳನ್ನೆಲ್ಲ ವಿಸ್ತಾರವಾಗಿಯೂ ನಿಶ್ಶೇಷವಾಗಿಯೂ ತಿಳಿಸಲು ನೀನೇ ಅರ್ಹನಾಗಿರುವೆ.

೨೦. ಶಿವನು ಹೇಳುತ್ತಾನೆ:—ನಾರದ, ನರಸಿಂಹ, ವರಾಹ, ಗರುಡ, ಮತ್ತು ಮಾರ್ಕಂಡೇಯ ಇವರುಗಳ ಹೆಸರುಗಳಿಂದ ಪ್ರಖ್ಯಾತಗಳಾದ ಈ ಐದು ಶಿಲೆಗಳು ಸೇವಿಸುವವರ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡುವುವು.

೨೧. ಮೊದಲನೆಯ ಶಿಲೆಯಲ್ಲಿ ಭಗವಾನ್‌ನಾರದನು ಕೇವಲ ವಾಯು ಸೇವನೆಯನ್ನೇ ಮಾಡಿಕೊಂಡು ಮಹಾವಿಷ್ಣುವನ್ನು ನೋಡುವ ಬಯಕೆಯಿಂದ ಬಹಳ ಭಯಂಕರವಾದ ತಪಸ್ಸನ್ನು ಮಾಡಿದನು.

ಷಷ್ಟಿವರ್ಷಸಹಸ್ರಾಣಿ ಶಿಲಾಯಾಂ ವೃಕ್ಷವೃತ್ತಿಮಾನ್ ।
ತದಾಽಸೌ ಭಗವಾನ್ವಿಷ್ಣುಃ ತತ್ರ ಬ್ರಾಹ್ಮಣರೂಪಧೃಕ್ ॥ ೨೨ ॥
ಜಗಾಮ ಪುರತಸ್ತಸ್ಯ ಕೃಪಯಾ ಮುನಿಸತ್ತಮಂ ।
ಉವಾಚ ವಚನಂ ಚಾರು ಕಿಮಿತಿ ಕ್ಲಿಶ್ಯತೇ ಋಷೇ ।
ಕಿಂ ವಾ ತವೇಪ್ಸಿತಂ ಬ್ರೂಹಿ ತಪಸಾ ಕ್ಷೀಣಕಲ್ಮಷ ॥ ೨೩ ॥

ನಾರದ ಉವಾಚ:—

ಕೋ ಭವಾನ್ನಿಜನೇಽರಣ್ಯೇ ಮಮಾನುಗ್ರಹತತ್ಪರಃ ।
ಮನಃ ಪ್ರಸನ್ನತಾಮೇತಿ ದರ್ಶನಾತ್ತೇ ದ್ವಿಜೋತ್ತಮ ॥ ೨೪ ॥
ಇತ್ಯುಕ್ತೋ ನಾರದೇನಾಽಸೌ ಶಂಖಚಕ್ರಗದಾಧರಃ ।
ಪೀತಾಂಬರಲಸತ್ಪದ್ಮವನಮಾಲಾವಿಭೂಷಣಃ ॥ ೨೫ ॥
ಶ್ರೀವತ್ಸಕೌಸ್ತುಭಭ್ರಾಜತ್ಕಮಲಾವಿಮಲಾಲಯಃ ।
ಸುನಂದನಪ್ರಮುಖ್ಯೈಃ ಸ ಸ್ತೂಯಮಾನೋ ಜನಾರ್ದನಃ ।
ದರ್ಶಯಾಮಾಸ ರೂಪಂ ಸ್ವಂ ನಾರದಾಯ ಕೃಪಾರ್ದ್ರಿತಃ ॥ ೨೬ ॥

---

೨೨—೨೩. ಅರುವತ್ತು ಸಾವಿರ ವರ್ಷಗಳವರೆಗೂ ವೃಕ್ಷದಂತೆ ನಿಶ್ಚಲನಾಗಿ ಈ ಶಿಲೆಯಲ್ಲಿ ನಿಂತು ತಪಸ್ಸನ್ನು ಮಾಡುತ್ತಿರಲು ಭಗವಂತನಾದ ಮಹಾವಿಷ್ಣುವು ಕೃಪಾನ್ವಿತನಾಗಿ ಬ್ರಾಹ್ಮಣನ ವೇಷವನ್ನು ಸ್ವೀಕರಿಸಿಕೊಂಡು ಆ ಮುನಿವರ್ಯನಿದ್ದೆಡೆಗೆ ಬಂದು ಆತನ ಇದಿರಿನಲ್ಲಿ ನಿಂತನು. ಮತ್ತು "ಮಹರ್ಷಿಯೆ! ನೀನು ಈ ವಿಧವಾಗಿ ಏತಕ್ಕೆ ಕ್ಲೇಶಪಡುತ್ತಿರುವೆ? ತಪಸ್ಸಿನಿಂದ ಕಲ್ಮಷಗಳನ್ನೆಲ್ಲ ನಾಶಮಾಡಿಕೊಂಡಿರುವ ನಿನಗೆ ಅಭಿಲಷಿತವಾದುದು ಯಾವುದಿರುವುದು?" ಎಂಬುದಾಗಿ ಮೃದುಮಧುರವಾದ ಮಾತನ್ನಾಡಿದನು.

೨೪. ನಾರದನು ಪ್ರಶ್ನೆಮಾಡುತ್ತಾನೆ:—"ಎಲೈ ಬ್ರಾಹ್ಮಣೋತ್ತಮನೆ! ಜನರಹಿತವಾದ ಈ ಅರಣ್ಯದಲ್ಲಿ ನನ್ನನ್ನು ಅನುಗ್ರಹಿಸುವುದರಲ್ಲಿ ನಿರತನಾಗಿ ಬಂದಿರುವ ನೀನು ಯಾರು? ನಿನ್ನನ್ನು ನೋಡಿದ ಮಾತ್ರದಿಂದಲೇ ನನ್ನ ಮನಸ್ಸು ಶಾಂತಿಯುಕ್ತವಾಗುತ್ತಿರುವುದು."

೨೫—೨೬. ಇಂತು ನಾರದನಿಂದ ಪ್ರಶ್ನೆಮಾಡಲ್ಪಟ್ಟ ಆ ಬ್ರಾಹ್ಮಣ ಶ್ರೇಷ್ಠನು ಶಂಖ, ಚಕ್ರ, ಗದೆಗಳನ್ನು ಧರಿಸಿದವನಾಗಿ, ಮಿಂಚುತ್ತಿರುವ ಪೀತಾಂಬರವನ್ನುಟ್ಟು, ಸುವಾಸನಾಯುಕ್ತಗಳಾದ ಕಮಲಗಳಿಂದ ಮಾಡಿದ ವನಮಾಲೆಯಿಂದಲಂಕೃತನಾಗಿ, ಶ್ರೀವತ್ಸಲಾಂಛನದಿಂದಲೂ, ಕೌಸ್ತುಭಮಣಿಯಿಂದಲೂ ವಿರಾಜಿಸುತ್ತಿರುವ ವಕ್ಷಸ್ಥಳದಲ್ಲಿ ಅನಪಾಯಿನಿಯಾದ ಲಕ್ಷ್ಮಿಯು ನೆಲೆಗೊಂಡಿರಲು ಸುನಂದನನೇ ಮೊದಲಾದ ಮುನಿ ಮುಖ್ಯರಿಂದ ಸ್ತುತಿಸಲ್ಪಡುತ್ತಿರುವ ಶ್ರೀಮನ್ನಾರಾಯಣನಾಗಿ ನಿಂತು ನಾರದನಲ್ಲಿ ಕೃಪೆಯುಳ್ಳವನಾಗಿ ಆತನಿಗೆ ತನ್ನ ನಿಜರೂಪವನ್ನು ತೋರಿಸುವವನಾದನು.

**ತಂ ದೃಷ್ಟ್ವಾ ಸಹಸೋತ್ಥಾಯ ತನುಂ ಪ್ರಾಣ ಇವಾಗತಃ ॥ ೨೭ ॥**
**ಕೃತಾಂಜಲಿಪುಟೋ ಭೂತ್ವಾ ನಮಸ್ಕೃತ್ಯ ಪುನಃ ಪುನಃ ।**
**ತುಷ್ಟಾವ ಪ್ರಣತೋ ಭೂತ್ವಾ ಜಗತಾಮೀಶ್ವರೇಶ್ವರಂ ॥ ೨೮ ॥**

**ನಾರದ ಉವಾಚ:—**

**ಯಃ ಸರ್ವಸಾಕ್ಷೀ ಜಗತಾಮಧೀಶ್ವರೋ**
**ಭಕ್ತೇಚ್ಛಯಾ ಜಾತಶರೀರಸಂಪದಃ ।**
**ಕೃಪಾಮಹಾಂಭೋನಿಧಿರಾಶ್ರಿತಾನಾಂ**
**ಪ್ರಸೀದತಾಂ ಪಾವನದಿವ್ಯಮೂರ್ತಿಃ ॥ ೨೯ ॥**
**ಹಿತಾಯ ಲೋಕಸ್ಯ ಸತಾಂ ಪುನರ್ಮನಃ**
**ಸುತೋಷಣಾಯಾಚಿರಮುತ್ಕಲಾದಿಭಿಃ ।**
**ಪ್ರಸನ್ನಲೀಲಾಹಸಿತಾವಲೋಕನಃ**
**ಪ್ರಸೀದತಾಂ ಸತ್ತ್ವನಿಕಾಯಮೂರ್ತಿಮಾನ್ ॥ ೩೦ ॥**
**ಕಂದರ್ಪಲಾವಣ್ಯವಿಲಾಸಸುಂದರಃ**
**ಪ್ರಸನ್ನಗಂಭೀರಗಿರೇಂದಿರೋತ್ಸವಃ ।**

---

೨೭–೨೮. ಶರೀರವನ್ನು ಸಾರ್ಥಕಗೊಳಿಸಲು ಬಂದ ಪ್ರಾಣದಂತೆ ಎದುರಿನಲ್ಲಿ ನಿಂತಿರುವ ಆತನನ್ನು ಕಂಡು ನಾರದಮುನಿಯು ಕೈಗಳನ್ನು ಜೋಡಿಸಿಕೊಂಡು ಮತ್ತೆ ಮತ್ತೆ ನಮಸ್ಕರಿಸಿ ದಂಡಪ್ರಣಾಮವನ್ನುಮಾಡಿ ಲೋಕನಾಯಕರಿಗೆಲ್ಲ ಅಧೀಶ್ವರನಾದ ಶ್ರೀಮನ್ನಾರಾಯಣನನ್ನು ಸ್ತೋತ್ರಮಾಡತೊಡಗಿದನು.

೨೯. ನಾರದನು ಸ್ತುತಿಸುತ್ತಾನೆ:—"ಯಾವನು ಜಗತ್ಸಾಕ್ಷಿಯಾಗಿರುವನೊ, ಸಕಲಲೋಕಗಳಿಗೂ ನಿಯಾಮಕನೆನಿಸಿರುವನೊ, ಭಕ್ತರನ್ನು ಅನುಗ್ರಹಿಸುವುದಕ್ಕಾಗಿಯೇ ಪಾಂಚಭೌತಿಕವಾದ ಶರೀರವನ್ನು ಸ್ವೀಕರಿಸುವನೊ, ತನ್ನನೇ ಆಶ್ರಯಿಸಿದ ಭಕ್ತರಿಗೆ ಕೃಪಾಸಮುದ್ರನಾಗಿರುವನೊ, ಅಂತಹ ಪವಿತ್ರ ದಿವ್ಯವಿಗ್ರಹನಾದ ಸ್ವಾಮಿಯು ನನ್ನಲ್ಲಿ ಪ್ರಸನ್ನನಾಗಲಿ.

೩೦. ಲೋಕಗಳ ಹಿತಕ್ಕೂ, ಸತ್ಪುರುಷರ ಮನಸ್ಸಿಗೆ ಸಂತೋಷವನ್ನುಂಟುಮಾಡುವುದಕ್ಕೂ ಮತ್ತೆ ಮತ್ತೆ ಸತ್ತ್ವಗುಣಪ್ರಧಾನವಾದ ಶರೀರವನ್ನು ಸ್ವೀಕರಿಸಿ ಪ್ರಸನ್ನವಾದ ಮುಖದಲ್ಲಿ ಲೀಲಾ ಮಾತ್ರದಿಂದ ಮಂದಹಾಸಪೂರಿತವಾದ ದೃಷ್ಟಿಯಿಂದ ಕೂಡಿರುವ ಸ್ವಾಮಿಯು ತನ್ನ ಪರಿವಾರದೊಡನೆ ನನಗೆ ಅನುಗ್ರಹವನ್ನುಂಟುಮಾಡಲಿ.

೩೧. ಮನ್ಮಥನ ಲಾವಣ್ಯವನ್ನು ಧಿಕ್ಕರಿಸುವ ವಿಲಾಸವುಳ್ಳ ಸುಂದರ

ಸ್ವಮಾಶ್ರಿತಾನಾಂ ವರಕಲ್ಪಪಾದಪಃ
ಪ್ರಸೀದತಾಂ ದೀನದಯಾರ್ದ್ರಮಾನಸಃ ॥ ೩೧ ॥
ಯದಂಘ್ರಿಪದ್ಮಾರ್ಚನನಿರ್ಮಲಾಂತರ
ಜ್ಞಾನಾಸಿನಾ ಶಾತಿತಬಂಧಹೇತವಃ ।
ವದಂತಿ ಯದ್ಬ್ರಹ್ಮಸುಖಂ ಗತಕ್ಲಮಾಃ
ಪ್ರಸೀದತಾಂ ದೀನದಯಾರ್ದ್ರಮಾನಸಃ ॥ ೩೨ ॥
ಸಂಸಾರವಾರಾಂನಿಧಿಬದ್ಧಸೇತುಃ
ಯಃ ಸೃಷ್ಟಿಪಾಲಾಂತವಿಧಾನಹೇತುಃ ।
ಉಪಾಂತನಾಮಾ ಗುಣಲಬ್ಧಮೂರ್ತಿಃ
ಪ್ರಸೀದತಾಂ ಬ್ರಹ್ಮಸುಖಾನುಭೂತಿಃ ॥ ೩೩ ॥
ಯ ಇಂದ್ರಿಯಾಧಿಷ್ಠಿತಭೂತಸೂಕ್ಷ್ಮಾತ್
ವಿಕಾಸಹೇತುರ್ದ್ಯುತಿಮುದ್ವರಿಷ್ಠಃ ।
ಜೀವಾತ್ಮತಾಂ ಗಚ್ಛತಿ ಮಾಯಯಾ ಸ್ವಯಾ
ಸ ಏಕ ಈಶೋ ಭಗವಾನ್ಪ್ರಸೀದತಾಂ ॥ ೩೪ ॥

---

ವಿಗ್ರಹನೂ, ಪ್ರಸನ್ನವೂ ಗಂಭೀರವೂ ಆದ ವಾಕ್ಪ್ರವಾಹದಿಂದ ಲಕ್ಷ್ಮೀದೇವಿಗೆ ಸಂತೋಷವನ್ನುಂಟುಮಾಡುವವನೂ, ತನ್ನನ್ನೇ ಆಶ್ರಯಿಸಿದವರಿಗೆ ಉತ್ತಮವಾದ ಕಲ್ಪವೃಕ್ಷಸಮಾನನಾದವನೂ, ದೀನರಲ್ಲಿ ಕೃಪಾಪೂರಿತವಾದ ಮನಸ್ಸುಳ್ಳವನೂ ಆದ ಶ್ರೀಮನ್ನಾರಾಯಣನು ನನಗೆ ಪ್ರಸನ್ನನಾಗಲಿ.

೩೨. ಯಾವನ ಪಾದಪದ್ಮಗಳನ್ನು ಪೂಜಿಸುವುದರಿಂದ ಮಾನವರು ಅಂತಃಕರಣಶುದ್ಧಿಯನ್ನು ಹೊಂದಿದವರಾಗಿ ಸಮ್ಯಗ್ಜ್ಞಾನವೆಂಬ ಖಡ್ಗದಿಂದ ಸಂಸಾರಬಂಧಕ್ಕೆ ಕಾರಣವಾದ ಅಭಿಮಾನವನ್ನು ಛೇದಿಸಿ ಕ್ಲೇಶರಹಿತರಾಗಿ ಬ್ರಹ್ಮಾನುಭವವನ್ನು ಮಾಡುವರೊ, ಅಂತಹ ದೀನದಯಾಪರವಾದ ಮನಸ್ಸುಳ್ಳ ಜಗನ್ನಾಥನು ಪ್ರಸನ್ನನಾಗಲಿ.

೩೩. ಸಂಸಾರವೆಂಬ ಅಗಾಧವಾದ ಸಮುದ್ರವನ್ನು ದಾಟುವುದಕ್ಕೆ ಯಾವನು ದೃಢವಾದ ಸೇತುವೆಯಾಗಿರುವನೊ, ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಿರುವನೊ, ಯಾವನು ತನ್ನ ನಾಮಕ್ಕೆ ಸಮೀಪದಲ್ಲಿಯೇ ಲಭ್ಯವಾಗಿರುವನೊ, ತ್ರಿಗುಣಮಯವಾದ ಶರೀರವನ್ನು ಯಾವನು ಧರಿಸುವನೊ, ಬ್ರಹ್ಮಾನಂದಾನುಭವಸ್ವರೂಪನಾದ ಆ ನಾರಾಯಣನು ಪ್ರಸನ್ನನಾಗಲಿ.

೩೪–೩೫. ಯಾವನು ಪಂಚೇಂದ್ರಿಯಗಳಿಗೆ ಅಧಿಷ್ಠಾನಗಳಾದ ಭೂತಸೂಕ್ಷ್ಮಗಳಿಗೆ ಕಾರಣನಾಗಿ ಅಪ್ರತಿಮವಾದ ಚಿತ್ಪ್ರಕಾಶಮಯನಾಗಿರುವನೊ,

ಸ್ವದುರ್ಗುಣೈರ್ಯೇನ ವಿಲಿಪ್ಯತೇ ಮಹಾನ್
ಗುಣಾಶ್ರಯಂ ಯೇನ ಚ ಪಾಂಚಭೌತಿಕಂ ।
ಏಕೋಽಪಿ ನಾನಾಗುಣಸಂಪ್ರಯುಕ್ತಃ
ಪ್ರಸೀದತಾಂ ದೀನದಯಾಲುವರ್ಯಃ ॥ ೩೫ ॥
ಯಸ್ಯಾನುವರ್ತಿನೋ ದೇವಾಃ ವಿಪದಾಂ ಪದಮಂಬುಧಿಂ ।
ಕೃತ್ವಾ ವತ್ಸಪದಂ ಸ್ವರ್ಗೇ ನಿರಾತಂಕಾ ವಸಂತಿ ಹಿ ॥ ೩೬ ॥
ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯಾಽನಿರುದ್ಧಾಯ ಸರ್ವಭೂತಾತ್ಮನೇ ನಮಃ ॥ ೩೭ ॥
ಅದ್ಯ ಮೇ ಜೀವಿತಂ ಧನ್ಯಂ ಅದ್ಯ ಮೇ ಸಫಲಂ ತಪಃ ।
ಅದ್ಯ ಮೇ ಸಫಲಂ ಜ್ಞಾನಂ ದರ್ಶನಾತ್ತೇ ಜನಾರ್ದನ ॥ ೩೮ ॥

ಭಗವಾನುವಾಚ :—

ತುಷ್ಟೋಽಹಂ ತಪಸಾಽನೇನ ಸ್ತೋತ್ರೇಣ ತವ ನಾರದ ।
ತ್ವತ್ತೋ ಭಕ್ತೋ ನ ಮೇ ಕಶ್ಚಿತ್ತ್ರಿಷು ಲೋಕೇಷು ವಿದ್ಯತೇ ॥ ೩೯ ॥

---

ಯಾವನು ಕೇವಲ ತನ್ನ ಮಾಯೆಯ ಬಲದಿಂದಲೇ ಜೀವಭಾವವನ್ನು ಹೊಂದುವನೊ, ಲೋಕೈಕನಾಯಕನಾದ ಆ ಈಶ್ವರನು ನನ್ನಲ್ಲಿ ಪ್ರಸಾದವನ್ನು ಮಾಡಲಿ. ತನ್ನ ಈಕ್ಷಣೆಗೆ ವಿಷಯಗಳಾದ ತ್ರಿಗುಣಗಳಿಂದ ಯಾವನು ಮಹತ್ತತ್ತ್ವವನ್ನುಂಟುಮಾಡಿರುವನೊ, ಯಾವನಿಂದ ಗುಣಗಳಿಗೆ ಆಶ್ರಯವೆನಿಸಿದ ಪಂಚೀಕೃತಭೂತಗಳಿಂದುಂಟಾದ ವಿರಾಡ್ದೇಹವು ಸ್ವೀಕರಿಸಲ್ಪಟ್ಟಿರುವುದೊ, ಯಾವನು ಒಬ್ಬನೇ ಆದರೂ ಅನೇಕ ಗುಣಗಳಿಂದ ಕೂಡಿರುವನೊ ದೀನದಯಾಳುಗಳಲ್ಲಿ ಶ್ರೇಷ್ಠನಾದ ಆ ಸ್ವಾಮಿಯು ನನ್ನನ್ನು ಅನುಗ್ರಹಿಸಲಿ.

೩೬–೩೭. ಯಾವನ ಅನುಯಾಯಿಗಳಾಗಿ ದೇವತೆಗಳೆಲ್ಲರೂ ವಿಪತ್ಪರಂಪರೆಯೆಂಬ ಸಮುದ್ರವನ್ನು ಗೋಷ್ಪಾದಜಲವನ್ನಾಗಿ ಭಾವಿಸಿ ಸ್ವರ್ಗಲೋಕದಲ್ಲಿ ನಿಷ್ಪ್ರತ್ಯೂಹರಾಗಿ ವಾಸಮಾಡುತ್ತಿರುವರೊ, ಅಂತಹ ಸರ್ವವ್ಯಾಪಕನಾದ ವಾಸುದೇವನಿಗೆ ನಮಸ್ಕಾರವು. ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪಗಳಿಂದ ಸಕಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ತೋರುತ್ತಿರುವ ಆತನಿಗೆ ನಮಸ್ಕಾರವು.

೩೮. ಇಂದು ನನ್ನ ಜನ್ಮವು ಸಾರ್ಥಕವಾಯಿತು. ನನ್ನ ತಪಸ್ಸು ಸಾಫಲ್ಯವನ್ನು ಹೊಂದಿತು. ಜನಾರ್ದನನಾದ ನಿನ್ನ ದರ್ಶನಲಾಭದಿಂದ ನನ್ನ ಜ್ಞಾನಸಾಧನೆಯು ಇಂದಿಗೆ ಸಫಲವೆನಿಸಿತು.''

೩೯. ಭಗವಂತನು ಹೇಳುತ್ತಾನೆ:—ಎಲೈ ನಾರದನೆ! ನಿನ್ನ ಅಪಾರವಾದ ತಪಸ್ಸಿನಿಂದಲೂ ಉತ್ತಮ ಸ್ತೋತ್ರದಿಂದಲೂ ನಾನು ಸಂತೋಷಗೊಂಡಿರು

**ವರಂ ವರಯ ಭದ್ರಂ ತೇ ವರದೋಽಹಂ ತವಾಗ್ರತಃ ।**
**ಮದ್ದರ್ಶನಾತ್ತೇ ಕಾಮಃ ಸ್ಯಾತ್ಸಂಸಿದ್ಧೋ ವಿದ್ಧಿ ನಾರದ ॥ ೪೦ ॥**

**ನಾರದ ಉವಾಚ :—**

**ವರದೋ ಯದಿ ಮೇ ದೇವ ವರಾರ್ಹೋ ಯದಿ ವಾಪ್ಯಹಂ ।**
**ಭಕ್ತಿಂ ತವ ಪದಾಂಭೋಜೇ ನಿಶ್ಚಲಾಂ ದೇಹಿ ಮೇ ವಿಭೋ ॥ ೪೧ ॥**
**ಮಚ್ಛಿಲಾಸನ್ನಿಧಾನಂ ಚ ನ ತ್ಯಾಜ್ಯಂ ತೇ ಕದಾಚನ ।**
**ಮತ್ತೀರ್ಥದರ್ಶನಾತ್ಸ್ಪರ್ಶಾತ್ಸ್ನಾನಾದಾಚಮನಾತ್ತಥಾ ।**
**ದೇಹೈರ್ನ ಯುಜ್ಯತಾಂ ದೇಯಃ ತೃತೀಯಸ್ತು ವರೋ ಮಮ ॥ ೪೨ ॥**

**ಭಗವಾನುವಾಚ :—**

**ಏವಮಸ್ತು ತವ ಸ್ನೇಹಾತ್ತವ ತೀರ್ಥೇ ವಸಾಮ್ಯಹಂ ।**
**ಚರಾಚರಾಣಾಂ ಜಂತೂನಾಂ ವಿದೇಹಾಯ ನ ಸಂಶಯಃ ॥ ೪೩ ॥**

---

ವೆನು. ನಿನಗಿಂತ ಉತ್ತಮನಾದ ಭಕ್ತನು ಮೂರು ಲೋಕಗಳಲ್ಲಿಯೂ ನನಗೆ ಮತ್ತೊಬ್ಬರಿರುವುದಿಲ್ಲ.

೪೦. ನಿನಗೆ ಬೇಕಾದ ವರವನ್ನು ಕೇಳಿಕೊ. ಮುಂದಕ್ಕೆ ನಿನಗೆ ಮಂಗಳ ವುಂಟಾಗುವುದು. ನಾನು ವರವನ್ನು ಕೊಡುವುದಕ್ಕಾಗಿಯೇ ನಿನ್ನ ಮುಂದೆ ಬಂದು ನಿಂತಿರುವೆನು. ನಾರದ! ನನ್ನನ್ನು ನೋಡಿದುದರಿಂದಲೇ ನಿನ್ನ ಸಮಸ್ತ ಇಷ್ಟಾರ್ಥವೂ ನೆರವೇರುವುದರಲ್ಲಿ ಸಂದೇಹವಿಲ್ಲವು.''

೪೧. ನಾರದನು ಹೇಳುತ್ತಾನೆ :—'' ದೇವಾಧಿದೇವನೆ! ನೀನು ನಿಜವಾಗಿಯೂ ವರಪ್ರದನಾಗಿದ್ದರೆ ಅಥವಾ ನಾನು ವರಕ್ಕೆ ಅರ್ಹನಾಗಿದ್ದರೆ ಸರ್ವಸ್ವಾಮಿಯಾದ ನೀನು ನನಗೆ ನಿನ್ನ ಪಾದಕಮಲದಲ್ಲಿ ನಿಶ್ಚಲವಾದ ಭಕ್ತಿಯನ್ನು ಮಾತ್ರ ಅನುಗ್ರಹಿಸು. ಇದು ನಾನು ಕೇಳುವ ಮೊದಲನೆಯ ವರವು. ಎರಡನೆಯದಾಗಿ ಈ ವರವನ್ನು ದಯೆಪಾಲಿಸು.

೪೨. ಈ ನನ್ನ ಶಿಲೆಯಲ್ಲಿ ನಿನ್ನ ಸಾನ್ನಿಧ್ಯವು ಯಾವಾಗಲೂ ಇಲ್ಲದಂತಾಗಬಾರದು. ನನ್ನ ತೀರ್ಥದ ದರ್ಶನವನ್ನೂ, ಸ್ಪರ್ಶವನ್ನೂ ಸ್ನಾನವನ್ನೂ, ಆಚಮನವನ್ನೂ ಮಾಡಿದವರಿಗೆ ಮತ್ತೆ ದೇಹವನ್ನು ಧರಿಸುವ ಸಂಭವವುಂಟಾಗಬಾರದು. ಅವರಿಗೆ ಮೋಕ್ಷವೇ ದೊರಕಬೇಕು. ನನಗೆ ಈ ಮೂರನೆಯ ವರವನ್ನೂ ನೀನು ದಯಪಾಲಿಸಬೇಕು.

೪೩. ಭಗವಂತನು ಹೇಳುತ್ತಾನೆ :—ನೀವು ಪ್ರಾರ್ಥಿಸಿದಂತೆಯೇ ಆಗಲಿ. ನಿನ್ನಲ್ಲಿರುವ ಅಭಿಮಾನದಿಂದ ನಾನು ನಿನ್ನ ತೀರ್ಥದಲ್ಲಿಯೇ ವಾಸಮಾಡುತ್ತ ಸಮಸ್ತ ಸ್ಥಾವರಜಂಗಮ ಭೂತಗಳಿಗೂ ವಿದೇಹಮುಕ್ತಿಯನ್ನು ಕೊಡುವೆನೆಂಬುದರಲ್ಲಿ ಸಂಶಯವಿಲ್ಲ.

ಏವಮುಕ್ತ್ವಾ ಹರಿಃ ಸಾಕ್ಷಾತ್ತತ್ರೈವಾಂತರಧೀಯತ ।
ನಾರದೋಽಪಿ ಮಹಾತೇಜಾಃ ದಿನಾನಿ ಕತಿಚಿತ್ಸಹ ।
ಬದರೀಮಾವಸತ್ ಹೃಷ್ಟೋ ಯಯೌ ಮಧುಪುರೀಂ ತತಃ ॥ ೪೪ ॥

ಸ್ಕಂದ ಉವಾಚ :—

ಮಾರ್ಕಂಡೇಯಶಿಲಾಯಾಸ್ತು ಮಹಿಮಾನಂ ವದಸ್ವ ಮೇ ।
ಕಿಂ ಪುಣ್ಯಂ ಕಿಂ ಫಲಂ ತಸ್ಯಾಃ ಸಂಜ್ಞಾ ಚೈತಾದೃಶೀ ಕಥಂ ॥ ೪೫ ॥

ಶಿವ ಉವಾಚ :—

ಪುರಾ ತ್ರೇತಾಯುಗಸ್ಯಾಂತೇ ಮೃಕಂಡುತನಯೋ ಮಹಾನ್ ।
ಸ್ವಲ್ಪಾಯುಷಂ ನಿಜಂ ಜ್ಞಾತ್ವಾ ಜಜಾಪ ಪರಮಂ ಜಪಂ ॥ ೪೬ ॥
ದ್ವಾದಶಾಕ್ಷರಮಂತ್ರೇಣ ಪೂಜಿತೋ ಹರಿರವ್ಯಯಃ ।
ಸಪ್ತಕಲ್ಪಾಯುಷಂ ದತ್ವಾ ತತ್ರೈವಾಂತರತೋ ಯಯೌ ॥ ೪೭ ॥
ಮಾರ್ಕಂಡೇಯಸ್ತತಃ ಕೃತ್ವಾ ತೀರ್ಥಾಟನಪರಿಶ್ರಮಂ ।
ದರ್ಶನಂ ನಾರದಸ್ಯಾಸೀನ್ಮಧುರಾಯಾಂ ಷಡಾನನ ॥ ೪೮ ॥

---

೪೪. ಇಂತೆಂದು ದೃಗ್ಗೋಚರನಾಗಿದ್ದ ಶ್ರೀಹರಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ನಾರದ ಮಹಾಮುನಿಯೂ ಮಹಾಮಹಿಮನಾಗಿ ಕೆಲವು ದಿನಗಳವರೆಗೂ ಬದರೀಕ್ಷೇತ್ರದಲ್ಲಿಯೇ ವಾಸಮಾಡಿಕೊಂಡಿದ್ದು ಬಳಿಕ ಮಧುರಾನಗರಿಯನ್ನು ಕುರಿತು ಪ್ರಯಾಣಮಾಡಿದನು.

೪೫. ಸ್ಕಂದನು ಪ್ರಶ್ನೆಮಾಡುತ್ತಾನೆ:—ತಂದೆಯೆ! ಮಾರ್ಕಂಡೇಯ ಶಿಲೆಯ ಮಾಹಾತ್ಮ್ಯೆಯನ್ನು ನನಗೆ ವಿವರಿಸುವವನಾಗು. ಅಲ್ಲಿ ಯಾವ ಪುಣ್ಯವು ಲಭಿಸುವುದು? ಅದರ ಸೇವನೆಯಿಂದ ಯಾವ ಫಲವುಂಟಾಗುವುದು? ಮತ್ತು ಆ ಹೆಸರು ಆ ಶಿಲೆಗೆ ಹೇಗೆ ಪ್ರಸಿದ್ಧವಾಯಿತು?

೪೬. ಶಿವನು ಹೇಳುತ್ತಾನೆ:—ಪೂರ್ವದಲ್ಲಿ ತ್ರೇತಾಯುಗವು ಕೊನೆಗಾಣುತ್ತಿರಲು ಮೃಕಂಡುಮಹರ್ಷಿಯ ಪುತ್ರನಾದ ಮಾರ್ಕಂಡೇಯನು ತಾನು ಅಲ್ಪಾಯುಷ್ಯವುಳ್ಳವನಾಗಿರುವುದನ್ನು ತಿಳಿದು ಉತ್ತಮೋತ್ತಮವಾದ ಮಂತ್ರವೊಂದನ್ನು ಜಪಿಸುತ್ತಿದ್ದನು.

೪೭. ಆತನ ದ್ವಾದಶಾಕ್ಷರೀಮಂತ್ರಜಪದಿಂದ ಅರ್ಚಿಸಲ್ಪಟ್ಟ ಶಶ್ವದೇಕಪ್ರಕಾರನಾದ ಶ್ರೀಹರಿಯು ಏಳು ಕಲ್ಪಗಳವರೆಗೂ ಆಯುಷ್ಯವನ್ನು ಅನುಗ್ರಹಿಸಿ ಕಣ್ಣುಗಳಿಗೆ ಕಾಣದೆಯೇ ಹೊರಟುಹೋದನು.

೪೮. ಅದನ್ನು ಕೇಳಿ ಮಾರ್ಕಂಡೇಯನು ತೀರ್ಥಕ್ಷೇತ್ರಗಳನ್ನು ನೋಡುವ ಅಭಿಲಾಷೆಯಿಂದ ಸುತ್ತಾಡುತ್ತಿದ್ದನು. ಯಾದೃಚ್ಛಿಕವಾಗಿ ಮಧುರಾನಗರಿಯಲ್ಲಿ ಆತನಿಗೆ ನಾರದಮಹರ್ಷಿಯ ದರ್ಶನದ ಲಾಭವುಂಟಾಯಿತು.

ಪೂಜಿತೋ ವಂದಿತಸ್ತೇನ ನಾರದೋ ಮುನಿಸತ್ತಮಃ ।
ಕಥಯಾಮಾಸ ಮಾಹಾತ್ಮ್ಯಂ ಬದರ್ಯಾ ಯತ್ರ ಕೇಶವಃ ॥ ೪೯ ॥

ನಾರದ ಉವಾಚ :—

ಕಿಮಿತಿ ಕ್ಲಿಶ್ಯತೇ ಸಾಧೋ ತೀರ್ಥಾಟನಪರಿಶ್ರಮೈಃ ।
ಬದರ್ಯಾಖ್ಯಂ ಮಹಾಕ್ಷೇತ್ರಂ ಸಾನ್ನಿಧ್ಯಂ ನಿತ್ಯದಾ ಹರೇಃ ॥ ೫೦ ॥
ತತ್ರ ಯಾಹಿ ಯತ್ರ ಸಾಕ್ಷಾತ್ ಹರಿಂ ಪಶ್ಯಸಿ ಚಕ್ಷುಷಾ ।
ತಚ್ಛ್ರುತ್ವಾ ವಿಸ್ಮಯೋಪೇತೋ ವಿಶಾಲಾಮಾಯಯಾವೃಷಿಃ ॥ ೫೧ ॥
ಸ್ನಾತ್ವಾ ಶಿಲಾಮುಪವಿಶನ್ಜಜಾಪಾಷ್ಟಾಕ್ಷರಂ ಪರಂ ।
ತತಃ ಪ್ರಸನ್ನೋ ಭಗವಾನ್ ತ್ರಿರಾತ್ರ್ಯಂತೇ ಜನಾರ್ದನ ॥ ೫೨ ॥
ಶಂಖಚಕ್ರಗದಾಪದ್ಮವನಮಾಲಾವಿಭೂಷಣಂ ।
ತಂ ದೃಷ್ಟ್ವಾ ಸಹಸೋತ್ಥಾಯ ಪ್ರೇಮಗದ್ಗದಯಾ ಗಿರಾ ।
ತುಷ್ಟಾವ ಪ್ರಣತೋ ಭೂತ್ವಾ ಮಾರ್ಕಂಡೇಯೋ ಜನಾರ್ದನಂ ॥ ೫೩ ॥

---

೪೯. ಆ ಮಾರ್ಕಂಡೇಯನಿಂದ ಸಾಷ್ಟಾಂಗಪ್ರಣಾಮವನ್ನೂ ಪೂಜೆಯನ್ನೂ ಸ್ವೀಕರಿಸಿದ ತರುವಾಯ ನಾರದನು, ಶ್ರೀಮನ್ನಾರಾಯಣನ ವಿಶೇಷ ಸಾನ್ನಿಧ್ಯದಿಂದ ಕೂಡಿದ ಬದರಿಕಾಶ್ರಮದ ಮಾಹಾತ್ಮ್ಯವನ್ನು ಆತನಿಗೆ ವಿಸ್ತಾರವಾಗಿ ಕಥನಮಾಡಿದನು.

೫೦. ನಾರದನು ಹೇಳುತ್ತಾನೆ:—ಎಲೈ ಸಾಧುವಾದ ಮಾರ್ಕಂಡೇಯನೆ! ನೀನು ತೀರ್ಥಕ್ಷೇತ್ರಗಳಿಗೆ ತಿರುಗುತ್ತ ಸುಮ್ಮನೆ ಏಕೆ ಕ್ಲೇಶಗೊಳ್ಳುತ್ತಿರುವೆ? ಬದರೀನಾಮಕವಾದ ಮಹಾಕ್ಷೇತ್ರದಲ್ಲಿ ನಿರಂತರವೂ ಶ್ರೀಹರಿಯ ಸಾನ್ನಿಧ್ಯವಿರುವುದು.

೫೧. ನೀನು ಅಲ್ಲಿಗೆ ಹೋಗಲು ಆತನನ್ನು ಈ ಕಣ್ಣುಗಳಿಂದಲೇ ಸಾಕ್ಷಾತ್ತಾಗಿ ನೋಡುವೆ.'' ಈ ಮಾತುಗಳನ್ನು ಕೇಳಿ ಮಾರ್ಕಂಡೇಯಮಹರ್ಷಿಯು ವಿಸ್ಮಯಗೊಂಡವನಾಗಿ ವಿಶಾಲಾಕ್ಷೇತ್ರಕ್ಕೆ ಒಡನೆಯೆ ಬಂದು ಸೇರಿದನು.

೫೨. ಅಲ್ಲಿ ಸ್ನಾನವನ್ನು ಮಾಡಿ ಶಿಲೆಯೊಂದರಲ್ಲಿ ಕುಳಿತು ಉತ್ತಮವಾದ ನಾರಾಯಣಾಷ್ಟಾಕ್ಷರ ಮಂತ್ರವನ್ನು ಜಪಿಸುತ್ತಿದ್ದನು. ಬಳಿಕ ಮೂರುದಿನಗಳು ಕಳೆದ ಮೇಲೆ ರಾತ್ರಿಯ ಕಡೆಯ ಭಾಗದಲ್ಲಿ ಶ್ರೀಮನ್ನಾರಾಯಣನು ಅಲ್ಲಿ ಪ್ರಸನ್ನನಾದನು.

೫೩. ಶಂಖ, ಚಕ್ರ, ಗದಾ, ಪದ್ಮಗಳನ್ನು ನಾಲ್ಕು ಕೈಗಳಲ್ಲಿಯೂ ಧರಿಸಿಕೊಂಡು ವನಮಾಲೆಯಿಂದ ವಿಭೂಷಿತನಾಗಿ ಬಂದು ನಿಂತ ಆ ದೇವದೇವನನ್ನು ಕಂಡು ಮಾರ್ಕಂಡೇಯನು ಸಂಭ್ರಮದಿಂದ ಎದ್ದು ನಿಂತು ಭಕ್ತ್ಯತಿಶಯದಿಂದ ಪ್ರಣಾಮವನ್ನು ಮಾಡಿ ಗದ್ಗದಿತಕಂಠದಿಂದ ಸ್ತೋತ್ರಮಾಡತೊಡಗಿದನು.

ಮಾರ್ಕಂಡೇಯ ಉವಾಚ :—

ಅಶಾಶ್ವತೇ ಚ ಸಂಸಾರೇ ಸಾರೇ ತೇ ಚರಣಾಂಬುಜೇ ।
ಸಮುದ್ಧಾರಃ ಕಥಂ ನೄಣಾಂ ತ್ರಾಹಿ ಮಾಂ ಪರಮೇಶ್ವರ ॥ ೫೪ ॥
ತಾಪತ್ರಯಪರಿಶ್ರಾಂತಂ ಅನೇಕಾಽಜ್ಞಾನಜೃಂಭಿತಂ ।
ಸಂಸಾರಕುಹರೇ ಭ್ರಾಂತಂ ತ್ರಾಹಿ ಮಾಂ ಕೃಪಯಾಽಚ್ಯುತ ॥ ೫೫ ॥
ಅನೇಕಯೋನಿಯಂತ್ರೇಷು ನಿಃಸೃತೇಸ್ತನುವೇದನಾಂ ।
ಗರ್ಭವಾಸಕೃತಂ ಪಾಪಂ ತ್ರಾಹಿ ಮಾಂ ಕರುಣಾಂಬುಧೇ ॥ ೫೬ ॥
ಕೃಮಿಭಕ್ಷಿತಸರ್ವಾಂಗಂ ಕ್ಷುತ್ಪಿಪಾಸಾಕುಲಂ ಚ ಹಿ ।
ಅಂತ್ರಮಾಲಾಕುಲೇ ಗರ್ಭೇ ತ್ರಾಹಿ ಮಾಂ ಮಧುಸೂದನ ॥ ೫೭ ॥
ಅಮೇಧ್ಯಾದಿಭಿರಾಲಿಪ್ತಂ ನಿಶ್ಚೇಷ್ಟತ್ರಮಮಾಕುಲಂ ।
ಸ್ಮರಂತಂ ನಿಜಕರ್ಮೋತ್ಥಂ ತ್ರಾಹಿ ಮಾಂ ಮಧುಸೂದನ ॥ ೫೮ ॥

---

೫೪. ಮಾರ್ಕಂಡೇಯನು ಹೇಳುತ್ತಾನೆ:—"ನಶ್ವರವಾದ ಈ ಪ್ರಪಂಚದಲ್ಲಿ ಸಾರತರವಾದುವುಗಳೆಂದರೆ ನಿನ್ನ ಚರಣಕಮಲಗಳು ಮಾತ್ರವೇ ಆಗಿರುವುವು. ಈ ಸಂಸಾರ ಸಮುದ್ರದಿಂದ ಮನುಷ್ಯರ ಉದ್ಧಾರವು ಉಂಟಾಗುವುದು ಹೇಗೆ? ಎಲೈ ಲೋಕೇಶ್ವರನೆ! ನನ್ನನ್ನು ಕಾಪಾಡು.

೫೫. ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕ ತಾಪಗಳಿಂದ ಬಳಲಿದವನಾಗಿ, ಬಹುವಿಧವಾದ ಅಜ್ಞಾನದಿಂದ ಆವೃತನಾಗಿ, ಸಂಸಾರವೆಂಬ ಗಾಢಾಂಧಕಾರವುಳ್ಳ ಗುಹೆಯಲ್ಲಿ ದಿಕ್ಕೆಟ್ಟು ಭ್ರಮಿಸುತ್ತಿರುವ ನನ್ನನ್ನು ದಯೆಯಿಂದ ರಕ್ಷಿಸು.

೫೬. ಎಲೈ ಕರುಣಾಸಮುದ್ರನೆ! ಅನೇಕ ಯೋನಿಗಳಲ್ಲಿ ಜನ್ಮಗಳನ್ನೆತ್ತಿ ಗರ್ಭವಾಸಗಳಿಂದುಂಟಾದ ದೇಹಯಾತನೆಗಳನ್ನು ಅನುಭವಿಸಿ ಮನುಷ್ಯ ಜನ್ಮವನ್ನು ಹೊಂದಿರುವ ನನ್ನನ್ನು ಕಾಪಾಡು.

೫೭. ಕರುಳುಗಳ ಮಾಲೆಯಲ್ಲಿ ಬಂಧಿತವಾಗಿ ತಾಯಿಯ ಗರ್ಭದಲ್ಲಿ ಬಿದ್ದು ಕೃಮಿಗಳು ದೇಹಾದ್ಯಂತವನ್ನೂ ಕಚ್ಚಿ ತಿನ್ನುತ್ತಿರಲು ಹಸಿವು ನೀರಡಿಕೆಗಳಿಂದ ವ್ಯಾಕುಲಗೊಳ್ಳುತ್ತಿರುವ ನನ್ನನ್ನು ಮಧುಸೂದನನಾದ ನೀನು ರಕ್ಷಿಸು.

೫೮. ಅಮೇಧ್ಯವೇ ಮೊದಲಾದುವುಗಳಿಂದ ಲಿಪ್ತವಾದ ದೇಹವುಳ್ಳವನಾಗಿ ಗರ್ಭದೊಳಗೆ ಕೈಕಾಲುಗಳನ್ನಾಡಿಸುವುದಕ್ಕೂ ಆಗದೆ ನಿಶ್ಚೇಷ್ಟನಾಗಿ ವ್ಯಾಕುಲಗೊಂಡು ಪೂರ್ವಕರ್ಮಗಳ ಫಲವಾಗಿ ಸಂಭವಿಸುತ್ತಿರುವ ಕಷ್ಟಗಳನ್ನೆಲ್ಲ ಸ್ಮರಿಸುತ್ತಿರುವ ನನ್ನನ್ನು ಪಾಲಿಸು.

ವಚನಾಽದಾನನಿಃಶ್ವಾಸಾಽಶಕ್ತಂ ಭಯಮುಪಾಗತಂ ।
ಗರ್ಭವಾಸಮಹಾದುಃಖಂ ತ್ರಾಹಿ ಮಾಂ ಮಧುಸೂದನ ॥ ೫೯ ॥
ಜರಾಮರಣಬಾಲ್ಯಾದಿದುಃಖಸಂಸಾರಪೀಡಿತಂ ।
ದುಃಖಾಬ್ಧೌ ಸುಖಬುದ್ಧಿಂ ಮಾಂ ಕೃಪಾಸಿಂಧೋ ಪ್ರಪಾಲಯ ॥ ೬೦ ॥
ಕದಾಚಿತ್ಕೃಮಿತಾಂ ಪ್ರಾಪ್ತಂ ಕದಾಚಿತ್ಸ್ವೇದಜನ್ಮತಾಂ ।
ಕದಾಚಿದುದ್ಭಿಜ್ಜತ್ವಂ ಚ ಕದಾಚಿನ್ನರತಾಂ ಗತಂ ॥ ೬೧ ॥
ಸರ್ವಯೋನಿಸಮಾಪನ್ನಂ ವಿಪನ್ನಂ ವಿಗತಪ್ರಭಂ ।
ಅನಾಥಂ ತ್ವಾಂ ಸಮಾಪನ್ನಂ ತ್ರಾಹಿ ಮಾಂ ಕೃಪಯಾಽಚ್ಯುತ ॥ ೬೨ ॥
ಏವಂ ಸ್ತುತಸ್ತತಃ ಕೃಷ್ಣೋ ಮಾರ್ಕಂಡೇಯೇನ ಧೀಮತಾ ।
ಪ್ರೀತಸ್ತಮಾಹ ವಿಪ್ರರ್ಷೇ ವರಂ ಮೇ ವ್ರಿಯತಾಮಿತಿ ॥ ೬೩ ॥

ಮಾರ್ಕಂಡೇಯ ಉವಾಚ :—

ಯದಿ ತುಷ್ಟೋ ಭವಾನ್ಮಹ್ಯಂ ಭಗವನ್ದೀನವತ್ಸಲ ।
ನಿಶ್ಚಲಾಂ ದೇಹಿ ಮೇ ಭಕ್ತಿಂ ಪೂಜಾಯಾಂ ದರ್ಶನೇ ತವ ।
ಶಿಲಾಯಾಂ ತವ ಸಾನ್ನಿಧ್ಯಂ ಏಷ ಏವ ವರೋ ಮಮ ॥ ೬೪ ॥

---

೫೯. ಮಾತನಾಡುವುದಕ್ಕೂ, ಗ್ರಹಿಸುವುದಕ್ಕೂ, ಉಸಿರಾಡುವುದಕ್ಕೂ, ಅಶಕ್ತನಾಗಿ ಭೀತಿಗೊಂಡು ಗರ್ಭವಾಸವೆಂಬ ಮಹಾ ದುಃಖದಲ್ಲಿ ಬಿದ್ದು ನರಳುತ್ತಿರುವ ನನ್ನನ್ನು ಮಧುಧ್ವಂಸಿಯಾದ ನೀನೇ ರಕ್ಷಿಸಬೇಕು !

೬೦–೬೧. ಎಲೈ ಕೃಪಾಸಮುದ್ರನೆ! ಮುಪ್ಪು, ಸಾವು, ಬಾಲ್ಯಗಳೇ ಮೊದಲಾದುವುಗಳಿಂದ ಕೂಡಿದ ಸಂಸಾರದ ದುಃಖಗಳಿಂದ ಪೀಡಿತನಾಗಿ ಶೋಕ ಸಾಗರದಲ್ಲಿಯೇ ಸುಖಭ್ರಾಂತಿಯನ್ನು ಹೊಂದಿರುವ ಮೂಢನಾದ ನನ್ನನ್ನು ಪಾಲಿಸು. ಪೂರ್ವಜನ್ಮಗಳಲ್ಲಿ ಅನೇಕ ವೇಳೆ ಕ್ರಿಮಿಜನ್ಮಗಳನ್ನು ಹೊಂದಿದೆನು. ಸ್ವೇದಜಗಳಾಗಿ ಜನಿಸಿದ್ದೆನು. ಉದ್ಭಿಜ್ಜಗಳಾಗಿ ಮರಬಳ್ಳಿಗಳ ಜನ್ಮಗಳನ್ನು ಧರಿಸಿದೆನು. ಅನೇಕ ಸಲ ಮನುಷ್ಯ ಜನ್ಮಗಳನ್ನೂ ಪಡೆದಿದ್ದೆನು.

೬೨. ಇಂತು ನಾನು ಸಕಲ ಯೋನಿಗಳಲ್ಲಿಯೂ ಪುನಃ ಪುನಃ ಜನನ ಮರಣಗಳನ್ನು ಅನುಭವಿಸಿ ವಿಪತ್ತುಗಳ ಪರಂಪರೆಗೆ ಸಿಕ್ಕಿ ಸ್ವಾಭಾವಿಕವಾದ ತೇಜಸ್ಸನ್ನೇ ಕಳೆದುಕೊಂಡು ದಿಕ್ಕಿಲ್ಲದವನಾಗಿ ನಿನ್ನನ್ನೇ ಶರಣುಹೊಂದಿರುವೆನು. ನನ್ನಲ್ಲಿ ಕರುಣೆಯನ್ನು ತೋರಿ ಅಚ್ಯುತನಾದ ನೀನು ಕಾಪಾಡು.''

೬೩. ಎಲೈ ಬ್ರಾಹ್ಮಣೋತ್ತಮನೆ! ಇಂತು ಜ್ಞಾನಸಂಪನ್ನನಾದ ಮಾರ್ಕಂಡೇಯನಿಂದ ಸ್ತೋತ್ರಮಾಡಿಸಿಕೊಂಡ ಆ ಶ್ರೀಮನ್ನಾರಾಯಣನು ಪ್ರೀತಿಗೊಂಡವನಾಗಿ, ''ಎಲೈ ಮಾರ್ಕಂಡೇಯನೆ! ನನ್ನಿಂದ ನಿನಗೆ ಅಪೇಕ್ಷಿತವಾದ ವರವನ್ನು ಬೇಡಿಕೊ'' ಎಂಬುದಾಗಿ ಹೇಳುವವನಾದನು.

೬೪. ಮಾರ್ಕಂಡೇಯನು ಪ್ರಾರ್ಥಿಸುತ್ತಾನೆ:— ''ಷಡ್ಗುಣೈಶ್ವರ್ಯ

ಸೂತ ಉವಾಚ :—

**ತಥೇತ್ಯುಕ್ತ್ವಾ ಮಹಾವಿಷ್ಣುಃ ಯಯಾವಂತರ್ಹಿತಂ ದ್ವಿಜ ।**
**ಮಾರ್ಕಂಡೇಯಸ್ತತಸ್ತುಷ್ಟೋ ಜಗಾಮ ಪಿತುರಾಶ್ರಮಂ ॥ ೬೫ ॥**
**ಉಪಸ್ಥಾನಮಿದಂ ಪುಣ್ಯಂ ಸರ್ವಪಾಪಪ್ರಣಾಶನಂ ।**
**ಶೃಣುಯಾಚ್ಛ್ರಾವಯೇನ್ಮರ್ತ್ಯೋ ಗೋವಿಂದೇ ಲಭತೇ ಗತಿಂ ॥ ೬೬ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯಸಂವಾದೇ
"ಅಗ್ನಿತೀರ್ಥ, ನಾರದಶಿಲಾ, ಮಾರ್ಕಂಡೇಯಶಿಲಾದಿಮಾಹಾತ್ಮ್ಯವರ್ಣನಂ"
ನಾಮ ತೃತೀಯೋಽಧ್ಯಾಯಃ

---

ಸಮನ್ವಿತನಾದ ದೀನದಯಾಳುವೆ! ನನ್ನ ವಿಷಯದಲ್ಲಿ ನಿನಗೆ ಸಂತೋಷವೇ ಉಂಟಾಗಿರುವುದಾದರೆ ನಿನ್ನ ಪೂಜೆಯಲ್ಲಿಯೂ, ದರ್ಶನದಲ್ಲಿಯೂ ನನಗೆ ನಿಶ್ಚಂಚಲವಾದ ಭಕ್ತಿಯಿರುವಂತೆ ಅನುಗ್ರಹಿಸು. ಈ ಶಿಲೆಯಲ್ಲಿ ನಿನ್ನ ಸಾನ್ನಿಧ್ಯವೂ ಸರ್ವಕಾಲದಲ್ಲಿಯೂ ಇರುವುದಾಗಲಿ. ಇದೇ ನನಗೆ ಅತ್ಯಂತ ಸಂತೋಷವನ್ನುಂಟುಮಾಡುವ ವರವಾಗಿರುವುದು."

೬೫. ಸೂತನು ಹೇಳುತ್ತಾನೆ :—ಎಲೈ ಶೌನಕಮಹರ್ಷಿಯೆ ! ಹಾಗೆಯೇ ಆಗಲೆಂದು ಮಹಾವಿಷ್ಣುವು ಆತನಿಗೆ ವರಪ್ರದಾನವನ್ನು ಮಾಡಿ ಅಂತರ್ಧಾನವನ್ನು ಹೊಂದಿದನು. ಮಾರ್ಕಂಡೇಯನೂ ಮಹಾಸಂತೋಷಗೊಂಡವನಾಗಿ ತನ್ನ ತಂದೆಯ ಆಶ್ರಮಕ್ಕೆ ಹಿಂದಿರುಗಿದನು.

೬೬. ಪರಮಪುಣ್ಯಪ್ರದವೂ ಸಕಲ ಪಾತಕಗಳನ್ನು ನಿರ್ಮೂಲಗೊಳಿಸುವುದೂ ಆದ ಈ ಆಖ್ಯಾನವನ್ನು ಯಾವ ಮನುಷ್ಯನು ಶ್ರದ್ಧೆಯಿಂದ ಕೇಳುವನೊ, ಇತರರಿಗೆ ನಿರೂಪಿಸುವನೊ, ಅವನು ಪರಮಾತ್ಮನ ಸಾಯುಜ್ಯರೂಪವಾದ ಉತ್ತಮ ಗತಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮಮಾಹಾತ್ಮ್ಯದ
ಶಿವಕಾರ್ತಿಕೇಯ ಸಂವಾದದಲ್ಲಿ "ಅಗ್ನಿತೀರ್ಥ—ನಾರದಶಿಲಾ—ಮಾರ್ಕಂಡೇಯಶಿಲಾ
ಮಾಹಾತ್ಮ್ಯವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ಥೋಽಧ್ಯಾಯಃ

## ವೈನತೇಯಶಿಲಾಮಾಹಾತ್ಮ್ಯವರ್ಣನಂ

ಸ್ಕಂದ ಉವಾಚ:—

ವೈನತೇಯಶಿಲಾಯಾಸ್ತು ಮಾಹಾತ್ಮ್ಯಂ ವದ ಮೇ ಪಿತಃ ।
ಕಿಂ ಪುಣ್ಯಂ ಕಿಂ ಫಲಂ ಚಾಸ್ಯ ಅನುಭಾವಂ ಚ ಕಿಂ ಭವೇತ್ ॥ ೧ ॥

ಶಿವ ಉವಾಚ:—

ಕಶ್ಯಪಾದ್ವಿನತಾಗರ್ಭೇ ಮಹಾಬಲಪರಾಕ್ರಮೌ ।
ಗರುಡಾರುಣೌ ಜಾತೌ ದ್ವಾವರುಣಃ ಸೂರ್ಯಸಾರಥಿಃ ॥ ೨ ॥
ಬದರ್ಯಾ ದಕ್ಷಿಣೇ ಭಾಗೇ ಗಂಧಮಾದನಶೃಂಗಕೇ ।
ಗರುಡಸ್ತಪ ಆತೇಪೇ ಹರಿವಾಹನಕಾಮ್ಯಯಾ ॥ ೩ ॥
ಫಲಮೂಲಜಲಾಹಾರೋ ನಿರ್ದ್ವಂದ್ವೋ ಜಪತಾಂ ವರಃ ।
ಪಥ್ಯೈಕೇನೋಪಸಂಕ್ರಮ್ಯ ಭುವಿ ಜೇಪೇ ನಿರಾಮಯಃ ॥ ೪ ॥

---

## ಕನ್ನಡದ ಅನುವಾದ

### ವೈನತೇಯಶಿಲಾಮಾಹಾತ್ಮ್ಯವರ್ಣನ

೧. ಸ್ಕಂದನು ಕೇಳುತ್ತಾನೆ:—"ತಂದೆಯೆ! ಇನ್ನು ನನಗೆ ಗರುಡಶಿಲೆಯ ಮಾಹಾತ್ಮ್ಯೆಯನ್ನು ಹೇಳುವವನಾಗು. ಅದರಲ್ಲಿ ಯಾವ ಪುಣ್ಯವು ಲಭಿಸುವುದು? ಅದರ ಸೇವನೆಯಿಂದ ಯಾವ ಫಲವುಂಟಾಗುವುದು? ಅದರ ಮಾಹಾತ್ಮ್ಯವು ಯಾವ ಪ್ರಮಾಣವುಳ್ಳದ್ದಾಗಿರುವುದು?"

೨. ಶಿವನು ಹೇಳುತ್ತಾನೆ:— "ಕಶ್ಯಪಬ್ರಹ್ಮನಿಗೆ ವಿನತಾದೇವಿಯಲ್ಲಿ ಅಪರಿಮಿತ ದೇಹಬಲದಿಂದಲೂ ಪರಾಕ್ರಮದಿಂದಲೂ ಕೂಡಿದ ಗರುಡ ಮತ್ತು ಅರುಣರೆಂಬ ಇಬ್ಬರು ಪುತ್ರರುಂಟಾದರು. ಅವರಲ್ಲಿ ಅರುಣನು ಸೂರ್ಯನಿಗೆ ಸಾರಥ್ಯವನ್ನು ಮಾಡುತ್ತಿರುವನು.

೩. ಗರುಡನು ಅದನ್ನು ಕಂಡು ತಾನು ಮಹಾವಿಷ್ಣುವಿಗೇ ವಾಹನವಾಗ ಬೇಕೆಂಬ ಅಭಿಲಾಷೆಯುಳ್ಳವನಾಗಿ ಬದರಿಕಾಶ್ರಮಕ್ಕೆ ದಕ್ಷಿಣ ಪಾರ್ಶ್ವದಲ್ಲಿರುವ ಗಂಧಮಾದನ ಪರ್ವತದಲ್ಲಿ ತಪಸ್ಸನ್ನು ಮಾಡತೊಡಗಿದನು.

೪. ಹಣ್ಣು, ಗಡ್ಡೆಗೆಣಸುಗಳು, ಜಲ—ಇವುಗಳನ್ನೇ ಸೇವನೆ ಮಾಡುತ್ತ ಶೀತೋಷ್ಣಾದಿಗಳಾದ ದ್ವಂದ್ವಗಳನ್ನು ಸಹಿಸಿಕೊಂಡು ಜಪಸಿದ್ಧರಲ್ಲಿ ಅತ್ಯುತ್ತಮನಾಗಿ ಅವನು ಒಂದೇ ಕಾಲಿನಮೇಲೆ ಭೂಮಿಯಲ್ಲಿ ನಿಂತುಕೊಂಡು ನಿಶ್ಚಲವಾದ ಮನಸ್ಸಿನಿಂದ ಜಪವನ್ನು ಮಾಡುತ್ತಲಿದ್ದನು.

ತ್ರಿಂಶದ್ವರ್ಷಸಹಸ್ರಾಣಿ ಹರಿದರ್ಶನಲಾಲಸಃ ।
ತತಸ್ತು ಭಗವಾನ್ಸಾಕ್ಷಾತ್ಪೀತವಾಸಾ ನಿಜಾಯುಧಃ ॥ ೫ ॥
ಆವಿರಾಸೀದ್ಯಥಾ ಪ್ರಾಚ್ಯಾಂ ದಿಶೀಂದುರಿವ ಪುಷ್ಕಲಃ ।
ಉವಾಚ ವಚನಂ ಸನ್ಮ್ಯಜ್ಮೇಘಗಂಭೀರನಿಸ್ವನಃ ॥ ೬ ॥
ತಥಾಪಿ ನ ಬಹಿರ್ವೃತ್ತಿಃ ದಧ್ಮೌ ದರವರಂ ತತಃ ।
ತಥಾಪಿ ನ ಬಹಿರ್ವೃತ್ತಿಃ ಗರುಡಸ್ಯ ಮಹಾತ್ಮನಃ ॥ ೭ ॥
ತತಃ ಪ್ರವಿಶ್ಯ ಭಗವಾನಂತರಂ ಪವನಕ್ರಮಾತ್ ।
ಬಹಿರುನ್ಮುಖತಾಂ ಚೈವ ರಚಯನ್ಬಹಿರಾಬಭೌ ॥ ೮ ॥
ಭಗವಂತಂ ಹರಿಂ ದೃಷ್ಟ್ವಾ ಗರುಡೋ ಗತಸಾಧ್ವಸಃ ।
ಪುಲಕಾಂಕಿತಸರ್ವಾಂಗಸ್ತುಷ್ಟಾವ ವಿಹಿತಾಂಜಲಿಃ ॥ ೯ ॥

ಗರುಡ ಉವಾಚ :—

ಜಯಜಯ, ತ್ರಿಭುವನಜನಮನೋಭವನ, ವಿದಲಿತಾಽಘಗುಣ, ಸಕಲಗೀರ್ವಾಣವಂದಿತಚರಣಕಮಲಯುಗಲಪರಿಮಲ, ಬಹುಲರಿಪುವನ

---

೫–೬. ಈ ರೀತಿಯಾಗಿ ಶ್ರೀಹರಿಯನ್ನು ನೋಡಬೇಕೆಂಬ ಕಾತುರತೆಯಿಂದ ಮುವ್ವತ್ತುಸಾವಿರ ವರ್ಷಗಳವರೆಗೆ ತಪಸ್ಸನ್ನು ಮಾಡಲು ಶ್ರೀಮಹಾವಿಷ್ಣುವು ಪ್ರಸನ್ನನಾಗಿ ಪೀತಾಂಬರವನ್ನು ಧರಿಸಿ ಶಂಖಚಕ್ರಾದ್ಯಾಯುಧಗಳಿಂದಲಂಕೃತನಾಗಿ ಪೂರ್ವದಿಗ್ಭಾಗದಲ್ಲಿ ಪೂರ್ಣಚಂದ್ರನುದಯಿಸುವಂತೆ ಗರುಡನ ಮುಂದೆ ಸಾಕ್ಷಾತ್ಕರಿಸಿದನು. ಅಲ್ಲದೆ ಮೇಘದ ಗರ್ಜನೆಯಂತೆ ಗಂಭೀರವಾದ ಧ್ವನಿಯಿಂದ ಮೃದುಮಧುರವಾಗಿ ಆತನನ್ನು ಮಾತನಾಡಿಸಿದನು.

೭. ಆದರೂ ಗರುಡನು ಬಹಿರ್ಮುಖನಾಗಲಿಲ್ಲ. ಆಗ ಮಹಾವಿಷ್ಣುವು ಪಾಂಚಜನ್ಯವೆಂಬ ತನ್ನ ಉತ್ತಮ ಶಂಖವನ್ನು ಧ್ವನಿಗೈದನು. ಹಾಗೂ ಮಹಾತ್ಮನಾದ ಗರುಡನಿಗೆ ಬಾಹ್ಯಪ್ರಪಂಚದ ಜ್ಞಾನವೇ ಉಂಟಾಗಲಿಲ್ಲ.

೮. ಆಗ ಭಗವಂತನು ವಾಯುರೂಪದಿಂದ ಆತನ ದೇಹವನ್ನು ಪ್ರವೇಶಿಸಿ ಆತನಿಗೆ ಬಾಹ್ಯಪ್ರಪಂಚದ ಜ್ಞಾನವುಂಟಾಗುವಂತೆ ಮಾಡಿ ತಾನು ಮತ್ತೊಂದು ರೂಪದಿಂದ ಆತನ ಇದಿರಿನಲ್ಲಿ ನಿಂತಿದ್ದನು.

೯. ಇಂತು ತನ್ನ ಮುಂದೆ ನಿಂತಿರುವ ಪರಮಾತ್ಮನಾದ ಶ್ರೀಹರಿಯನ್ನು ಕಂಡು ಗರುಡನು ಭಯರಹಿತನಾಗಿ ಸಕಲಾವಯವಗಳೂ ಪುಳಕಾಂಕಿತಗಳಾಗುತ್ತಿರಲು ಅಂಜಲಿಬಂಧವನ್ನು ಮಾಡಿಕೊಂಡು ಸ್ತೋತ್ರಮಾಡಲು ಪ್ರಾರಂಭಿಸಿದನು.

೧೦. ಗರುಡನು ಹೇಳುತ್ತಾನೆ:—"ಮೂರು ಲೋಕಗಳ ಜನರ ಮನಸ್ಸುಗಳಲ್ಲಿಯೂ ನೆಲಸಿರುವವನಾಗಿ ಸಕಲ ಪಾಪಗಳ ಸಮೂಹವನ್ನೂ ಕಳೆದು

ವಿಭಂಜನ, ವಿದ್ಯೋತಮಾನ ಸಕಲ ಸುರಾಸುರಮುಕುಟಕೋಟಿವಿಲಸಿತ ನಿಜಪೀಠಕಮಲ, ನಿರಸಿತ ನಿಜಜನಹೃದಯ ತಿಮಿರಪಟಲ ಬಹುಲ, ಹಿಮಕರ ಇವ ತ್ರಿವಿಧಸಂತಾಪಸಂದೋಹ ಹರಣ ಚರಣ, ಜಗದುದಯಸ್ಥಿತಿ ಲಯವಿಲಾಸ ವಿಲಸಿತ ತ್ರಿವಿಧಮೂರ್ತಿ ಕೀರ್ತಿವಿಸ್ಫೂರ್ಜಿತ ಜಗದುದಯಸಂದೋಹ, ದಿನಕರ ಇವ ಮುನಿಜನ ಮಾನಸ ಸರೋಜಷಟ್ಪದ, ವಿದಿತ ಸಕಲವೇದವಿದ್ಯೋತಮಾನಮಾನಸ, ನಿಜಜನ ಮುನಿಜನ ವಂದಿತ ಪದನಖನೀರಪವಿತ್ರೀಕೃತಗೀರ್ವಾಣಮುನಿಮಾನಸವಂದಿತ ಚರಣರಜಃ ಪ್ರಸಾದಸಾರಭೂತ, ಜಗತಾಮಧೀಶ, ನಮಸ್ತೇ ನಮಸ್ತೇ ನಮಃ ॥ ೧೦ ॥

ಅಷ್ಟಶಕ್ತಿಸಹಿತೋ ವನಮಾಲೀ
ಪೀತಚೈಲಕುಸುಮಾವಲಿಶೋಭಃ ।
ಪಂಕಜಾಕರವಿರಾಜಿತಪಾದಃ
ಪಾತು ಮಾಮವಹಿತೇಂದ್ರಿಯವರ್ಗಃ ॥ ೧೧ ॥

---

ಕೊಂಡಿರುವ ನಿನಗೆ ಜಯವಾಗಲಿ! ಸಮಸ್ತ ದೇವತೆಗಳಿಂದಲೂ ವಂದಿತಗಳಾದ ಪಾದಪದ್ಮದ್ವಯಗಳ ಪರಿಮಳವುಳ್ಳವನೆ! ನೀನು ಅನೇಕ ರಾಕ್ಷಸರೆಂಬ ಅರಣ್ಯಗಳನ್ನು ನಿರ್ಮೂಲಗೊಳಿಸಿರುವೆ. ಸಮಸ್ತ ದೇವದಾನವರ ಜ್ವಲಿಸುತ್ತಿರುವ ಕಿರೀಟಗಳ ಪಙ್ಕ್ತಿಯ ಶುಭ್ರಕಾಂತಿಯಿಂದ ಬೆಳಗುತ್ತಿರುವ ಪಾದಪೀಠಕಮಲನಾಗಿರುವೆ. ನಿನ್ನ ಭಕ್ತರ ಹೃದಯಗಳಲ್ಲಿರುವ ನಿಬಿಡವಾದ ಅಜ್ಞಾನವೆಂಬ ಅಂಧಕಾರ ಸಮೂಹವನ್ನು ನಾಶಗೊಳಿಸುವೆ. ಅವರ ತಾಪತ್ರಯಗಳನ್ನು ನಾಶಮಾಡುವ ಪ್ರಭಾವವುಳ್ಳ ಪಾದಕಮಲಗಳುಳ್ಳವನಾಗಿ ನೀನು ಚಂದ್ರಮಂಡಲದಂತೆ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿರುವೆ. ಬ್ರಹ್ಮಾಂಡದ ಉತ್ಪತ್ತಿ, ಸ್ಥಿತಿ ಮತ್ತು ಲಯಗಳೆಂಬ ಮಾಯಾವಿಲಾಸಗಳನ್ನು ತೋರುವುದಕ್ಕಾಗಿ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ರೂಪಗಳನ್ನು ಧರಿಸಿ ನಿನ್ನ ಕೀರ್ತಿಯಿಂದ ಮೂರು ಲೋಕಗಳನ್ನೂ ಬೆಳಗುತ್ತಿರುವೆ. ಸೂರ್ಯನು ಕಮಲಗಳನ್ನರಳಿಸುವಂತೆ ನೀನು ನಿನ್ನ ಭಕ್ತರ ಮನಸ್ಸುಗಳೆಂಬ ಕಮಲಗಳಿಗೆರಗುವ ದುಂಬಿಗಳನ್ನು ಹೋಲುವ ಸಕಲ ವೇದಗಳಿಂದ ಅವರ ಮಾನಸಗಳನ್ನರಳಿಸುತ್ತಿರುವೆ. ನಿನ್ನ ಭಕ್ತರಿಂದಲೂ ಮುನಿವರ್ಯರಿಂದಲೂ ನಮಸ್ಕರಿಸಲ್ಪಟ್ಟ ಪಾದಗಳಿಂದುದ್ಭವಿಸಿದ ಗಂಗೆಯಿಂದ ಸಮಸ್ತ ದೇವತೆಗಳನ್ನೂ ಮಹರ್ಷಿಗಳನ್ನೂ ಪವಿತ್ರಗೊಳಿಸಿ ಅವರು ಮನಃಪೂರ್ವಕವಾಗಿ ವಂದಿಸುವ ಪಾದಗಳ ಧೂಳಿಯೇ ಸಾರಭೂತವಾದ ಪ್ರಸಾದವೆಂಬ ಮಹಿಮೆಯನ್ನು ಹೊಂದಿರುವೆ. ಸಕಲ ಲೋಕಗಳಿಗೆ ಸರ್ವೇಶ್ವರನಾಗಿರುವ ನಿನಗೆ ಮತ್ತೆ ಮತ್ತೆ ನಮಸ್ಕರಿಸುವೆನು!

೧೧. ಅಷ್ಟೈಶ್ವರ್ಯಗಳಿಂದ ಸಹಿತನಾಗಿ, ವನಮಾಲೆಯನ್ನು ಧರಿಸಿ, ಪೀತಾಂಬರವನ್ನುಟ್ಟು, ಪೂಮಾಲೆಗಳಿಂದ ಶೋಭಿಸುತ್ತ, ಕಮಲಮಾಲಿನಿಯಾದ

ಭಕ್ತಹೃತ್ಕಮಲರಾಜಿತಮೂರ್ತಿ
ದುಷ್ಟದೈತ್ಯದಲನೋತ್ಥಿತಕೀರ್ತಿಃ ।
ಬದ್ಧಸೇತುರವಿತಾಶ್ರಿತಲೋಕಃ
ಪಾತು ಮಾಮನುದಿನಂ ಭುವನೇಶಃ ॥ ೧೨ ॥
ಸ್ಥಿರಚಲತ್ರಿವಿಧತಾಪಹಿಮಾಂಶುಃ
ಭಾಸಮಾನತರಣಿಪ್ರತಿಭಾಸಃ ।
ಏಕ ಏವ ಬಹುಧಾ ಕೃತವೇಷೋ
ಮಾಯಯಾಽವತು ಮಹಾಮತಿರೀಶಃ ॥ ೧೩ ॥
ಭಕ್ತಚಿಂತನಕೃತೇ ಕೃತರೂಪಃ
ಶೈಶವೇನ ಬಹುಶಾಸಿತಭೂಪಃ ।
ವೇದಮಾರ್ಗ ಉರುಧಾ ಹಿತಕಾರೀ
ರೀತಿರೀಶಿತುರಿಯಂ ಗುಣಶಾಲೀ ॥ ೧೪ ॥

---

ಗಂಗೆಯಿಂದ ರಾರಾಜಿಸುತ್ತಿರುವ ಪಾದಗಳಿಂದೊಪ್ಪುತ್ತ, ಪಂಚೇಂದ್ರಿಯಗಳ ವ್ಯಾಪಾರಗಳನ್ನೂ ಸ್ವಾಧೀನಗೊಳಿಸಿ ನಿಗ್ರಹಿಸಿರುವ ಸ್ವಾಮಿಯು ನನ್ನನ್ನು ರಕ್ಷಿಸಲಿ.

೧೨. ಭಕ್ತರ ಹೃದಯಕಮಲಗಳಲ್ಲಿ ಬೆಳಗುತ್ತಿರುವ ಸ್ವರೂಪವುಳ್ಳವನೂ, ದುಷ್ಟರಾದ ರಾಕ್ಷಸರ ನಿಗ್ರಹದಿಂದ ದಿಗಂತ ವಿಶ್ರಾಂತವಾದ ಕೀರ್ತಿಯುಳ್ಳವನೂ, ಸಂಸಾರವೆಂಬ ಸಮುದ್ರಕ್ಕೆ ದೃಢವಾದ ಸೇತುವೆಯಾದವನೂ, ಆಶ್ರಿತರ ಸಮುದಾಯವನ್ನು ನಿರಂತರವೂ ಕಾಪಾಡುವವನೂ, ತ್ರಿಲೋಕೇಶ್ವರನೂ ಆದ ಶ್ರೀಮನ್ನಾರಾಯಣನು ನನ್ನನ್ನು ಅನುದಿನದಲ್ಲಿಯೂ ಕಾಪಾಡಲಿ.

೧೩. ಸ್ಥಾವರಜಂಗಮ ಜೀವರಾಶಿಗಳ ತ್ರಿವಿಧತಾಪಗಳನ್ನು ಶಮನ ಮಾಡುವ ಚಂದ್ರಸಮಾನನೂ, ಪ್ರಜ್ವಲಿಸುತ್ತಿರುವ ಸೂರ್ಯನ ತೇಜಸ್ಸಿನಿಂದ ಕೂಡಿದವನೂ, ತನ್ನ ಮಾಯೆಯಿಂದ ಒಬ್ಬನೇ ಆದರೂ ನಾನಾ ವೇಷಗಳನ್ನು ಧರಿಸಿ ಕಪಟ ನಾಟಕವನ್ನು ಹೂಡಿರುವ ಮಹಾಮತಿಯಾದ ಸ್ವಾಮಿಯು ನನ್ನನ್ನು ಕಾಪಾಡಲಿ.

೧೪. ಭಕ್ತರ ಅನುಗ್ರಹದಲ್ಲಿಯೇ ಅಭಿಲಾಷೆಯುಳ್ಳವನಾಗಿ ಅದಕ್ಕಾಗಿಯೇ ದೇಹಗಳನ್ನು ಧರಿಸಿ ಶೈಶವದಲ್ಲಿಯೇ ಅನೇಕ ದುಷ್ಟಭೂಪಾಲಕರನ್ನು ನಿಗ್ರಹಿಸಿರುವೆ. ವೈದಿಕಗಳಾದ ಜ್ಞಾನಕರ್ಮಮಾರ್ಗಗಳೆರಡಕ್ಕೂ ಅನೇಕ ವಿಧಗಳಿಂದ ಹಿತವನ್ನುಂಟುಮಾಡಿರುವೆ. ಇದು ಲೋಕೇಶ್ವರನಾದ ನಿನಗೆ ಸ್ವಾಭಾವಿಕವಾಗಿಯೇ ಇರುವುದು. ನೀನು ಸಕಲಗುಣಗಳಿಗೆ ನಿಧಾನವಾಗಿರುವೆ.

ಯಜ್ಞಭುಗ್ಹೃದಯಬಂಧನಧಾರೀ
ವಿಶ್ವಮೂರ್ತಿರಬಲಾಂಶುಕಹಾರೀ ।
ಪಾಲನೇಽಪಿ ಮಹತಾಂ ಬಹುದೇಹೋ
ರಾಸ ಏಷ ತನುಮಾನವತಾಂ ನಃ ॥ ೧೫ ॥
ಪ್ರೇಮಭಕ್ತಿಪುರುಷೈರುಪಲಭ್ಯಃ
ಪೂರುಷಃ ಕೃತಸಮಸ್ತನಿವಾಸಃ ।
ದಾಸವೃಂದ ಹೃಷಿತೋ ನಿಜದಾಸಃ
ಪ್ರೇಕ್ಷಣೈಕಕರುಣೋಽವತು ವಿಶ್ವಂ ॥ ೧೬ ॥
ಕಂಠಲಂಭಿತತರಕ್ಷ್ವನಖಾಗ್ರ
ಕೃಷ್ಟಗೋಪರಮಣೀಕುಚಭಾರಃ ।
ಲೀಲಯಾ ಯುವತಿಭಿಃ ಕೃತವೇಷಃ
ಶೇಷ ಏಷ ಭವತಾದುಪಶಾಂತ್ಯೈ ॥ ೧೭ ॥
ದಂಡಪಾಣಿರಯಮೇವ ಜನಾನಾಂ
ಶಾಸಿತಾತ್ಮನಿಯಮೋಕ್ತಹಿತಾನಾಂ ।

---

೧೫. ದೇವತೆಗಳ ಅಂತರಂಗಭಕ್ತಿಗೆ ಪಾತ್ರನಾದವನೂ, ಬ್ರಹ್ಮಾಂಡವೇ ಶರೀರವಾಗಿರುವವನೂ, ಗೋಪಿಕಾಸ್ತ್ರೀಯರ ವಸ್ತ್ರಗಳನ್ನಪಹರಿಸಿದವನೂ, ಮಹಾತ್ಮರನ್ನು ಕಾಪಾಡುವುದಕ್ಕಾಗಿ ಭೂಲೋಕದಲ್ಲಿ ಜನಿಸಿ ರಾಸಕ್ರೀಡೆಯಲ್ಲಿ ಅನೇಕರೂಪಗಳನ್ನು ತೋರಿಸಿದ ಶ್ರೀಕೃಷ್ಣರೂಪವನ್ನು ಸ್ವೀಕರಿಸಿದ ಶ್ರೀಹರಿಯು ನಮ್ಮನ್ನು ರಕ್ಷಿಸಲಿ.

೧೬. ಅವ್ಯಾಜಪ್ರೇಮ ಮತ್ತು ಭಕ್ತಿಗಳಿಂದ ಕೂಡಿದ ಮನುಷ್ಯರಿಗೆ ಮಾತ್ರ ಮನಸ್ಸಿನಲ್ಲಿ ಕಾಣುವವನೂ, ಸಕಲ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿ ವಾಸಮಾಡುತ್ತಿರುವ ಪರಮಪೂರುಷನೂ, ತನ್ನ ದಾಸರ ಸಮೂಹಗಳನ್ನು ಕಂಡು ಸಂತೋಷಗೊಳ್ಳುವವನೂ, ತನ್ನ ಭಕ್ತರಿಗೆ ದಾಸನಾಗಿ ನಡೆದುಕೊಳ್ಳುವವನೂ, ಕೇವಲ ಕರುಣೆಯಿಂದಲೇ ಪೂರಿತವಾದ ದೃಷ್ಟಿಯುಳ್ಳವನೂ ಆದ ಶ್ರೀಹರಿಯು ಪ್ರಪಂಚವನ್ನು ರಕ್ಷಿಸಲಿ.

೧೭. ತನ್ನ ಕಂಠದಲ್ಲಿ ತೂಗಾಡುತ್ತಿರುವ ಕರಡಿಯ ಉಗುರುಗಳ ಕೊನೆಗಳಿಂದ ಆಲಿಂಗನ ಸಮಯದಲ್ಲಿ ಗೋಪಿಕಾಸ್ತ್ರೀಯರ ಕುಚಗಳಿಗೆ ಕ್ಷತಗಳನ್ನುಂಟುಮಾಡುವವನೂ, ಲೀಲೆಗೋಸ್ಕರ ಅವರೊಡನೆ ವೇಷವನ್ನು ಧರಿಸಿದವನೂ ಆದ ಶೇಷರೂಪಿಯು ಪ್ರಸನ್ನನಾಗಿ ಮನಶ್ಶಾಂತಿಯನ್ನುಂಟುಮಾಡಲಿ.

೧೮. ತನ್ನ ವಾಕ್ಯರೂಪಗಳಾದ ವೇದಗಳಲ್ಲಿ ಹೇಳಿರುವ ನಿಯಮಗಳೇ

ಪಾವನಾಯ ಮಹತಾಮನುಶಾಲೀ
ವಿಶ್ವದುಃಖಶಮನೋ ಭವತಾಂ ನಃ ॥ ೧೮ ॥
ಏವಂ ಸ್ತುತಸ್ತತಃ ಸಾಕ್ಷಾದ್ಗರುಡೇನ ಮಹಾತ್ಮನಾ ।
ಪೂಜಾರ್ಥಮಾಜುಹಾವೈನಾಂ ಗಂಗಾಂ ತ್ರಿಪಥಗಾಮಿನೀಂ ॥ ೧೯ ॥
ತತಃ ಪಂಚಮುಖೀ ಸಾಕ್ಷಾದಾವಿರಾಸೀನ್ನಗೋಪರಿ ।
ತೇನೋದಕೇನ ಪಾದಾರ್ಘ್ಯಂ ಚಕಾರ ವಿನತಾಸುತಃ ॥ ೨೦ ॥
ವ್ರಿಯತಾಂ ವರ ಇತ್ಯುಕ್ತೋ ಗರುಡೋ ಹರಿಣಾ ತತಃ ।
ತವೈಕವಾಹನಃ ಶ್ರೀಮಾನ್ಬಲವೀರ್ಯಪರಾಕ್ರಮಃ ।
ಅಜೇಯೋ ದೇವದೈತ್ಯಾನಾಂ ಸ್ಯಾಮಹಂ ತೇ ಪ್ರಸಾದತಃ ॥ ೨೧ ॥
ಇಯಂ ಮನ್ನಾಮವಿಖ್ಯಾತಾ ಸರ್ವಪಾಪಹರಾ ಶಿಲಾ ।
ಏತಸ್ಯಾಃ ಸ್ಮರಣಾತ್ಪುಂಸಾಂ ವಿಷವ್ಯಾಧಿರ್ನಜಾಯತಾಂ ॥ ೨೨ ॥

---

ಹಿತವನ್ನುಂಟುಮಾಡುವುವೆಂದು ತಿಳಿದಿರುವ ಜನರಿಗೆ ನೀನೇ ದಂಡಧರನಾಗಿ ಶಾಸನ ಮಾಡುತ್ತಿರುವೆ. ಮಹಾತ್ಮರಿಗೆ ಪವಿತ್ರತೆಯನ್ನುಂಟುಮಾಡಲು ಅನುಕಂಪವುಳ್ಳವನೂ, ಸಕಲ ದುಃಖಗಳನ್ನು ಶಮನಮಾಡುವವನೂ ಆದ ಶ್ರೀ ನಾರಾಯಣನು ನಮ್ಮನ್ನು ದುಃಖರಹಿತರನ್ನಾಗಿ ಮಾಡಲಿ.''

೧೯. ಇಂತು ಮಹಾತ್ಮನಾದ ಗರುಡನಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ನಾರಾಯಣನು ಮುಂದೆ ಸಾಕ್ಷಾತ್ಕರಿಸಲು ಗರುಡನು ಆತನಿಗೆ ಉಚಿತೋಪಚಾರವನ್ನು ಮಾಡುವ ಅಭಿಲಾಷೆಯಿಂದ ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳಲ್ಲಿ ಪ್ರವಹಿಸುತ್ತಿರುವ ಗಂಗೆಯನ್ನು ತಾನಿದ್ದ ಸ್ಥಳಕ್ಕೆ ಬರಮಾಡಿಕೊಂಡನು.

೨೦. ಆಗ ಗಂಗೆಯು ಆ ಪರ್ವತ ಶಿಖರದಲ್ಲಿ ಉದ್ಭವಿಸಿ ಐದು ಪ್ರವಾಹಗಳಾಗಿ ಹರಿಯತೊಡಗಿತು. ಬಳಿಕ ವೈನತೇಯನು ಆ ಗಂಗೋದಕದಿಂದಲೇ ಪರಮಾತ್ಮನಿಗೆ ಅರ್ಘ್ಯ ಪಾದ್ಯಗಳನ್ನು ಸಮರ್ಪಿಸಿ ಕೃತಾರ್ಥನಾದನು.

೨೧. ಶ್ರೀಹರಿಯು ಗರುಡನನ್ನು ಕುರಿತು "ನಿನಗೆ ಬೇಕಾದ ವರವನ್ನು ಕೇಳಿಕೊ'' ಎಂಬುದಾಗಿ ನಿರ್ದೇಶಮಾಡಲು, ಆತನು ಹೇಳತೊಡಗಿದನು:— "ನಾನು ನಿನಗೆ ಅನನ್ಯವಾದ ವಾಹನವೆನಿಸಿಕೊಂಡು ಸಕಲೈಶ್ವರ್ಯಗಳಿಂದಲೂ ಬಲ, ವೀರ್ಯ, ಪರಾಕ್ರಮಗಳಿಂದಲೂ ಕೂಡಿದವನಾಗಬೇಕು. ನಿನ್ನ ಅನುಗ್ರಹದಿಂದ ಸಮಸ್ತ ದೇವದಾನವರಿಗೂ ಜಯಿಸಲಸಾಧ್ಯನಾಗಿರಬೇಕು.

೨೨. ಈ ಶಿಲೆಯೂ ನನ್ನ ಹೆಸರಿನಿಂದ ಪ್ರಖ್ಯಾತಿಯನ್ನು ಹೊಂದಿ ಜನರ ಸಕಲ ಪಾಪಗಳನ್ನೂ ಕಳೆಯುವ ಮಹಿಮೆಯುಳ್ಳುದಾಗಬೇಕು. ಇದರ ಸ್ಮರಣದ ಮಾತ್ರದಿಂದಲೇ ಎಲ್ಲ ಮಾನವರಿಗೂ ಸಕಲ ವಿಧಗಳಾದ ವಿಷವ್ಯಾಧಿಗಳೂ ದೂರವಾಗಬೇಕು.''

ಏವಮುಕ್ತ್ವಾ ತತಸ್ತೂಷ್ಣೀಂ ಬಭೂವ ವಿನತಾಸುತಃ ।
ಓಮಿತ್ಯುಕ್ತ್ವಾ ತತೋ ವಿಷ್ಣುಃ ಉವಾಚೇದಂ ವಚೋ ಹಿತಂ ॥ ೨೩ ॥
ಬದರೀಂ ತ್ವಂ ಪ್ರಯಾಹೀತಿ ನಾರದೇನ ನಿಷೇವಿತಾಂ ।
ಸ್ನಾನಂ ನಾರದತೀರ್ಥಾದಾವುಪವಾಸತ್ರಯಂ ಶುಚಿ ।
ಕೃತ್ವಾ ಮದ್ದರ್ಶನಂ ತತ್ರ ಸುಲಭಂ ತೇ ಭವಿಷ್ಯತಿ ॥ ೨೪ ॥
ಇತ್ಯುಕ್ತ್ವಾಂತರ್ದಧೇ ವಿಷ್ಣುಃ ತಟಿತ್ಸೌದಾಮನೀ ಯಥಾ ।
ಗರುಡಸ್ತು ತತಃ ಶೀಘ್ರಮಾಗತ್ಯ ಬದರೀಂ ಮುದಾ ॥ ೨೫ ॥
ವಹ್ನಿತೀರ್ಥಂ ಸಮಾಸಾದ್ಯ ಶಿಲಾಮಾಶ್ರಿತ್ಯ ತತ್ಪರಃ ।
ಸ್ನಾತ್ವಾ ನಾರದತೀರ್ಥೇಷು ವ್ರತಚರ್ಯಾಮಥಾಕರೋತ್ ॥ ೨೬ ॥
ತತಸ್ತು ನಾರದೇ ತೀರ್ಥೇ ದೃಷ್ಟ್ವಾ ಭಗವತಃ ಸ್ಥಿತಿಂ ।
ನಮಸ್ಕೃತ್ಯ ವಿಧಾನೇನ ತದಾಽಜ್ಞಾತಃ ಪುರಂ ಯಯೌ ॥ ೨೭ ॥
ತತಃ ಪ್ರಭೃತಿ ತ್ರೈಲೋಕ್ಯೇ ಗಾರುಡೀತಿ ಶಿಲೋಚ್ಯತೇ ॥ ೨೮ ॥

---

೨೩. ಇಂತು ಪ್ರಾರ್ಥಿಸಿ ವೈನತೇಯನು ಸುಮ್ಮನಾಗಲು ಶ್ರೀಹರಿಯು ಹಾಗೆಯೇ ಆಗಲೆಂದು ಅಂಗೀಕರಿಸಿ ಮತ್ತೆ ಆತನಿಗೆ ಹಿತವನ್ನುಂಟುಮಾಡುವ ಮಾತುಗಳನ್ನು ಆಡತೊಡಗಿದನು.

೨೪. "ಎಲೈ ವಿನತಾಪುತ್ರನೆ! ನೀನು ನಾರದಮಹರ್ಷಿಯಿಂದ ಸೇವಿಸಲ್ಪಡುತ್ತಿರುವ ಬದರಿಕಾಶ್ರಮವನ್ನು ಕುರಿತು ಪ್ರಯಾಣಮಾಡು. ನಾರದತೀರ್ಥವೇ ಮೊದಲಾದುವುಗಳಲ್ಲಿ ಸ್ನಾನಗಳನ್ನು ಮಾಡಿ ಶುಚಿರ್ಭೂತನಾಗಿ, ಮೂರು ದಿವಸದ ಉಪವಾಸವನ್ನು ಮಾಡಿದರೆ ನಿನಗೆ ಅತ್ಯಂತ ಸುಲಭವಾಗಿ ನನ್ನ ದರ್ಶನವು ಲಭಿಸುವುದು."

೨೫–೨೬. ಇಂತೆಂದು ಅಪ್ಪಣೆಯನ್ನು ಮಾಡಿ ಮಹಾವಿಷ್ಣುವು ಮೇಘಮಂಡಲದಲ್ಲಿರುವ ಮಿಂಚಿನ ಬಳ್ಳಿಯಂತೆ ಕ್ಷಣಮಾತ್ರದಲ್ಲಿಯೆ ಅಂತರ್ಧಾನವನ್ನು ಹೊಂದಿದನು. ಬಳಿಕ ಗರುಡನು ವೇಗವಾಗಿ ಬದರಿಕಾಶ್ರಮವನ್ನು ಸೇರಿ ಸಂತೋಷದಿಂದ ಅಗ್ನಿತೀರ್ಥವನ್ನೂ ಶಿಲೆಯನ್ನೂ ಸೇವಿಸಿ ಏಕಾಗ್ರಮನಸ್ಸಿನಿಂದ ನಾರದತೀರ್ಥಗಳಲ್ಲಿ ಸ್ನಾನವನ್ನು ಮಾಡಿ ಶುಚಿಯಾಗಿ ವ್ರತಾಚರಣೆಯನ್ನು ಮಾಡಲುಪಕ್ರಮಿಸಿದನು.

೨೭. ಬಳಿಕ ನಾರದ ತೀರ್ಥದಲ್ಲಿ ಭಗವಂತನು ಸನ್ನಿಹಿತನಾಗಿರುವುದನ್ನು ಕಣ್ಣಾರೆ ಕಂಡು ವಿಧಿಪೂರ್ವಕವಾಗಿ ಸಾಷ್ಟಾಂಗಪ್ರಣಾಮವನ್ನು ಮಾಡಿ ಆತನ ಅನುಜ್ಞೆಯನ್ನು ಹೊಂದಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೨೮. ಅಂದಿನ ದಿನವು ಮೊದಲುಗೊಂಡು ಆತನು ತಪಸ್ಸಿಗಾಗಿ ಕುಳಿತಿದ್ದ ಶಿಲೆಗೆ ಗರುಡಶಿಲೆಯೆಂಬ ಹೆಸರು ಪ್ರಸಿದ್ಧವಾಗಿರುವುದು.

ಸ್ಕಂದ ಉವಾಚ :—

ವಾರಾಹ್ಯಾ ವದ ಮಾಹಾತ್ಮ್ಯಂ ಕೀದೃಶಂ ಹೀಶ್ವರೇಶ್ವರ ।
ಕಿಂ ಪುಣ್ಯಂ ಕಿಂ ಫಲಂ ತಸ್ಯಾ ಅಭಿಧಾನಂ ತಥಾ ಕಥಂ ॥ ೨೯ ॥

ಶಿವ ಉವಾಚ :—

ರಸಾತಲಾತ್ಸಮುದ್ಧೃತ್ಯ ಮಹೀಂ ದೈವತವೈರಿಣಂ ।
ಹಿರಣ್ಯಾಕ್ಷಂ ರಣೇ ಹತ್ವಾ ಬದರೀಂ ಸಮುಪಾಗತಃ ॥ ೩೦ ॥
ಆಕಲ್ಪಾಂತಂ ಮಹಾದೇವೋ ಯೋಗಧಾರಣಯಾ ಸ್ಥಿತಃ ।
ಬದರ್ಯಾಃ ಸೌಷ್ಠವಾದೇವ ವಿದಧೇ ಸ್ಥಿತಿಮಾತ್ಮನಃ ॥ ೩೧ ॥
ಶಿಲಾರೂಪೇಣ ಭಗವಾನ್ಸ್ಥಿತಿಂ ತತ್ರ ಚಕಾರ ಹ ।
ತತ್ರ ಗತ್ವಾ ತು ಮನುಜಃ ಸ್ನಾತ್ವಾ ಗಂಗಾಜಲೇಽಮಲೇ ॥ ೩೨ ॥
ದಾನಂ ದತ್ವಾ ಸ್ವಶಕ್ತ್ಯಾ ವೈ ಗಂಗಾಂಭಃಶಾಂತಮಾನಸಃ ।
ಅಹೋರಾತ್ರೇ ಸ್ಥಿತೋ ಭೂತ್ವಾ ಜಪೇದೇಕಾಗ್ರಮಾನಸಃ ॥ ೩೩ ॥

---

೨೯. ಸ್ಕಂದನು ಕೇಳುತ್ತಾನೆ:—"ಎಲೈ ಮಹೇಶ್ವರನೆ! ವರಾಹಶಿಲೆಯ ಮಾಹಾತ್ಮ್ಯವು ಎಂತಹುದೆಂಬುದನ್ನು ನನಗೆ ಹೇಳುವವನಾಗು. ಅದರ ಪುಣ್ಯವು ಎಷ್ಟರದು? ಅದರ ಸೇವನೆಯಿಂದ ಯಾವ ಫಲವು ಲಭಿಸುವುದು? ಅದಕ್ಕೆ ಆ ಹೆಸರು ಹೇಗೆ ಉಂಟಾಯಿತು?"

೩೦. ಶಿವನು ನಿರೂಪಿಸುತ್ತಾನೆ:—"ವತ್ಸ! ಮಹಾವಿಷ್ಣುವು ವರಾಹ ರೂಪವನ್ನು ಸ್ವೀಕರಿಸಿ ರಸಾತಲದಿಂದ ಭೂಮಂಡಲವನ್ನುದ್ಧರಿಸಿ ದೇವತೆಗಳಿಗೆ ಪರಮವೈರಿಯಾದ ಹಿರಣ್ಯಾಕ್ಷನನ್ನು ಯುದ್ಧದಲ್ಲಿ ಸಂಹರಿಸಿ ಬದರಿಕಾಶ್ರಮದ ಬಳಿಗೆ ಬಂದನು.

೩೧. ದೇವೇಶ್ವರನಾದ ಆತನು ಯೋಗಾಭ್ಯಾಸದಲ್ಲಿ ನಿರತನಾಗಿ ಕಲ್ಪದ ಅಂತ್ಯದವರೆವಿಗೂ ಇದ್ದು ಆ ಪ್ರದೇಶದ ಪರಮ ರಾಮಣೀಯತೆಯನ್ನು ಕಂಡು ಅಲ್ಲಿಯೇ ತನ್ನ ಶಾಶ್ವತನಿವಾಸವನ್ನು ಮಾಡಿಕೊಂಡನು.

೩೨–೩೩. ಭಗವಂತನು ಅಲ್ಲಿ ಶಿಲೆಯ ರೂಪದಿಂದ ನೆಲಸುವವನಾದನು. ಪ್ರತಿ ಮಾನವನೂ ಅಲ್ಲಿಗೆ ಹೋಗಿ, ನಿರ್ಮಲವಾದ ಗಂಗಾಜಲದಲ್ಲಿ ಸ್ನಾನವನ್ನಾಚರಿಸಿ, ತನ್ನ ಶಕ್ತಿಗೆ ಅನುಸಾರವಾಗಿ ದಾನಗಳನ್ನು ಮಾಡಿ, ಆ ಗಂಗೋದಕದಿಂದ ಪ್ರಶಾಂತವಾದ ಮನಸ್ಸುಳ್ಳವನಾಗಿ, ನಿದ್ರಾಹಾರಾದಿಗಳನ್ನು ತ್ಯಜಿಸಿ ಅಹೋರಾತ್ರಿಗಳಲ್ಲಿಯೂ ಏಕಾಗ್ರಚಿತ್ತತೆಯಿಂದ ಮಂತ್ರಜಪವನ್ನು ಮಾಡಬೇಕು.

ಶಿಲಾಯಾಂ ದೇವದೃಷ್ಟಿಶ್ಚ ತಸ್ಯ ಪುಂಸಃ ಪ್ರಜಾಯತೇ ।
ಬಹುನಾ ಕಿಮಿಹೋಕ್ತೇನ ಯದ್ಯದಿಷ್ಯತಿ ಸಾಧಕಃ ॥ ೩೪ ॥
ತತ್ತಸ್ಯ ಸಿಧ್ಯತಿ ಕ್ಷಿಪ್ರಂ ಯದ್ಯಪಿ ಸ್ಯಾತ್ಸುದುಷ್ಕರಂ ॥ ೩೫ ॥

ಸ್ಕಂದ ಉವಾಚ :–

ನಾರಸಿಂಹಶಿಲಾಯಾಸ್ತು ಮಾಹಾತ್ಮ್ಯಂ ವದ ಮೇ ಪ್ರಭೋ ।
ತ್ವತ್ಪ್ರಸಾದಾನ್ಮಹಾದೇವ ದುರ್ಲಭಂ ಶ್ರುತವಾನಹಂ ॥ ೩೬ ॥

ಶಿವ ಉವಾಚ :–

ಹಿರಣ್ಯಕಶಿಪುಂ ಹತ್ವಾ ನಖಾಗ್ರೇಣೈವ ಲೀಲಯಾ ।
ಕ್ರೋಧಾಗ್ನಿನಾ ಪ್ರದೀಪ್ತಾಂಗಃ ಪ್ರಲಯಾನಲಸನ್ನಿಭಃ ॥ ೩೭ ॥
ತದಾ ದೇವೈಃ ಸಮಾಗತ್ಯ ಸ್ಥಿತ್ವಾ ದೂರೇ ದಯಾಲುಭಿಃ ।
ಸ್ತುತೋಽಸೌ ಭಗವಾನ್ದೇವಃ ಲೀಲಯಾ ಧೃತವಿಗ್ರಹಃ ॥ ೩೮ ॥
ತದಾ ಪ್ರಸನ್ನೋ ಹರಿರುಗ್ರವಿಕ್ರಮಃ
ಸ್ವತೇಜಸಾ ವ್ಯಾಪ್ತಸುರಾಽಸುರೋತ್ತಮಃ ।

---

೩೪–೩೫. ಆ ಮಾನವನಿಗೆ ವರಾಹಶಿಲೆಯಲ್ಲಿ ಪರಮಾತ್ಮನ ದರ್ಶನವು ಲಭ್ಯವಾಗುವುದು. ಈ ವಿಷಯದಲ್ಲಿ ಹೆಚ್ಚು ಹೇಳುವುದರಿಂದ ಪ್ರಯೋಜನವೇನು ? ಸಾಧಕನಾದ ವಿಷ್ಣುಭಕ್ತನು ಯಾವ ಯಾವ ವರಗಳನ್ನು ಕೇಳಿಕೊಳ್ಳುವನೊ, ಅವುಗಳು ಅತ್ಯಂತ ದುರ್ಲಭಗಳಾದರೂ ಆತನಿಗೆ ಮಾತ್ರ ಶೀಘ್ರದಲ್ಲಿಯೇ ನೆರವೇರುವುವು.''

೩೬. ಸ್ಕಂದನು ಪ್ರಶ್ನೆಮಾಡುತ್ತಾನೆ :–''ಲೋಕೇಶ್ವರನೆ ! ಮಹಾದೇವನೆ ! ನಿನ್ನ ಅನುಗ್ರಹದಿಂದ ನಾನು ಅತ್ಯಂತ ದುರ್ಲಭಗಳಾದ ವಿಷಯಗಳನ್ನೂ ತಿಳಿದುಕೊಂಡೆನು. ಇನ್ನು ನರಸಿಂಹಶಿಲೆಯ ಮಾಹಾತ್ಮ್ಯವನ್ನು ನನಗೆ ತಿಳಿಸುವವನಾಗು.''

೩೭. ಶಿವನು ಹೇಳುತ್ತಾನೆ :—''ಮಹಾವಿಷ್ಣುವು ನರಸಿಂಹಾವತಾರವನ್ನು ಮಾಡಿ ಲೀಲಾಮಾತ್ರದಿಂದಲೇ ಹಿರಣ್ಯಕಶಿಪುವಿನ ದೇಹವನ್ನು ಉಗುರುಗಳಲ್ಲಿ ಸೀಳಿದ ಮೇಲೂ ಕೋಪಾಗ್ನಿಯಿಂದ ಜ್ವಲಿಸುತ್ತಿರುವ ದೇಹವುಳ್ಳವನಾಗಿ ಪ್ರಳಯಕಾಲದ ಮಹಾಗ್ನಿಯನ್ನು ಹೋಲುತ್ತಿದ್ದನು.

೩೮. ಆಗ ದಯಾಪರರಾದ ದೇವತೆಗಳೆಲ್ಲರೂ ಪ್ರಾಪ್ತರಾಗಿ ದೂರದಲ್ಲಿಯೇ ನಿಂತು ಲೀಲೆಯಿಂದಲೇ ಅವತಾರವನ್ನೆತ್ತಿದ್ದ ಸರ್ವೈಶ್ವರ್ಯಸಮನ್ವಿತನಾದ ದೇವದೇವನನ್ನು ಸ್ತೋತ್ರಮಾಡತೊಡಗಿದರು.

೩೯. ಅಮಿತಪರಾಕ್ರಮವಂತನೂ ತನ್ನ ತೇಜಸ್ಸಿನಿಂದ ಸಮಸ್ತಸುರಾಸುರರನ್ನು ಮೋಹಗೊಳಿಸುವವನೂ ಆದ ಶ್ರೀಹರಿಯು ಪ್ರಸನ್ನನಾಗಿ '' ದೇವತೆಗಳ

ಉವಾಚ ಮತ್ತ್ಯೋ ವರಮಾವೃಣೀಧ್ವಂ
ಗೀರ್ವಾಣನಿರ್ವಾಣಸುಖೈಕಹೇತುಂ ॥ ೩೯ ॥
ತದಾ ಸುರಾಣಾಮಧಿಪಃ ಸ್ವಯಂಭೂಃ
ಉವಾಚ ವಾಕ್ಯಂ ಸ್ಮಿತಶೋಭಿತಾನನಃ ।
ರೂಪಂ ತವಾತ್ಯುಗ್ರಮಶೇಷದೇಹಿನಾಂ
ಭಯಾವಹಂ ಸಂಹರ ನಾರಸಿಂಹ ॥ ೪೦ ॥
ಅನೇಕಧೈತದ್ವಿಧಿವದ್ವಿಧಾಯ
ನಿಧಾಯ ಶೈಲಾದಿಷು ದಿವ್ಯಮೂರ್ತಿಂ ।
ಉವಾಚ ಕಿಂ ವಃ ಪ್ರಕರೋಮಿ ಕೃತ್ಯ
ಮಹಂ ಪ್ರಸನ್ನಸ್ತ್ರಿದಶಾಃ ಪರಂತಪಾಃ ॥ ೪೧ ॥
ತತೋಽಮರಾ ಊಚುರನೇನ ಚೈವ
ರೂಪೇಣ ಸಂಕ್ಷೋಭಿತವಿಶ್ವಮೂರ್ತೇ ।
ಪ್ರಶಾಂತಮಂತಃಸುಖಹೇತುಬಂಧಿ
ಚತುರ್ಭುಜತ್ತ್ವಂ ವರಮಿಪ್ಸಿತಂ ನಃ ॥ ೪೨ ॥

---

ಸ್ವರ್ಗಸುಖಕ್ಕೆ ಏಕಕಾರಣವಾದ ಯಾವ ವರವನ್ನಾದರೂ ನನ್ನಲ್ಲಿ ಕೇಳಿಕೊಳ್ಳಿರಿ'' ಎಂಬುದಾಗಿ ಅನುಗ್ರಹಿಸಿದನು.

೪೦. ಆಗ ಸಕಲ ದೇವತೆಗಳಿಗೂ ಅಧಿಪತಿಯಾದ ಬ್ರಹ್ಮದೇವನು ಮುಗುಳ್ನಗೆಯಿಂದ ಕೂಡಿದ ಮುಖಕಮಲವುಳ್ಳವನಾಗಿ ಮಾತನಾಡಿದನೆಂತನೆ: ''ಎಲೈ ನರಸಿಂಹಸ್ವಾಮಿಯೆ! ನಿನ್ನ ಸ್ವರೂಪವು ಅತ್ಯಂತ ಉಗ್ರವಾಗಿ ಸಕಲ ಪ್ರಾಣಿಗಳಿಗೂ ಅಪಾರವಾದ ಭಯವನ್ನುಂಟುಮಾಡುತ್ತಿರುವುದು. ಅದನ್ನು ದಯವಿಟ್ಟು ಉಪಸಂಹರಿಸಿಕೊ.''

೪೧. ಶ್ರೀಹರಿಯು ತನ್ನ ದಿವ್ಯಮೂರ್ತಿಯನ್ನು ವಿಧಿವತ್ತಾಗಿ ಅನೇಕ ವಿಭಾಗಗಳನ್ನು ಮಾಡಿ ಶಿಖರಿಯೇ ಮೊದಲಾದುವುಗಳಲ್ಲಿ ಸ್ಥಾಪಿಸಿ ''ಶತ್ರುನಾಶಕರಾದ ದೇವತೆಗಳೇ! ನಿಮ್ಮ ಭಕ್ತಿಯಿಂದ ನಾನು ಪ್ರಸನ್ನನಾಗಿರುವೆನು. ನಿಮಗಾಗಿ ಮತ್ತೆ ಯಾವ ಕಾರ್ಯವನ್ನು ಮಾಡಲಿ'' ಎಂಬುದಾಗಿ ಕೇಳಿದನು.

೪೨. ದೇವತೆಗಳು ಬಿನ್ನವಿಸತೊಡಗಿದರು. ''ಈ ನಿನ್ನ ರೂಪದಿಂದಲೇ ಸಕಲ ಬ್ರಹ್ಮಾಂಡವೂ ಕ್ಷೋಭವನ್ನು ಹೊಂದಿರುವುದು. ಆದುದರಿಂದ ಶಾಂತಿದಾಯಕವೂ ಅಂತರಂಗಸುಖಕ್ಕೆ ಕಾರಣಭೂತವೂ ಆದ ನಿನ್ನ ಚತುರ್ಬಾಹುಗಳಿಂದ ಕೂಡಿದ ಸೌಮ್ಯಸ್ವರೂಪವನ್ನು ನಮಗೆ ತೋರಿಸು. ಇದೇ ನಮಗೆ ಅಪೇಕ್ಷಿತವಾದ ವರವು.

ತತೋ ಹರಿರ್ವೀಕ್ಷ್ಯ ನಿರೀಕ್ಷಣೇನ
ದಿವ್ಯೇನ ವಿಶ್ವಂ ಪ್ರಯಯೌ ವಿಶಾಲಾಂ ।
ಗಂಗಾಜಲೇ ಕ್ರೀಡತಿ ವಿಷ್ಟಚೇತಾಃ
ಸುರಾಸುರೇಭ್ಯೋ ಭಗವಾನುವಾಚ ॥ ೪೩ ॥

ತತೋಽಮರಾಃ ಶಾಂತಭಯಾ ಅಥೈನಂ
ನಿರೀಕ್ಷ್ಯ ದೇವಂ ಜಲಮಧ್ಯಸಂಸ್ಥಂ ।
ನತ್ವಾ ಪರಿಕ್ರಮ್ಯ ತದಾ ಸಮಾಯಯು
ರ್ನಿರೂಢಭಾವಾಃ ಸ್ವಪುರಂ ತತಃ ಕ್ರಮಾತ್ ॥ ೪೪ ॥

ತತಃ ಸಮಸ್ತಾ ಋಷಯಸ್ತಪೋಧನಾಃ
ಸಮಾಯಯುರ್ಭಕ್ತಿಭರಾವನಮ್ರಾಃ ।
ನೃಸಿಂಹಮತ್ಯದ್ಭುತವಿಕ್ರಮಂ ಹರಿಂ
ಸಮೀಡಿರೇ ಬದ್ಧಕರಾಃ ವಚೋಭಿಃ ॥ ೪೫ ॥

ಋಷಯ ಊಚುಃ:—

ನಮೋ ನಮಸ್ತೇ ಜಗತಾಮಧೀಶ
ವಿಶ್ವೇಶ ವಿಶ್ವಾಽಭಯ ವಿಶ್ವಮೂರ್ತೇ ।
ಕೃಪಾಂಬುರಾಶೇ ಭಜನೀಯತೀರ್ಥ
ಪಾದಾಂಬುಜ ಶ್ರೀಶ ದಯಾಂ ವಿಧೇಹಿ ॥ ೪೬ ॥

---

೪೩. ಆಗ ಭಗವಂತನು ದಿವ್ಯದೃಷ್ಟಿಯಿಂದ ಸಕಲ ಭೂಮಂಡಲವನ್ನೂ ನೋಡಿ ವಿಶಾಲಾಕ್ಷೇತ್ರವೇ ಉತ್ತಮವೆಂದು ನಿರ್ಣಯಿಸಿ ಅಲ್ಲಿಗೆ ಹೊರಟನು. ಆತನು ಸಮಸ್ತ ಸುರಾಸುರರನ್ನೂ ಕುರಿತು "ಸ್ವಾಮಿಯು ಗಂಗೋದಕದಲ್ಲಿ ತನ್ನ ಚೈತನ್ಯವನ್ನು ಸ್ಥಾಪಿಸಿರುವನು" ಎಂಬುದಾಗಿ ಅವರಿಗೆ ತಿಳಿಸಿದನು.

೪೪. ಇದರಿಂದ ದೇವತೆಗಳೆಲ್ಲರಿಗೂ ಭಯವು ದೂರವಾಯಿತು. ಅವರು ಗಂಗಾಜಲದ ಮಧ್ಯದಲ್ಲಿ ಪರಮಾತ್ಮನ ಸ್ವರೂಪವನ್ನು ಕಂಡು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಮನಸ್ಸಮಾಧಾನದಿಂದ ಕೂಡಿದವರಾಗಿ ಕ್ರಮವಾಗಿ ತಮ್ಮ ತಮ್ಮ ನಿವಾಸಗಳಿಗೆ ಹಿಂದಿರುಗಿದರು.

೪೫. ಬಳಿಕ ತಪಸ್ಸಂಪನ್ನರಾದ ಮಹರ್ಷಿಗಳೆಲ್ಲರೂ ಭಕ್ತಿಯ ಆಧಿಕ್ಯದಿಂದ ದೇಹಗಳನ್ನು ಬಗ್ಗಿಸಿಕೊಂಡು ಕೈಗಳನ್ನು ಜೋಡಿಸಿ ಅತಿ ಪ್ರಚಂಡವಾದ ಪರಾಕ್ರಮವನ್ನು ತೋರಿ ನರಸಿಂಹಾವತಾರವನ್ನೆತ್ತಿದ ಆ ಶ್ರೀಹರಿಯನ್ನು ಅನೇಕ ವಚನಗಳಿಂದ ಸ್ತೋತ್ರಮಾಡಿದರು.

೪೬. ಋಷಿಗಳು ಹೇಳುತ್ತಾರೆ:—"ಸಕಲ ಲೋಕಗಳಿಗೆ ಅಧೀಶ್ವರನೂ, ಬ್ರಹ್ಮಾಂಡಕ್ಕೆ ಒಡೆಯನೂ, ವಿಶ್ವಕ್ಕೆ ಅಭಯವನ್ನು ಕೊಡುವವನೂ, ಬ್ರಹ್ಮಾಂಡ

ಏಕೋಽಸಿ ನಾನಾ ನಿಜಮಾಯಯಾ ಸ್ವಯಾ
ಘಟೈಃ ಪಯೋ ಯದ್ವದುಪಾಧಿಭಿನ್ನಂ ।
ಭಕ್ತೇಚ್ಛಯೋಪಾತ್ತ ವಿಚಿತ್ರವಿಗ್ರಹ
ಪ್ರಸೀದ ವಿಶ್ವಾನನ ವಿಶ್ವಭಾವನ ॥ ೪೭ ॥

ತತಃ ಪ್ರಸನ್ನೋ ಭಗವಾನ್ ನೃಸಿಂಹಃ ಸಿಂಹವಿಕ್ರಮಃ ।
ಉವಾಚ ವಚನಂ ಚಾರು ವರಂ ಮೇ ವ್ರಿಯತಾಮಿತಿ ॥ ೪೮ ॥

ಋಷಯ ಊಚುಃ :—

ಯದಿ ಪ್ರಸನ್ನೋ ಭಗವನ್ಕೃಪಯಾ ಜಗತಾಂ ಪತೇ ।
ವಿಶಾಲಾ ನ ಪರಿತ್ಯಾಜ್ಯಾ ವರೋಽಸ್ಮಾಕಮಭೀಪ್ಸಿತಃ ॥ ೪೯ ॥
ಏವಮುಸ್ತ್ವ ತತಃ ಸರ್ವೇ ಸ್ವಾಶ್ರಮಂ ಋಷಯೋ ಯಯುಃ ।
ನೃಸಿಂಹೋಽಪಿ ಶಿಲಾರೂಪೀ ಜಲಕ್ರೀಡಾಪರೋಽಭವತ್ ॥ ೫೦ ॥

---

ಸ್ವರೂಪಿಯೂ, ಕೃಪಾಸಮುದ್ರನೂ, ಭಕ್ತರ ಭಜನೆ, ಸ್ತೋತ್ರಗಳಿಗೆ ವಿಷಯ ಗಳಾದ ಪವಿತ್ರ ಪಾದಕಮಲಗಳುಳ್ಳ ಲಕ್ಷ್ಮೀರಮಣನೂ ಆದ ನೀನು ನಮ್ಮಲ್ಲಿ ದಯೆಯನ್ನು ತೋರಿಸು.

೪೭. ಬ್ರಹ್ಮಾಂಡವೇ ಮುಖವಾಗಿರುವ ಓ ವಿಶ್ವವ್ಯಾಪಕನೆ! ನೀನು ಒಬ್ಬನೇ ಆಗಿರುವೆಯಾದರೂ ನಿನ್ನ ಮಾಯೆಯ ಬಲದಿಂದ ಅನೇಕ ಘಟಗಳಲ್ಲಿ ರುವ ಒಂದೇ ಕ್ಷೀರವು ಉಪಾಧಿಗಳ ದೆಸೆಯಿಂದ ಭಿನ್ನವಾಗಿ ತೋರುತ್ತಿರುವಂತೆ ನೀನೂ ನಾನಾ ರೂಪಗಳಿಂದ ಕಾಣಿಸುತ್ತಿರುವೆ. ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವ ಇಚ್ಛೆಯಿಂದ ಅನೇಕ ವಿಚಿತ್ರರೂಪಗಳನ್ನೂ ಧರಿಸುತ್ತಿರುವೆ. ಎಲೈ ಪ್ರಭುವೆ! ನಮ್ಮಲ್ಲಿ ಪ್ರಸನ್ನನಾಗು."

೪೮. ಆಗ ಸಿಂಹಪರಾಕ್ರಮಿಯಾದ ನರಸಿಂಹಸ್ವಾಮಿಯು ಪ್ರಸನ್ನನಾಗಿ ಅವರನ್ನು ಕುರಿತು ಮೃದುಮಧುರವಾಣಿಯಿಂದ "ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ" ಎಂಬುದಾಗಿ ಹೇಳಿದನು.

೪೯. ಋಷಿಗಳು ಹೇಳುತ್ತಾರೆ:—"ಹದಿನಾಲ್ಕು ಲೋಕಗಳ ಒಡೆಯನೆ! ನೀನು ನಮ್ಮಲ್ಲಿ ಪ್ರಸನ್ನನಾಗಿರುವೆಯಾದರೆ ದಯೆಯಿಟ್ಟು ಈ ವಿಶಾಲಾಕ್ಷೇತ್ರ ದಿಂದ ಎಂದಿಗೂ ನೀನು ಸಾನ್ನಿಧ್ಯವನ್ನು ಉಪಸಂಹರಿಸಬಾರದು. ಇದೇ ನಮಗೆ ಅತ್ಯಂತ ಅಪೇಕ್ಷಿತವಾದ ವರವು."

೫೦. ಹಾಗೆಯೇ ಆಗಲೆಂದು ಭಗವಂತನು ಅಭಯವನ್ನು ಕೊಡಲು ಸಕಲ ಮಹರ್ಷಿಗಳೂ ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ನರಸಿಂಹನೂ ಶಿಲಾರೂಪಿಯಾಗಿ ಗಂಗಾಜಲದಲ್ಲಿ ಕ್ರೀಡೆಯಲ್ಲಿಯೇ ಕಾಲವನ್ನು ಕಳೆಯು ತಿದ್ದನು.

ಉಪವಾಸತ್ರಯಂ ಕೃತ್ವಾ ಜಪಧ್ಯಾನಪರಾಯಣಃ ।
ನೃಸಿಂಹರೂಪಿಣಂ ಸಾಕ್ಷಾತ್ ಪಶ್ಯತ್ಯೇವ ನ ಸಂಶಯಃ ॥ ೫೧ ॥
ಯ ಏತಚ್ಛ್ರದ್ಧಯಾ ಮರ್ತ್ಯಃ ಶೃಣೋತಿ ಶ್ರಾವಯೇಚ್ಛುಚಿಃ ।
ಸರ್ವಪಾಪವಿನಿರ್ಮುಕ್ತೋ ವೈಕುಂಠೇ ವಸತಿಂ ಲಭೇತ್ ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯ ಸಂವಾದೇ "ವೈನತೇಯಶಿಲಾಮಾಹಾತ್ಮ್ಯವರ್ಣನಂ"ನಾಮ ಚತುರ್ಥೋಽಧ್ಯಾಯಃ

---

೫೧. ಯಾವ ಮಾನವನಾದರೂ ಮೂರು ದಿನಗಳ ಉಪವಾಸವನ್ನುಮಾಡಿ ಜಪ ಧ್ಯಾನಗಳಲ್ಲಿ ನಿರತನಾಗಿರಲು ನರಸಿಂಹನ ಸ್ವರೂಪವನ್ನು ಈ ಕಣ್ಣುಗಳಿಂದಲೇ ಕಾಣುವುದರಲ್ಲಿ ಸಂದೇಹವೇ ಇಲ್ಲವು.

೫೨. ಯಾವ ಮನುಷ್ಯನು ಈ ಆಖ್ಯಾನವನ್ನು ಶ್ರದ್ಧೆಯಿಂದ ಕೇಳುವನೊ, ಯಾವನು ಶುಚಿಯಾಗಿ ಇತರರಿಗೆ ಶ್ರವಣ ಮಾಡಿಸುವನೊ, ಅವನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ವೈಕುಂಠದಲ್ಲಿ ಸ್ಥಾನವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮ ಮಹಾತ್ಮ್ಯದ ಶಿವಕಾರ್ತಿಕೇಯಸಂವಾದದಲ್ಲಿ "ವೈನತೇಯಶಿಲಾಮಾಹಾತ್ಮ್ಯವರ್ಣನ" ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ಬದರೀನಾಥ ದರ್ಶನಮಾಹಾತ್ಮ್ಯವರ್ಣನಂ

ಸ್ಕಂದ ಉವಾಚ :—

**ಕಿಮರ್ಥಂ ಭಗವಾಂಸ್ತತ್ರ ವಸತಿ ಶ್ರದ್ಧಯಾ ಪುನಃ ।**
**ಕಿಂ ಪುಣ್ಯಂ ಕಿಂ ಫಲಂ ತಸ್ಯ ದರ್ಶನಸ್ಪರ್ಶನಾದಿಭಿಃ ॥ ೧ ॥**
**ನೈವೇದ್ಯಭಕ್ಷಣಸ್ಯಾಪಿ ಮಹಾಪೂಜಾಕೃತೇಸ್ತಥಾ ।**
**ಪ್ರದಕ್ಷಿಣಸ್ಯ ಚ ಫಲಂ ಬ್ರೂಹಿ ಮೇ ಕೃಪಯಾ ಪಿತಃ ॥ ೨ ॥**

ಶಿವ ಉವಾಚ :—

**ಪುರಾ ಕೃತಯುಗಸ್ಯಾದೌ ಸರ್ವಭೂತಹಿತಾಯ ಚ ।**
**ಮೂರ್ತಿಮಾನ್ಭಗವಾಂಸ್ತತ್ರ ತಪೋಯೋಗಸಮಾಶ್ರಿತಃ ॥ ೩ ॥**
**ತ್ರೇತಾಯುಗೇ ಹ್ಯೃಷಿಗಣೈಃ ಯೋಗಾಭ್ಯಾಸೈಕತತ್ಪರೈಃ ।**
**ದ್ವಾಪರೇ ಸಮನುಪ್ರಾಪ್ತೇ ಜ್ಞಾನನಿಷ್ಠೋ ಹಿ ದುರ್ಲಭಃ ।**
**ಋಷೀಣಾಂ ದೇವತಾನಾಂಚ ದುರ್ದರ್ಶೋ ಭಗವಾನಭೂತ್ ॥ ೪ ॥**

---

## ಕನ್ನಡದ ಅನುವಾದ

### ಬದರೀನಾಥ ದರ್ಶನ ಮಾಹಾತ್ಮ್ಯ ವರ್ಣನ

೧. ಸ್ಕಂದನು ಪ್ರಶ್ನೆಮಾಡುತ್ತಾನೆ :—“ಭಗವಂತನಾದ ಮಹಾವಿಷ್ಣುವು ಶ್ರದ್ಧೆಯಿಂದ ಆ ಕ್ಷೇತ್ರದಲ್ಲಿ ವಾಸಮಾಡುತ್ತಿರುವುದಕ್ಕೆ ಕಾರಣವೇನು? ಆ ಕ್ಷೇತ್ರದ ದರ್ಶನ ಮತ್ತು ಸೇವನಗಳಿಂದ ಯಾತ್ರಿಕರಿಗೆ ಯಾವ ಪುಣ್ಯವೂ ಸತ್ಫಲವೂ ಲಭಿಸುವುವು?

೨. ಅಲ್ಲಿ ಶ್ರೀಮನ್ನಾರಾಯಣನ ನೈವೇದ್ಯವನ್ನು ಭಕ್ಷಣಮಾಡುವುದರಿಂದಲೂ, ಮಹಾ ಪೂಜೆಗಳನ್ನು ಮಾಡಿಸುವುದರಿಂದಲೂ, ಪ್ರದಕ್ಷಿಣೆಗಳಿಂದಲೂ ಯಾವ ಫಲವುಂಟಾಗುವುದೆಂಬುದನ್ನು ತಂದೆಯಾದ ನೀನು ನನಗೆ ಕೃಪೆಯಿಂದ ವಿವರಿಸು.”

೩. ಶಿವನು ನಿರೂಪಿಸುತ್ತಾನೆ:—“ಮುನ್ನ ಕೃತಯುಗದ ಆದಿಯಲ್ಲಿ ಶ್ರೀಮನ್ನಾರಾಯಣನು ಸಮಸ್ತ ಪ್ರಾಣಿಗಳನ್ನೂ ಅನುಗ್ರಹಿಸುವುದಕ್ಕಾಗಿ ಬದರಿಕಾಶ್ರಮದಲ್ಲಿ ಮೂರ್ತೀಭವಿಸಿ ಅಲ್ಲಿಯೇ ತಪಸ್ಸಹಿತವಾದ ಯೋಗಾಭ್ಯಾಸವನ್ನು ಮಾಡತೊಡಗಿದನು.

೪. ಇಂತು ಯೋಗಾಭ್ಯಾಸನಿರತನಾದ ಸ್ವಾಮಿಯು ತ್ರೇತಾಯುಗದಲ್ಲಿ ಮಹರ್ಷಿಗಣಗಳಿಗೆ ಮಾತ್ರ ಗೋಚರನಾಗುತ್ತಿದ್ದನು. ದ್ವಾಪರಯುಗದಲ್ಲಿ

**ತತೋ ಹ್ಯೃಷಿಗಣಾಃ ದೇವಾ ಅಲಭ್ಯ ಭಗವದ್ಗತಿಂ ।**
**ಸ್ವಾಯಂಭುವಂ ಪದಂ ಯಾತಾ ವಿಸ್ಮಯಾಕುಲಚೇತಸಃ ॥ ೫ ॥**
**ತತ್ರ ಗತ್ವಾ ನಮಸ್ಕೃತ್ಯ ಊಚುರ್ಲೋಕೇಶ್ವರಂ ಮುದಾ ।**
**ಬೃಹಸ್ಪತಿಂ ಪುರಸ್ಕೃತ್ಯ ಋಷಯಶ್ಚ ತಪೋಧನಾಃ ॥ ೬ ॥**

**ದೇವಾ ಊಚುಃ:—**

**ನಮಸ್ತೇ ಸರ್ವಲೋಕಾನಾಮಾಶ್ರಯ ಶರಣಾರ್ತಿಹಾ ।**
**ವೃತ್ತಿದಃ ಕರುಣಾಪೂರ್ಣ ಪಿತಾಮಹ ಸುರೇಶ್ವರ ।**
**ನಿವೇದನೀಯಾ ವಿಪದಃ ಸಮುದ್ಧರ್ತಾ ಪಿತಾಽಸಿ ನಃ ॥ ೭ ॥**

**ಬ್ರಹ್ಮೋವಾಚ:—**

**ಕಿಮರ್ಥಮಾಗತಾ ಯೂಯಂ ವಿಸ್ಮಯಾಕುಲಮಾನಸಾಃ ।**
**ಮಿಲಿತಾ ಋಷಿಭಿಃ ಸಾಕಂ ಬ್ರೂತಾಽಽಗಮನಕಾರಣಂ ॥ ೮ ॥**

---

ಭಗವಂತನು ಕೇವಲ ಜ್ಞಾನಗೋಚರನೆನಿಸಿಕೊಂಡು ಜನರಿಗೆ ಅತ್ಯಂತ ದುರ್ಲಭನಾಗಿದ್ದನು. ಇಂತು ಸ್ವಾಮಿಯು ಮಹರ್ಷಿಗಳಿಗೂ ದೇವತಾಗಣಗಳಿಗೂ ಕಾಣಲಾರದವನಾದನು.

೫. ಆ ಸಮಯದಲ್ಲಿ ಋಷಿವರ್ಯರೂ ದೇವತೆಗಳೂ ಭಗವಂತನ ವ್ಯಾಪಾರಗಳನ್ನು ತಿಳಿಯಲಾರದೆ ವಿಸ್ಮಯಾವಿಷ್ಟಹೃದಯವುಳ್ಳವರಾಗಿ ಬ್ರಹ್ಮದೇವನ ನಿವಾಸವಾದ ಸತ್ಯಲೋಕವನ್ನು ಕುರಿತು ತೆರಳಿದರು.

೬. ತಪೋನಿರತರಾದ ಮಹರ್ಷಿಗಳು ಇಂತು ಬೃಹಸ್ಪತಿಯನ್ನು ಮುಂದು ಮಾಡಿಕೊಂಡು ಬ್ರಹ್ಮದೇವನಿಗೆ ನಮಸ್ಕರಿಸಿ ಸಂತೋಷದಿಂದ ಜಗತ್ಸೃಷ್ಟಿಗೆ ಕಾರಣನಾದ ಆತನಿಗೆ ಬಿನ್ನವಿಸತೊಡಗಿದರು.

೭. ದೇವತೆಗಳು ಹೇಳುತ್ತಾರೆ:—"ಎಲ್ಲ ಲೋಕಗಳಿಗೂ ಆಶ್ರಯನಾಗಿ ಶರಣಾಗತರಿಗೆ ಅಭಯವನ್ನು ಕೊಡುತ್ತಿರುವ ಓ ಬ್ರಹ್ಮದೇವನೇ! ನಿನಗೆ ನಮಸ್ಕಾರವು! ನೀನೇ ಕರುಣಾರಸಪೂರ್ಣಹೃದಯನಾಗಿ ಸಕಲ ಪ್ರಾಣಿಗಳಿಗೂ ಜೀವನೋಪಾಯಗಳನ್ನು ಕಲ್ಪಿಸಿಕೊಟ್ಟಿರುವೆ. ದೇವತೆಗಳಿಗೆ ಅಧೀಶ್ವರನಾದ ನೀನೇ ಪಿತಾಮಹನೆನಿಸಿರುವುದರಿಂದ ನಮ್ಮ ಕಷ್ಟಗಳೆಲ್ಲವನ್ನೂ ನಿನ್ನಲ್ಲಿಯೇ ವಿಜ್ಞಾಪಿಸಿಕೊಳ್ಳಲು ಬಂದಿರುವೆವು. ತಂದೆಯಾದ ನೀನೇ ನಮ್ಮನ್ನು ಉದ್ಧರಿಸಬೇಕು!"

೮. ಬ್ರಹ್ಮನು ಕೇಳುತ್ತಾನೆ:—"ವಿಸ್ಮಯದಿಂದ ವ್ಯಾಕುಲಿತವಾದ ಮನಸ್ಸಿನಿಂದ ನೀವೆಲ್ಲರೂ ಇಲ್ಲಿಗೇಕೆ ಬಂದಿರುವಿರಿ? ಮಹರ್ಷಿಗಳನ್ನು ಕೂಡಿಕೊಂಡು ನೀವಿಲ್ಲಿಗೆ ಬಂದುದಕ್ಕೆ ಕಾರಣವನ್ನು ನನಗೆ ತಿಳಿಸಿರಿ."

ದೇವಾ ಊಚುಃ:—

ದ್ವಾಪರೇ ಸಮನುಪ್ರಾಪ್ತೇ ವಿಶಾಲಾಯಾಂ ವಿಶಾಲಧೀಃ ।
ಭಗವಾನ್ದೃಶ್ಯತೇ ನೈವ ತತ್ರ ಕಿಂ ಕಾರಣಂ ವದ ॥ ೯ ॥
ವಿಶಾಲಾ ಕಿಂ ಪರಿತ್ಯಕ್ತಾ ತತೋ ವಾ ಕ್ವ ಗತಃ ಸ್ವಯಂ ।
ಅಪರಾಧಾದುತಾಽಸ್ಮಾಕಂ ಕಥಂ ಚಾಸೌ ಪ್ರಸೀದತಿ ॥ ೧೦ ॥

ಬ್ರಹ್ಮೋವಾಚ:—

ನಾಹಮೇತದ್ವಿಜಾನಾಮಿ ಶ್ರುತಂ ಚಾದ್ಯಮುಖಾದ್ಧಿ ವಃ ।
ಕೋ ಹೇತುರ್ದೃಕ್ಪಥಾತೀತೋ ಭಗವಾನ್ಭವತಾಂ ಸುರಾಃ ।
ಆಗಚ್ಛತ ವಯಂ ಯಾಮಸ್ತೀರಂ ಕ್ಷೀರಪಯೋನಿಧೇಃ ॥ ೧೧ ॥
ಇತ್ಯುಕ್ತಾಸ್ತೇ ಪುರೋಧಾಯ ಬ್ರಹ್ಮಾಣಂ ತ್ರಿದಿವೌಕಸಃ ।
ಯಯುಃ ಕ್ಷೀರಾಂಬುಧೇಸ್ತೀರಂ ಋಷಯಶ್ಚ ತಪೋಧನಾಃ ॥ ೧೨ ॥
ತತ್ರ ಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಂ ।
ಗೀರ್ಭಿಶ್ಚಿತ್ರಪದಾರ್ಥಾಭಿಸ್ತುಷ್ಟುವುರ್ಜಗದೀಶ್ವರಂ ॥ ೧೩ ॥

---

೯. ದೇವತೆಗಳು ಹೇಳುತ್ತಾರೆ:—"ದ್ವಾಪರಯುಗವು ಪ್ರಾಪ್ತವಾಗಲು ಉದಾರಚರಿತನಾದ ಭಗವಂತನು ವಿಶಾಲಾಕ್ಷೇತ್ರದಲ್ಲಿ ನಮಗೆ ಗೋಚರನಾಗುವುದಿಲ್ಲ. ಅದಕ್ಕೆ ಕಾರಣವನ್ನು ತಿಳಿಸು.

೧೦. ಭಗವಂತನು ವಿಶಾಲೆಯನ್ನು ಏಕೆ ತ್ಯಜಿಸಿದನು? ಅಲ್ಲಿಂದ ಎಲ್ಲಿಗೆ ಹೊರಟುಹೋಗಿರುವನು? ನಮ್ಮ ಅಪರಾಧದಿಂದೇನಾದರೂ ಹೀಗೆ ನಡೆಯಿತೆ? ಆತನು ನಮ್ಮಲ್ಲಿ ಪ್ರಸನ್ನನಾಗುವುದು ಹೇಗೆ?"

೧೧. ಬ್ರಹ್ಮನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ಶ್ರೀಮನ್ನಾರಾಯಣನು ನೇತ್ರಪಥಕ್ಕೆ ಅತೀತನಾಗುವುದಕ್ಕೆ ಕಾರಣವೇನೆಂಬುದನ್ನು ನಾನು ಅರಿಯೆನು. ಈ ವಿಷಯವನ್ನು ಈಗತಾನೆ ನಿಮ್ಮ ಮಾತುಗಳಿಂದ ತಿಳಿದೆನು. ಆದುದರಿಂದ ನೀವೆಲ್ಲರೂ ನನ್ನೊಡನೆ ಬನ್ನಿರಿ. ನಾವೆಲ್ಲರೂ ಕ್ಷೀರಸಮುದ್ರದ ದಡವನ್ನು ಕುರಿತು ಪ್ರಯಾಣವನ್ನು ಮಾಡೋಣ."

೧೨. ಇಂತು ಹೇಳಲ್ಪಟ್ಟ ದೇವತಾಗಣಗಳೂ ತಪೋನಿಷ್ಠರಾದ ಮಹರ್ಷಿಗಳೂ ಬ್ರಹ್ಮದೇವನನ್ನು ಮುಂದುಮಾಡಿಕೊಂಡು ಕ್ಷೀರಸಮುದ್ರದ ತೀರವನ್ನು ಬಂದು ಸೇರಿದರು.

೧೩. ಅಲ್ಲಿಗೆ ಹೋಗಿ ಲೋಕನಾಥನೂ ದೇವಾಧಿದೇವನೂ ಆದ ಪರಮಾತ್ಮನನ್ನು ಅನೇಕಾರ್ಥಗಳಿಂದ ಕೂಡಿ ವಿಚಿತ್ರಗಳಾದ ಮಾತುಗಳಿಂದ ಸ್ತೋತ್ರಮಾಡತೊಡಗಿದರು.

ಬ್ರಹ್ಮೋವಾಚ :—

ನಮಸ್ತೇ ಪುರುಷಾಧ್ಯಕ್ಷ ಸರ್ವಭೂತಗುಹಾಶಯ ।
ವಾಸುದೇವಾಽಖಿಲಾಧಾರ ಜಗದ್ಧೇತೋ ಜಗನ್ಮಯ ॥ ೧೪ ॥
ತ್ವಮೇವ ಸರ್ವಭೂತಾನಾಂ ಹೇತುಃ ಪತಿರುತಾಶ್ರಯಃ ।
ಮಾಯಾಶಕ್ತಿಮುಪಾಶ್ರಿತ್ಯ ವಿಚರಸ್ಯೇಕಸುಂದರ ॥ ೧೫ ॥
ಏಕೋ ನಾನಾಯತೇ ಯೋಽಸೌ ನಟವಜ್ಜಾಯತೇಽವ್ಯಯಃ ।
ವ್ಯಾಪಕೋಽಪಿ ಕೃಪಾಲುತ್ವಾದ್ಭಕ್ತಹೃತ್ಪದ್ಮಷಟ್ಪದಃ ।
ದಧಾತಿ ವಿವಿಧಾನಂದಂ ತಂ ವಂದೇ ಜಗತಾಂ ಪತಿಂ ॥ ೧೬ ॥

ದೇವಾ ಊಚುಃ :—

ವಿಪದ್ವನಾಂತೇ ಹುತಭುಗ್ಘನಾನಾಂ
ಗೃಹೀತಸತ್ತ್ವಸ್ತ್ರಿದಶಾವನೀಶಃ ।
ಚರಾಚರಾತ್ಮಾ ಭಗವಾನನಂತಃ
ಕೃಪಾಕಟಾಕ್ಷೈರವಲೋಕತಾಂ ನಃ ॥ ೧೭ ॥

---

೧೪. ಬ್ರಹ್ಮನು ಹೇಳುತ್ತಾನೆ :—"ಪುರುಷಶ್ರೇಷ್ಠನೂ, ಸರ್ವಪ್ರಾಣಿಗಳ ಹೃದಯಾಕಾಶದಲ್ಲಿ ನೆಲಸಿರುವವನೂ, ಸಮಸ್ತವನ್ನೂ ವ್ಯಾಪಿಸಿರುವವನೂ, ಸಕಲ ಬ್ರಹ್ಮಾಂಡಕ್ಕೂ ಆಧಾರಭೂತನಾಗಿರುವವನೂ, ಪ್ರಪಂಚದ ವಿನ್ಯಾಸಕ್ಕೆ ಕಾರಣಭೂತನಾದವನೂ, ಜಗತ್ಸ್ವರೂಪನೂ ಆದ ನಿನಗೆ ನಮಸ್ಕರಿಸುವೆವು!

೧೫. ನೀನೇ ಸಮಸ್ತ ಪ್ರಾಣಿಗಳಿಗೂ ಕಾರಣನೂ, ಸ್ವಾಮಿಯೂ, ಆಶ್ರಯನೂ ಆಗಿರುವೆ! ಸರ್ವಾಂಗ ಸುಂದರನಾದ ನೀನೊಬ್ಬನೇ ನಿನ್ನ ಮಾಯಾಶಕ್ತಿಯ ಸಹಾಯದಿಂದ ಬಹುರೂಪನಾಗಿ ವಿಹರಿಸುತ್ತಿರುವೆ!

೧೬. ಯಾವನು ಏಕಪ್ರಕಾರನೂ, ನಾಶರಹಿತನೂ ಆಗಿದ್ದರೂ, ಅನೇಕ ರೂಪಗಳನ್ನು ಸ್ವೀಕರಿಸುವ ನಟನಂತೆ ನಾನಾ ರೂಪಗಳಿಂದ ಕಾಣುವನೊ, ಸರ್ವವ್ಯಾಪಕನಾಗಿದ್ದರೂ ಕೃಪಾಸಮುದ್ರನಾಗಿ ಭಕ್ತರ ಹೃದಯಕಮಲಗಳಿಗೆ ದುಂಬಿಯಂತೆರಗುವನೊ, ಅವರಿಗೆ ಅನೇಕ ವಿಧಗಳಾದ ಆನಂದಗಳನ್ನುಂಟು ಮಾಡುವನೊ, ಅಂತಹ ಹದಿನಾಲ್ಕು ಲೋಕಗಳಿಗೂ ಸ್ವತಂತ್ರಪ್ರಭುವಾದ ಆ ದೇವದೇವನಿಗೆ ನಮಸ್ಕರಿಸುವೆನು."

೧೭. ದೇವತೆಗಳು ಹೇಳುತ್ತಾರೆ:— "ಭಕ್ತರ ವಿಪತ್ತುಗಳೆಂಬ ವನಕ್ಕೆ ಕಾಳ್ಗಿಚ್ಚಿನಂತಿರುವವನೂ, ಸತ್ತ್ವಗುಣವನ್ನು ಸ್ವೀಕರಿಸಿದವನೂ, ದೇವತೆಗಳಿಗೂ ಚತುರ್ದಶಲೋಕಗಳಿಗೂ ಅಧೀಶ್ವರನೂ, ಸಮಸ್ತ ಸ್ಥಾವರಜಂಗಮ ಪದಾರ್ಥಗಳ ಅಂತರಾತ್ಮನೂ, ಆದ್ಯಂತರಹಿತನೂ ಆದ ಭಗವಂತನು ನಮ್ಮನ್ನು ತನ್ನ ಕೃಪಾಪೂರಿತಗಳಾದ ಕಡೆಗಣ್ಣೋಟಗಳಿಂದ ನೋಡುವವನಾಗಲಿ.

ಸಕೃದ್ಯನ್ನಾಮಪೀಯೂಷರಸಪಾನಪರಃ ಪುಮಾನ್ ।
ನಿಃಶ್ರೇಯಸಂ ತೃಣಮಿವ ಮನ್ಯತೇ ತಂ ಹರಿಂ ಭಜೇ ॥ ೧೮ ॥
ಅವಿದ್ಯಾಪ್ರತಿಬಿಂಬತ್ವಾಜ್ಜೀವಭಾವಮುಪಾಗತಃ ।
ವಿಜ್ಞಾತ್ವಾದುಪಶಾಂತಾತ್ಮಾ ಸ ಪುನಾತು ಜಗತ್ತ್ರಯಂ ॥ ೧೯ ॥

ಗಂಧರ್ವಾ ಊಚುಃ:—

ಪಿಬಂತಿ ಯೇ ಹರೇಃ ಪದಾಂಬುಸಂಗಲೇಶತಃ ಪಯಃ
ಪಯೋ ನ ತೇ ಪುನಃ ಪುನಃ ಪಿಬಂತಿ ಮಾತುರಂಕತಃ ।
ಪ್ರಸಂಗತೋ ಯದಾಭಿಧಾಸುಧಾಂ ನಿಪೀಯ ಮಾನವಾ
ಮೃತಾಽಮೃತಂ ವ್ರಜಂತ್ಯಥೋ ನಜಾತು ಯಾಂ ತ್ಯಶಂಕಿತಾಃ ॥
ತತಃ ಸ್ತುತೋ ಹರಿಃ ಸಾಕ್ಷಾತ್ಸಿಂಧೋರುತ್ಥಾಯ ಚಾಽಬ್ರವೀತ್ ।
ಅಲಕ್ಷಿತೋಽಪರೈರ್ಬ್ರಹ್ಮಾ ಪರಂ ತದ್ವೇದ ನಾಽಪರಃ ॥ ೨೧ ॥

---

೧೮. ಯಾವನ ನಾಮವೆಂಬ ಅಮೃತದ ರಸವನ್ನು ಸೇವಿಸುವುದರಲ್ಲಿ ನಿರತನಾದ ಮನುಷ್ಯನು ಸ್ವರ್ಗಲೋಕವನ್ನೂ ಸಹ ಹುಲ್ಲಿಗೆ ಸಮಾನವಾಗಿ ಬಗೆಯುವನೊ, ಅಂತಹ ಮಹಿಮೆಯುಳ್ಳ ಶ್ರೀಮನ್ನಾರಾಯಣನನ್ನು ಭಜಿಸುವೆವು.

೧೯. ಅವಿದ್ಯೆಯಲ್ಲಿ ಪ್ರತಿಬಿಂಬಿಸಿದ ಕಾರಣದಿಂದ ಜೀವಭಾವವನ್ನು ಹೊಂದಿ ಆತ್ಮಜ್ಞಾನದಿಂದ ಪ್ರಶಾಂತವಾದ ಮನಸ್ಸುಳ್ಳ ಶ್ರೀಹರಿಯು ಮೂರು ಲೋಕಗಳನ್ನೂ ಪವಿತ್ರಗೊಳಿಸಲಿ.''

೨೦. ಗಂಧರ್ವರು ಸ್ತುತಿಸುತ್ತಾರೆ:—'' ಯಾವ ಮಾನವರು ಶ್ರೀಹರಿಯ ಪಾದಕಮಲಗಳಿಂದುದ್ಭವಿಸಿದ ಗಂಗೆಯ ಉದಕವನ್ನು ಸ್ವಲ್ಪವಾದರೂ ಪಾನ ಮಾಡುವರೊ, ಅವರು ಮತ್ತೆ ಮತ್ತೆ ತಾಯಿಯ ಮಡಿಲಲ್ಲಿ ಬಿದ್ದು ಸ್ತನ್ಯ ಪಾನವನ್ನು ಮಾಡುವುದಿಲ್ಲ. ಯಾವ ಮನುಷ್ಯರು ಪ್ರಸಂಗವಶದಿಂದಾದರೂ ಶ್ರೀಹರಿಯ ನಾಮವೆಂಬ ಅಮೃತವನ್ನು ಪಾನಮಾಡುವರೊ, ಅವರು ನಶ್ವರವಾದ ಈ ಮರ್ತ್ಯಲೋಕದಿಂದ ಜರಾಮರಣರಹಿತವಾದ ಸ್ವರ್ಗವನ್ನು ಹೊಂದುವರು. ಎಂದಿಗೂ ಅಧೋಗತಿಯನ್ನು ಹೊಂದಲಾರರೆಂಬುದರಲ್ಲಿ ಸಂಶಯವಿಲ್ಲವು.''

೨೧. ಇಂತು ದೇವತೆಗಳು ಮಾಡಿದ ಸ್ತೋತ್ರವನ್ನು ಕೇಳಿದ ಶ್ರೀಹರಿಯು ಕ್ಷೀರಸಮುದ್ರದ ಮಧ್ಯದಿಂದ ಮೇಲಕ್ಕೆ ಬಂದು ಅವರಿಗೆ ಸಮಾಧಾನವನ್ನು ಹೇಳಿದನು. ಆದರೆ ಆತನು ಬ್ರಹ್ಮದೇವನೊಬ್ಬನಿಗೆ ಮಾತ್ರ ದೃಗ್ಗೋಚರನಾದನೇ ಹೊರತು ಆತನನ್ನು ಇತರ ದೇವತೆಗಳು ಕಾಣಲಾರದಾದರು.

ಬ್ರಹ್ಮಾ ತದುಪಧಾರ್ಯಾಽಥ ನತ್ವಾ ತಸ್ಮೈ ದಿವೌಕಸಃ ।
ಬೋಧಯಾಮಾಸ ಸಕಲಂ ಸುರಾಃ ಶೃಣುತ ಸಾದರಂ ॥ ೨೨ ॥
ಅಂತರ್ಹಿತೋಽಸೌ ಭಗವಾನ್ದೃಷ್ಟ್ವಾ ಲೋಕಾನ್ಕುಮೇಧಸಃ ।
ಶೃತ್ವೇತ್ಥಂ ವಚನಂ ತಸ್ಯ ಸರ್ವೇ ದೇವಾ ದಿವಂ ಯಯುಃ ॥ ೨೩ ॥
ತತೋಽಹಂ ಯತಿರೂಪೇಣ ತೀರ್ಥಾನ್ನಾರದಸಂಜ್ಞಕಾತ್ ।
ಉದ್ಧೃತ್ಯ ಸ್ಥಾಪಯಿಷ್ಯಾಮಿ ಹರಿಂ ಲೋಕಹಿತೇಚ್ಛಯಾ ॥ ೨೪ ॥
ಯಸ್ಯ ದರ್ಶನಮಾತ್ರೇಣ ಪಾತಕಾನಿ ಮಹಾಂತ್ಯಪಿ ।
ವಿಲೀಯಂತೇ ಕ್ಷಣಾದೇವ ಸಿಂಹಂ ದೃಷ್ಟ್ವಾ ಮೃಗಾ ಇವ ॥ ೨೫ ॥
ಧರ್ಮಾಽಧರ್ಮಾನ್ವಿಜಿತ್ಯಾಽಥ ಬದರೀಶಂ ವಿಭುಂ ಹರಿಂ ।
ದೃಷ್ಟ್ವಾ ಮುಕ್ತಿಮುಪಾಯಾಂತಿ ವಿನಾಽಽಯಾಸಂ ಷಡಾನನ ॥ ೨೬ ॥
ತ್ಯಕ್ತಪ್ರಾಣಾನಿ ತೀರ್ಥಾನಿ ಹರಿಣಾ ಕಲಿಕಾಲತಃ ।
ಬದರೀಂ ಸಮನುಜ್ಞಾಪ್ಯ ಸಾಕ್ಷಾದೇವಾಽವತಿಷ್ಠತೇ ॥ ೨೭ ॥

---

೨೨. ಬ್ರಹ್ಮದೇವನು ಶ್ರೀಮಹಾವಿಷ್ಣುವಿನ ಮಾತುಗಳನ್ನು ಶ್ರದ್ಧೆಯಿಂದ ಕೇಳಿ ಆತನಿಗೆ ನಮಸ್ಕಾರವನ್ನು ಮಾಡಿ ಸಕಲವೃತ್ತಾಂತವನ್ನೂ ದೇವತೆಗಳಿಗೆ ತಿಳಿಯಹೇಳಿದನು. "ಎಲೈ ಸುರೋತ್ತಮರಿರಾ! ನನ್ನ ಮಾತುಗಳನ್ನು ಶ್ರದ್ಧೆಯಿಂದ ಲಾಲಿಸಿರಿ.

೨೩. ಲೋಕದ ಜನರೆಲ್ಲರೂ ದುರ್ಬುದ್ಧಿಯುಳ್ಳವರಾಗಿಯೂ ನಾಸ್ತಿಕರಾಗಿಯೂ ಇರುವುದನ್ನು ಕಂಡು ಭಗವಂತನು ಅಂತರ್ಧಾನವನ್ನು ಹೊಂದಿರುವನು." ಮಹಾವಿಷ್ಣುವಿನ ಈ ಸಂದೇಶವನ್ನು ಕೇಳಿ ದೇವತೆಗಳೆಲ್ಲರೂ ಸಂತುಷ್ಟರಾಗಿ ಸ್ವರ್ಗವನ್ನು ಕುರಿತು ತೆರಳಿದರು.

೨೪. ಎಲೈ ಷಣ್ಮುಖನೆ! ಮುಂದೆ ನಾನು ಯತಿರೂಪದಿಂದ ಭೂಮಿಯಲ್ಲಿ ಹುಟ್ಟಿ ನಾರದ ತೀರ್ಥದೊಳಗಿನಿಂದ ಶ್ರೀ ನಾರಾಯಣನ ಮೂರ್ತಿಯನ್ನು ಮೇಲಕ್ಕೆ ತಂದು ಲೋಕಕಲ್ಯಾಣವನ್ನು ಮಾಡಲು ಬದರಿಕಾಶ್ರಮದಲ್ಲಿ ಪ್ರತಿಷ್ಠೆ ಮಾಡುವೆನು.

೨೫. ಆ ಮೂರ್ತಿಯನ್ನು ದರ್ಶನಮಾಡಿದ ತತ್‌ಕ್ಷಣದಲ್ಲಿಯೇ ಎಂತಹ ಮಹಾಪಾತಕಗಳಾದರೂ ಸಿಂಹವನ್ನು ಕಂಡ ಕ್ಷುದ್ರಮೃಗಗಳಂತೆ ಮನುಷ್ಯರನ್ನು ಬಿಟ್ಟು ಓಡಿಹೋಗುವುವು.

೨೬. ಎಲೈ ಷಡಾನನನೆ! ಕರ್ತವ್ಯಾಕರ್ತವ್ಯಗಳನ್ನೆಲ್ಲ ಜಯಿಸಿ ಯಾವ ಮಾನವರು ಬದರೀನಾಥನೂ ಸರ್ವವ್ಯಾಪಕನೂ ಆದ ಶ್ರೀಹರಿಯನ್ನು ನೋಡುವರೊ, ಅವರು ಕಾಯಿಕ ಮಾನಸಿಕಗಳಾದ ಆಯಾಸಗಳಿಲ್ಲದೆಯೇ ಮುಕ್ತಿಯನ್ನು ಪಡೆಯುವರು.

೨೭. ಕಲಿಯುಗದ ಮಹಿಮೆಯಿಂದ ಸಕಲ ತೀರ್ಥಗಳೂ ಪರಮಾತ್ಮನ

ಕಲಿಕಾಲಮನುಪ್ರಾಪ್ಯ ಮುಕ್ತಿರ್ಯೇಷಾಮಭೀಪ್ಸಿತಾ ।
ದ್ರಷ್ಟವ್ಯಾ ಬದರೀ ತೈಸ್ತು ಹಿತ್ವಾ ತೀರ್ಥಾನ್ಯಶೇಷತಃ ॥ ೨೮ ॥
ವಿನಾ ಜ್ಞಾನೇನ ಯೋಗೇನ ತೀರ್ಥಾಟನಪರಿಶ್ರಮೈಃ ।
ಏಕೇನ ಜನ್ಮನಾ ಜಂತುಃ ಕೈವಲ್ಯಂ ಪದಮಶ್ನುತೇ ॥ ೨೯ ॥
ಜನ್ಮಾಂತರಸಹಸ್ರೈಸ್ತು ಯೇನ ಚಾಽಽರಾಧಿತೋ ಹರಿಃ ।
ಸಗಚ್ಛೇದ್ಬದರೀಂ ದ್ರಷ್ಟುಂ ಯತ್ರ ಜಂತುರ್ನ ಶೋಚತಿ ॥ ೩೦ ॥
ಬದರೀ ಬದರೀತ್ಯುಕ್ತ್ವಾ ಪ್ರಸಂಗಾನ್ಮನುಜೋತ್ತಮಃ ।
ಸಂಸಾರತಿಮಿರಾಬಾಧೇ ದೀಪಮುಜ್ಜ್ವಲಯತ್ಯಸೌ ॥ ೩೧ ॥
ಯಥಾ ದೀಪಾಽವಲೋಕೇನ ತಮೋಬಾಧಾ ನ ಜಾಯತೇ ।
ತಥೈವ ಬದರೀಂ ದೃಷ್ಟ್ವಾ ಪುಂಸೋ ಮೃತ್ಯುಭಯಂ ಕುತಃ ॥ ೩೨ ॥

---

ಸಾನ್ನಿಧ್ಯದಿಂದ ರಹಿತಗಳಾಗಿ ತೋರುವುವು. ಆದರೆ ಬದರಿಕಾಶ್ರಮದಲ್ಲಿ ಆತನು ಸಕಲರಿಗೂ ದೃಗ್ಗೋಚರನಾಗಿಯೇ ನೆಲಸಿರುವನು.

೨೮. ಕಲಿಕಾಲದಲ್ಲಿ ಜನ್ಮವನ್ನು ಪಡೆದು ಯಾರು ಮೋಕ್ಷವನ್ನು ತೀವ್ರವಾಗಿ ಅಪೇಕ್ಷಿಸುವರೊ, ಅವರು ಸಕಲ ತೀರ್ಥಕ್ಷೇತ್ರಗಳನ್ನೂ ತ್ಯಜಿಸಿ ಬದರೀಕ್ಷೇತ್ರವನ್ನು ಮಾತ್ರ ದರ್ಶನಮಾಡಿದರೆ ಸಾಕು.

೨೯. ಜ್ಞಾನವಿಲ್ಲದೆಯೇ, ಯೋಗಾಭ್ಯಾಸದ ಕ್ಲೇಶವಿಲ್ಲದೆಯೇ, ತೀರ್ಥ ಕ್ಷೇತ್ರಗಳಿಗೆ ತಿರುಗುವುದರ ಪರಿಶ್ರಮವಿಲ್ಲದೆಯೇ, ಸಕಲ ಜೀವರೂ ಒಂದು ಜನ್ಮದಲ್ಲಿಯೇ ಬದರೀಕ್ಷೇತ್ರದ ದರ್ಶನದಿಂದ ಶಾಶ್ವತವಾದ ಕೈವಲ್ಯಪದವಿಯನ್ನು ಹೊಂದುವರು.

೩೦. ಸಾವಿರಾರು ಜನ್ಮಗಳಲ್ಲಿ ಶ್ರೀಮನ್ನಾರಾಯಣನನ್ನು ಭಜಿಸಿ ಪೂಜಿಸಿದ ಪುಣ್ಯದ ಬಲದಿಂದಲೇ ಮನುಷ್ಯನಿಗೆ ಬದರಿಕಾಶ್ರಮದ ದರ್ಶನವು ಲಭಿಸುವುದು. ಅಲ್ಲಿಗೆ ಹೋಗಿ ನಾರಾಯಣನನ್ನು ನೋಡಿದ ಪ್ರಾಣಿಗೆ ಶೋಕಮೋಹಾದಿ ದುಃಖಗಳುಂಟಾಗಲಾರವು.

೩೧. ಯಾವ ಮಾನವನು ಪ್ರಾಸಂಗಿಕವಾಗಿಯಾದರೂ ಬದರೀಕ್ಷೇತ್ರದ ನಾಮವನ್ನು ಉಚ್ಚರಿಸುವನೊ, ಆ ಉತ್ತಮನು ಸಂಸಾರವೆಂಬ ಗಾಢಾಂಧಕಾರವನ್ನು ದೂರಮಾಡುವ ಶಕ್ತಿಯುಳ್ಳ ಉಜ್ಜ್ವಲದೀಪವನ್ನು ಹೊತ್ತಿಸಿ ಕೃತಾರ್ಥನಾದವನೆಂದು ತಿಳಿಯಬೇಕು.

೩೨. ದೀಪದ ಬೆಳಕಿನಲ್ಲಿ ಸಂಚರಿಸುತ್ತಿರುವವನಿಗೆ ಕಗ್ಗತ್ತಲೆಯ ಬಾಧೆಯು ಎಂದಿಗೂ ಉಂಟಾಗಲಾರದು. ಹಾಗೆಯೇ ಬದರೀಕ್ಷೇತ್ರವನ್ನು ನೋಡಿದ ಮನುಷ್ಯನಿಗೆ ಮರಣದ ಭಯವು ಹೇಗೆ ಸಂಭವಿಸುವುದು ?

ದರ್ಶನಾದ್ಯಸ್ಯ ಪಾಪಾನಿ ರುದಂತ್ಯವ್ಯಾಹತಾನಿ ಚ ।
ಮುಕ್ತಿಮಾರ್ಗಮುಪಾಲಕ್ಷ್ಯ ತಂ ವಂದೇ ಬದರೀಪತಿಂ ॥ ೩೩ ॥
ಸಶೈಲಕಾನನಾ ಭೂಮಿಃ ದಶಧಾ ದಕ್ಷಿಣೀಕೃತಾ ।
ಹರೇಃ ಪ್ರದಕ್ಷಿಣಂ ತದ್ವದ್ಬದರ್ಯಾಂ ತತ್ಪದೇ ಪದೇ ॥ ೩೪ ॥
ಅಶ್ವಮೇಧೇ ತು ಯತ್ಪುಣ್ಯಂ ವಾಜಪೇಯಶತೇನ ಚ ।
ಹರೇಃ ಪ್ರದಕ್ಷಿಣಾತ್ತದ್ವದ್ಬದರ್ಯಾಂ ತತ್ಪದೇ ಪದೇ ॥ ೩೫ ॥
ಚತುರ್ಮಾಸೇ ತು ಯತ್ಪುಣ್ಯಂ ಬ್ರಹ್ಮಾಂಡದಾನತಸ್ತಥಾ ।
ಹರೇಃ ಪ್ರದಕ್ಷಿಣಂ ತದ್ವದ್ಬದರ್ಯಾಂ ತತ್ಪದೇ ಪದೇ ॥ ೩೬ ॥
ಅತಿಕೃಚ್ಛ್ರೈರ್ಮಹಾಕೃಚ್ಛ್ರೈಶ್ಚಾಂದಸ್ಯೈಃ ಸುಕೃತಂ ಭವೇತ್ ।
ಹರೇಃ ಪ್ರದಕ್ಷಿಣಂ ತದ್ವದ್ಬದರ್ಯಾಂ ತತ್ಪದೇ ಪದೇ ॥ ೩೭ ॥

---

೩೩. ಯಾವನ ದರ್ಶನಮಾತ್ರದಿಂದ ಅಸಂಖ್ಯಾತಗಳಾದ ಪಾಪಗಳೂ ಸಹ ಕ್ಷಣಮಾತ್ರದಲ್ಲಿ ನಾಶವನ್ನು ಹೊಂದುವುವೊ, ಅಂತಹ ಮಹಾ ಮಹಿಮೆಯುಳ್ಳ ಬದರೀನಾಥನನ್ನು ಮೋಕ್ಷಮಾರ್ಗದ ಅಭಿಲಾಷೆಯುಳ್ಳವನಾಗಿ ನಮಸ್ಕರಿಸುವೆನು.

೩೪. ಪರ್ವತಗಳು ಮತ್ತು ಅರಣ್ಯಗಳಿಂದ ಕೂಡಿದ ಸಮಸ್ತ ಭೂಮಂಡಲವನ್ನೂ ಹತ್ತು ಸಲ ಪ್ರದಕ್ಷಿಣೆ ಮಾಡಿದುದರಿಂದ ಯಾವ ಪುಣ್ಯವು ಲಭಿಸುವುದೊ, ಆ ಪುಣ್ಯವೇ ಬದರೀಕ್ಷೇತ್ರದಲ್ಲಿ ನೆಲಸಿರುವ ಶ್ರೀನಾರಾಯಣನ ಪ್ರದಕ್ಷಿಣೆಯ ಪ್ರತಿಯೊಂದು ಹೆಜ್ಜೆಗೂ ಲಭಿಸುವುದು.

೩೫. ಅಶ್ವಮೇಧ ಯಜ್ಞದಿಂದ ಯಾವ ಪುಣ್ಯವುಂಟೊ, ಒಂದು ನೂರು ವಾಜಪೇಯ ಯಾಗಗಳಿಂದ ಯಾವ ಫಲವು ಸಂಭವಿಸುವುದೊ, ಬದರಿಕಾ ಶ್ರಮದಲ್ಲಿ ಶ್ರೀಹರಿಯ ಪ್ರದಕ್ಷಿಣೆಯ ಹೆಜ್ಜೆಹೆಜ್ಜೆಗೂ ಅವುಗಳು ಲಭಿಸುವುವು.

೩೬. ಚಾತುರ್ಮಾಸ್ಯ ವ್ರತವನ್ನು ನಿಯಮದಿಂದ ಮಾಡಿದುದರಿಂದ ಯಾವ ಫಲವುಂಟೊ, ಸಕಲ ಬ್ರಹ್ಮಾಂಡವನ್ನು ದಾನಮಾಡಿದುದರಿಂದ ಯಾವ ಫಲವೊ ಅದನ್ನೇ ಮಾನವನು ಬದರೀಕ್ಷೇತ್ರ ನಿವಾಸಿಯಾದ ಶ್ರೀನಾರಾಯಣನ ಪ್ರದಕ್ಷಿಣೆಯ ಪ್ರತಿಯೊಂದು ಹೆಜ್ಜೆಗೂ ಪಡೆಯುವನು.

೩೭. ವೇದಗಳಲ್ಲಿ ಹೇಳಲ್ಪಟ್ಟಿರುವ ಅತಿಕೃಚ್ಛ್ರ, ಮಹಾಕೃಚ್ಛ್ರಗಳೆಂಬ ಪ್ರಾಯಶ್ಚಿತ್ತಕರ್ಮಗಳಿಂದ ಯಾವ ಸುಕೃತವು ಲಭಿಸುವುದೊ, ಅದನ್ನೇ ಬದರೀಕ್ಷೇತ್ರದಲ್ಲಿರುವ ಶ್ರೀಹರಿಯ ಪ್ರದಕ್ಷಿಣೆಯಲ್ಲಿ ಪ್ರತಿಯೊಂದು ಹೆಜ್ಜೆಗೂ ಪಡೆಯಬಹುದು.

ಬದರ್ಯಾಂ ವಿಷ್ಣುನೈವೇದ್ಯಂ ಸಿಕ್ಥಮಾತ್ರಂ ಷಡಾನನ ।
ಅಶನಾಚ್ಛೋಧಯೇತ್ಪಾಪಂ ತುಷಾಽಗ್ನಿರಿವ ಕಾಂಚನಂ ॥ ೩೮ ॥
ಯದನ್ನಂ ಭಗವಾನತ್ತಿ ಋಷಿಭಿರ್ನಾರದಾದಿಭಿಃ ।
ತತ್ಸತ್ತ್ವಶುದ್ಧಯೇ ಸರ್ವೈಃ ಭೋಕ್ತವ್ಯಮವಿಚಾರಿತಂ ॥ ೩೯ ॥
ಅಮರಾ ಅಪಿ ಯನ್ನೂನಂ ವ್ಯಾಜೇನೇಚ್ಛಂತಿ ಸರ್ವತಃ ।
ಭೋಕ್ತುಂ ಬದರಿಕಾಂ ವಿಷ್ಣೋರ್ನೈವೇದ್ಯಂ ಯಾಂತಿ ತತ್ಪರಾಃ ॥ ೪೦ ॥
ಭೋಜನಾನಂತರಂ ವಿಷ್ಣೋಃ ಪ್ರಗಚ್ಛಂತಿ ಸ್ವಮಾಲಯಂ ।
ಪ್ರಹ್ಲಾದಪ್ರಮುಖಾ ಭಕ್ತ್ಯಾ ಪ್ರವಿಶಂತಿ ಹರೇಃ ಪದಂ ॥ ೪೧ ॥
ಬಾಲ್ಯಯೌವನವಾರ್ಧಕ್ಯೇ ಯತ್ಪಾಪಂ ಜ್ಞಾನತಃ ಕೃತಂ ।
ನೈವೇದ್ಯಭಕ್ಷಣಾದ್ವಿಷ್ಣೋಃ ಬದರ್ಯಾಂ ತದ್ವಿಲೀಯತೇ ॥ ೪೨ ॥
ಪ್ರಾಣಾಂತಂ ಯಸ್ಯ ಪ್ರಾಣಸ್ಯ ಪ್ರಾಯಶ್ಚಿತ್ತಂ ಪ್ರಕೀರ್ತಿತಂ ।
ವಿಷ್ಣೋರ್ನಿವೇದಿತಂ ಭುಕ್ತ್ವಾ ಬದರ್ಯಾಂ ತನ್ನಿವರ್ತತೇ ॥ ೪೩ ॥

---

೩೮. ಎಲೈ ಷಣ್ಮುಖನೆ! ಬದರೀಕ್ಷೇತ್ರದಲ್ಲಿ ಮಹಾವಿಷ್ಣುವಿನ ನೈವೇದ್ಯದ ಒಂದು ಕಬಳವನ್ನಾದರೂ ಸೇವನೆ ಮಾಡುವುದರಿಂದ ತುಷಾಗ್ನಿಯಲ್ಲಿಟ್ಟ ಚಿನ್ನವು ಕಲ್ಮಷರಹಿತವಾಗುವಂತೆ ಮನುಷ್ಯನೂ ಪಾಪಗಳಿಂದ ಪರಿಶುದ್ಧನಾಗುವನು.

೩೯. ನಾರದನೇ ಮೊದಲಾದ ಮಹರ್ಷಿಗಳೊಡನೆ ಭಗವಂತನು ಯಾವ ನೈವೇದ್ಯವನ್ನು ಸೇವನೆ ಮಾಡುವನೊ, ಅದನ್ನೇ ವಿಚಾರಮಾಡದೆ ಸಕಲರೂ ಸತ್ತ್ವಗುಣದ ಅಭಿವೃದ್ಧಿಯ ಉದ್ದೇಶದಿಂದ ಭೋಜನಮಾಡಬೇಕು.

೪೦. ವಿಷ್ಣುವಿನ ನೈವೇದ್ಯವನ್ನು ಭೋಜನಮಾಡಲೋಸುಗ ದೇವತೆಗಳೂ ಸಹ ನೆಪವನ್ನಿಟ್ಟುಕೊಂಡು ನಿಶ್ಚಯವಾಗಿಯೂ ತತ್ಪರಾಯಣರಾಗಿಯೆ ಬದರೀಕ್ಷೇತ್ರವನ್ನು ಕುರಿತು ಸಕಲ ಪ್ರದೇಶಗಳಿಂದಲೂ ಬಂದು ಸೇರುತ್ತಿರುವರು.

೪೧. ಭೋಜನವಾದ ಮೇಲೆ ಪ್ರಹ್ಲಾದನೇ ಮುಂತಾದ ವಿಷ್ಣುಭಕ್ತರೆಲ್ಲರೂ ಆತನ ಆಲಯವನ್ನು ಒಳಹೊಕ್ಕು ಆತನ ಪದಗಳಲ್ಲಿ ಪ್ರವೇಶಮಾಡುವರು.

೪೨–೪೩. ಬಾಲ್ಯ, ಯೌವನ, ವಾರ್ಧಕ್ಯಗಳೆಂಬ ಅವಸ್ಥೆಗಳಲ್ಲಿ ಯಾವ ಪಾಪಗಳನ್ನು ಮನುಷ್ಯನು ಬುದ್ಧಿಪೂರ್ವಕವಾಗಿ ಮಾಡುವನೊ, ಅವುಗಳೆಲ್ಲವೂ ಬದರೀಕ್ಷೇತ್ರದಲ್ಲಿ ವಿಷ್ಣುವಿನ ನೈವೇದ್ಯವನ್ನು ಸೇವಿಸುವುದರಿಂದ ನಾಶವಾಗುವುವು. ಯಾವ ಮನುಷ್ಯನಾದರೂ ಮಹಾಪಾತಕಗಳನ್ನು ಮಾಡಿ ಅನ್ಯ ಪ್ರಾಯಶ್ಚಿತ್ತವಿಲ್ಲದೆ ಕೇವಲ ಮರಣದಂಡನೆಯೊಂದೇ ಶಿಕ್ಷೆಯಾಗಿ ಅನುಭವಿಸಲು ಅರ್ಹನಾಗಿರುವನೊ, ಅವನೂ ಕೂಡ ಬದರ್ಯಾಶ್ರಮದಲ್ಲಿ ವಿಷ್ಣು ನೈವೇದ್ಯವನ್ನು ಸೇವಿಸುವುದರಿಂದ ಪಾಪಗಳನ್ನು ಕಳೆದುಕೊಳ್ಳುವನು.

ತೀರ್ಥಾಂತರೇಷು ಯತ್ನೇನ ಮುಕ್ತಿಂ ಗಚ್ಛತಿ ಮಾನವಃ ।
ನೈವೇದ್ಯಭಕ್ಷಣಾದ್ವಿಷ್ಣೋಃ ಸಾಲೋಕ್ಯಂ ಲಭತೇ ನರಃ ॥ ೪೪ ॥
ಹೃದಿ ರೂಪಂ ಮುಖೇ ನಾಮ ನೈವೇದ್ಯಮುದರೇ ಹರೇಃ ।
ಪಾದೋದಕಂ ಸನಿರ್ಮಾಲ್ಯಂ ಮಸ್ತಕೇ ಯಸ್ಯ ಸೋಽಚ್ಯುತಃ ॥ ೪೫ ॥
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ನೈವೇದ್ಯಭಕ್ಷಣಾದ್ವಿಷ್ಣೋಃ ಬದರ್ಯಾಂ ಯಾಂತಿ ಸಂಕ್ಷಯಂ ॥ ೪೬ ॥
ಬದರೀ ಸದೃಶಂ ಕ್ಷೇತ್ರಂ ನೈವೇದ್ಯಸದೃಶಂ ವಸು ।
ನಾರದೀಯಸಮಂ ಕ್ಷೇತ್ರಂ ನ ಭೂತಂ ನ ಭವಿಷ್ಯತಿ ॥ ೪೭ ॥
ಬದರೀ ಯತ್ನತೋ ಗಮ್ಯಾ ಭೋಕ್ತವ್ಯಂ ತನ್ನಿವೇದಿತಂ ।
ದ್ರಷ್ಟವ್ಯೋ ಭಗವಾನ್ವಹ್ನಿತೀರ್ಥೇ ಸ್ನಾನಂ ಸುದುರ್ಲಭಂ ॥ ೪೮ ॥

---

೪೪. ಇತರ ತೀರ್ಥಗಳಲ್ಲಿ ಮನುಷ್ಯನು ಜಪತಪಗಳೇ ಮುಂತಾದ ಕಷ್ಟಸಾಧ್ಯಗಳಾದ ಸಾಧನೆಗಳನ್ನು ಪ್ರಯತ್ನಪೂರ್ವಕವಾಗಿ ಮಾಡಿ ಮುಕ್ತಿಯನ್ನು ಪಡೆಯಬಹುದು. ಆದರೆ ಬದರಿಕಾಶ್ರಮದಲ್ಲಿ ಮಹಾ ವಿಷ್ಣುವಿನ ನೈವೇದ್ಯವನ್ನು ಸೇವಿಸುವ ಮಾತ್ರದಿಂದಲೇ ಸಾಲೋಕ್ಯರೂಪವಾದ ಮೋಕ್ಷವು ಸಕಲರಿಗೂ ಸಿದ್ಧವಾಗಿರುವುದು.

೪೫. ಯಾವ ವಿಷ್ಣುಭಕ್ತನ ಹೃದಯದಲ್ಲಿ ವಿಷ್ಣುವಿನ ರೂಪವು ಕಾಣುತ್ತಿರುವುದೊ, ಯಾವನ ಮುಖವು ಸತತವೂ ವಿಷ್ಣುನಾಮಗಳನ್ನುಚ್ಚರಿಸುತ್ತಿರುವುದೊ, ಯಾವನ ಉದರದಲ್ಲಿ ವಿಷ್ಣುನೈವೇದ್ಯವು ಪಚನವಾಗುತ್ತಿರುವುದೊ, ಯಾವನ ತಲೆಯಲ್ಲಿ ನಿರ್ಮಾಲ್ಯಸಹಿತವಾದ ವಿಷ್ಣುಪಾದೋದಕವು ಧರಿಸಲ್ಪಟ್ಟಿರುವುದೊ, ಅವನು ರೂಪುಗೊಂಡ ಮಹಾವಿಷ್ಣುವೆಂದೇ ತಿಳಿಯಬೇಕು.

೪೬. ಮಹಾಪಾತಕಗಳೆನಿಸಿದ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಸ್ತ್ರೀಗಮನ—ಇವು ಕೂಡ ಬದರೀಕ್ಷೇತ್ರದಲ್ಲಿ ಮಹಾವಿಷ್ಣುವಿನ ನೈವೇದ್ಯವನ್ನು ಸೇವನೆಮಾಡುವುದರಿಂದ ನಾಶವನ್ನು ಹೊಂದುವುವು.

೪೭–೪೮. ಬದರಿಕಾಶ್ರಮಕ್ಕೆ ಸಮಾನವಾದ ಕ್ಷೇತ್ರವೂ, ನಾರಾಯಣನ ನೈವೇದ್ಯಕ್ಕೆ ಸಮವಾದ ಐಶ್ವರ್ಯವೂ, ನಾರದಶಿಲೆಗೆ ಸಮವಾದ ಪ್ರದೇಶವೂ ಸಕಲ ಭೂಮಂಡಲದಲ್ಲಿಯೂ ಹಿಂದೆ ಎಲ್ಲಿಯೂ ಇರಲಿಲ್ಲ, ಮುಂದೆಯೂ ಇರಲಾರದು. ಪ್ರತಿಯೊಬ್ಬ ಮನುಷ್ಯನೂ ಬದರಿಕಾಶ್ರಮಕ್ಕೆ ಪ್ರಯತ್ನಪೂರ್ವಕವಾಗಿ ಹೋಗಲೇಬೇಕು. ಬದರೀನಾರಾಯಣನ ನೈವೇದ್ಯವನ್ನು ಸೇವನೆ ಮಾಡಬೇಕು. ಆ ಭಗವಂತನ ದರ್ಶನಲಾಭವನ್ನು ಪಡೆಯಬೇಕು. ಅಗ್ನಿತೀರ್ಥದಲ್ಲಿ ಸ್ನಾನವು ಜನರಿಗೆ ಅತ್ಯಂತ ದುರ್ಲಭವಾಗಿರುವುದು.

**ಪೃಥಿವ್ಯಾಂ ಯಾನಿ ತೀರ್ಥಾನಿ ವ್ರತಾನಿ ನಿಯಮಾಸ್ತಥಾ ।**
**ಪಾದೋದಕಂ ವಿಶಾಲಾಯಾಂ ಪಾವನಂ ಪುರತೋ ಭವೇತ್ ॥ ೪೯ ॥**
**ಕಿಂ ತಸ್ಯ ದಾನೈಸ್ತಪಸಾ ತೀರ್ಥಾಟನಪರಿಭ್ರಮೈಃ ।**
**ಬದರ್ಯಾಂ ವಿಷ್ಣುಪಾದೋದಬಿಂದುಮಾತ್ರಂ ಲಭೇದ್ಯದಿ ॥ ೫೦ ॥**
**ಪ್ರಾಯಶ್ಚಿತ್ತಾನಿ ಜಲ್ಪಂತಿ ತಾವದೇವ ಷಡಾನನ ।**
**ಯಾವನ್ನ ಲಭ್ಯತೇ ವಿಷ್ಣೋಃ ಬದರ್ಯಾಂ ಚರಣೋದಕಂ ॥ ೫೧ ॥**
**ಅನಾಯಾಸೇನ ಯೇಷಾಂ ವಾ ಇಚ್ಛಾ ಮುಕ್ತಿಪಥೇ ನೃಣಾಂ ।**
**ಕರ್ತವ್ಯಂ ತೈಃ ಪ್ರಯತ್ನೇನ ವಿಷ್ಣೋರ್ನೈವೇದ್ಯಭಕ್ಷಣಂ ॥ ೫೨ ॥**
**ಯೇ ನರಾಃ ಪ್ರತಿಗೃಹ್ಣಂತಿ ಪಾಪಾಃ ಸಂಸಾರಭಾಗಿನಃ ।**
**ಯಾತ್ರಾಕೃತಂ ಫಲಂ ತೇಷಾಂ ನ ಕದಾಚಿತ್ಪ್ರಜಾಯತೇ ॥ ೫೩ ॥**
**ನೈವೇದ್ಯನಿಂದನಾದ್ವಿಷ್ಣೋಃ ನಿಂದ್ಯಂತೇ ತೇ ತಮೋಗತಾಃ ।**
**ನೈವೇದ್ಯಭಕ್ಷಣಾತ್ಸತ್ತ್ವಶುದ್ಧಿರೇವ ನ ಸಂಶಯಃ ॥ ೫೪ ॥**

---

೪೯–೫೦. ಭೂಮಂಡಲದಲ್ಲಿ ಮನುಷ್ಯರನ್ನು ಪಾವನಗೊಳಿಸುವ ಯಾವ ಯಾವ ತೀರ್ಥಗಳೂ, ವ್ರತೋಪವಾಸಗಳೂ, ನಿಯಮಗಳೂ ಇರುವುವೊ, ಅವುಗಳೆಲ್ಲವುಗಳಿಗೂ ವಿಶಾಲಾಕ್ಷೇತ್ರದ ನಾರಾಯಣನ ಪಾದೋದಕವು ಅಗ್ರೇಸರವೆನಿಸಿ ಶೋಭಿಸುತ್ತಿರುವುದು. ಯಾವನಿಗೆ ಬದರಿಕಾಶ್ರಮದಲ್ಲಿ ಬಿಂದುಮಾತ್ರವಾದರೂ ವಿಷ್ಣುವಿನ ಪಾದೋದಕವು ಲಭಿಸಿರುವುದೊ, ಅವನಿಗೆ ದಾನಗಳಿಂದಲೂ, ತಪಸ್ಸುಗಳಿಂದಲೂ ಇತರ ತೀರ್ಥಗಳನ್ನು ಸೇವಿಸಲು ಓಡಾಡುವ ಕಾಯಕ್ಲೇಶದಿಂದಲೂ ಆಗಬೇಕಾದುದೇನು?

೫೧. ಎಲೈ ಷಣ್ಮುಖನೆ! ಯಾವ ಮಾನವನು ಬದರಿಕಾಶ್ರಮದಲ್ಲಿ ವಿಷ್ಣು ಪಾದೋದಕವನ್ನು ಸೇವಿಸುವುದಿಲ್ಲವೊ, ಅವನಿಗೆ ಮಾತ್ರ ಶಾಸ್ತ್ರಗಳು ಅನೇಕ ವಿಧಗಳಾದ ಪ್ರಾಯಶ್ಚಿತ್ತಗಳನ್ನು ಹೇಳಿರುವುವು.

೫೨. ಯಾವ ಮನುಷ್ಯರಿಗೆ ಅನಾಯಾಸವಾಗಿಯೇ ಮೋಕ್ಷಮಾರ್ಗವು ಲಭಿಸಬೇಕೆಂಬ ಅಭಿಲಾಷೆಯಿರುವುದೊ, ಅವರು ಪ್ರಯತ್ನದಿಂದಲಾದರೂ ಬದರೀನಾರಾಯಣನ ನೈವೇದ್ಯವನ್ನು ಸೇವನೆಮಾಡಬೇಕು.

೫೩. ಯಾವ ಮನುಷ್ಯರು ಬದರಿಕಾಶ್ರಮವನ್ನು ಸೇರಿ ಅಲ್ಲಿ ದಾನಗಳನ್ನು ಸ್ವೀಕರಿಸುವರೊ, ಆ ಪಾಪಿಗಳು ಅನಂತವಾದ ಸಂಸಾರಕ್ಕೆ ಭಾಗಿಗಳಾಗುವರು. ಅವರಿಗೆ ತೀರ್ಥಯಾತ್ರೆಯ ಫಲವು ಎಂದಿಗೂ ಲಭಿಸಲಾರದು.

೫೪. ಮಹಾವಿಷ್ಣುವಿನ ನೈವೇದ್ಯವನ್ನು ನಿಂದೆಮಾಡುವುದರಿಂದ ಮಾನವರು ಅಂಧಂತಮಸ್ಸನ್ನು ಸೇರುವರು. ಆ ನಿರ್ಮಾಲ್ಯವನ್ನೇ ಭಕ್ಷಣಮಾಡುವುದರಿಂದ ಸತ್ತ್ವಗುಣದ ಅಭಿವೃದ್ಧಿಯುಂಟಾಗುವುದು.

ನೈವೇದ್ಯಂ ಸ್ವಯಮಾನೀಯ ಬ್ರಾಹ್ಮಣಾನ್ಭೋಜಯಂತಿ ಯೇ ।
ತುಲಾಪುರುಷದಾನೇನ ಕಿಂ ಫಲಂ ತೇ ಕೃತಾರ್ಥಿನಃ ॥ ೫೫ ॥
ಕುರುಕ್ಷೇತ್ರೇ ಸಮಾಸಾದ್ಯ ರಾಹುಗ್ರಸ್ತೇ ದಿವಾಕರೇ ।
ಮಹಾದಾನೇನ ಯತ್ಪುಣ್ಯಂ ಬದರ್ಯಾಂ ಗ್ರಾಸಮಾತ್ರತಃ ॥ ೫೬ ॥
ಬದರೀಕ್ಷೇತ್ರಮಾಸಾದ್ಯ ಗ್ರಾಸಮಾತ್ರಂ ಪ್ರಯತ್ನತಃ ।
ಉಪಾಯೋಽಯಂ ಮಹಾಂಸ್ತತ್ರ ಬದರ್ಯಾಂ ಹರಿತೋಷಣೇ ।
ಯತಿಭ್ಯೋ ಭೋಜನಾದ್ವಿಷ್ಣೋರಪರಾಧ್ಯಪಿ ವಲ್ಲಭಃ ॥ ೫೭ ॥
ವಿಷ್ಣೋರ್ನ ಸದೃಶೋ ದೇವೋ ನ ವಿಶಾಲಾಸಮಾ ಭುವಿ ।
ನ ಭಿಕ್ಷುಸದೃಶಂ ಪಾತ್ರಂ ಋಷಿತೀರ್ಥಸಮಂ ನ ಹಿ ॥ ೫೮ ॥
ಚಾತುರ್ಮಾಸ್ಯಂ ಪ್ರಕುರ್ವಂತಿ ಯೇ ನರಾಃ ಪುಣ್ಯಶಾಲಿನಃ ।
ತೇಷಾಂ ಪುಣ್ಯಫಲಂ ವಕ್ತುಂ ಬ್ರಹ್ಮಣಾಪಿ ನ ಶಕ್ಯತೇ ॥ ೫೯ ॥

---

೫೫. ಯಾವನು ನೈವೇದ್ಯವನ್ನು ತಾನೇ ತೆಗೆದುಕೊಂಡು ಬಂದು ಬ್ರಾಹ್ಮಣರಿಗೆ ಭೋಜನಮಾಡಿಸುವನೊ, ಅವನಿಗೆ ತನ್ನ ತುಲಾಭಾರದಷ್ಟು ಚಿನ್ನವನ್ನು ದಾನಮಾಡುವುದರಿಂದ ಯಾವ ಹೆಚ್ಚಿನ ಫಲವು ಲಭಿಸುವುದು? ಅವನು ಸಕಲ ವಿಧದಲ್ಲಿಯೂ ಕೃತಾರ್ಥನಾಗಿರುವನು.

೫೬. ಮಾನವನು ಕುರುಕ್ಷೇತ್ರವನ್ನು ಸೇರಿ, ಸೂರ್ಯನು ರಾಹುವಿನಿಂದ ಆಚ್ಛಾದಿತನಾಗಿರುವ ಗ್ರಹಣಕಾಲದಲ್ಲಿ ದಶಮಹಾದಾನಗಳನ್ನು ಮಾಡುವುದರಿಂದ ಯಾವ ಪುಣ್ಯವು ಲಭಿಸುವುದೊ, ಅದೇ ಪುಣ್ಯಫಲವೇ ಬದರೀಕ್ಷೇತ್ರದಲ್ಲಿ ಕಬಳಮಾತ್ರವಾದರೂ ವಿಷ್ಣುನೈವೇದ್ಯವನ್ನು ಭಕ್ತಿಭಾವದಿಂದ ಸೇವಿಸುವುದರಿಂದ ಪ್ರಾಪ್ತವಾಗುವುದು.

೫೭. ಬದರೀ ಕ್ಷೇತ್ರವನ್ನು ಸೇರಿದ ಮೇಲೆ ಒಂದು ಕಬಳದಷ್ಟಾದರೂ ವಿಷ್ಣುಪ್ರಸಾದವನ್ನು ಪ್ರಯತ್ನದಿಂದ ಸೇವಿಸಲೇಬೇಕು. ಬದರಿಕಾಶ್ರಮದಲ್ಲಿ ಶ್ರೀ ನಾರಾಯಣನನ್ನು ಸಂತೋಷಪಡಿಸಲು ಒಂದೇ ಅಮೋಘವಾದ ಉಪಾಯವು ಹೇಳಲ್ಪಟ್ಟಿರುವುದು. ಅಲ್ಲಿ ಸನ್ಯಾಸಿಗಳಿಗೆ ವಿಷ್ಣುವಿನ ನೈವೇದ್ಯದ ಭೋಜನವನ್ನು ಮಾಡಿಸುವುದರಿಂದ ಭಗವಂತನಲ್ಲಿ ಅಪರಾಧವನ್ನು ಮಾಡಿದವನಾದರೂ ಮೋಕ್ಷಪದವಿಗೆ ಅಧಿಕಾರಿಯಾಗುವನು.

೫೮. ಮಹಾವಿಷ್ಣುವಿಗೆ ಸಮಾನನಾದ ಅನ್ಯದೈವವಿಲ್ಲ. ವಿಶಾಲಾನಗರಿಗೆ ಸದೃಶವಾದ ಪಟ್ಟಣವು ಮತ್ತೊಂದಿಲ್ಲ. ಸನ್ನ್ಯಾಸಿಗಳಿಗೆ ಸದೃಶರಾದ ಸತ್ಪಾತ್ರರು ಬೇರೊಬ್ಬರಿಲ್ಲ. ಋಷಿತೀರ್ಥಕ್ಕೆ ಸಮಾನವಾದ ತೀರ್ಥವು ಮತ್ತೊಂದು ಇಲ್ಲವೆಂಬುದು ನಿಶ್ಚಯವು.

೫೯. ಈ ಬದರಿಕಾಶ್ರಮದಲ್ಲಿ ನಿಂತು ಪುಣ್ಯವಂತರಾದ ಯಾವ ಮಾನವರು

**ಭಿಕ್ಷುಕಾಣಾಂ ಫಲಾಽವಾಪ್ತಿ ರ್ವಿಶೇಷಾದಿಹ ಕೀರ್ತ್ಯತೇ ।**
**ವೇದಾಂತಶ್ರವಣಾತ್ಪುಣ್ಯಂ ದಶಧಾ ಯತ್ಪ್ರಕೀರ್ತಿತಂ ॥ ೬೦ ॥**
**ಬಧರೀದೃಷ್ಟಿಮಾತ್ರೇಣ ಭಿಕ್ಷುಕಾಣಾಂ ತದಿಷ್ಯತೇ ।**
**ಚಾತುರ್ಮಾಸ್ಯೇ ವಿಶೇಷೇಣ ಕೈವಲ್ಯಫಲಭಾಗಿನಃ ॥ ೬೧ ॥**
**ನ್ಯಾಸಿನೋ ಬದರೀಸ್ಥಾನೇ ವಿನಾಽಽಯಾಸೇನ ಪುತ್ರಕ ।**
**ಯೇ ಮೂರ್ಖಾ ಜಾಡ್ಯಮಾಪನ್ನಾ ದಂಭಕಾಷಾಯವಾಸಸಃ ।**
**ಬದರೀದರ್ಶನಾತ್ತೇಷಾಂ ಮುಕ್ತಿಃ ಕರತಲೇ ಸ್ಥಿತಾ ॥ ೬೨ ॥**
**ಜ್ಞಾನಿನೋಽಜ್ಞಾನಿನೋ ವಾಪಿ ನ್ಯಾಸಿನೋ ನಿಯತವ್ರತಾಃ ।**
**ದ್ರಷ್ಟವ್ಯಾ ಬದರೀ ತೈಸ್ತು ಫಲಾನಿ ಸಮಭೀಪ್ಸುಭಿಃ ॥ ೬೩ ॥**

---

ಚಾತುರ್ಮಾಸ್ಯವ್ರತವನ್ನು ವಿಧ್ಯುಕ್ತರೀತಿಯಿಂದ ನೆರವೇರಿಸುವರೊ, ಅವರ ಅಪಾರವಾದ ಪುಣ್ಯದ ಪ್ರಭಾವವನ್ನು ಪೂರ್ತಿಯಾಗಿ ವಿವರಿಸಲು ಬ್ರಹ್ಮದೇವನಿಗೂ ಕೂಡ ಸಾಧ್ಯವಾಗಲಾರದು.

೬೦. ಈ ಕ್ಷೇತ್ರದಲ್ಲಿ ಸನ್ಯಾಸಿಗಳಿಗೆ ವಿಶೇಷವಾದ ಫಲವು ಲಭಿಸುವುದೆಂದು ಹೇಳಲ್ಪಟ್ಟಿರುವುದು. ವೇದಾಂತಶಾಸ್ತ್ರಗಳ ಶ್ರವಣದಿಂದ ಇತರ ಸ್ಥಳಗಳಲ್ಲಿ ಯಾವ ಫಲವು ಲಭಿಸುವುದೊ, ಅದಕ್ಕೆ ಹತ್ತರಷ್ಟು ಪುಣ್ಯವು ಈ ಸ್ಥಳದಲ್ಲಿ ಸನ್ಯಾಸಿಗಳಿಗೆ ಲಭಿಸುವುದು.

೬೧. ಈ ಫಲವು ಭಿಕ್ಷುಕರಿಗೆ ಬದರಿಕಾಶ್ರಮದ ಕೇವಲ ದರ್ಶನಮಾತ್ರದಿಂದಲೇ ಉಂಟಾಗುವುದು. ಅವರು ವಿಶೇಷವಾಗಿ ಇಲ್ಲಿ ಚಾತುರ್ಮಾಸ್ಯವನ್ನೂ ಆಚರಿಸುವವರಾದರೆ, ಖಂಡಿತವಾಗಿಯೂ ಕೈವಲ್ಯಪದವಿಗೆ ಭಾಗಿಗಳಾಗುವುದರಲ್ಲಿ ಸಂದೇಹವಿಲ್ಲ.

೬೨. ಪುತ್ರನಾದ ಷಡಾನನನೆ! ಸನ್ಯಾಸಿಗಳೆನಿಸಿದವರು ಮೂರ್ಖರಾಗಿರಲಿ, ಶರೀರ ಜಾಡ್ಯವುಳ್ಳವರಾಗಿರಲಿ, ಕೇವಲ ದಂಭಕ್ಕಾಗಿಯೇ ಕಾಷಾಯವಸ್ತ್ರಗಳನ್ನು ಧರಿಸಿದವರಾಗಿರಲಿ, ಎಲ್ಲರಿಗೂ ಆಯಾಸವಿಲ್ಲದೆಯೇ ಬದರೀಕ್ಷೇತ್ರದ ದರ್ಶನಮಾತ್ರದಿಂದಲೇ ಮೋಕ್ಷವು ಕರತಲಾಮಲಕದಂತೆ ನಿತ್ಯಸಿದ್ಧವಾಗಿರುವುದು.

೬೩. ಜ್ಞಾನಿಗಳಾಗಿರಲಿ, ಅಜ್ಞಾನಿಗಳೇ ಆಗಿರಲಿ, ಸನ್ಯಾಸಿಗಳೆನಿಸಿದವರು ತಮ್ಮ ಆಶ್ರಮಧರ್ಮಗಳನ್ನು ನಿಯಮದಿಂದ ಪಾಲಿಸುತ್ತ ಮೋಕ್ಷದಲ್ಲಿ ಆಪೇಕ್ಷೆಯುಳ್ಳವರಾದರೆ, ಅವಶ್ಯಕವಾಗಿ ಬದರಿಕಾಶ್ರಮವೆಂಬ ಕ್ಷೇತ್ರವನ್ನು ದರ್ಶಿಸಲೇಬೇಕು.

ಶ್ರುತ್ವಾಽಧ್ಯಾಯಮಿಮಂ ಪುಣ್ಯಂ ಪ್ರಸಂಗೇನಾಪಿ ಮಾನವಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯ ಸಂವಾದೇ "ಬದರೀನಾಥ ದರ್ಶನಮಾಹಾತ್ಮ್ಯವರ್ಣನಂ"ನಾಮ ಪಂಚಮೋಽಧ್ಯಾಯಃ

---

೬೪. ಯಾವ ಮಾನವನಾದರೂ ಪ್ರಸಂಗವಶದಿಂದಾದರೂ ಈ ಅಧ್ಯಾಯವನ್ನು ಕೇಳುವವನಾದರೆ, ಅವನೂ ಸಹ ಸಕಲ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದಿ ವಿಷ್ಣುಲೋಕದಲ್ಲಿ ಉತ್ತಮ ಸ್ಥಾನವನ್ನು ಪಡೆದು ಪೂಜ್ಯನಾಗುವನು."

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮ ಮಾಹಾತ್ಮ್ಯದ ಶಿವಕಾರ್ತಿಕೇಯ ಸಂವಾದದಲ್ಲಿ "ಬದರೀನಾಥ ದರ್ಶನ ಮಾಹಾತ್ಮ್ಯ ವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ವಸುಧಾರಾತೀರ್ಥಮಾಹಾತ್ಮ್ಯವರ್ಣನಂ

ಸ್ಕಂದ ಉವಾಚ :—

ಕರಾದ್ವಿಗಲಿತಂ ಯತ್ರ ಕಪಾಲಂ ತೇ ಮಹೇಶ್ವರ ।
ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಕೃಪಯಾ ವದ ಮೇ ಪಿತಃ ॥ ೧ ॥

ಶಿವ ಉವಾಚ :—

ಅತಿಗುಹ್ಯಮಿದಂ ತೀರ್ಥಂ ಸುರಾಸುರನಮಸ್ಕೃತಂ ।
ಬ್ರಹ್ಮಹಾಽಪಿ ನರೋ ಯತ್ರ ಸ್ನಾನಮಾತ್ರೇಣ ಶುಧ್ಯತಿ ॥ ೨ ॥
ಪಂಚತೀರ್ಥಾನಿ ತಿಷ್ಠಂತಿ ಕಪಾಲೇ ಪಾಪಮೋಚನೇ ।
ತತ್ರ ಸ್ನಾನಂ ತಪೋ ದಾನಂ ಸರ್ವಮಕ್ಷಯ್ಯಮಿಷ್ಯತೇ ॥ ೩ ॥
ಪಿಂಡಂ ವಿಧಾಯ ವಿಧಿವನ್ನರಕಾತ್ತಾರಯೇತ್ಪಿತೄನ್ ।
ಪಿತೃತೀರ್ಥಮಿದಂ ಪ್ರೋಕ್ತಂ ಗಯಾತೋಽಷ್ಟಗುಣಾಧಿಕಂ ॥ ೪ ॥

---

### ಕನ್ನಡದ ಅನುವಾದ

### ವಸುಧಾರಾತೀರ್ಥಮಾಹಾತ್ಮ್ಯವರ್ಣನ

೧. ಸ್ಕಂದಸ್ವಾಮಿಯು ಪ್ರಶ್ನೆಮಾಡುತ್ತಾನೆ:—"ತಂದೆಯಾದ ಮಹೇಶ್ವರನೆ! ಪೂರ್ವದಲ್ಲಿ ನಿನ್ನ ಕೈಯಿಂದ ಬ್ರಹ್ಮಕಪಾಲವು ಭೂಮಿಗೆ ಬಿದ್ದ ಸ್ಥಳದಲ್ಲಿರುವ ತೀರ್ಥದ ಮಾಹಾತ್ಮ್ಯೆಯನ್ನು ನನಗೆ ಕೃಪೆಯಿಂದ ಹೇಳುವವನಾಗು."

೨. ಶಿವನು ನಿರೂಪಿಸುತ್ತಾನೆ:— "ಈ ತೀರ್ಥವು ಅತ್ಯಂತ ನಿಗೂಢವಾಗಿದ್ದು ಸಮಸ್ತದೇವಾಸುರರಿಂದಲೂ ನಮಸ್ಕರಿಸಲ್ಪಡುತ್ತಿರುವುದು. ಇಲ್ಲಿ ಸ್ನಾನವನ್ನು ಮಾಡಿದ ಮಾತ್ರದಿಂದ ಬ್ರಹ್ಮಹತ್ಯೆಯನ್ನು ಮಾಡಿದ ಮನುಷ್ಯನೂ ಸಹ ಪರಿಶುದ್ಧನಾಗುವನು.

೩. ಸಮಸ್ತ ಪಾಪಗಳನ್ನು ನಿರ್ಮೂಲಗೊಳಿಸುವ ಈ ಉತ್ತಮ ತೀರ್ಥದಲ್ಲಿ ಐದು ತೀರ್ಥಗಳು ಸನ್ನಿಹಿತಗಳಾಗಿರುವುವು. ಅಲ್ಲಿ ಮಾಡಿದ ಸ್ನಾನ, ತಪಸ್ಸು, ದಾನ ಮುಂತಾದ ಸಕಲ ಕಾರ್ಯಗಳೂ ಅಕ್ಷಯ ಫಲಗಳನ್ನು ಕೊಡುವುವೆಂದು ಹೇಳುವರು.

೪. ಈ ತೀರ್ಥದಲ್ಲಿ ವಿಧಿಪ್ರಕಾರವಾಗಿ ಪಿಂಡಗಳನ್ನು ದಾನಮಾಡಲು ಪಿತೃದೇವತೆಗಳೆಲ್ಲರೂ ನರಕದಿಂದ ಉದ್ಧೃತರಾಗುವರು. ಇದೇ ಪಿತೃತೀರ್ಥವೆನಿಸಿ ಗಯೆಯ ಎಂಟರಷ್ಟು ಫಲವನ್ನು ಕೊಡುವುದಾಗಿರುವುದು.

ತಿಲತರ್ಪಣತೋ ಯಾಂತಿ ಪಿತರಃ ಸ್ವರ್ಗಮುತ್ತಮಂ ॥ ೫ ॥
ಅಹೋರಾತ್ರಂ ಸ್ಥಿರೋ ಭೂತ್ವಾ ಜಪನಿಷ್ಠಸಮಾಹಿತಃ ।
ತಸ್ಯೇಷ್ಟಸಿದ್ಧಿರ್ಮಹತೀ ತತ್ಕ್ಷಣಾದೇವ ಜಾಯತೇ ॥ ೬ ॥
ಪಾರಲೌಕಿಕಕರ್ಮಾಣಿ ಸರ್ವಾಣ್ಯವ್ಯಾಹತಾನಿ ಚ ।
ಕಪಾಲಮೋಚನೇ ತೀರ್ಥೇ ನಾಧಿಕಂ ಪಿತೃಕರ್ಮಣಿ ॥ ೭ ॥

ಸ್ಕಂದ ಉವಾಚ:—

ಕುತ್ರ ವಾ ಬ್ರಹ್ಮತೀರ್ಥಂ ವೈ ಫಲಂ ವಾ ಕೀದೃಶಂ ಭವೇತ್ ।
ಕೇ ವಾ ತತ್ರ ವಸಂತೀಹ ಕೃಪಯಾ ವದ ಮೇ ಪಿತಃ ॥ ೮ ॥

ಶಿವ ಉವಾಚ:—

ಏಕಧಾ ವಿಷ್ಣುನಾಭ್ಯಂಭೋರುಹಸ್ಥಸ್ಯ ಪ್ರಜಾಪತೇಃ ।
ವೇದಾನ್ಮುಖಾಂಬುಜಾದ್ಧೃತ್ವಾ ಜಗ್ಮತುರ್ಮಧುಕೈಟಭೌ ॥ ೯ ॥
ತತೋ ಹ್ಯುತ್ಥಾಯ ಶಯನಾತ್ಸಿಸೃಕ್ಷುರಬ್ಜಸಂಭವಃ ।
ಸ್ರಷ್ಟುಂ ವಿನಾಽಽಗಮಂ ಲೋಕೇ ನ ಶಶಾಕ ಹತಸ್ಮೃತಿಃ ॥ ೧೦ ॥

---

೫. ಇಲ್ಲಿ ತಿಲತರ್ಪಣವನ್ನು ಮಾಡುವುದರಿಂದಲೇ ಪಿತೃಗಳು ಉತ್ತಮ ಗತಿಯನ್ನೂ ಸ್ವರ್ಗವನ್ನೂ ಹೊಂದುವರು.

೬. ಯಾವನು ಮನಸ್ಸಿನ ಸ್ಥೈರ್ಯದಿಂದ ಕೂಡಿದವನಾಗಿ ಸಮಾಧಾನದಿಂದ ಜಪದಲ್ಲಿಯೇ ನಿರತನಾಗಿರುವನೊ, ಅವನಿಗೆ ಅಲ್ಪಕಾಲದಲ್ಲಿಯೇ ಮಹತ್ತರವಾದ ಅಭೀಷ್ಟಸಿದ್ಧಿಯುಂಟಾಗುವುದು.

೭. ಇಲ್ಲಿ ನೆರವೇರಿಸಿದ ಸಮಸ್ತ ಔರ್ಧ್ವದೇಹಿಕ ಕರ್ಮಗಳೂ ಶಾಶ್ವತ ಫಲದಾಯಕಗಳಾಗುವುವು. ಕಪಾಲಮೋಚನವೆಂಬ ಈ ತೀರ್ಥಕ್ಕಿಂತ ಪಿತೃಕಾರ್ಯಗಳಿಗೆ ಉತ್ತಮವಾದ ಕ್ಷೇತ್ರವು ಮತ್ತೊಂದು ದೊರೆಯಲಾರದು.''

೮. ಷಣ್ಮುಖನು ಕೇಳುತ್ತಾನೆ:—''ತಂದೆಯೆ! ಈ ಬ್ರಹ್ಮತೀರ್ಥವು ಎಲ್ಲಿರುವುದು? ಇಲ್ಲಿ ಯಾವ ವಿಧವಾದ ಫಲವು ಲಭಿಸುವುದು? ಈ ಪ್ರದೇಶದಲ್ಲಿ ಯಾರು ಯಾರು ವಾಸಮಾಡುತ್ತಿರುವರು? ಈ ವಿಷಯಗಳೆಲ್ಲವನ್ನೂ ದಯೆಯಿಂದ ನನಗೆ ಹೇಳುವವನಾಗು.''

೯. ಶಿವನು ಹೇಳುತ್ತಾನೆ:—ಪ್ರಪಂಚದ ಆದಿಯಲ್ಲಿ ವಿಷ್ಣುವಿನ ನಾಭೀಕಮಲದಲ್ಲಿ ಉದ್ಭವಿಸಿದ ಬ್ರಹ್ಮನು ವೇದಗಳನ್ನು ಅಭ್ಯಾಸಮಾಡುತ್ತಿರಲು ಅವನ ಮುಖಕಮಲದಿಂದ ಆ ವೇದಗಳನ್ನು ಮಧು, ಕೈಟಭರೆಂಬ ಇಬ್ಬರು ರಾಕ್ಷಸರು ಅಪಹರಿಸಿಕೊಂಡು ಹೋದರು.

೧೦. ಆಗ ಬ್ರಹ್ಮದೇವನು ತನ್ನ ಯೋಗನಿದ್ರೆಯಿಂದೆಚ್ಚತ್ತು ಪ್ರಪಂಚದ ಸೃಷ್ಟಿಕಾರ್ಯವನ್ನು ಮಾಡಲುಪಕ್ರಮಿಸಿದನು. ಆದರೆ ಆಗಮಗಳನ್ನು

**ತದಾ ಬದರಿಕಾಮೇತ್ಯ ಹರಿಣಾ ಪ್ರತಿಪಾಲಿತಾಂ ।**
**ತುಷ್ಟಾವ ಪ್ರಣತೋ ಭೂತ್ವಾ ಭಗವಂತಂ ಸನಾತನಂ ॥ ೧೧ ॥**
**ತತಃ ಕುಂಡಾತ್ಸಮುದ್ಭೂತೋ ಹಯಶೀರ್ಷೋ ನಿಜಾಯುಧಃ ।**
**ಪೀತಾಂಬರಧರಃ ಶುಕ್ಲಶ್ಚತುರ್ಬಾಹುಃ ಸುದೃಪ್ತದೃಕ್ ॥ ೧೨ ॥**
**ಅತ್ಯದ್ಭುತಃ ಪ್ರಕಟಿಕಠೋರಲೋಚನಃ**
**ಚಲಚ್ಛಟಾವಿಚ್ಛುರಿತಮೇಘಡಂಬರಃ ।**
**ಸ್ವತೇಜಸಾ ಹತನಿಖಿಲಪ್ರಭಾಕುಲಃ**
**ಕೃಪಾನ್ವಿತೋ ದ್ರುಹಿಣಪುರಃಸರೋಽಭವತ್ ॥ ೧೩ ॥**
**ನಿರೀಕ್ಷ್ಯ ತಂ ವಿಧಿರಪಿ ವಿಸ್ಮಯಾಕುಲಃ ।**
**ಪ್ರಣಮ್ಯ ಚ ಸ್ತುತಿಮಕರೋತ್ಪ್ರಸನ್ನದೃಕ್ ॥ ೧೪ ॥**

ಬ್ರಹ್ಮೋವಾಚ :—

**ನಮಃ ಕಮಲನಾಭಾಯ ನಮಸ್ತೇ ಕಮಲಾಶ್ರಯ ।**
**ನಮಸ್ತೇ ಕಮಲಾವಾಸ ವಿಶಾಲವನಮಾಲಿನೇ ॥ ೧೫ ॥**

---

ಕಳೆದುಕೊಂಡು ಪೂರ್ವಕಲ್ಪದ ಸ್ಮರಣೆಯಿಲ್ಲದವನಾದುದರಿಂದ ಬ್ರಹ್ಮಾಂಡದ ಸೃಷ್ಟಿಯನ್ನು ಮಾಡಲಾರದೆ ಹೋದನು.

೧೧. ಆ ಸಮಯದಲ್ಲಿ ಮಹಾವಿಷ್ಣುವಿನಿಂದ ಪರಿಪಾಲಿಸಲ್ಪಡುತ್ತಿರುವ ಬದರಿಕಾಶ್ರಮವನ್ನು ಸೇರಿ ಆದ್ಯಂತರಹಿತನಾದ ಭಗವಂತನಿಗೆ ಪ್ರಣಾಮವನ್ನು ಮಾಡಿ ಸ್ತೋತ್ರವನ್ನು ಮಾಡತೊಡಗಿದನು.

೧೨. ಪರಮಾತ್ಮನು ಹಯಗ್ರೀವಸ್ವರೂಪವನ್ನು ತಾಳಿದವನಾಗಿ ಶಂಖ ಚಕ್ರಾದ್ಯಾಯುಧಗಳನ್ನು ಧರಿಸಿ ಪೀತಾಂಬರವನ್ನುಟ್ಟು ನಾಲ್ಕು ಬಾಹುಗಳುಳ್ಳ ಬಿಳಿಯ ದೇಹದಿಂದ ಕೂಡಿ ಮದಘೂರ್ಣಿತಗಳಾದ ನೇತ್ರಗಳೊಡನೆ ಒಂದು ಕುಂಡದಿಂದ ಮೇಲಕ್ಕೆ ಬಂದನು.

೧೩. ಭಗವಂತನು ಅತ್ಯಂತ ಅದ್ಭುತವಾದ ರೂಪವನ್ನು ತಾಳಿ, ವಿಶಾಲಗಳೂ ಕ್ರೂರದೃಷ್ಟಿಯುಳ್ಳವುಗಳೂ ಆದ ನೇತ್ರಗಳುಳ್ಳವನಾಗಿ, ತಲೆಗೂದಲುಗಳಿಂದ ಮೇಘಮಂಡಲಗಳನ್ನು ಚೆದುರಿಸುತ್ತ, ತನ್ನ ಅಮಿತ ತೇಜಸ್ಸಿನಿಂದ ಸೂರ್ಯನೇ ಮೊದಲಾದ ಮಿಕ್ಕವರ ತೇಜಸ್ಸುಗಳೆಲ್ಲವನ್ನೂ ಧಿಕ್ಕರಿಸಿ ಕೃಪಾವಂತನಾಗಿ ಬ್ರಹ್ಮನ ಮುಂದುಗಡೆಯಲ್ಲಿ ಬಂದು ನಿಂತನು.

೧೪. ಆತನನ್ನು ಕಂಡು ಬ್ರಹ್ಮದೇವನೂ ವಿಸ್ಮಯಗೊಂಡು ವ್ಯಾಕುಲಚಿತ್ತನಾಗಿ ಪ್ರಸನ್ನವಾದ ದೃಷ್ಟಿಯಿಂದ ನೋಡುತ್ತ ಸಾಷ್ಟಾಂಗ ಪ್ರಣಾಮವನ್ನಾಚರಿಸಿ ಸ್ತೋತ್ರವನ್ನು ಮಾಡಿದನು.

೧೫. ಬ್ರಹ್ಮನು ಸ್ತುತಿಸುತ್ತಾನೆ:—"ಕಮಲದಂತಿರುವ ನಾಭಿಯುಳ್ಳ

ನಮೋ ವಿಜ್ಞಾನಮಾತ್ರಾಯ ಗುಹಾವಾಸನಿವಾಸಿನೇ ।
ಹೃಷೀಕೇಶಾಯ ಶಾಂತಾಯ ತುಭ್ಯಂ ಭಗವತೇ ನಮಃ ॥ ೧೬ ॥
ಸ್ವಭಕ್ತರಕ್ಷಣಕೃತೇ ಧೃತದೇಹಾಯ ಶಾರ್ಙ್ಗಿಣೇ ।
ಅನಂತಕ್ಲೇಶನಾಶಾಯ ಗದಿನೇ ಬ್ರಹ್ಮಣೇ ನಮಃ ॥ ೧೭ ॥
ಸಂಸಾರವಿವಿಧಾಽಸಾರ ನಿವೃತ್ತಿ ಕೃತ ಕರ್ಮಣೇ ।
ರಕ್ಷಿತ್ರೇ ಸರ್ವಜಂತೂನಾಂ ವಿಷ್ಣವೇ ಜಿಷ್ಣವೇ ನಮಃ ॥ ೧೮ ॥
ನಮೋ ವಿಶ್ವಂಭರಾಽಶೇಷನಿವೃತ್ತಗುಣವೃತ್ತಯೇ ।
ಸುರಾಽಸುರವರಸ್ತಂಭನಿವೃತ್ತಿಸ್ಥಿತಿಕೀರ್ತಯೇ ॥ ೧೯ ॥
ಇತೀರಿತಃ ಸುರಪತಿನಾ ಮಹೇಶ್ವರೋ
ಹೃದಿಸ್ಥಿತೋಽಖಿಲವಿದಶೇಷಕರ್ಮಭಿಃ ।
ತತೋಽನಂತರಂ ಸಪದಿ ಗತೋ ನಿಬಧ್ಯ ತೌ
ಸುರದ್ರುಹೌ ಕಿಲ ನಿಜಘಾನ ಲೀಲಯಾ ॥ ೨೦ ॥

---

ವನೂ, ಮಹದೈಶ್ವರ್ಯಕ್ಕೆ ಆಶ್ರಯನಾದವನೂ, ಅನಪಾಯಿನಿಯಾದ ಕಮಲೆಗೆ ನಿವಾಸಭೂತನೂ, ವಿಶಾಲವಾದ ತುಳಸೀದಳಗಳ ವನಮಾಲೆಯನ್ನು ಧರಿಸಿರುವವನೂ ಆದ ನಿನಗೆ ನಮಸ್ಕರಿಸುವೆನು!

೧೬. ಕೇವಲ ಜ್ಞಾನಸ್ವರೂಪನೂ, ಸಕಲ ಜೀವರ ಹೃದಯಗಹ್ವರದಲ್ಲಿ ನೆಲಸಿರುವವನೂ, ಇಂದ್ರಿಯಗಳಿಗೆ ನಿಯಾಮಕನೂ, ಶಾಂತಿಗುಣನಿಧಿಯೂ ಷಡ್ಗುಣೈಶ್ವರ್ಯಭರಿತನೂ ಆದ ನಿನಗೆ ನಮಸ್ಕಾರವು!

೧೭. ನಿನ್ನ ಅಂತರಂಗಭಕ್ತರನ್ನು ಕಾಪಾಡುವುದಕ್ಕಾಗಿ ಅನೇಕ ದೇಹಗಳನ್ನು ಧರಿಸುವವನೂ, ಶಾರ್ಙ್ಗವೆಂಬ ಧನುಸ್ಸನ್ನೇ ಆಯುಧವಾಗಿ ಹಿಡಿದಿರುವವನೂ, ಅನಂತವಾದ ಸಂಸಾರವೆಂಬ ಕ್ಲೇಶವನ್ನು ನಾಶಗೊಳಿಸುವವನೂ, ಗದಾಯುಧಪಾಣಿಯೂ ಮಹತ್ತರನೂ ಆದ ನಿನಗೆ ನಮಸ್ಕರಿಸುವೆನು!

೧೮. ಅನೇಕ ವಿಧಗಳಾದ ನಿಸ್ಸಾರಪದಾರ್ಥಗಳಿಂದ ಕೂಡಿ ಅಪಾರ್ಥನಾಮವುಳ್ಳ ಸಂಸಾರದ ನಿವೃತ್ತಿಗಾಗಿ ಕರ್ಮವನ್ನಾಚರಿಸುವವನೂ, ಸಮಸ್ತ ಜೀವರಾಶಿಗಳನ್ನು ರಕ್ಷಿಸುವವನೂ, ಸರ್ವವ್ಯಾಪಕನೂ, ಅಖಂಡವಿಜಯಿಯೂ ಆದ ನಿನಗೆ ನಮಸ್ಕಾರವನ್ನು ಮಾಡುವೆನು!

೧೯. ತ್ರಿಗುಣವ್ಯಾಪಾರಗಳ ಕಾರ್ಯವಾದ ಪ್ರಪಂಚದ ಆತ್ಯಂತಿಕ ನಿವೃತ್ತಿಯಿಂದ ಲಕ್ಷಿತನಾದವನೂ, ದೇವಾಸುರಾದಿ ಸಕಲ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳನ್ನು ಸ್ವತಂತ್ರವಾಗಿ ಮಾಡುವ ಕೀರ್ತಿಯುಳ್ಳವನೂ ಆದ ನಿನಗೆ ನಮಸ್ಕರಿಸುವೆನು!''

೨೦. ಇಂತು ಬ್ರಹ್ಮದೇವನಿಂದ ಭಕ್ತಿಪೂರ್ವಕವಾಗಿ ಸಂಸ್ತುತನಾದ

ತತೋ ನಿಗಮಮಾದಾಯ ಬ್ರಹ್ಮಣೋಽಂತಿಕಮಾಯಯೌ ।
ದತ್ವಾ ಸ್ವನಿಗಮಂ ತಸ್ಮೈ ಸ್ವಸ್ಥೋಽಭೂತ್ಸ ಸಮೀಡಿತಃ ॥ ೨೧ ॥
ತತಃ ಪ್ರಭೃತಿ ತತ್ತೀರ್ಥಂ ಬ್ರಹ್ಮಣಾ ಪ್ರಕಟೀಕೃತಂ ।
ಬ್ರಹ್ಮಕುಂಡಮಿತಿ ಖ್ಯಾತಂ ತ್ರಿಷು ಲೋಕೇಷು ವಿಶ್ರುತಂ ॥ ೨೨ ॥
ಯಸ್ಯ ದರ್ಶನಮಾತ್ರೇಣ ಮಹಾಪಾತಕಿನೋ ಜನಾಃ ।
ವಿಮುಕ್ತಕಿಲ್ಬಿಷಾಃ ಸದ್ಯೋ ಬ್ರಹ್ಮಲೋಕಂ ವ್ರಜಂತಿ ತೇ ॥ ೨೩ ॥
ಸ್ನಾನಂ ಕುರ್ವಂತಿ ಯೇ ಲೋಕಾಃ ವ್ರತಚರ್ಯಾಮಥಾಪಿ ವಾ ।
ಬ್ರಹ್ಮಲೋಕಮತಿಕ್ರಮ್ಯ ವಿಷ್ಣುಲೋಕಂ ವ್ರಜಂತಿ ತೇ ॥ ೨೪ ॥
ಸ್ಕಂದ ಉವಾಚ :—
ತತಃ ಕಿಮಕರೋದ್ಧಾತಾ ಲಬ್ಧ್ವಾ ವೇದಾನ್ಜನಾರ್ದನಾತ್ ।
ಏತದನ್ಯಚ್ಚ ಸರ್ವಂ ಮೇ ಕೃಪಯಾ ವದ ಸಾಂಪ್ರತಂ ॥ ೨೫ ॥

---

ಜಗತ್ಸ್ವಾಮಿಯು ನಿಶ್ಶೇಷಕರ್ಮಗಳ ಫಲವಾಗಿ ಆತನ ಹೃದಯದಲ್ಲಿ ನೆಲಸಿರುವ ನಾದದರಿಂದ ಸಕಲವನ್ನೂ ತಿಳಿದವನಾಗಿ, ತತ್‍ಕ್ಷಣದಲ್ಲಿಯೇ ಆ ಮಧು ಕೈಟಭರಿದ್ದಲ್ಲಿಗೆ ಹೊರಟು ದೇವದ್ವೇಷಿಗಳಾದ ಅವರಿಬ್ಬರನ್ನೂ ಬಂಧಿಸಿ ಅನಾಯಾಸವಾಗಿಯೇ ಅವರನ್ನು ಸಂಹರಿಸಿದನು.

೨೧. ಬಳಿಕ ವೇದರಾಶಿಯನ್ನು ತಂದು ಬ್ರಹ್ಮನ ಸಮೀಪವನ್ನು ಸೇರಿ ಆತನಿಗೆ ತನ್ನ ಆಜ್ಞಾರೂಪವಾದ ವೇದವನ್ನು ಹಿಂದಕ್ಕೆ ಕೊಟ್ಟು, ಆತನಿಂದ ಸಂಸ್ತುತನಾಗಿ ಯಥಾಸುಖವಾಗಿ ವೈಕುಂಠದಲ್ಲಿ ವಾಸಮಾಡುತ್ತಿದ್ದನು.

೨೨. ಅಂದು ಮೊದಲ್ಗೊಂಡು ಆ ತೀರ್ಥವು ಬ್ರಹ್ಮನಿಂದ ಪ್ರಸಿದ್ಧಿಯನ್ನು ಹೊಂದಿದುದಾಗಿ ಬ್ರಹ್ಮಕುಂಡವೆಂದು ಎಲ್ಲರಿಂದಲೂ ಕರೆಯಲ್ಪಡುತ್ತ ಮೂರು ಲೋಕಗಳಲ್ಲಿಯೂ ವಿಶ್ರುತವಾಗಿರುವುದು.

೨೩. ಆ ತೀರ್ಥದ ದರ್ಶನಮಾತ್ರದಿಂದಲೇ ಮಹಾಪಾತಕಗಳನ್ನುಮಾಡಿದ ಜನರೂ ಕೂಡ ಕ್ಷಣಮಾತ್ರದಲ್ಲಿಯೇ ತಮ್ಮ ಪಾಪಗಳನ್ನು ಕಳೆದುಕೊಂಡು ಬ್ರಹ್ಮಲೋಕವನ್ನು ಸೇರುವರು.

೨೪. ಅಲ್ಲಿ ಯಾವ ಜನರು ಸ್ನಾನವನ್ನು ಮಾಡುವರೊ, ವ್ರತನಿಯಮ ಗಳನ್ನಾಚರಿಸುವರೊ, ಅವರು ಬ್ರಹ್ಮಲೋಕವನ್ನು ಸಹ ಅತಿಕ್ರಮಿಸಿ ವೈಕುಂಠ ಪದವಿಯನ್ನು ಸೇರುವರು.

೨೫. ಸ್ಕಂದನು ಪ್ರಶ್ನೆಮಾಡುತ್ತಾನೆ:—ಇಂತು ಬ್ರಹ್ಮದೇವನು ಮಹಾ ವಿಷ್ಣುವಿನಿಂದ ವೇದಗಳನ್ನು ಪಡೆದ ಮೇಲೆ ಏನನ್ನು ಮಾಡಿದನು? ಇದನ್ನೂ ಇದಕೆ ಸಂಬಂಧಿಸಿದ ಇತರ ವಿಷಯಗಳನ್ನೂ ದಯವಿಟ್ಟು ಈಗ ನನಗೆ ತಿಳಿಸು.

ಮಹಾದೇವ ಉವಾಚ:—

ಚತುರ್ಣಾಮಪಿ ವೇದಾನಾಂ ದೃಷ್ಟ್ವಾ ಬದರಿಕಾಶ್ರಮಂ ।
ಮತಿರ್ನ ಜಾಯತೇ ಗಂತುಂ ಬ್ರಹ್ಮಣಾ ಸಹ ಪುತ್ರಕ ॥ ೨೬ ॥
ತತಸ್ತು ವಿಕಲಂ ದೃಷ್ಟ್ವಾ ಬ್ರಹ್ಮಾಣಂ ಜನವಾಸಿನಃ ।
ಸಿದ್ಧಾಸ್ತು ವಿಧಿವತ್ಸ್ತುತ್ವಾ ಪ್ರಣಿಪತ್ಯೇದಮಬ್ರುವನ್ ॥ ೨೭ ॥

ಸಿದ್ಧಾ ಊಚುಃ:—

ಆಜ್ಞಾ ಭಗವತಃ ಕಾರ್ಯಾ ಸರ್ವೈಃ ಸ್ಥಾವರಜಂಗಮೈಃ ।
ಭಗವಾನ್ಸರ್ವಜಂತೂನಾಂ ಕರ್ತಾ ಹರ್ತಾ ಪಿತಾ ಗುರುಃ ॥ ೨೮ ॥
ಸ್ಥಿತಿರ್ಬ್ರಹ್ಮಾಂತಿಕೇ ವಶ್ಚ ಹರಿಣೈವಾನುಕಲ್ಪಿತಾ ।
ನಿವೃತ್ತಿರ್ವರ್ತತೇ ಚೈಷಾ ತಥಾಪ್ಯೇತನ್ನಿರಾಮಯಂ ॥ ೨೯ ॥
ಏಕಾಂತೇ ದ್ರವರೂಪೇಣ ಮೂರ್ತಿರ್ವೋಽತ್ರಾವತಿಷ್ಠತಾಂ ।
ದ್ವಿತೀಯಾ ಬ್ರಹ್ಮಣಾ ಸಾರ್ಧಂ ಬ್ರಹ್ಮಲೋಕಂ ವ್ರಜೇತ್ಪುನಃ ॥ ೩೦ ॥
ತತಃ ಸಹೃದಯಾ ವೇದಾಃ ದ್ವೈಧೀಕೃತ್ವಾತ್ಮರೂಪಕಾಃ ।
ಬ್ರಹ್ಮಣಾ ಬ್ರಹ್ಮಲೋಕಂ ತೇ ಯಯುಃ ಸಾರ್ಧಂ ಪ್ರಹರ್ಷಿತಾಃ॥ ೩೧ ॥

---

೨೬. ಮಹಾದೇವನು ಹೇಳುತ್ತಾನೆ:—ಎಲೈ ಪುತ್ರನೆ! ಬಳಿಕ ಬದರಿಕಾಶ್ರಮವನ್ನು ಕಂಡಮಾತ್ರದಿಂದಲೇ ನಾಲ್ಕು ವೇದಗಳಿಗೂ ಬ್ರಹ್ಮದೇವನೊಡನೆ ಸತ್ಯಲೋಕಕ್ಕೆ ಪ್ರಯಾಣಮಾಡಲು ಕುತೂಹಲವೇ ಇಲ್ಲದಂತಾಯಿತು.

೨೭. ಇಂತು ವೇದೋದ್ಧಾರವಾದ ಮೇಲೆಯೂ ಬ್ರಹ್ಮನು ನಿಶ್ಶಕ್ತನಾಗಿದ್ದುದನ್ನು ಕಂಡು ಜನಲೋಕದ ನಿವಾಸಿಗಳಾದ ಸಿದ್ಧರೆಲ್ಲರೂ ವೇದಗಳನ್ನು ವಿಧ್ಯುಕ್ತರೀತಿಯಿಂದ ಸ್ತೋತ್ರಮಾಡಿ ನಮಸ್ಕರಿಸಿ ಹೇಳತೊಡಗಿದರು.

೨೮. ಸಿದ್ಧರು ಹೇಳುತ್ತಾರೆ:—"ಎಲೈ ವೇದಗಳೇ! ಸರ್ವಸ್ವಾಮಿಯಾದ ಭಗವಂತನ ಆಜ್ಞೆಯು ಸಕಲ ಸ್ಥಾವರ ಜಂಗಮ ಜಂತುಗಳಿಗೂ ಸಮ್ಮಾನ್ಯವೂ ಪರಿಪಾಲ್ಯವೂ ಆಗಿರುವುದು. ಆತನೇ ಸಮಸ್ತ ಪ್ರಾಣಿಗಳಿಗೂ ಸೃಷ್ಟಿಕರ್ತನೂ, ಸಂಹಾರಕನೂ, ಪಾಲಕನೂ, ಗುರುವೂ ಆಗಿರುವನಲ್ಲವೆ.

೨೯. ನಿಮಗೆ ಬ್ರಹ್ಮದೇವನ ಸಮೀಪದಲ್ಲಿ ನೆಲಸುವಿಕೆಯು ಶ್ರೀಮನ್ನಾರಾಯಣನಿಂದಲೇ ಅನುಜ್ಞಾಪಿತವಾಗಿರುವುದು. ಇದರಿಂದ ನಿಮಗೆ ಈ ಸ್ಥಳದ ನಿವಾಸವು ಇಲ್ಲದಂತಾಗುವುದಾದರೂ ನಿಷ್ಕಂಟಕವಾದ ಒಂದು ಉಪಾಯವನ್ನು ನಿಮಗಾಗಿ ಯೋಚಿಸಿರುವೆವು.

೩೦. ನಿಮ್ಮ ಸಾನ್ನಿಧ್ಯದ ಒಂದು ಅಂಶದಿಂದ ಜಲರೂಪವನ್ನು ಹೊಂದಿ ನೀವು ಇಲ್ಲಿಯೇ ವಾಸಮಾಡಿಕೊಂಡಿರಿ. ನಿಮ್ಮ ಎರಡನೆಯ ಅಂಶವು ಬ್ರಹ್ಮದೇವನೊಡನೆ ಸತ್ಯಲೋಕಕ್ಕೆ ಹೊರಡಲಿ."

೩೧. ಈ ಮಾತುಗಳನ್ನು ಕೇಳಿ ವೇದಾಭಿಮಾನಿದೇವತೆಗಳಿಗೆ ಮನಸ್ಸಂ

**ತತಸ್ತ್ರಿಲೋಕಂ ವಿಧಿವತ್ಸಸರ್ಜ ಚತುರಾನನಃ ।**
**ದ್ರವರೂಪೇಷು ವೇದೇಷು ಸ್ನಾನದಾನತಪಃಕ್ರಿಯಾಃ ।**
**ಕೃತಾ ವಿಚ್ಛೇದಿತಾ ನ ಸ್ಯುರ್ಯಾವದಾಭೂತಸಂಪ್ಲವಂ ॥ ೩೨ ॥**
**ಫಲಮುದ್ದಿಶ್ಯ ಕುರ್ವಂತಿ ಉಪವಾಸತ್ರಯಂ ನರಾಃ ।**
**ಚತುರ್ಣಾಮಪಿ ವೇದಾನಾಂ ವ್ಯಾಖ್ಯಾತಾರೋ ನ ಸಂಶಯಃ ॥ ೩೩ ॥**
**ಅನುಕ್ರಮೇಣ ತಿಷ್ಠಂತಿ ವೇದಾಶ್ಚತ್ವಾರ ಏವ ಚ ।**
**ಋಗ್ಯಜುಃಸಾಮಾಥರ್ವಾಖ್ಯಾ ಭಗವತ್ಪಾರ್ಶ್ವವರ್ತಿನಃ ॥ ೩೪ ॥**
**ಯೇ ಪುಣ್ಯವಂತೋಽಕಲುಷಾ ವೇದವೇದಾಂಗಪಾರಗಾಃ ।**
**ತೇ ವೇದಘೋಷಂ ವಿರಲಾಃ ಶೃಣ್ವಂತ್ಯಪಿ ಕಲೌ ಯುಗೇ ॥ ೩೫ ॥**
**ಚತುರ್ಣಾಮಪಿ ವೇದಾನಾಮುದಗಸ್ತ ಸರಸ್ವತೀ ।**
**ಜಪ್ತ್ವಾಥ ಸಾ ನೃಣಾಂ ಹಂತಿ ಜಡತಾಂ ಜಲರೂಪಿಣೀ ॥ ೩೬ ॥**

---

ತೋಷವುಂಟಾಗಲು ವೇದಗಳು ತಮ್ಮ ರೂಪವನ್ನು ಎರಡು ಭಾಗವಾಗಿ ಮಾಡಿಕೊಂಡು, ಸಂಭ್ರಮದಿಂದ ಕೂಡಿದವುಗಳಾಗಿ ತಮ್ಮ ಅರ್ಧಾಂಶದೊಡನೆ ಬ್ರಹ್ಮನ ಸಂಗಡ ಬ್ರಹ್ಮಲೋಕವನ್ನು ಸೇರಿದುವು.

೩೨. ಅವುಗಳ ಸಹಾಯದಿಂದ ಬ್ರಹ್ಮನು ಪೂರ್ವಕಲ್ಪದಲ್ಲಿದ್ದಂತೆಯೇ ಪುನಃ ಜಗತ್ಸೃಷ್ಟಿಯನ್ನು ಮಾಡಲು ಶಕ್ತನಾದನು. ವೇದಗಳ ಸಾಕ್ಷಾದ್ರೂಪವೆನಿಸಿರುವ ಈ ಜಲದಲ್ಲಿ ಮಾಡಿದ ಸ್ನಾನವೂ, ದಾನಗಳೂ, ತಪಸ್ಸುಮೊದಲಾದ ಸತ್ಕರ್ಮಗಳೂ ಬ್ರಹ್ಮಾಂಡದ ಪ್ರಳಯವಾಗುವವರೆಗೂ ನಿರಂತರವಾದ ಫಲವನ್ನು ಕೊಡುತ್ತಿರುವುವು.

೩೩. ಯಾವ ಮನುಷ್ಯರು ಈ ಕುಂಡದ ಸಮೀಪದಲ್ಲಿ ಫಲಾಪೇಕ್ಷೆಯಿಂದ ಕೂಡಿದವರಾಗಿ ಮೂರು ದಿವಸದ ಉಪವಾಸವನ್ನು ಮಾಡುವರೊ, ಅವರು ನಾಲ್ಕು ವೇದಗಳಿಗೂ ವ್ಯಾಖ್ಯಾನ ಗ್ರಂಥಗಳನ್ನು ಬರೆಯುವ ಸಾಮರ್ಥ್ಯವನ್ನು ಪಡೆಯುವರೆಂಬುದರಲ್ಲಿ ಸಂದೇಹವಿಲ್ಲವು.

೩೪. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದಗಳೆಲ್ಲವೂ ಭಗವಂತನ ಪಾರ್ಶ್ವದಲ್ಲಿಯೇ ಸೇವೆಯನ್ನು ಮಾಡುತ್ತ ಅನುಕ್ರಮದಿಂದಲೇ ಕಾದು ನಿಂತಿರುವುವು.

೩೫. ಯಾವ ಪುಣ್ಯಪುರುಷರು ನಿಷ್ಪಾಪರಾಗಿರುವರೊ, ವೇದಗಳಲ್ಲಿಯೂ ವೇದಾಂಗಗಳಲ್ಲಿಯೂ ನಿಷ್ಣಾತರಾಗಿರುವರೊ, ಅತ್ಯಂತ ವಿರಳರಾದ ಆ ಮಹಾತ್ಮರು ಈ ಕಲಿಯುಗದಲ್ಲಿಯೂ ಕೂಡ ಆ ಕುಂಡದಲ್ಲಿ ವೇದ ಘೋಷವನ್ನು ಕೇಳಲು ಸಮರ್ಥರಾಗುವರು.

೩೬. ಈ ನಾಲ್ಕು ವೇದಗಳ ಸಾರರೂಪವಾದ ಕುಂಡದಿಂದ ಸರಸ್ವತೀ ನದಿಯು ಉದ್ಭವಿಸಿರುವುದು. ಜಲಪ್ರವಾಹದ ರೂಪದಿಂದಿರುವ ಈ ನದಿಯ

**ಸರಸ್ವತ್ಯಾ ಜಲೇ ಸ್ಥಿತ್ವಾ ಜಪಂ ಕೃತ್ವಾ ಸಮಾಹಿತಃ ।**
**ಮನೋಽಸ್ತ್ರಸ್ಯ ನ ವಿಚ್ಛೇದಃ ಕದಾಚಿದಪಿ ಜಾಯತೇ ॥ ೩೭ ॥**
**ವೇದವ್ಯಾಸೋಽಪಿ ಭಗವಾನ್ಯತ್ಪ್ರಸಾದಾದುದಾರಧೀಃ ।**
**ಪುರಾಣಸಂಹಿತಾರ್ಥಜ್ಞೋಽಭವದತ್ರ ನ ಸಂಶಯಃ ॥ ೩೮ ॥**
**ತ್ರಯಾಣಾಮಪಿ ಲೋಕಾನಾಂ ಹಿತಾಯ ಜಗತಾಂ ಪತಿಃ ।**
**ಸ್ಥಾಪಯಾಮಾಸ ವಿಧಿನಾ ವಾಣೀಂ ವಾಗ್ವಿಭವಪ್ರದಾಂ ॥ ೩೯ ॥**
**ದರ್ಶನಸ್ಪರ್ಶನಸ್ನಾನಪೂಜಾಸ್ತುತ್ಯಭಿವಂದನೈಃ ।**
**ಸರಸ್ವತ್ಯಾ ನ ವಿಚ್ಛೇದಃ ಕುಲೇ ತಸ್ಯ ಕದಾಚನ ॥ ೪೦ ॥**
**ಮಂತ್ರಸಿದ್ಧಿರ್ವಿಶೇಷೇಣ ಸರಸ್ವತ್ಯಾಸ್ತಟೇ ನೃಣಾಂ ।**
**ಜಪತಾಮಚಿರೇಣೈವ ಜಾಯತೇ ನಾಽತ್ರಸಂಶಯಃ ॥ ೪೧ ॥**
**ಬಹುನಾ ಕಿಮಿಹೋಕ್ತೇನ ವಾಣೀ ವಾಗ್ವಿಭವಪ್ರದಾ ।**
**ದ್ರವರೂಪಧರಾ ನೄಣಾಂ ದರ್ಶನಾತ್ಪೂತಿರುಜ್ಜ್ವಲಾ ॥ ೪೨ ॥**

---

ನಾಮವನ್ನು ಜಪಿಸಿದ ಮಾತ್ರದಿಂದಲೇ ಮನುಷ್ಯರ ಜಾಡ್ಯಗಳೆಲ್ಲವೂ ನಾಶವಾಗುವುವು.

೩೭. ಯಾವ ಮನುಷ್ಯನು ಸರಸ್ವತೀನದಿಯ ಜಲದಲ್ಲಿ ನಿಂತು ಸಮಾಧಿಯುಕ್ತವಾದ ಮನಸ್ಸಿನಿಂದ ಜಪವನ್ನು ಮಾಡುವನೊ, ಆತನ ಬುದ್ಧಿಶಕ್ತಿಗೆ ಗ್ಲಾನಿಯೆಂಬುದು ಎಂದಿಗೂ ಉಂಟಾಗಲಾರದು.

೩೮–೩೯. ವಿಷ್ಣುವಿನ ಅವತಾರವೆನಿಸಿದ ಮಹರ್ಷಿಯಾದ ವೇದವ್ಯಾಸನೂ ಸಹ ಈ ನದಿಯ ಪ್ರಸಾದದಿಂದ ವಿಶಾಲಬುದ್ಧಿಯುಳ್ಳವನಾಗಿ ಪುರಾಣಗಳ ಮತ್ತು ಸಂಹಿತೆಗಳ ಅರ್ಥಗಳನ್ನು ಆಮೂಲಾಗ್ರವಾಗಿ ತಿಳಿದುಕೊಂಡನೆಂಬುದರಲ್ಲಿ ಸಂದೇಹವಿಲ್ಲವು. ಮೂರು ಲೋಕಗಳಿಗೂ ನಿಯಾಮಕನಾದ ಶ್ರೀಹರಿಯು ಅವುಗಳಲ್ಲಿ ವಾಸಿಸುವ ಜನರ ಹಿತಕ್ಕೋಸ್ಕರ ಬ್ರಹ್ಮನೊಡನೆ ವಾಗ್ವೈಭವವನ್ನು ಕೊಡುವ ಸರಸ್ವತಿಯನ್ನು ಭೂಲೋಕದಲ್ಲಿ ನದಿಯಾಗಿ ಸ್ಥಾಪಿಸಿದನು.

೪೦. ಆ ಪುಣ್ಯನದಿಯಾದ ಸರಸ್ವತಿಯ ದರ್ಶನ, ಸ್ಪರ್ಶನ, ಸ್ನಾನ, ಪೂಜೆ, ಸ್ತೋತ್ರ, ನಮಸ್ಕಾರ ಮುಂತಾದ ಸೇವೆಗಳನ್ನು ಮಾಡುವುದರಿಂದ ಯಾವ ಮನುಷ್ಯನ ಕುಲಕ್ಕೂ ವಿಚ್ಛಿತ್ತಿಯು ಯಾವ ಕಾಲದಲ್ಲಿಯೂ ಉಂಟಾಗುವುದಿಲ್ಲ.

೪೧. ಸರಸ್ವತೀನದಿಯ ತೀರದಲ್ಲಿ ಕುಳಿತು ಜಪವನ್ನು ಮಾಡುವ ಮನುಷ್ಯರಿಗೆ ವಿಶೇಷವಾಗಿ ಅತ್ಯಲ್ಪಕಾಲದಲ್ಲಿಯೇ ಮಂತ್ರ ಸಿದ್ಧಿಯುಂಟಾಗುವುದು. ಈ ವಿಷಯದಲ್ಲಿ ಸಂಶಯವೇ ಇಲ್ಲವು.

೪೨. ಹೆಚ್ಚಾಗಿ ಹೇಳಿದುದರಿಂದೇನು? ಸಕಲ ಜಂತುಗಳಿಗೂ ಪರಾ, ಪಶ್ಯಂತೀ, ಮಧ್ಯಮ, ವೈಖರಿಗಳೆಂಬ ವಿವಿಧ ಭಾಷೆಗಳ ಪಾಂಡಿತ್ಯವನ್ನು ನೀಡುವ

ತತೋಽರ್ವಾಗ್ದಕ್ಷಿಣೇ ಭಾಗೇ ದ್ರವಧಾರೇತಿ ವಿಶ್ರುತಂ ।
ತೀರ್ಥಮಿಂದ್ರಪದಂ ತಪಶ್ಚಕ್ರೇ ಯತ್ರ ಪುರಂದರಃ ॥ ೪೩ ॥
ಸುದಾರುಣಂ ತಪಃ ಕೃತ್ವಾ ಪರಿತೋಷ್ಯ ಜನಾರ್ದನಂ ।
ಪದಮೈಂದ್ರಂ ಸಮಾಲೇಭೇ ಸುರಾಸುರನಮಸ್ಕೃತಂ ॥ ೪೪ ॥
ತಪೋ ದಾನಂ ಜಪೋ ಹೋಮೋ ವ್ರತಾನಿ ನಿಯಮಾ ಯಮಾಃ ।
ತತ್ರಾಽನಂತಗುಣಂ ಪ್ರೋಕ್ತಂ ತತ್ತೀರ್ಥಮತಿದುರ್ಲಭಂ ॥ ೪೫ ॥
ಪ್ರತಿಮಾಸೇ ತ್ರಯೋದಶ್ಯಾಂ ಶುಕ್ಲಾಯಾಂ ಹರಿತೋಷಣೇ ।
ಸ್ನಾತ್ವಾ ಸುತೀರ್ಥೇ ಸುತ್ರಾಮಾ ಚ್ಛಂದಂ ಚೋಪೇತ್ಯ ಸಂಗತಃ ॥ ೪೬ ॥
ಉಪವಾಸದ್ವಯಂ ಕೃತ್ವಾ ಪೂಜಯಿತ್ವಾ ಜನಾರ್ದನಂ ।
ಸರ್ವಪಾಪವಿನಿರ್ಮುಕ್ತಃ ಶಕ್ರಲೋಕೇ ಮಹೀಯತೇ ॥ ೪೭ ॥
ತತ್ರೈವ ಮಾನಸೋದ್ಭೇದಃ ಸರ್ವಪಾಪಪ್ರಣಾಶನಃ ।
ದುರ್ಲಭಃ ಸರ್ವಜಂತೂನಾಂ ಯತ್ರ ತೇ ಸ್ಯುರ್ಮಹರ್ಷಯಃ ॥ ೪೮ ॥

---

ಸರಸ್ವತೀದೇವಿಯೇ ನೀರಿನ ರೂಪವನ್ನು ಧರಿಸಿ ಇಲ್ಲಿ ಪ್ರವಹಿಸುತ್ತಿರುವಳು ಈ ನದಿಯನ್ನು ದರ್ಶನಮಾಡಿದ ಮಾತ್ರದಿಂದಲೇ ಮಾನವರಿಗೆ ಉಜ್ಜ್ವಲವಾದ ಪವಿತ್ರತೆಯುಂಟಾಗುವುದು.

೪೩. ಆ ತೀರ್ಥಕ್ಕೆ ಈಚೆಗೆ ದಕ್ಷಿಣಭಾಗದಲ್ಲಿ ದ್ರವಧಾರೆಯೆಂಬ ಇಂದ್ರನಿಗೆ ಅಭಿಮಾನಾಸ್ಪದವಾದ ಪ್ರಖ್ಯಾತ ತೀರ್ಥವೊಂದಿರುವುದು. ಅಲ್ಲಿಯೇ ಮಹೇಂದ್ರನು ಹಿಂದೆ ಉಗ್ರವಾದ ತಪಸ್ಸನ್ನಾಚರಿಸಿದನು.

೪೪. ಭಯಂಕರವಾದ ತಪಸ್ಸನ್ನು ಬಹುಕಾಲದವರೆಗೂ ಆಚರಿಸಿ ಪರಮಾತ್ಮನನ್ನು ಸಂತೋಷಗೊಳಿಸಿ ಸಕಲ ದೇವಾಸುರರಿಂದಲೂ ಪೂಜನೀಯವೆನಿಸಿರುವ ಮಹೇಂದ್ರಪದವಿಯನ್ನು ಆತನು ಪಡೆದನು.

೪೫. ಆ ತೀರ್ಥದಲ್ಲಿ ಮಾಡಿದ ತಪಸ್ಸು, ದಾನ, ಜಪ, ಹೋಮ, ವ್ರತಗಳು, ಕರ್ಮೇಂದ್ರಿಯ ನಿಗ್ರಹ, ಜ್ಞಾನೇಂದ್ರಿಯ ನಿಗ್ರಹ — ಮುಂತಾದ ಕರ್ಮವೆಲ್ಲವೂ ಅನಂತಗುಣಿತವಾದ ಫಲವನ್ನು ಕೊಡುವುದು. ಈ ತೀರ್ಥದ ಸೇವೆಯು ಮನುಷ್ಯರಿಗೆ ಪರಮ ದುರ್ಲಭವೆನಿಸಿರುವುದು.

೪೬–೪೭. ಪ್ರತಿಮಾಸದ ಶುಕ್ಲಪಕ್ಷದ ತ್ರಯೋದಶಿಯ ದಿನದಲ್ಲಿ ಗಂಗಾನದಿಯಲ್ಲಿ ಸ್ನಾನವನ್ನು ಮಾಡಿಕೊಂಡು ಮಹೇಂದ್ರತೀರ್ಥವನ್ನು ಸೇರಿ ಸಂಯಮ ಸಹಿತನಾಗಿ ಎರಡು ಉಪವಾಸಗಳನ್ನು ಮಾಡಿ ಶ್ರೀಮನ್ನಾರಾಯಣನನ್ನು ಪೂಜಿಸಲು ಮನುಷ್ಯನು ಸಮಸ್ತಪಾಪಗಳಿಂದಲೂ ವಿಮುಕ್ತನಾಗಿ ಮಹೇಂದ್ರಲೋಕದಲ್ಲಿ ಉತ್ತಮಪದವಿಯನ್ನು ಪಡೆದು ಪೂಜ್ಯನಾಗುವನು.

೪೮. ಅಲ್ಲಿಯೇ ಸಕಲ ಪಾಪಗಳನ್ನೂ ನಾಶಗೊಳಿಸುವ ಮಾನಸೋದ್ಭೇದ

**ಮಾನಸಂ ಚಿದಚಿದ್ಗ್ರಂಥಿಮುದ್ಗ್ರಥ್ನಂತಿ ಚ ಸರ್ವತಃ ।**
**ಮಾನಸೋದ್ಭೇದ ಇತ್ಯಾಖ್ಯಾ ಋಷಿಭಿಃ ಪರಿಗೀಯತೇ ॥ ೪೯ ॥**
**ಭಿಂದಂತಿ ಹೃದಯಗ್ರಂಥೀಃ ಛಿಂದಂತಿ ಬಹುಸಂಶಯಾಃ ।**
**ಕರ್ಮಾಣಿ ಕ್ಷಪಯಂತ್ಯಸ್ಮಾನ್ಮಾನಸೋದ್ಭೇದ ಇತ್ಯಭೂತ್ ॥ ೫೦ ॥**
**ಯದಿ ಭಾಗ್ಯವಶಾದತ್ರ ಬಿಂದುಮಾತ್ರಂ ಲಭೇನ್ನರಃ ।**
**ತತ್ಕ್ಷಣಾನ್ಮುಕ್ತಿಮಾಪ್ನೋತಿ ಕಿಮುತಸ್ಮಾದಧಿಕಂ ವದೇತ್ ॥ ೫೧ ॥**
**ಗಿರಿದರೀನಿಲಯೇ ನಿವಸಂತ್ಯಮೀ**
**ಋಷಿಗಣಾಃ ಫಲಮೂಲಜಲಾಶನಾಃ ।**
**ಜಿತಮನೋವಿಷಯಾಃ ಶಿತಬುದ್ಧಯಃ**
**ಕಲಿಭಯಾದಿವ ಪಾಪಭಯಾಕುಲಾಃ ॥ ೫೨ ॥**

---

ವೆಂಬ ತೀರ್ಥವೊಂದಿರುವುದು. ಆ ತೀರ್ಥವು ಸಾಧಾರಣಪ್ರಾಣಿಗಳಿಗೆ ಸೇವಿಸಲು ದುಸ್ಸಾಧ್ಯವಾಗಿರುವುದು. ಅಲ್ಲಿಯೇ ಅನೇಕ ಜನ ಮಹರ್ಷಿಗಳು ವಾಸಮಾಡುತ್ತಿರುವರು.

೪೯. ಮಾನವನ ಮನಸ್ಸಿನಲ್ಲಿರುವ ಚಿಜ್ಜಡಗ್ರಂಥಿಯನ್ನು ನಿಶ್ಶೇಷವಾಗಿ ನಾಶಮಾಡುವುದರಿಂದ ಈ ತೀರ್ಥಕ್ಕೆ ಮಾನಸೋದ್ಭೇದವೆಂಬ ಹೆಸರು ಮಹರ್ಷಿಗಳಿಂದ ಪ್ರಖ್ಯಾತವಾಗಿರುವುದು.

೫೦. ಹೃದಯದಲ್ಲಿರುವ ಶೋಕ ಮೋಹಗಳೇ ಮೊದಲಾದ ಸಕಲ ಗ್ರಂಥಿಗಳನ್ನೂ ಸಡಲಿಸಿ, ಮನಸ್ಸಿನಲ್ಲಿರುವ ಅನೇಕ ಸಂದೇಹಗಳನ್ನು ಛೇದಿಸಿ, ಸಮಸ್ತ ಕರ್ಮಗಳನ್ನೂ ನಾಶಮಾಡುವ ಪ್ರಭಾವವುಳ್ಳದಾದುದರಿಂದ ಈ ತೀರ್ಥಕ್ಕೆ ಮಾನಸೋದ್ಭೇದವೆಂಬ ಹೆಸರುಂಟಾಯಿತು.

೫೧. ಯಾವ ಮನುಷ್ಯನಾದರೂ ಪೂರ್ವಪುಣ್ಯದ ಫಲವಶದಿಂದ ಈ ತೀರ್ಥದ ಉದಕದ ಒಂದು ಬಿಂದುವನ್ನಾದರೂ ಪಡೆದು ಸೇವಿಸುವನೊ, ಅವನು ಆ ಕ್ಷಣದಲ್ಲಿಯೇ ಮೋಕ್ಷಪದವಿಯನ್ನು ಹೊಂದುವನು. ಇದಕ್ಕಿಂತಲೂ ಅವನಿಗೆ ಹೆಚ್ಚಾಗಿ ಆಗಬೇಕಾದುದೇನು?

೫೨. ಈ ಪ್ರದೇಶದಲ್ಲಿರುವ ಪರ್ವತಗಳ ತಪ್ಪಲುಗಳ ಗುಹೆಗಳಲ್ಲಿ ಹಣ್ಣು, ಗೆಡ್ಡೆ, ಗೆಣಸು, ಜಲ ಮುಂತಾದುವುಗಳನ್ನೇ ಆಹಾರವನ್ನಾಗಿ ಮಾಡಿಕೊಂಡಿರುವ ಮಹರ್ಷಿಗಳ ಸಮೂಹಗಳು ವಾಸಮಾಡುತ್ತಿರುವುವು. ಅವರೆಲ್ಲರೂ ಮನಸ್ಸುಗಳನ್ನೂ, ಬಾಹ್ಯೇಂದ್ರಿಯಗಳನ್ನೂ ಜಯಿಸಿದ ತೀಕ್ಷ್ಣಬುದ್ಧಿಯುಳ್ಳವರಾದರೂ ಕಲಿಯುಗವನ್ನು ಕಂಡು ಭಯಗೊಂಡವರಂತೆಯೂ ಪಾಪಗಳಿಗೆ ಹೆದರುವವರಂತೆಯೂ ಏಕಾಂತಸ್ಥಳಗಳಲ್ಲಿ ವಾಸಮಾಡುತ್ತಿರುವರು.

ಫಲಸಮೀರಣಗಹ್ವರನಿರ್ಝರಾ
ಶ್ರಮಭರಾದುಪಲಬ್ಧಪಟೋತ್ತಮಾಃ ।
ತ್ರಿಷವಣಕ್ರಮನಿರ್ಜಿತದುರ್ಜಯೇಂ
ದ್ರಿಯಪರಾಕ್ರಮಣಾ ಮುನಯಸ್ತ್ವಮೀ ॥ ೫೩ ॥
ಸಾಧನಾನಿ ಬಹೂನ್ಯೇವ ಕಾಯಕ್ಲೇಶಕರಾಣ್ಯಹೋ ।
ಸುಲಭಂ ಸಾಧನಂ ಲೋಕೇ ಮಾನಸೋದ್ಭೇದದರ್ಶನಂ ॥ ೫೪ ॥
ಯಸ್ಮಿನ್ದಿನೇ ಜಲಂ ಚೈತಲ್ಲಭತೇ ಪುಣ್ಯವಾನ್ಜನಃ ।
ಭವತಿ ವ್ಯಾಸಸದೃಶೋ ಯಮಪಿತೃಸಮಃ ಕ್ರಮಾತ್ ॥ ೫೫ ॥
ಕಾಮ್ಯತೀರ್ಥಮಿದಂ ನೃಣಾಂ ಕಾಮನಾವಶಕೃತ್ಪುನಃ
ಅಕಾಮತಸ್ತು ಮುಕ್ತಿಃ ಸ್ಯಾದುಭಯೋರೇಷ ನಿಶ್ಚಯಃ ॥ ೫೬ ॥
ಯದಿ ಕಶ್ಚಿತ್ಪ್ರಮಾದೇನ ಕಾಮಾನಾಂ ಕುರುತೇ ನರಃ ।
ಫಲಂ ಭುಕ್ತ್ವಾ ಪುನರ್ಮುಕ್ತಃ ಭವತ್ಯೇವ ನ ಸಂಶಯಃ ॥ ೫೭ ॥

---

೫೩. ಈ ಮಹರ್ಷಿಗಳೆಲ್ಲರೂ ಫಲಾಹಾರ, ವಾಯುಭಕ್ಷಣ, ಗುಹಾವಾಸ, ಗಿರಿನಿರ್ಝರಗಳ ಉದಕಪಾನ, ಆಶ್ರಮಪಾಲನ ಮುಂತಾದುವುಗಳಿಂದ ಉತ್ತಮವಾದ ಪದವನ್ನು ಹೊಂದಿದವರಾಗಿ ತ್ರಿಸಂಧ್ಯೆಗಳಲ್ಲಿಯೂ ಸ್ನಾನಮಾಡುವುದರಿಂದ ಅಜೇಯಗಳೆನಿಸಿದ ಇಂದ್ರಿಯಗಳನ್ನೂ ಕ್ರಮವಾಗಿ ಜಯಿಸಿ ಪರಾಕ್ರಮವಂತರಾಗಿರುವರು.

೫೪. ಎಲೈ ಷಣ್ಮುಖನೆ! ಮನುಷ್ಯನ ಸದ್ಗತಿಗೆ ಶರೀರಕ್ಲೇಶಗಳನ್ನುಂಟುಮಾಡುವ ಅನೇಕ ಸಾಧನಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುವು. ಆದರೆ ಮಾನಸೋದ್ಭೇದವೆಂಬ ಈ ತೀರ್ಥದ ದರ್ಶನವು ಸಕಲಸಾಧನಗಳಲ್ಲಿಯೂ ಅತ್ಯಂತ ಸುಲಭವಾದುದಾಗಿರುವುದು.

೫೫. ಪುಣ್ಯವಂತನಾದ ಮನುಷ್ಯನು ಯಾವ ದಿನದಲ್ಲಿ ಈ ತೀರ್ಥದ ಸೇವೆಯನ್ನು ಹೊಂದುವನೊ, ಅವನು ಅಂದಿನ ದಿನವೇ ವೇದವ್ಯಾಸನಿಗೂ, ಯಮಧರ್ಮರಾಜನಿಗೂ, ಪಿತೃದೇವತೆಗಳಿಗೂ ಸಮಾನನೆನಿಸುವನು.

೫೬. ಈ ತೀರ್ಥವೇ ಕಾಮ್ಯತೀರ್ಥವೆಂದೂ ಕರೆಯಲ್ಪಡುವುದು. ಮನುಷ್ಯರಿಗೆ ಸಕಲಾಭೀಷ್ಟಗಳನ್ನೂ ಸಂಪಾದಿಸಿಕೊಡುವುದು. ನಿಷ್ಕಾಮರಾಗಿ ಸೇವಿಸಿದವರಿಗೆ ಮೋಕ್ಷವು ಲಭಿಸುವುದು. ಇಂತು ಸಕಾಮ ನಿಷ್ಕಾಮಗಳೆಂಬ ಎರಡು ಉಪಾಸನೆಗಳಿಗೂ ಈ ತೀರ್ಥವು ವಿಷಯವಾಗಿರುವುದು.

೫೭. ಆದರೆ ಯಾವನಾದರೂ ಪ್ರಮಾದವಶದಿಂದ ಕಾಮನಾಪೂರ್ವಕವಾಗಿ ಸೇವೆಯನ್ನು ಮಾಡಿದರೂ, ತನ್ನ ಅಭೀಪ್ಸಿತ ಫಲವನ್ನನುಭವಿಸಿದ ಮೇಲಾದರೂ ಮುಕ್ತನೇ ಆಗುವನು. ಇದರಲ್ಲಿ ಸಂದೇಹವಿಲ್ಲವು.

ಮಹರಾದಿಷು ಲೋಕೇಷು ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಭೋಗೇ ಭುಕ್ತೇ ಪುನರ್ಯಾತಿ ಕಾಮನಾವಶತೋ ಜನಃ ॥ ೫೮ ॥
ಪುರುಷಾರ್ಥಸಮಾವಾಪ್ತ್ಯೈ ಯತನೀಯಂ ಮನೀಷಿಭಿಃ ।
ಮಾನಸೋದ್ಭೇದನೇ ತೀರ್ಥೇ ನಾಪೇತ್ಯತ್ರೇತಿ ಮೇ ಮತಿಃ ॥ ೫೯ ॥
ಮಾನಸೋದ್ಭೇದನಾತ್ಪ್ರತ್ಯಗ್ದಿಶಿ ಸರ್ವಮನೋಹರಂ ।
ವಸುಧಾರೇತಿ ವಿಖ್ಯಾತಂ ತೀರ್ಥಂ ತ್ರೈಲೋಕ್ಯದುರ್ಲಭಂ ॥ ೬೦ ॥
ತ್ರಿಲೋಕ್ಯಾಂ ಸರ್ವತೀರ್ಥೇಭ್ಯಃ ಶ್ರೇಷ್ಠೋ ಬದರಿಕಾಶ್ರಮಃ ।
ಶ್ರುತ್ವಾ ತನ್ನಾರದಾತ್ಸರ್ವೇ ವಸವಃ ಸಮುಪಾಗತಾಃ ॥ ೬೧ ॥
ತ್ರಿಂಶದ್ವರ್ಷಸಹಸ್ರಾಣಿ ತಪಃ ಪರಮದಾರುಣಂ ।
ದಲಾಂಬುಪ್ರಾಶನಾಶ್ಚಕ್ರುಸ್ತತಃ ಸಿದ್ಧಿಮುಪಾಯಯುಃ ॥ ೬೨ ॥
ಭಗವದ್ದರ್ಶನಾತ್ಪ್ರಾಪ್ತಾಽಽನಂದನಿರ್ವೃತ್ತವಿಕ್ಲವಾಃ ।
ಹೃದಯಾನಂದಸಂದೋಹಪ್ರಫುಲ್ಲಿತಮುಖಾಂಬುಜಾಃ ॥ ೬೩ ॥

---

೫೮. ಸಕಾಮರಾಗಿ ಮಾಡಿದ ಕರ್ಮದ ಫಲರೂಪವಾಗಿ ಜನರು ಮಹರ್ಲೋಕಾದಿ ಉತ್ತಮಲೋಕಗಳಲ್ಲಿ ತಮಗೆ ಬೇಕಾದ ಭೋಗಗಳನ್ನೆಲ್ಲ ಯಥೇಷ್ಟವಾಗಿ ಅನುಭವಿಸಿದ ಬಳಿಕ ಕರ್ಮಕ್ಷಯವಾಗಲು ಮತ್ತೆ ಭೂಲೋಕಕ್ಕೆ ಬರುವರು.

೫೯–೬೦. ಬುದ್ಧಿವಂತರೆಲ್ಲರೂ ಪರಮಪುರುಷಾರ್ಥವಾದ ಮೋಕ್ಷವನ್ನೇ ಪಡೆಯಲು ಪ್ರಯತ್ನವನ್ನು ಮಾಡಬೇಕು. ಮಾನಸೋದ್ಭೇದವೆಂಬ ಈ ತೀರ್ಥದಲ್ಲಿ ಪುರುಷಾರ್ಥವು ಯಾವಾಗಲೂ ಎಡಬಿಡದೆ ಸಿದ್ಧಿಸುವುದೆಂದು ನನ್ನ ನಿಶ್ಚಯವಾಗಿರುವುದು. ಈ ಮಾನಸೋದ್ಭೇದತೀರ್ಥದ ಪಶ್ಚಿಮ ದಿಕ್ಕಿನಲ್ಲಿ ಸರ್ವವಿಧದಿಂದಲೂ ಮನೋಹರವೂ ಮೂರುಲೋಕಗಳಲ್ಲಿಯೂ ದುರ್ಲಭವಾದ ಮಹಿಮೆಯಿಂದೊಡಗೂಡಿದುದೂ ಆದ ವಸುಧಾರೆಯೆಂಬ ಪ್ರಖ್ಯಾತಿಯನ್ನು ಪಡೆದ ತೀರ್ಥವೊಂದು ಕಂಗೊಳಿಸುತ್ತಿರುವುದು.

೬೧. ಮೂರು ಲೋಕಗಳಲ್ಲಿರುವ ಸಮಸ್ತ ತೀರ್ಥಗಳಲ್ಲಿಯೂ ಬದರಿಕಾಶ್ರಮವೇ ಉತ್ತಮೋತ್ತಮವೆಂಬ ನಾರದಮಹರ್ಷಿಯ ಮಾತುಗಳನ್ನು ಕೇಳಿ ವಸುಗಳೆಲ್ಲರೂ ಅಲ್ಲಿಗೆ ಒಮ್ಮೆ ಪ್ರಾಪ್ತರಾದರು.

೬೨. ಮೂವತ್ತು ಸಾವಿರ ವರ್ಷಗಳವರೆಗೂ ಅತ್ಯಂತ ಭಯಂಕರವಾದ ತಪಸ್ಸನ್ನು ಮಾಡುತ್ತ ಮರಗಳ ಎಲೆಗಳಿಂದ ಸಿಂಪಡಿಸುತ್ತಿರುವ ನೀರಿನ ಹನಿಗಳನ್ನೇ ಪ್ರಾಶನಮಾಡಿಕೊಂಡು ಬಹಳಕಾಲದ ಮೇಲೆ ತಪಸ್ಸಿದ್ಧಿಯನ್ನು ಪಡೆದು ಕೃತಾರ್ಥರಾದರು.

೬೩. ಅವರೆಲ್ಲರೂ ಭಗವಂತನ ದರ್ಶನದಿಂದ ಪಡೆದ ಆನಂದದ ಭರದಲ್ಲಿ

ದೃಷ್ಟ್ವಾ ನಾರಾಯಣಂ ದೇವಂ ವರಂ ಲಬ್ಧ್ವಾ ಮನೋರಮಂ ।
ಹರಿಭಕ್ತಿಸುಖೈಶ್ವರ್ಯಂ ಪರಂ ಲಬ್ಧ್ವಾ ಮುದಂ ಯಯುಃ ॥ ೭೪ ॥
ಅತ್ರ ಸ್ನಾತ್ವಾ ಜಲಂ ಪೀತ್ವಾ ಪೂಜಯಿತ್ವಾ ಜನಾರ್ದನಂ ।
ಇಹಲೋಕೇ ಸುಖಂ ಭುಕ್ತ್ವಾ ಯಾತ್ಯಂತೇ ಪರಮಂ ಪದಂ ॥ ೭೫ ॥
ಅತ್ರ ಪುಣ್ಯವತಾಂ ಜ್ಯೋತಿರ್ದೃಶ್ಯತೇ ಜಲಮಧ್ಯತಃ ।
ಯದ್ದೃಷ್ಟ್ವಾ ನ ಪುನರ್ಭೂಯೋ ಗರ್ಭವಾಸಂ ಪ್ರಪದ್ಯತೇ ॥ ೭೬ ॥
ಯೇಽಶುದ್ಧಪಿತೃಜಾಃ ಪಾಪಾಃ ಪಾಷಂಡಮತಿವೃತ್ತಯಃ ।
ನ ತೇಷಾಂ ಶಿರಸಿ ಪ್ರಾಯಃ ಪತಂತ್ಯಾಪಃ ಕದಾಚನ ॥ ೭೭ ॥
ದಿನತ್ರಯಂ ಶುಚಿರ್ಭೂತ್ವಾ ಪೂಜಯಿತ್ವಾ ಜನಾರ್ದನಂ ।
ಉಪೋಷ್ಯ ಭಗವದ್ಭಕ್ತ್ಯಾ ಸಿದ್ಧಾನ್ಪಶ್ಯಂತಿ ಸಾಧವಃ ॥ ೭೮ ॥

---

ತಮ್ಮ ತಪಸ್ಸಿನ ಕಷ್ಟವನ್ನೆಲ್ಲ ಮರೆತುಹೋದರು; ಹೃದಯಗಳಲ್ಲಿ ತುಂಬಿ ತುಳುಕುತ್ತಿರುವ ಆನಂದದ ಅತಿಶಯದಿಂದ ಅರಳಿದ ಮುಖ ಕಮಲಗಳುಳ್ಳವರಾದರು.

೭೪. ಶ್ರೀಮನ್ನಾರಾಯಣನನ್ನು ಕಂಡು ತಮಗೆ ಬೇಕಾದ ಮನೋರಮವಾದ ವರವನ್ನು ಆತನಿಂದ ಪಡೆದು ಪರಾತ್ಪರವಾದ ವಿಷ್ಣುಭಕ್ತಿಯ ಸೌಖ್ಯವೆಂಬ ಸಂಪತ್ತನ್ನು ಪಡೆದು ಅವರು ಸಂತೋಷಗೊಂಡರು.

೭೫. ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ಜಲವನ್ನು ಕುಡಿದು ಬದರೀ ನಾರಾಯಣನನ್ನು ಪೂಜಿಸಲು ಮನುಷ್ಯನು ಈ ಲೋಕದಲ್ಲಿ ಅನೇಕ ಸೌಖ್ಯಗಳನ್ನನುಭವಿಸಿ ಕಡೆಗೆ ಪರಮಪದವನ್ನು ಪಡೆಯುವನು.

೭೬. ಇಲ್ಲಿ ಇಂದಿಗೂ ಸಹ ಪುಣ್ಯವಂತರಿಗೆ ನೀರಿನ ಮಧ್ಯದಲ್ಲಿ ಒಂದು ದಿವ್ಯ ಜ್ಯೋತಿಯು ಕಾಣುವುದು. ಅದನ್ನು ಕಂಡ ಮನುಷ್ಯನು ಮತ್ತೆ ತಾಯಿಯ ಗರ್ಭದಲ್ಲಿ ವಾಸವನ್ನು ಅನುಭವಿಸುವುದಿಲ್ಲವು.

೭೭. ಯಾರು ಪರಿಶುದ್ಧರಲ್ಲದ ತಾಯಿ ತಂದೆಗಳಿಂದ ಹುಟ್ಟಿರುವರೊ, ಯಾರು ಪಾಪಿಷ್ಠರೊ, ಯಾರು ಪಾಷಂಡಮತಗಳನ್ನೂ, ಆಚಾರಗಳನ್ನೂ ಅನುಸರಿಸುತ್ತಿರುವರೊ, ಅವರ ತಲೆಗಳಲ್ಲಿ ಈ ತೀರ್ಥದ ಪವಿತ್ರೋದಕದ ಬಿಂದುಗಳು ಎಂದಿಗೂ ಬೀಳುವುದಿಲ್ಲ.

೭೮. ಪರಮಸಾಧುಗಳಾದರೂ ಕೂಡ ಮೂರುದಿನಗಳವರೆಗೂ ಶೌಚ ಕರ್ಮಗಳನ್ನಾಚರಿಸಿ ಶ್ರೀಮನ್ನಾರಾಯಣನ ಪೂಜೆಯನ್ನು ಮಾಡಿ ಪರಮಾತ್ಮನಲ್ಲಿ ಭಕ್ತಿಯುಕ್ತರಾಗಿ ಉಪವಾಸವನ್ನು ಮಾಡಲು ಅಲ್ಲಿರುವ ಸಿದ್ಧರನ್ನು ನೋಡಲು ಸಮರ್ಥರಾಗುವರು.

ಯೇ ತತ್ರ ಚಪಲಾಸ್ತಥ್ಯಂ ನ ವದಂತಿ ಚ ಲೋಲುಪಾಃ ।
ಪರಿಹಾಸ ಪರದ್ರವ್ಯ ಪರಸ್ತ್ರೀ ಕಪಟಾಗ್ರಹಾಃ ॥ ೬೯ ॥
ಮಲಚೈಲಾವೃತಾಃಶಾಂತಾಃ ಶುಚಯಸ್ತ್ಯಕ್ತಸತ್ಕ್ರಿಯಾಃ ।
ತೇಷಾಂ ಮಲಿನಚಿತ್ತಾನಾಂ ಫಲಮತ್ರ ನ ಜಾಯತೇ ॥ ೭೦ ॥
ಯೇ ತತ್ರ ಸಾಧಕಾಃ ಶಾಂತಾ ವಿರಲಾ ವಿಧಿವರ್ತ್ಮಗಾಃ ।
ತೇಷಾಂ ಜಪಸ್ತಪೋ ಹೋಮೋ ದಾನವ್ರತಜಪಕ್ರಿಯಾಃ ॥ ೭೧ ॥
ಕ್ರಿಯಮಾಣಾ ಯಥಾಶಕ್ತ್ಯಾ ಹ್ಯಕ್ಷಯ್ಯಫಲದಾಯಕಾಃ ॥ ೭೨ ॥
ಯತ್ಕಿಂಚಿಚ್ಛುಭಕರ್ಮಾಣಿ ಕ್ರಿಯಮಾಣಾನಿ ದೇಹಿನಾಂ ।
ಮಹದಾದಿಫಲಂ ದದ್ಯುರ್ನಿಃಶ್ರೇಯಸಮನುತ್ತಮಂ ॥ ೭೩ ॥
ಶ್ರವಣೀಯಮಿಹ ಕಿಂ ಫಲಾಧಿಕಂ
ಯತ್ರ ಯಾಂತಿ ವಿಬುಧಾಃ ಫಲಾರ್ಥಿನಃ ।
ಪೂಜಿತಾದನು ಹರೇಃ ಪ್ರಿಯಾರ್ಥಿನಃ
ಸ್ವರ್ಗಮಾರ್ಗನಿರತಾಃ ಪ್ರಮೋದಿನಃ ॥ ೭೪ ॥

---

೬೯–೭೦. ಅಲ್ಲಿ ಯಾರು ಚಪಲಬುದ್ಧಿಯುಳ್ಳವರಾಗುವರೊ, ಸುಳ್ಳು ಮಾತುಗಳನ್ನಾಡುವರೊ, ಬಾಹ್ಯವಿಷಯಗಳಲ್ಲಿ ಲೋಲುಪರಾಗಿರುವರೊ, ಅಪಹಾಸ್ಯ, ಪರಧನ, ಪರನಾರಿ, ಕಪಟಗಳಲ್ಲಿಯೇ ಆಗ್ರಹವುಳ್ಳವರಾಗಿರುವರೊ, ಮಲಿನವಾದ ವಸ್ತ್ರಗಳನ್ನುಟ್ಟಿರುವರೊ, ಶಾಂತಿ ಸಮಾಧಾನಗಳನ್ನು ತಾಳದಿರುವರೊ, ಅಶುಚಿಗಳೊ, ಸಕಲಸತ್ಕಾರ್ಯಗಳನ್ನು ತ್ಯಜಿಸಿರುವರೊ, ಅಂತಹ ಕಲ್ಮಷಸಹಿತವಾದ ಮನಸ್ಸುಳ್ಳ ಜನರಿಗೆ ಅಲ್ಲಿ ಯಾವ ಸತ್ಫಲವೂ ದೊರಕುವುದಿಲ್ಲವು.

೭೧–೭೨. ಯಾವ ಪುಣ್ಯವಂತರು ಅಲ್ಲಿ ಸಾಧಕರೂ, ಶಾಂತಮನಸ್ಕರೂ, ಏಕಾಂತಪ್ರಿಯರೂ, ಶಾಸ್ತ್ರವಿಹಿತಮಾರ್ಗದಲ್ಲಿ ನಡೆಯುವವರೂ ಆಗಿರುವರೊ, ಅವರು ತಮ್ಮ ತಮ್ಮ ಶಕ್ತ್ಯನುಸಾರವಾಗಿ ಮಾಡಿದ ಜಪ, ತಪಸ್ಸು, ಹೋಮ, ದಾನ, ವ್ರತೋಪವಾಸಕ್ರಿಯೆಗಳು ಮುಂತಾದುವುಗಳೆಲ್ಲವೂ ಅನಂತಗುಣಿತವಾದ ಫಲವನ್ನುಂಟುಮಾಡುವುವು.

೭೩. ಮಾನವರು ಈ ತೀರ್ಥದ ಸಮೀಪದಲ್ಲಿ ಮಾಡಿದ ಅತ್ಯಲ್ಪಗಳಾದ ಶುಭಕಾರ್ಯಗಳೂ ಕೂಡ ಮಹರ್ಲೋಕವಾಸವೇ ಮೊದಲಾದ ಉತ್ತಮ ಫಲಗಳನ್ನು ಕೊಡುವುವಲ್ಲದೆ ಉತ್ತಮೋತ್ತಮವೆನಿಸಿದ ಶಾಶ್ವತಮೋಕ್ಷವನ್ನೂ ಕೈಗೂಡಿಸುವುವು.

೭೪. ಈ ತೀರ್ಥದ ಫಲಾಧಿಕ್ಯದ ವಿಷಯದಲ್ಲಿ ಹೆಚ್ಚಿಗೆ ಹೇಳಬೇಕಾದುದೇನಿರುವುದು? ಇಲ್ಲಿಗೆ ದೇವತೆಗಳೂ ಸಹ ತಮ್ಮ ಅಭೀಷ್ಟಗಳ ಸಿದ್ಧಿಯನ್ನು

ಯತ್ರ ಸಂತಿ ನ ಚ ವಿಘ್ನಕಾರಿಣಃ
ಕರ್ಮಣಾಂ ಹರಿಭಯಾತ್ಸುಸಿದ್ಧ್ಯತಿ ।
ನಿರ್ವಿಶಂತಿ ಚ ಫಲಂ ವಿವೇಕಿನಃ
ಕರ್ಮಮಾರ್ಗನಿರತಾಃ ಸುದೇಹಿನಃ ॥ ೭೫ ॥
ಯೇ ಪಠಂತ್ಯಥ ಪಾಠಯಂತ್ಯಹೋ
ಪುಣ್ಯತೀರ್ಥವಿಷಯಂ ಪ್ರಕಾಶಿತಂ ।
ಭಕ್ತಿಭಾವಸಮಲಂಕೃತಾಶ್ಚ ತೇ
ಸಂಪ್ರಯಾಂತಿ ಹರಿಮಂದಿರಂ ಶುಭಂ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯ ಸಂವಾದೇ "ವಸುಧಾರಾಮಾಹಾತ್ಮ್ಯವರ್ಣನಂ" ನಾಮ ಷಷ್ಠೋಽಧ್ಯಾಯಃ

---

ಪಡೆಯಲು ಬಂದು ಸೇವಿಸುತ್ತಿರುವರು. ಅವರು ಪೂಜಿಸಲ್ಪಟ್ಟ ಶ್ರೀಹರಿಯನ್ನು ಪೂಜಿಸಿ ಪ್ರಿಯಫಲಗಳನ್ನು ಪಡೆದು ಸಂತೋಷಗೊಂಡವರಾಗಿ ಸ್ವರ್ಗಲೋಕದಲ್ಲಿ ವಾಸಮಾಡುತ್ತಿರುವರು.

೭೫. ಇಲ್ಲಿ ನೆಲಸಿರುವ ಶ್ರೀ ನಾರಾಯಣನಿಗೆ ಭಯಗೊಂಡು ಸತ್ಕರ್ಮಗಳಿಗೆ ವಿಘ್ನಗಳನ್ನುಂಟುಮಾಡುವ ರಾಕ್ಷಸಾದಿಗಳು ಯಾರೂ ಸುಳಿದಾಡುವುದಿಲ್ಲ. ಸಮಸ್ತ ಸಾಧನಗಳೂ ಸಂಪೂರ್ಣ ಫಲವನ್ನು ಕೊಡುವುವು. ನಿತ್ಯಾನಿತ್ಯವಿವೇಕವುಳ್ಳವರೂ ಕರ್ಮಮಾರ್ಗದಲ್ಲಿ ನಿರತರಾಗಿರುವವರೂ ಆದಂತಹ ಪುಣ್ಯಪುರುಷರು ತಮ್ಮ ತಮ್ಮ ಸಾಧನೆಗಳಿಗೆ ತಕ್ಕ ಫಲಗಳನ್ನು ಹೊಂದುವರು.

೭೬. ಇಂತು ನಾನು ನಿನಗೆ ಪ್ರಕಾಶಪಡಿಸಿರುವ ತೀರ್ಥಮಾಹಾತ್ಮ್ಯವನ್ನು ಯಾರು ಪಠನಮಾಡುವರೊ, ಯಾರು ಇತರರಿಗೆ ಉಪದೇಶಮಾಡುವರೊ, ಅವರೆಲ್ಲರೂ ಪರಮಾತ್ಮನಲ್ಲಿ ಅನನ್ಯವಾದ ಭಕ್ತಿಭಾವದಿಂದ ಕೂಡಿದವರಾಗಿ ಪರಮಪಾವನವಾದ ವೈಕುಂಠಲೋಕವನ್ನು ಸೇರುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮ ಮಾಹಾತ್ಮ್ಯದ ಶಿವಕಾರ್ತಿಕೇಯ ಸಂವಾದದಲ್ಲಿ "ವಸುಧಾರಾತೀರ್ಥಮಾಹಾತ್ಮ್ಯ ವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಪಂಚಧಾರಾದಿತೀರ್ಥಮಾಹಾತ್ಮ್ಯವರ್ಣನಂ

**ಶಿವ ಉವಾಚ:—**

**ತತೋ ನೈಋರ್ತ್ಯದಿಗ್ಭಾಗೇ ಪಂಚಧಾರಾಃ ಪತಂತ್ಯಧಃ ।**
**ಪ್ರಭಾಸಂ ಪುಷ್ಕರಂ ಚೈವ ಗಯಾಂ ನೈಮಿಷಮೇವ ಚ ।**
**ಕುರುಕ್ಷೇತ್ರಂ ವಿಜಾನೀಹಿ ದ್ರವರೂಪಂ ಷಡಾನನ ॥ ೧ ॥**
**ಪುರಾ ತೇ ಬ್ರಹ್ಮಣಃ ಸ್ಥಾನಂ ಗತಾ ಮಲಿನರೂಪಿಣಃ ।**
**ಪಾಪಿನಾಂ ಪಾಪದೋಷೇಣ ವಿಕೃತಾಃ ಕೃತಬುದ್ಧಯಃ ॥ ೨ ॥**
**ತತ್ರ ಗತ್ವಾ ನಮಸ್ಕೃತ್ಯ ಬ್ರಹ್ಮಾಣಂ ಲೋಕಭಾವನಂ ।**
**ಊಚುಃ ಪ್ರಾಂಜಲಯಃ ಸರ್ವೇ ನಿಜಾಗಮನಕಾರಣಂ ॥ ೩ ॥**
**ತಚ್ಛ್ರುತ್ವಾ ಧ್ಯಾನಮಾಲಂಬ್ಯ ಪ್ರಹಸ್ಯ ಜಗದೀಶ್ವರಃ ।**
**ಉವಾಚ ವಚನಂ ಚಾರು ಸ್ಮೃತ್ವಾ ಬದರಿಕಾಶ್ರಮಂ ॥ ೪ ॥**

---

## ಕನ್ನಡದ ಅನುವಾದ

### ಪಂಚಧಾರಾದಿತೀರ್ಥಮಾಹಾತ್ಮ್ಯವರ್ಣನ

೧. ಶಿವನು ಹೇಳುತ್ತಾನೆ:—ವತ್ಸ! ವಸುಧಾರಾತೀರ್ಥಕ್ಕೆ ನೈಋರ್ತ್ಯ ದಿಕ್ಕಿನಲ್ಲಿ ಐದು ಜಲಧಾರೆಗಳು ನೆಲಕ್ಕೆ ಬೀಳುತ್ತಿರುವುವು. ಪ್ರಭಾಸ, ಪುಷ್ಕರ, ಗಯಾ, ನೈಮಿಷ ಮತ್ತು ಕುರುಕ್ಷೇತ್ರಗಳೇ ಪ್ರವಾಹರೂಪಗಳಾಗಿ ಇಲ್ಲಿ ನೆಲಸಿರುವುದೆಂಬುದನ್ನು ತಿಳಿ.

೨. ಪೂರ್ವಕಾಲದಲ್ಲಿ ಈ ಕ್ಷೇತ್ರಗಳ ಅಭಿಮಾನಿದೇವತೆಗಳು ಅವುಗಳಲ್ಲಿ ಸ್ನಾನಮಾಡುವ ಪಾಪಿಗಳ ಪಾಪಗಳಿಂದಲೂ ದೋಷಗಳಿಂದಲೂ, ಮಲಿನವಾದ ರೂಪಗಳುಳ್ಳವರಾಗಿ ಬ್ರಹ್ಮಲೋಕಕ್ಕೆ ಚತುರ್ಮುಖನನ್ನು ನೋಡಲು ಪ್ರಯಾಣ ಮಾಡಿದರು.

೩. ಅಲ್ಲಿಗೆ ಹೋಗಿ ಬ್ರಹ್ಮಾಂಡವನ್ನೆಲ್ಲ ಮನಸ್ಸಿನಲ್ಲಿ ಭಾವಿಸಿ ಸೃಷ್ಟಿ ಮಾಡಿದ ಆತನಿಗೆ ನಮಸ್ಕಾರವನ್ನು ಮಾಡಿ ಕೈಗಳನ್ನು ಮುಗಿದುಕೊಂಡು ಎಲ್ಲರೂ ತಾವು ಬಂದುದಕ್ಕೆ ಕಾರಣವನ್ನು ಆತನಿಗೆ ಬಿನ್ನವಿಸಿದರು.

೪. ಲೋಕಕರ್ತನಾದ ಬ್ರಹ್ಮದೇವನು ಅವರ ಮಾತುಗಳನ್ನು ಕೇಳಿ ಸ್ವಲ್ಪಕಾಲದವರೆಗೂ ಧ್ಯಾನಾಸಕ್ತನಾಗಿದ್ದು ಬಹಿರ್ಮುಖನಾದ ಮೇಲೆ ಬದರಿಕಾಶ್ರಮವನ್ನು ಜ್ಞಾಪಿಸಿಕೊಂಡು ಮುಗುಳ್ನಗೆಯಿಂದ ಕೂಡಿದವನಾಗಿ ಅವರಿಗೆ ಸಂತೋಷವಾಗುವಂತೆ ಈ ರೀತಿ ಹೇಳಿದನು.

ಮಾಭೈಷ್ಟ ಗಚ್ಛತ ಕ್ಷಿಪ್ರಂ ಹರೇರ್ಬದರಿಕಾಶ್ರಮಂ ।
ಯಸ್ಯ ನಿರ್ದೇಶಮಾತ್ರೇಣ ಸದ್ಯಃ ಪುಣ್ಯಂ ಭವಿಷ್ಯತಿ ॥ ೫ ॥
ತತಸ್ತೇ ಹರ್ಷವೇಗೇನ ನಮಸ್ಕೃತ್ಯ ಪಿತಾಮಹಂ ।
ಜಗ್ಮುರುತ್ಫುಲ್ಲನಯನಾ ವಿಶಾಲಾಮಮಿತಪ್ರಭಾಂ ॥ ೬ ॥
ಯಸ್ಯ ನಿರ್ದೇಶಮಾತ್ರೇಣ ತತ್ಕ್ಷಣಾದ್ವಿಗತೈನಸಃ ।
ತತೋ ದ್ವಿರೂಪಮಾಸ್ಥಾಯ ಸ್ವಸ್ಥಾನಂ ಯಯುರುತ್ಸುಕಾಃ ॥ ೭ ॥
ದ್ರವರೂಪೇಣ ಚಾನ್ಯೇನ ಪಂಚ ತಿಷ್ಠಂತಿ ನಿರ್ಮಲಾಃ ।
ತೇಷು ಸ್ನಾತ್ವಾ ವಿಧಾನೇನ ಕೃತ್ವಾ ನಿತ್ಯಕ್ರಿಯಾಂ ಶುಚಿಃ ॥ ೮ ॥
ತತ್ತತ್ತೀರ್ಥಫಲಂ ಲಬ್ಧ್ವಾ ಯಾತ್ಯಂತೇ ಪರಮಂ ಪದಂ ।
ಪಂಚೋಪವಾಸನಿರತಃ ಪೂಜಯಿತ್ವಾ ಜನಾರ್ದನಂ ॥ ೯ ॥
ಇಹ ಭೋಗಾನ್ಬಹೂನ್ ಭುಕ್ತ್ವಾ ಹರೇಃ ಸಾಲೋಕ್ಯಮಾಪ್ನುಯಾತ್ ॥

---

೫. "ನೀವು ಭಯಪಡಬೇಡಿರಿ. ಕ್ಷಿಪ್ರವಾಗಿ ಶ್ರೀಹರಿಯ ಏಕಾಂತಕ್ಷೇತ್ರವೆನಿಸಿದ ಬದರಿಕಾಶ್ರಮಕ್ಕೆ ಹೊರಡಿರಿ. ಅದನ್ನು ಪ್ರವೇಶಿಸಿದ ಮಾತ್ರದಿಂದಲೇ ನಿಮಗೆ ತತ್ಕ್ಷಣದಲ್ಲಿಯೇ ಪವಿತ್ರತೆಯುಂಟಾಗುವುದು."

೬. ಈ ಮಾತುಗಳನ್ನು ಕೇಳಿ ಸಂತೋಷದ ಭರದಿಂದ ಬ್ರಹ್ಮದೇವನಿಗೆ ನಮಸ್ಕರಿಸಿ ಆ ತೀರ್ಥಾಭಿಮಾನಿದೇವತೆಗಳು ಅರಳಿದ ಕಣ್ಣುಗಳುಳ್ಳವರಾಗಿ ಅಪರಿಮಿತವಾದ ಪ್ರಭಾವದಿಂದ ಕೂಡಿದ ಆ ವಿಶಾಲಾನಗರಿಗೆ ಹೊರಡುವವರಾದರು.

೭. ಅವರು ಆ ಪ್ರದೇಶವನ್ನು ಪ್ರವೇಶಮಾಡಿದುದರಿಂದಲೇ ಕ್ಷಣಮಾತ್ರದಲ್ಲಿ ತಮ್ಮಲ್ಲಿದ್ದ ಪಾಪಗಳೆಲ್ಲವನ್ನೂ ಕಳೆದುಕೊಂಡರು.

೮. ಬಳಿಕ ತಮ್ಮ ರೂಪಗಳನ್ನು ಎರಡಾಗಿ ಮಾಡಿಕೊಂಡು ಒಂದು ರೂಪದಿಂದ ಅಲ್ಲಿಯೇ ನೆಲಸಿ, ಮತ್ತೊಂದು ರೂಪದಿಂದ ಹರ್ಷಗೊಂಡವರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು. ಎರಡನೆಯವುಗಳಾದ ಪ್ರವಾಹ ರೂಪಗಳಿಂದ ಈ ಐದು ತೀರ್ಥಗಳೂ ಪರಿಶುದ್ಧಗಳಾಗಿ ಇಲ್ಲಿ ನೆಲಸಿರುವುವು.

೯–೧೦. ಯಥೋಕ್ತವಿಧಾನದಿಂದ ಅವುಗಳಲ್ಲಿ ಮಿಂದು ಶುಚಿಯಾಗಿ ಮಾನವನು ನಿತ್ಯಕರ್ಮಗಳನ್ನಾಚರಿಸಲು ಆಯಾ ತೀರ್ಥಗಳ ಸೇವೆಯ ಫಲವನ್ನು ಹೊಂದುವುದಲ್ಲದೆ ಅಂತ್ಯದಲ್ಲಿ ಮೋಕ್ಷಸಾಮ್ರಾಜ್ಯಪದವಿಯನ್ನು ಪಡೆಯುವನು. ಮಾನವರು ಈ ಐದು ತೀರ್ಥಗಳಲ್ಲಿಯೂ ಒಂದೊಂದು ದಿವಸದ ಉಪವಾಸವನ್ನು ಮಾಡಿ ಶ್ರೀಹರಿಯನ್ನು ಪೂಜಿಸಲು ಇಹಲೋಕದಲ್ಲಿ ಅನೇಕ ವಿಧಗಳಾದ ಭೋಗಭಾಗ್ಯಗಳನ್ನನುಭವಿಸಿ ದೇಹಾವಸಾನದಲ್ಲಿ ವಿಷ್ಣುವಿನ ಸಾಲೋಕ್ಯರೂಪವಾದ ಮುಕ್ತಿಯನ್ನು ಪಡೆಯುವರು.

ತತಸ್ತು ವಿಮಲಂ ತೀರ್ಥಂ ಸೋಮಕುಂಡಾಭಿಧಂ ಪರಂ ।
ತಪಶ್ಚಕಾರ ಭಗವಾನ್ಸೋಮೋ ಯತ್ರ ಕಲಾನಿಧಿಃ ॥ ೧೧ ॥
ಸ್ಕಂದ ಉವಾಚ :—
ಸೋಮಕುಂಡಸ್ಯ ಮಾಹಾತ್ಮ್ಯಂ ವದ ಮೇ ವದತಾಂ ವರ ।
ತ್ವತ್ಪ್ರಸಾದಾದಹಂ ಶ್ರೋತುಮಿಚ್ಛಾಮಿ ಪರಮೇಶ್ವರ ॥ ೧೨ ॥
ಶಿವ ಉವಾಚ :—
ಪುರಾತ್ರಿತನಯಃ ಶ್ರೀಮಾನ್ ಸೋಮಃ ಸಂಪ್ರಾಪ್ಯ ಯೌವನಂ ।
ಶ್ರುತ್ವಾ ಸ್ವರ್ವಾಸಿನಾಂ ಸೌಖ್ಯಂ ಗಂಧರ್ವೇಭ್ಯೋ ಮುಹುರ್ಮುಹುಃ ।
ತದಾ ಸ್ವಪಿತರಂ ಪ್ರಾಯಾತ್ಪ್ರಷ್ಟುಂ ತಲ್ಲಭತೇ ಕಥಂ ॥ ೧೩ ॥
ಸೋಮ ಉವಾಚ :—
ಭಗವನ್ಸರ್ವಧರ್ಮಜ್ಞ ಕರುಣಾಮೃತಸಾಗರ ।
ಕಥಂ ವಾ ಲಭ್ಯತೇ ಸ್ವರ್ಗಃ ಸರ್ವೇಷಾಮುತ್ತಮೋತ್ತಮಃ ॥ ೧೪ ॥
ಗ್ರಹನಕ್ಷತ್ರತಾರಾಣಾಮೋಷಧೀನಾಂ ಪತಿಃ ಪ್ರಭೋ ।
ಸ್ಯಾಮಹಂ ಯೇನ ತಂ ಯತ್ನಂ ಕೃಪಯಾ ವದ ಮೇ ಪಿತಃ ॥ ೧೫ ॥

---

೧೧. ಇಲ್ಲಿಯೇ ನಿರ್ಮಲವೂ ಪರಮಪವಿತ್ರವೂ ಆದ ಸೋಮಕುಂಡ ವೆಂಬ ಹೆಸರಿನ ತೀರ್ಥವೊಂದಿರುವುದು. ಅಲ್ಲಿ ಷೋಡಶಕಲೆಗಳಿಂದಲೂ ಕೂಡಿದ ಚಂದ್ರನು ಹಿಂದೆ ಉಗ್ರವಾದ ತಪಸ್ಸನ್ನು ಮಾಡಿದನು.

೧೨. ಸ್ಕಂದನು ಕೇಳುತ್ತಾನೆ :—ತತ್ತ್ವಸ್ವರೂಪನಿರೂಪಣದಲ್ಲಿ ಅತ್ಯುತ್ತ ಮನಾದ ಪರಮೇಶ್ವರನೆ! ಈ ಸೋಮಕುಂಡದ ಮಾಹಾತ್ಮ್ಯವನ್ನು ನನಗೆ ವಿಸ್ತಾರದಿಂದ ತಿಳಿಸುವವನಾಗು. ನಿನ್ನ ಅನುಗ್ರಹದಿಂದ ನಾನು ಈ ವಿಷಯ ವನ್ನು ವಿಶದವಾಗಿ ತಿಳಿಯಲು ಕುತೂಹಲವುಳ್ಳವನಾಗಿರುವೆನು.

೧೩. ಶಿವನು ಹೇಳುತ್ತಾನೆ :—ವತ್ಸ ! ಪೂರ್ವದಲ್ಲಿ ಅತ್ರಿಮಹರ್ಷಿಯ ಪುತ್ರ ನಾದ ಚಂದ್ರನು ಯೌವನಾವಸ್ಥೆಯನ್ನು ಹೊಂದಿ ದೇವತೆಗಳು ಸೌಖ್ಯಪಡು ತ್ತಿರುವುದನ್ನು ಗಂಧರ್ವರಿಂದ ಅನೇಕವೇಳೆ ಕೇಳಿದವನಾಗಿ ಅದನ್ನು ಪಡೆಯಲು ಮಾರ್ಗವು ಯಾವುದೆಂದು ಕೇಳಲು ತಂದೆಯ ಸಮೀಪಕ್ಕೆ ಬಂದು ಸೇರಿದನು.

೧೪. ಸೋಮನು ಕೇಳುತ್ತಾನೆ :—"ಸಕಲಧರ್ಮಗಳನ್ನೂ ತಿಳಿದ ಯೋಗಿ ವರ್ಯನೆ! ನೀನು ಕರುಣಾಮೃತದ ಸಮುದ್ರದಂತಿರುವೆ. ಉತ್ತಮೋತ್ತಮ ವೆನಿಸಿದ ಸ್ವರ್ಗಲೋಕದ ವಾಸವು ಸಮಸ್ತ ಮಾನವರಿಗೂ ಹೇಗೆ ಲಭಿಸುವುದು ?

೧೫. ಎಲೈ ತಂದೆಯೆ! ಗ್ರಹಗಳು, ನಕ್ಷತ್ರಗಳು, ತಾರೆಗಳು, ಔಷಧಿ ವನಸ್ಪತಿಗಳು ಮುಂತಾದುವುಗಳಿಗೆಲ್ಲ ನಾನು ಅಧಿಪತಿಯಾಗಬೇಕೆಂದು ಇಚ್ಛಿಸು ತ್ತಿರುವೆನು. ಇದಕ್ಕೆ ಸಾಧನವಾದ ಯಾವ ಪ್ರಯತ್ನವನ್ನು ಮಾಡಬೇಕೆಂಬು ದನ್ನು ನೀನು ದಯೆಯಿಟ್ಟು ನನಗೆ ತಿಳಿಸು."

ಅತ್ರಿರುವಾಚ :—

ತಪಸಾಽಽರಾಧ್ಯ ಗೋವಿಂದಂ ಯಮೈರ್ವಾ ನಿಯಮೈಃ ಸುತ ।
ಕಿಂ ದುರ್ಲಭಂ ತು ಸಾಧೂನಾಮಿಹ ಲೋಕೇ ಪರತ್ರ ಚ ॥ ೧೬ ॥
ತತಸ್ತು ನಾರದಾಚ್ಛ್ರುತ್ವಾ ಕ್ಷೇತ್ರಂ ಪರಮನಿರ್ಮಲಂ ।
ಜಗಾಮ ಬದರೀಂ ನತ್ವಾ ಪಿತರಂ ದಿಶಮುತ್ತರಾಂ ॥ ೧೭ ॥
ತತ್ರ ಗತ್ವಾ ಫಲೈರ್ಮೇಧ್ಯೈರ್ವಿಷ್ಣೋಃ ಪೂಜಾಮಕಲ್ಪಯತ್ ।
ಜಜಾಪ ಪರಮಂ ಜಾಪ್ಯಮಷ್ಟಾಕ್ಷರಂ ಮನೋಹರಂ ॥ ೧೮ ॥
ಅಷ್ಟಾಶೀತಿಸಹಸ್ರಾಣಿ ವರ್ಷಾಣಿ ಭಗವತ್ಪರಂ ।
ತಪಸ್ತೇಪೇಽತಿಪರಮಂ ಸರ್ವಲೋಕಭಯಾವಹಂ ॥ ೧೯ ॥
ತತಸ್ತುಷ್ಟಃ ಸಮಾಗತ್ಯ ಭಗವಾನ್ಭಕ್ತವತ್ಸಲಃ ।
ಉವಾಚ ಸೋಮಂ ವಿಧಿವದ್ವರಂ ವರಯ ಸುವ್ರತ ॥ ೨೦ ॥
ತತಃ ಸೋಮಃ ಸಮುತ್ಥಾಯ ನಮಸ್ಕೃತ್ಯ ಪುನಃ ಪುನಃ ।
ಗ್ರಹನಕ್ಷತ್ರತಾರಾಣಾಮೋಷಧೀನಾಮಹಂ ಪತಿಃ ।
ದ್ವಿಜಾನಾಮಪಿ ಸರ್ವೇಷಾಂ ಭೂಯಾಸಂ ತೇ ಪ್ರಸಾದತಃ ॥ ೨೧ ॥

---

೧೬. ಅತ್ರಿಯು ಹೇಳುತ್ತಾನೆ:—"ಪುತ್ರ! ತಪಸ್ಸಿನಿಂದಾಗಲಿ, ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ನಿಗ್ರಹದಿಂದಾಗಲಿ ಶ್ರೀಮನ್ನಾರಾಯಣನನ್ನು ಆರಾಧಿಸುವ ಸಾಧುಜನರಿಗೆ ಈ ಲೋಕದಲ್ಲಿಯಾಗಲಿ ಲೋಕಾಂತರಗಳಲ್ಲಿಯಾಗಲಿ ಅಪ್ರಾಪ್ಯವಾದ ವಿಷಯವು ಯಾವುದುತಾನೆ ಇರುವುದು?

೧೭. ಚಂದ್ರನು ಈ ಮಾತುಗಳನ್ನು ಕೇಳಿ ನಾರದನಿಂದ ಅತ್ಯಂತ ನಿರ್ಮಲವಾದ ಕ್ಷೇತ್ರವೆನಿಸಿದ ಬದರಿಕಾಶ್ರಮದ ವಿಷಯವನ್ನು ತಿಳಿದು ತನ್ನ ತಂದೆಗೆ ನಮಸ್ಕರಿಸಿ ಬೀಳ್ಕೊಂಡು ಉತ್ತರದಿಕ್ಕಿಗೆ ಪ್ರಯಾಣವನ್ನು ಮಾಡಿದನು.

೧೮. ಅಲ್ಲಿಗೆ ಹೋಗಿ ಆತನು ಆಹಾರಯೋಗ್ಯಗಳಾದ ಫಲಗಳಿಂದ ಮಹಾವಿಷ್ಣುವಿನ ಪೂಜೆಯನ್ನು ನೆರವೇರಿಸಿದನು. ಅಲ್ಲದೆ ಮನೋಹರವಾದ ಅಷ್ಟಾಕ್ಷರೀ ಮಂತ್ರವೆಂಬ ಉತ್ತಮ ಮಂತ್ರವನ್ನು ಜಪಿಸುತ್ತಿದ್ದನು.

೧೯. ಇಂತು ಎಂಬತ್ತೆಂಟು ಸಾವಿರ ವರ್ಷಗಳವರೆಗೂ ಭಗವಂತನನ್ನೇ ಕುರಿತು ಅತ್ಯುಗ್ರವೂ ಸಕಲಲೋಕಗಳಿಗೆ ಭಯವನ್ನುಂಟುಮಾಡುವುದೂ ಆದ ತಪಸ್ಸನ್ನು ಮಾಡುತ್ತಿದ್ದನು.

೨೦–೨೧. ಆ ತಪಸ್ಸಿನಿಂದ ಭಕ್ತವತ್ಸಲನಾದ ಶ್ರೀಹರಿಯು ಸಂತೋಷಗೊಂಡು ಆತನ ಇದಿರಿನಲ್ಲಿ ನಿಂತು ಚಂದ್ರನನ್ನು ಕುರಿತು "ನಿನ್ನ ವ್ರತವು ಸಂಪೂರ್ಣವಾಯಿತು; ನಿನಗೆ ಬೇಕಾದ ವರವನ್ನು ಕೇಳಿಕೊ" ಎಂದು ಹೇಳಿದನು. ಆಗ ಚಂದ್ರನು ಮೇಲಕ್ಕೆದ್ದು ಮತ್ತೆ ಮತ್ತೆ ಪರಮಾತ್ಮನಿಗೆ ನಮಸ್ಕರಿಸಿ ಇಂತೆಂದನು. "ನಿನ್ನ ಅನುಗ್ರಹದಿಂದ ನಾನು ಸಕಲಗ್ರಹಗಳಿಗೂ,

ಹರಿರುವಾಚ :—

ವರಮನ್ಯಂ ವೃಣುಷ್ವಾತೋ ದುರ್ಲಭಂ ತು ಭವಾದೃಶಾಂ ।
ವರಾನ್ನೋ ವರಯಾಮಾಸ ತದಾ ತ್ವಂ ಹಿಮಜಾತ್ಮಜ ॥ ೨೨ ॥
ತತೋಽತಿವಿಮನಾಃ ಸೋಮಃ ತಪಸ್ತೇಪೇ ತಪೋ ಮಹತ್ ।
ತ್ರಿಂಶದ್ವರ್ಷಸಹಸ್ರಾಣಿ ದೇವಮಾನೇನ ಪುತ್ರಕ ॥ ೨೩ ॥
ತದಾಽಸೌ ಕರುಣಾಪೂರ್ಣಹೃದಯೋ ಭಗವಾನಗಾತ್ ।
ವರಂ ವರಯ ಭದ್ರಂ ತೇ ವರದೋಽಹಂ ತವಾಗ್ರತಃ ।
ಸೋಮಸ್ತು ತಾದೃಶಂ ವವ್ರೇ ತಚ್ಛೃತ್ವಾಂತರ್ದಧೇ ಹರಿಃ ॥ ೨೪ ॥
ತತೋಽತಿವಿಮನಾಃ ಸೋಮಃ ಪುನಸ್ತೇಪೇ ತಪೋ ಮಹತ್ ।
ಚತ್ವಾರಿಂಶತ್ಸಹಸ್ರಾಣಿ ತಪಸ್ತಪ್ತಂ ಸುದುಷ್ಕರಂ ॥ ೨೫ ॥
ತತಸ್ತುಷ್ಟೋ ಹರಿಃ ಸಾಕ್ಷಾಚ್ಛಂಖಚಕ್ರಗದಾಧರಃ ।
ಉವಾಚ ವಚನಂ ಚಾರು ಸೋಮಂ ಶ್ರಾಂತಂ ತಪೋನಿಧಿಂ ॥ ೨೬ ॥

---

ನಕ್ಷತ್ರಗಳಿಗೂ, ತಾರೆಗಳಿಗೂ, ಔಷಧಿಗಳಿಗೂ, ಭೂಲೋಕದಲ್ಲಿರುವ ಸಮಸ್ತ ಬ್ರಾಹ್ಮಣರಿಗೂ ಅಧಿಪತಿಯಾಗಬೇಕು.''

೨೨. ಹರಿಯು ಹೇಳುತ್ತಾನೆ:—''ಈ ವರವು ನಿನ್ನಂತಹ ಜನರಿಗೆ ದುರ್ಲಭವಾಗಿರುವುದು. ಇದನ್ನು ಬಿಟ್ಟು ಮತ್ತೊಂದು ವರವನ್ನು ನೀನು ಬೇಡಿಕೊ.'' ಎಲೈ ಪಾರ್ವತೀಪುತ್ರನೆ! ಆದರೆ ಚಂದ್ರನು ಬೇರೆ ವರಗಳನ್ನು ಕೇಳಲು ಅಪೇಕ್ಷೆಪಡಲಿಲ್ಲ.

೨೩. ಪುತ್ರ! ಇದರಿಂದ ಚಂದ್ರನು ಅತ್ಯಂತ ಖಿನ್ನಮನಸ್ಕನಾಗಿ ಮತ್ತೆ ದೇವಮಾನದಲ್ಲಿ ಮುವ್ವತ್ತುಸಾವಿರ ವರ್ಷಗಳಕಾಲ ಮಹತ್ತರವಾದ ತಪಸ್ಸನ್ನು ಮಾಡಿದನು.

೨೪. ಕರುಣಾರಸದಿಂದ ತುಂಬಿದ ಹೃದಯವುಳ್ಳ ಭಗವಂತನು ಪುನಃ ಪ್ರತ್ಯಕ್ಷನಾದನು. ಆತನು ''ನಿನಗೆ ಮಂಗಳವಾಗಲಿ; ನಾನು ವರವನ್ನು ಕೊಡಲು ನಿನ್ನಮುಂದೆ ಬಂದಿರುವೆನು; ಬೇಕಾದುದನ್ನು ಕೇಳು'' ಎಂಬುದಾಗಿ ಹೇಳಿದನು. ಚಂದ್ರನು ಮಾತ್ರ ಹಿಂದಿನ ವರವನ್ನೇ ವಿಜ್ಞಾಪಿಸಿಕೊಂಡನು. ಅದನ್ನು ಕೇಳಿ ಶ್ರೀಹರಿಯು ಮತ್ತೆ ಅಂತರ್ಧಾನವನ್ನು ಹೊಂದಿದನು.

೨೫. ಅದರಿಂದ ಚಂದ್ರನಿಗೆ ಪುನಃ ಮನಸ್ಸು ನಿರಾಶೆಗೊಂಡಿತು. ಆತನು ಮತ್ತೆಯೂ ದುಷ್ಕರವಾದ ತಪಸ್ಸನ್ನು ಮಾಡತೊಡಗಿದನು. ಇಂತು ನಲವತ್ತು ಸಹಸ್ರ ವರ್ಷಗಳವರೆಗೂ ಅತ್ಯಂತ ದುಸ್ಸಾಧ್ಯವಾದ ತಪಸ್ಸು ಆತನಿಂದ ಮಾಡಲ್ಪಟ್ಟಿತು.

೨೬. ಅದರಿಂದ ಸಂತುಷ್ಟನಾದ ಶ್ರೀಹರಿಯು ಶಂಖಚಕ್ರಗದಾದ್ಯಾಯುಧ

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ವರಂ ವರಯ ಸುವ್ರತ ।
ತಪಸಾಽಽರಾಧಿತೋ ನೂನಂ ತ್ವಯಾಽಹಂ ತಪಸಾಂನಿಧಿಃ ॥ ೨೭ ॥

ಸೋಮ ಉವಾಚ :—

ಯದಿ ತುಷ್ಟೋ ಭವಾನ್ಮಹ್ಯಂ ಭಗವಾನ್ವರದರ್ಷಭಃ ।
ಗ್ರಹನಕ್ಷತ್ರತಾರಾಣಾಮಾಧಿಪತ್ಯಂ ಪ್ರಯಚ್ಛ ಮೇ ।
ತಥೌಷಧೀನಾಂ ವಿಪ್ರಾಣಾಂ ಯಾಮಿನ್ಯಾಶ್ಚ ಜಗತ್ಪತೇ ॥ ೨೮ ॥

ಭಗವಾನುವಾಚ :—

ದುರ್ಲಭಂ ಪ್ರಾರ್ಥಿತಂ ವತ್ಸ ವಿತರಾಮಿ ತಥಾಪ್ಯಹಂ ।
ಏವಮುಸ್ತು ತತಃ ಸರ್ವೇ ಸಮಾಗತ್ಯ ದಿವೌಕಸಃ ।
ಅಭಿಷಿಕ್ತವಂತೋ ವಿಧಿವತ್ಸೋಮಂ ರಾಜಾನಮಾದೃತಾಃ ॥ ೨೯ ॥
ತತೋ ವಿಮಾನಮಾರೂಢೋ ರಥೇನ ಶುಭ್ರವಾಸಸಾ ।
ಅಭಿಷ್ಟುತಃ ಸುರೈರಭೂದ್ದಿವಂ ಯಾತೋ ನಿಶಾಕರಃ ॥ ೩೦ ॥

---

ಗಳೊಡನೆ ಪ್ರಸನ್ನನಾಗಿ ಆಯಾಸಗೊಂಡ ತಪಸ್ಸಂಪನ್ನನಾದ ಚಂದ್ರನನ್ನು ಕುರಿತು ಮೃದುವಾಗಿ ಮಾತನಾಡಿಸಿದನು.

೨೭. "ಸುವ್ರತನೆ! ತಪಸ್ಸಿನಿಂದ ಮೇಲಕ್ಕೇಳು. ನಿನಗೆ ಶುಭವು ಉಂಟಾಗಲಿ. ನಿನಗೆ ಬೇಕಾದ ವರವನ್ನು ಯಾಚಿಸು. ನಿನ್ನ ತಪಸ್ಸಿನಿಂದ ನಿಜವಾಗಿಯೂ ನಾನು ಅತಿಶಯವಾದ ಪೂಜೆಯನ್ನು ಹೊಂದಿರುವೆನು. ನೀನು ಕೇವಲ ತಪಸ್ಸಿನ ನಿಧಿಯೇ ಆಗಿರುವೆ."

೨೮. ಚಂದ್ರನು ಹೇಳುತ್ತಾನೆ:—"ಓ ಲೋಕೇಶ್ವರಾ! ವರಪ್ರದರಲ್ಲಿ ಅತ್ಯುತ್ತಮನೆನಿಸಿದ ನೀನು ನನ್ನಲ್ಲಿ ಸಂತೋಷಗೊಂಡಿರುವುದು ನಿಜವಾದರೆ ಸಕಲೈಶ್ವರ್ಯಸಹಿತವಾದ ನೀನು ನನಗೆ ಗ್ರಹಗಳಿಗೂ, ನಕ್ಷತ್ರಗಳಿಗೂ, ತಾರೆಗಳಿಗೂ, ಓಷಧಿಗಳಿಗೂ, ಬ್ರಾಹ್ಮಣರಿಗೂ, ರಾತ್ರಿಸಮುಯಕ್ಕೂ ಆಧಿಪತ್ಯವನ್ನು ಅನುಗ್ರಹಿಸು."

೨೯–೩೦. ಭಗವಂತನು ಹೇಳುತ್ತಾನೆ:—"ಮಗನೆ! ನೀನು ಪ್ರಾರ್ಥಿಸಿರುವ ಈ ವರವು ಅತ್ಯಂತ ದುರ್ಲಭವಾಗಿರುವುದು. ಆದರೂ ನಿನ್ನ ತಪಸ್ಸಿಗೆ ಮೆಚ್ಚಿ ಇದನ್ನು ನಿನಗೆ ಕೊಟ್ಟಿರುವೆನು. ನಿನ್ನ ಇಷ್ಟವಿದ್ದಂತೆಯೇ ಆಗಲಿ." ಭಗವಂತ ನಿಂತೊರೆಯಲು, ಸಮಸ್ತದೇವತೆಗಳೂ ಅಲ್ಲಿ ನೆರೆದು ಆದರದಿಂದ ಕೂಡಿದವರಾಗಿ ಚಂದ್ರನಿಗೆ ರಾಜ್ಯಾಧಿಕಾರವನ್ನು ಕೊಟ್ಟು ಶಾಸ್ತ್ರೋಕ್ತರೀತಿಯಿಂದ ಪಟ್ಟಾಭಿಷೇಕವನ್ನು ಮಾಡಿದರು. ಆಗ ಚಂದ್ರನು ಶುಭ್ರವಾದ ವಸ್ತ್ರಗಳನ್ನು ಧರಿಸಿ ತನಗಾಗಿ ಸಿದ್ಧಗೊಳಿಸಿದ ವಿಮಾನವನ್ನೇರಿ ಸಕಲ ದೇವತೆಗಳೂ ಸ್ತೋತ್ರಮಾಡುತ್ತಿರಲು ಆಕಾಶವನ್ನು ಸೇರುವವನಾದನು.

ತತಃ ಪ್ರಭೃತಿ ತೀರ್ಥಂ ತತ್ಸೋಮಕುಂಡೇತಿ ದುರ್ಲಭಂ ।
ಯದ್ದೃಷ್ಟಮಾತ್ರಾನ್ಮನುಜಾ ಗತದೋಷಾ ಭವಂತಿ ಹಿ ॥ ೩೧ ॥
ಯದುಪಸ್ಪರ್ಶನಾದ್ಯಾಂತಿ ಸೋಮಲೋಕಂ ವಿನಿಂದಿತಾಃ ।
ಯತ್ರ ಸ್ನಾತ್ವಾ ವಿಧಾನೇನ ಸಂತರ್ಪ್ಯ ಪಿತೃದೇವತಾಃ ।
ಸೋಮಲೋಕಂ ವಿನಿರ್ಭಿದ್ಯ ವಿಷ್ಣುಲೋಕಂ ಪ್ರಪದ್ಯತೇ ॥ ೩೨ ॥
ಉಪವಾಸತ್ರಯಂ ಕೃತ್ವಾ ಪೂಜಯಿತ್ವಾ ಜನಾರ್ದನಂ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೩೩ ॥
ತ್ರಿರಾತ್ರೇಣ ಸ್ಥಿತೋ ಭೂತ್ವಾ ಪೂಜಯಿತ್ವಾ ಜನಾರ್ದನಂ ।
ಜಪಂ ಕುರ್ವನ್ವಿಶೇಷೇಣ ಮಂತ್ರಸಿದ್ಧಿಃ ಪ್ರಜಾಯತೇ ॥ ೩೪ ॥
ಕರ್ಮಣಾ ಮನಸಾ ವಾಚಾ ಯತ್ಕೃತಂ ಪಾತಕಂ ನೃಭಿಃ ।
ತತ್ಸರ್ವಂ ಕ್ಷಯಮಾಯಾತಿ ಸೋಮಕುಂಡೇ ಕ್ಷಣಾದಿಹ ॥ ೩೫ ॥
ತತಸ್ತು ದ್ವಾದಶಾದಿತ್ಯತೀರ್ಥಂ ಪಾಪಹರಂ ಪರಂ ।
ಯತ್ರ ತಪ್ತ್ವಾ ಪುನಃ ಕೃಚ್ಛ್ರಂ ಕಾಶ್ಯಪಃ ಸೂರ್ಯತಾಂ ಯಯೌ ॥

---

೩೧–೩೨. ಅಂದಿನಿಂದ ಈ ತೀರ್ಥವು ಸೋಮಕುಂಡವೆಂದು ಪ್ರಖ್ಯಾತವಾಗಿರುವುದು. ಇದು ಸಾಮಾನ್ಯಮಾನವರಿಗೆ ಅತ್ಯಂತ ದುರ್ಲಭವಾಗಿರುವುದು. ಇದನ್ನು ನೋಡಿದ ಮಾತ್ರದಿಂದಲೇ ಸಕಲ ಮಾನವರೂ ತಮ್ಮ ದೋಷಗಳನ್ನು ಕಳೆದುಕೊಳ್ಳುವರೆಂಬುದರಲ್ಲಿ ಸಂದೇಹವಿಲ್ಲ. ಈ ತೀರ್ಥದ ಜಲವನ್ನು ಸ್ಪರ್ಶ ಮಾಡುವುದರಿಂದ ಅತ್ಯಂತ ನಿಂದಿತರಾದವರೂ ಕೂಡ ಚಂದ್ರಲೋಕವನ್ನು ಪಡೆಯುವರು. ಇಲ್ಲಿ ಸ್ನಾನವನ್ನು ಮಾಡಿ ಶಾಸ್ತ್ರೋಕ್ತಪ್ರಕಾರವಾಗಿ ಪಿತೃದೇವತೆಗಳನ್ನು ತರ್ಪಣದಿಂದ ಸಂತೋಷಗೊಳಿಸಲು ಮನುಷ್ಯರು ಚಂದ್ರಲೋಕವನ್ನು ಭೇದಿಸಿಕೊಂಡು ವಿಷ್ಣುಲೋಕವನ್ನು ಸೇರುವರು.

೩೩. ಮೂರುದಿನಗಳ ಉಪವಾಸವನ್ನು ಮಾಡಿ ಶ್ರೀಮನ್ನಾರಾಯಣನನ್ನು ಪೂಜಿಸಿದವರಿಗೆ ಒಂದು ನೂರು ಕೋಟಿ ಕಲ್ಪಗಳಾದರೂ ಪುನಃ ಸಂಸಾರಕ್ಕೆ ಬೀಳುವುದೆಂಬುವುದೇ ಸಂಭವಿಸುವುದಿಲ್ಲವು.

೩೪. ಈ ತೀರ್ಥದಲ್ಲಿ ಮೂರು ರಾತ್ರಿಗಳು ನಿಂತು ಜಾಗರಣವನ್ನುಮಾಡಿ ಶ್ರೀಬದರೀನಾರಾಯಣನನ್ನು ಪೂಜೆಮಾಡಿ ವಿಶೇಷವಾಗಿ ಜಪವನ್ನಾಚರಿಸಲು ಮನುಷ್ಯನಿಗೆ ಕ್ಷಿಪ್ರದಲ್ಲಿಯೇ ಮಂತ್ರಸಿದ್ಧಿಯು ಲಭಿಸುವುದು.

೩೫. ಸಮಸ್ತಮಾನವರೂ ಕರ್ಮದಿಂದಲೂ, ಮನಸ್ಸಿನಿಂದಲೂ ಮಾತುಗಳಿಂದಲೂ ಯಾವ ಯಾವ ಪಾತಕಗಳನ್ನು ಮಾಡುವರೊ, ಅವುಗಳೆಲ್ಲವೂ ಈ ಸೋಮಕುಂಡದ ದರ್ಶನಮಾತ್ರದಿಂದಲೇ ನಾಶವನ್ನು ಹೊಂದುವುವು.

೩೬. ಬಳಿಕ ಉತ್ತಮವೂ, ಪಾಪಹರವೂ ಆದ ದ್ವಾದಶಾದಿತ್ಯತೀರ್ಥವೆಂಬು

ದುರ್ಲಭಂ ತ್ರಿಷು ಲೋಕೇಷು ತಪಃಸಿದ್ಧ್ಯೇಕಕಾರಣಂ ।
ರವಿವಾರೇಷು ಸಪ್ತಮ್ಯಾಂ ಸಂಕ್ರಾಂತ್ಯಾಂ ವಿಧಿವನ್ನರಃ ।
ಸಪ್ತಜನ್ಮಕೃತಾತ್ಪಾಪಾತ್ಸ್ನಾನಮಾತ್ರೇಣ ಶುಧ್ಯತಿ ॥ ೩೭ ॥
ಪಾರಾಕಂ ವಿಧಿವತ್ಕೃತ್ವಾ ಪೂಜನೀಯೋ ಜನಾರ್ದನಃ ।
ಸೂರ್ಯಲೋಕೇ ಸುಖಂ ಭುಕ್ತ್ವಾ ವಿಷ್ಣುಲೋಕೇ ಮಹೀಯತೇ॥ ೩೮॥
ಮಹಾರೋಗಾಭಿಭೂತಸ್ತು ಸ್ನಾತ್ವಾ ಪೀತ್ವಾ ಜಲಂ ಶುಚಿಃ ।
ರೋಗಮುಕ್ತೋಽಚಿರಾದೇವ ನಾಽತ್ರ ಕಾರ್ಯಾ ವಿಚಾರಣಾ ॥ ೩೯ ॥
ಚತುಃಸ್ರೋತಂ ಪರಂ ತೀರ್ಥಂ ವಿಲೋಚನಮನೋಹರಂ ।
ಧರ್ಮಾರ್ಥಕಾಮಮೋಕ್ಷಾಸ್ತೇ ತಿಷ್ಠಂತಿ ದ್ರವರೂಪಿಣಃ ॥ ೪೦ ॥
ಹರೇರಾಜ್ಞಾನುಸಾರೇಣ ಕ್ಷೇತ್ರೇಽಸ್ಮಿನ್ವೈಷ್ಣವೇ ಸ್ವಯಂ ।
ಪುರುಷಾರ್ಥಾ ದ್ರವೀಭೂತಾ ಭೂತಾನಾಂ ಮುಕ್ತಿಹೇತವಃ ॥ ೪೧ ॥

---

ದಿರುವುದು. ಆ ಸ್ಥಳದಲ್ಲಿ ಕಾಶ್ಯಪನು ಕಷ್ಟತರವಾದ ತಪಸ್ಸನ್ನು ಮಾಡಿ ಸೂರ್ಯಪದವಿಯನ್ನು ಪಡೆದನು.

೩೭. ಈ ತೀರ್ಥವು ಮೂರು ಲೋಕಗಳಲ್ಲಿಯೂ ದುರ್ಲಭವಾಗಿರುವುದು. ತಪಸ್ಸಿದ್ಧಿಗೆ ಏಕಾಂತಕಾರಣವಾಗಿರುವುದು. ಭಾನುವಾರದ ದಿನ ಸಪ್ತಮೀ ತಿಥಿಯಲ್ಲಿಯೂ ಸಂಕ್ರಮಣದಿನದಲ್ಲಿಯೂ ಇಲ್ಲಿ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡುವ ಮಾತ್ರದಿಂದ ಮನುಷ್ಯನು ಏಳು ಜನ್ಮಗಳಲ್ಲಿ ಮಾಡಿದ ಪಾಪಗಳನ್ನೆಲ್ಲ ಕಳೆದುಕೊಂಡು ಪರಿಶುದ್ಧನಾಗುವನು.

೩೮. ಶಾಸ್ತ್ರೋಕ್ತ ವಿಧಾನದಿಂದ ಪರಾಕವೆಂಬ ಹನ್ನೆರಡು ದಿವಸದ ಉಪವಾಸದ ನಿಯಮವನ್ನನುಸರಿಸಿ ಶ್ರೀ ಹರಿಯನ್ನು ಪೂಜಿಸಬೇಕು. ಆ ಭಕ್ತನು ಸೂರ್ಯಲೋಕದಲ್ಲಿ ಅನೇಕ ಸುಖಗಳನ್ನನುಭವಿಸಿ ಕಡೆಗೆ ವಿಷ್ಣುಲೋಕದಲ್ಲಿ ಉತ್ತಮಪದವಿಯನ್ನು ಪಡೆಯುವನು.

೩೯. ದೇಹದಲ್ಲಿ ಮಹತ್ತರಗಳಾದ ರೋಗಗಳಿಂದ ನರಳುತ್ತಿರುವವನೂ ಕೂಡ ಈ ತೀರ್ಥದಲ್ಲಿ ಮಿಂದು ಜಲವನ್ನು ಪಾನಮಾಡಲು ಶೀಘ್ರವಾಗಿಯೇ ತನ್ನ ರೋಗಗಳಿಂದ ಬಿಡುಗಡೆಯನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹಪಡಬೇಕಾದುದಿಲ್ಲವು.

೪೦. ಆ ಬದರಿಕಾಶ್ರಮದಲ್ಲಿಯೇ ನೋಡುವುದಕ್ಕೆ ಮನೋಹರವಾದ ಚತುಸ್ರೋತವೆಂಬ ತೀರ್ಥವೊಂದಿರುವುದು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳೇ ಇಲ್ಲಿ ಪ್ರವಾಹಗಳಾಗಿ ಹರಿಯುತ್ತಿರುವುವು.

೪೧. ಶ್ರೀ ಹರಿಯ ಆಜ್ಞೆಯನ್ನನುಸರಿಸಿಯೇ ಉತ್ತಮವಾದ ಈ ವೈಷ್ಣವ

ಪೂರ್ವಾದಿದಿಕ್ಷು ಕ್ರಮಸನ್ನಿವಿಷ್ಟಾಃ
ಧರ್ಮಪ್ರಧಾನಾ ಇವ ರೂಪಭಾಜಃ ।
ಭಜಂತಿ ಏತಾನ್ಕ್ರಮಸನ್ನಿವಿಷ್ಟಾನ್
ಪ್ರಸನ್ನತೈಷಾಂ ಸತತಂ ಭವೇದ್ಧಿ ॥ ೪೨ ॥
ನಾಽನ್ಯತ್ರ ಕ್ಷೇತ್ರೇ ಮಿಲಿತಾಃ ಕಥಂಚಿತ್
ಚತ್ವಾರ ಏತೇ ತ್ರಿದಶೈರಲಭ್ಯಾಃ ।
ತಾನಗ್ರಿಮಂ ಜನ್ಮ ಜವೇನ ಲಬ್ಧ್ವಾ
ಪಶ್ಯಂತಿ ಪೂರ್ವಾರ್ಜಿತಪುಣ್ಯಪುಂಜಾಃ ॥ ೪೩ ॥
ಯೇ ದುರ್ಜನಾ ದುರ್ಜನಸಂಗಭಾಜಃ
ಕ್ಷಮಾರ್ಜವಪ್ರಾಣಜಯಪ್ರಧಾನಾಃ ।
ಕ್ರೀಡಾಮೃಗಾ ಗ್ರಾಮ್ಯವಧೂಜನಾನಾಂ
ನ ತೇ ಪ್ರಪಶ್ಯಂತ್ಯಚಿರಾತ್ಪುಮರ್ಥಾನ್ ॥ ೪೪ ॥

---

ಕ್ಷೇತ್ರದಲ್ಲಿ ಪುರುಷಾರ್ಥಗಳೆಲ್ಲವೂ ಪ್ರವಾಹರೂಪಗಳನ್ನು ಧರಿಸಿ ಸಕಲ ಪ್ರಾಣಿಗಳ ಮೋಕ್ಷಕ್ಕೂ ಕಾರಣಗಳಾಗಿರುವುವು.

೪೨. ಈ ನಾಲ್ಕು ಪ್ರವಾಹಗಳೂ ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ನೆಲಸಿರುವುವು. ಧರ್ಮಾದಿ ಪುರುಷಾರ್ಥಗಳೇ ಈ ರೀತಿ ರೂಪುಗೊಂಡಿರುವುವು. ಇಂತು ಕ್ರಮವಾಗಿ ಸನ್ನಿಹಿತಗಳಾಗಿರುವ ತೀರ್ಥಗಳನ್ನು ಯಾರು ಸೇವಿಸುವರೊ, ಅವರಿಗೆ ಯಾವಾಗಲೂ ಮನಸ್ಸಿನ ಪ್ರಸನ್ನತೆಯುಂಟಾಗುವುದು.

೪೩. ಬೇರೆ ಯಾವ ಕ್ಷೇತ್ರದಲ್ಲಿಯೂ ನಾಲ್ಕು ಪುರುಷಾರ್ಥಗಳು ಈ ವಿಧವಾಗಿ ಸಮ್ಮಿಳಿತಗಳಾಗಿ ಲಭಿಸುವುದಿಲ್ಲವು. ದೇವತೆಗಳಿಗೂ ಸಹ ಈ ನಾಲ್ಕು ತೀರ್ಥಗಳೂ ಒಮ್ಮೆಯೇ ದುರ್ಲಭಗಳಾಗಿರುವುವು. ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳಲ್ಲಿ ಉತ್ತಮವಾದ ಮನುಷ್ಯಜನ್ಮವನ್ನು ಹೊಂದಿಯೂ ಸಹ ಜನರು ಅನೇಕ ಜನ್ಮಗಳ ಪೂರ್ವಾರ್ಜಿತ ಸುಕೃತಗಳ ಫಲವಾಗಿಯೇ ಇವುಗಳನ್ನು ನೋಡಲು ಶಕ್ತರಾಗುವರು.

೪೪. ಯಾವ ಮಾನವರು ದುರ್ಜನರೊ, ಯಾರು ದುರ್ಜನರ ಸಹವಾಸದಲ್ಲಿಯೇ ನಿರತರಾಗಿರುವರೊ, ಕ್ಷಮೆ, ಋಜುಭಾವ, ಪ್ರಾಣಾಯಾಮ ಮುಂತಾದುವುಗಳಿಂದ ರಹಿತರಾಗಿರುವರೊ, ಗ್ರಾಮ್ಯಸ್ತ್ರೀಯರ ಭೋಗಗಳಲ್ಲಿ ನಿರತರಾಗಿ ಅವರಿಗೆ ಕ್ರೀಡಾಮೃಗಗಳೆನಿಸಿರುವರೊ, ಅವರೂ ಸ್ವಲ್ಪಕಾಲದಲ್ಲಿಯೇ ಪುರುಷಾರ್ಥಗಳನ್ನು ಹೊಂದಲಾರರು.

ತಥೈವ ಪಶ್ಯಂತ್ಯಚಿರೇಣ ತತ್ತ್ವ
ಜ್ಞಾನೈಕ ಹೇತೂನಪಿ ತಾನ್ಪುಮರ್ಥಾನ್ ॥ ೪೫ ॥
ಅತ್ರ ಬ್ರಹ್ಮಾದಯೋ ದೇವಾಃ ಋಷಯಶ್ಚ ತಪೋಧನಾಃ ।
ಪರ್ವಣಿ ಪ್ರಯತಾಃ ಸ್ನಾತುಂ ಸಮಾಯಾಂತಿ ಷಡಾನನ ॥ ೪೬ ॥
ತತಃ ಸತ್ಯಪದಂ ನಾಮ ತೀರ್ಥಂ ಸರ್ವಮನೋಹರಂ ।
ತ್ರಿಕೋಣಾಕಾರಮೇವೈತತ್ಕುಂಡಂ ಕಲ್ಮಷನಾಶನಂ ।
ಏಕಾದಶ್ಯಾಂ ಹರಿಸ್ತತ್ರ ಸ್ವಯಮಾಯಾತಿ ಪಾವನೇ ॥ ೪೭ ॥
ತತ್ಪಶ್ಚಾದೃಷಯಃ ಸರ್ವೇ ಮುನಯಶ್ಚ ತಪೋಧನಾಃ ।
ಸ್ನಾತುಮಾಯಾಂತಿ ವಿಧಿವತ್ಕುಂಡೇ ಸತ್ಯಪದಾಭಿಧೇ ॥ ೪೮ ॥
ಗಂಧರ್ವಾಪ್ಸರಸಾಂ ಯತ್ರ ಮಧ್ಯಾಹ್ನೇ ಹರಿವಾಸರೇ ।
ಗಾನಂ ಶೃಣ್ವಂತಿ ವಿರಲಾಃ ಸತ್ಯವ್ರತಪರಾಯಣಾಃ ॥ ೪೯ ॥
ದರ್ಶನಾದ್ಯಸ್ಯ ತೀರ್ಥಸ್ಯ ಪಾತಕಾನಿ ಮಹಾಂತ್ಯಪಿ ।
ಪಲಾಯಂತೇ ಭಯೇನೈವ ಸಿಂಹಂ ದೃಷ್ಟ್ವಾ ಮೃಗಾ ಇವ ॥ ೫೦ ॥

---

೪೫. ಆದರೂ ಶೀಘ್ರವಾಗಿಯೇ ಈ ಪುರುಷಾರ್ಥಗಳೇ ತತ್ತ್ವಜ್ಞಾನಕ್ಕೆ ಏಕಾಂತಕಾರಣಗಳೆಂಬ ಅಂಶವನ್ನು ತಿಳಿಯುವರು.

೪೬. ಎಲೈ ಷಣ್ಮುಖನೆ! ಬ್ರಹ್ಮನೇ ಮೊದಲಾದ ದೇವತೆಗಳೂ, ತಪೋನಿಷ್ಠರಾದ ಮಹರ್ಷಿಗಳೂ ಪ್ರಯಾಸದಿಂದ ಈ ತೀರ್ಥದಲ್ಲಿ ಸ್ನಾನಮಾಡಲು ಪ್ರತಿಯೊಂದು ಪರ್ವಕಾಲದಲ್ಲಿಯೂ ಬರುತ್ತಾರೆ.

೪೭. ಬಳಿಕ ಸರ್ವಪ್ರಕಾರದಿಂದಲೂ ರಮಣೀಯವಾಗಿರುವ ಸತ್ಯಪದವೆಂದು ಕರೆಯಲ್ಪಡುವ ತೀರ್ಥವೊಂದಿರುವುದು. ತ್ರಿಕೋಣಾಕಾರದಿಂದ ಶೋಭಿಸುತ್ತಿರುವ ಈ ಕುಂಡವು ಸಮಸ್ತದುರಿತಕ್ಷಯಕಾರಕವಾಗಿರುವುದು. ಏಕಾದಶಿಯ ದಿವಸದಲ್ಲಿ ಶ್ರೀ ಹರಿಯೇ ಅಲ್ಲಿ ಸನ್ನಿಹಿತನಾಗಿ ಅದನ್ನು ಪಾವನಗೊಳಿಸುವನು.

೪೮–೪೯. ಆಮೇಲೆ ಸತ್ಯಪದನಾಮಕವಾದ ಈ ತೀರ್ಥದಲ್ಲಿ ಸಕಲ ಮಹರ್ಷಿಗಳೂ, ತಪೋಧನರೆನಿಸಿದ ಮಹಾಮುನಿಗಳೂ ವಿಧಿವಿಹಿತವಾದ ಸ್ನಾನವನ್ನು ಮಾಡಲು ಬಂದು ಸೇರುವರು. ಸತ್ಯವ್ರತದಲ್ಲಿಯೇ ನಿರತರಾದ ಹಲವರು ಮಾತ್ರ ಹರಿವಾಸರದ ಮಧ್ಯಾಹ್ನದಲ್ಲಿ ಇಂದಿಗೂ ಕೂಡ ಇಲ್ಲಿ ಗಂಧರ್ವರ ಮತ್ತು ಅಪ್ಸರಸ್ತ್ರೀಯರ ಸಂಗೀತಗಳನ್ನು ಕೇಳಲು ಸಮರ್ಥರಾಗುತ್ತಾರೆ.

೫೦. ಈ ಮಹಾತೀರ್ಥದ ದರ್ಶನದಿಂದಲೇ ಮಹಾಪಾತಕಗಳೂ ಸಹ ಭಯಗೊಂಡು ಸಿಂಹವನ್ನು ಕಂಡ ಕ್ಷುದ್ರಮೃಗಗಳಂತೆ ದಿಕ್ಕಾಪಾಲಾಗಿ ಓಡಿಹೋಗುವುವು.

ಸ್ವಶಾಖೋಕ್ತವಿಧಾನೇನ ಸ್ನಾನಂ ಕೃತ್ವಾ ವಿಚಕ್ಷಣಃ ।
ಸತ್ಯಲೋಕಮವಾಪ್ನೋತಿ ತತೋ ನೈಃಶ್ರೇಯಸಂ ಪದಂ ॥ ೫೧ ॥
ಅಹೋರಾತ್ರಂ ಶುಚಿರ್ಭೂತ್ವಾ ಉಪೋಷ್ಯ ಚ ಜನಾರ್ದನಂ ।
ಪೂಜಯಿತ್ವಾ ಯಥಾ ಶಕ್ತ್ಯಾ ಸ ಜೀವನ್ಮುಕ್ತಿಭಾಜನಃ ॥ ೫೨ ॥
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ತ್ರಿಕೋಣಸ್ಥಾಃ ಸಮಾಹಿತಾಃ ।
ತಪಃ ಕುರ್ವಂತ್ಯನುದಿನಂ ಸರ್ವಲೋಕಾದಿತೋಷಣಂ ॥ ೫೩ ॥
ತ್ರಿಕೋಣಮಂಡಿತಂ ತೀರ್ಥಂ ನಾಮ್ನಾ ಸತ್ಯಪದಪ್ರದಂ ।
ದರ್ಶನೀಯಂ ಪ್ರಯತ್ನೇನ ಸರ್ವಪಾಪಮುಮುಕ್ಷುಭಿಃ ॥ ೫೪ ॥
ಜಪಸ್ತಪೋ ಹರಿಸ್ತೋತ್ರಂ ಪೂಜಾಸ್ತುತ್ಯಭಿವಂದನಂ ।
ಮಾಹಾತ್ಮ್ಯಂ ಕುರ್ವತಾಂ ವಕ್ತುಂ ಬ್ರಹ್ಮಣಾಽಪಿ ನ ಶಕ್ಯತೇ ॥ ೫೫ ॥
ತತೋಽತಿವಿಮಲಂ ನಾಮ ನರನಾರಾಯಣಾಶ್ರಮಂ ।
ದ್ವಿವಿಧಂ ದೃಶ್ಯತೇ ತತ್ರ ಪಾಥಃ ಪರಮನಿರ್ಮಲಂ ॥ ೫೬ ॥

---

೫೧. ಪ್ರತಿಯೊಬ್ಬ ಬುದ್ಧಿವಂತನೂ ತನ್ನ ವೇದಶಾಖೆಯ ಕಲ್ಪದಲ್ಲಿ ಹೇಳಿರುವ ವಿಧಾನದಿಂದ ಸ್ನಾನವನ್ನು ಮಾಡಿದರೆ ಅದರ ಫಲವಾಗಿ ಬ್ರಹ್ಮನ ಸತ್ಯಲೋಕವನ್ನು ಸೇರಿ ಬಳಿಕ ಅತ್ಯುತ್ತಮವಾದ ಮೋಕ್ಷವನ್ನೂ ಪಡೆಯುತ್ತಾನೆ.

೫೨. ಯಾವ ಮಾನವನು, ಒಂದು ಅಹೋರಾತ್ರದಲ್ಲಿ ನಿರ್ಜಲೋಪವಾಸವನ್ನು ಮಾಡಿ ಶುಚಿರ್ಭೂತನಾಗಿ ಪರಮಾತ್ಮನನ್ನು ತನ್ನ ಶಕ್ತ್ಯನುಸಾರವಾದ ವಿಭವದಿಂದ ಪೂಜಿಸುವನೊ, ಅವನು ಜೀವನ್ಮುಕ್ತಿಪದವಿಗೆ ಅರ್ಹತೆಯನ್ನು ಪಡೆಯುವನು.

೫೩–೫೪. ಈ ತೀರ್ಥದ ಮೂರು ಮೂಲೆಗಳಲ್ಲಿಯೂ ಬ್ರಹ್ಮ, ವಿಷ್ಣು, ಮಹೇಶ್ವರರು ನೆಲಸಿರುವರೆಂದು ಹೇಳುವರು. ಅವರೆಲ್ಲರೂ ಸಕಲ ಲೋಕಗಳ ಹಿತದೃಷ್ಟಿಯಿಂದ ಅಲ್ಲಿ ತಪಸ್ಸನ್ನಾಚರಿಸುತ್ತಿರುವರು. ಮುಖ್ಯವಾಗಿ ಸಕಲ ಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧರಾಗಬೇಕೆಂಬ ಮನುಷ್ಯರು ತ್ರಿಕೋಣಾಕಾರವಾಗಿ ರಂಜಿಸುತ್ತಿರುವ ಸತ್ಯಪದವೆಂಬ ಈ ತೀರ್ಥವನ್ನು ಪ್ರಯತ್ನಪೂರ್ವಕವಾಗಿಯಾದರೂ ಸೇವಿಸಲೇಬೇಕಾದುದು ಕರ್ತವ್ಯವು.

೫೫. ಇಲ್ಲಿ ಜಪ, ತಪಸ್ಸು, ವಿಷ್ಣುಸ್ತೋತ್ರ ಪಠನ, ಹರಿಪೂಜೆ, ಸ್ತುತಿ, ನಮಸ್ಕಾರ ಮುಂತಾದುವುಗಳನ್ನು ಮಾಡುವವರ ಮಹಾಪುಣ್ಯವನ್ನು ವಿಸ್ತರಿಸಲು ಬ್ರಹ್ಮದೇವನಿಗೂ ಶಕ್ಯವಾಗಲಾರದು.

೫೬. ಬಳಿಕ ನರನಾರಾಯಣಾಶ್ರಮವೆಂಬ ಅತಿಪವಿತ್ರವಾದ ಪ್ರದೇಶವಿರುವುದು. ಅಲ್ಲಿ ಅತ್ಯಂತ ನಿರ್ಮಲವಾದ ಗಂಗಾ ಪ್ರವಾಹವು ಎರಡು ಕವಲಾಗಿ ಹರಿಯುತ್ತಿರುವುದು.

ಉಭಾಭ್ಯಾಮುಭಯೋಃ ಪ್ರೀತಿರ್ಭವತೀತಿ ವಿನಿಶ್ಚಿತಂ ।
ತತ್ರ ಸ್ನಾತ್ವಾ ಪ್ರಯತ್ನೇನ ಪೂಜಯಿತ್ವಾ ಜನಾರ್ದನಂ ।
ಸರ್ವಪಾಪವಿನಿರ್ಮುಕ್ತಸ್ತತ್ಕ್ಷಣಾನ್ನಾತ್ರ ಸಂಶಯಃ ॥ ೫೭ ॥
ತತೋ ನಾರಾಯಣಾಽಽವಾಸಶಿಖರೇ ವಿಮಲಾಕೃತಿ ।
ತೀರ್ಥಂ ಪವಿತ್ರಮುರ್ವಶ್ಯಾ ಅಭಿವ್ಯಕ್ತಿಕರಂ ಭವೇತ್ ॥ ೫೮ ॥

ಸ್ಕಂದ ಉವಾಚ :—

ಅಭಿವ್ಯಕ್ತಿಃ ಕಥಂ ತಸ್ಯಾಃ ಉರ್ವಶ್ಯಾಃ ಶಿಖರೇ ಪಿತಃ ।
ಕಿಂ ಪುಣ್ಯಂ ಕಿಂ ಫಲಂ ತತ್ರ ಪರಂ ಕೌತೂಹಲಂ ವದ ॥ ೫೯ ॥

ಶಿವ ಉವಾಚ :—

ಧರ್ಮಸ್ಯ ಪತ್ನೀ ಮೂರ್ತ್ಯಾಸೀತ್ತಸ್ಯಾ ಜಾತೌ ಷಡಾನನ ।
ನರನಾರಾಯಣೌ ಸಾಕ್ಷಾದ್ಭಗವಾನೇವ ಕೇವಲಂ ॥ ೬೦ ॥
ಪಿತ್ರೋರಾಜ್ಞಾಮನುಪ್ರಾಪ್ಯ ತಪೋಽರ್ಥಂ ಕೃತಮಾನಸೌ ।
ಉಭಯೋರ್ನಗಯೋಸ್ತೌ ತು ತಪೋಮೂರ್ತೀ ಇವ ಸ್ಥಿತೌ ॥ ೬೧ ॥

---

೫೭. ಆ ಎರಡು ಪ್ರವಾಹಗಳಲ್ಲಿ ಸ್ನಾನಮಾಡುವುದರಿಂದ ನರನಾರಾಯಣರೀರ್ವರಿಗೂ ಸಂತೋಷವುಂಟಾಗುವುದೆಂದು ನಿಶ್ಚಯಿಸಲ್ಪಟ್ಟಿರುವುದು. ಅಲ್ಲಿ ಪ್ರಯತ್ನದಿಂದ ಸ್ನಾನವನ್ನು ಮಾಡಿ ಶ್ರೀಹರಿಯನ್ನು ಪೂಜಿಸಲು ಮನುಷ್ಯನು ತತ್‌ಕ್ಷಣದಲ್ಲಿಯೇ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವುದರಲ್ಲಿ ಸಂದೇಹವಿಲ್ಲವು.

೫೮. ನಾರಾಯಣನ ನಿವಾಸವಾದ ಆ ಪರ್ವತದ ಶಿಖರದಲ್ಲಿ ನಿರ್ಮಲವಾದ ಆಕಾರವುಳ್ಳ ಪವಿತ್ರವಾದ ಊರ್ವಶೀತೀರ್ಥವು ಅಭಿವ್ಯಕ್ತವಾಗಿರುವುದು.

೫೯. ಸ್ಕಂದನು ಕೇಳುತ್ತಾನೆ:—ತಂದೆಯೆ! ಆ ಪರ್ವತಶಿಖರದಲ್ಲಿ ಊರ್ವಶಿಯ ಅಭಿವ್ಯಕ್ತಿಯು ಉಂಟಾದುದು ಹೇಗೆ? ಆ ತೀರ್ಥದ ಸೇವೆಯಿಂದ ಯಾವ ಪುಣ್ಯವು ಲಭಿಸುವುದು? ಯಾವ ಫಲವುಂಟು? ಇವುಗಳನ್ನು ತಿಳಿಯಲು ನನಗೆ ಅತ್ಯಂತ ಕುತೂಹಲವುಂಟಾಗಿರುವುದು. ದಯವಿಟ್ಟು ತಿಳಿಸು.

೬೦. ಶಿವನು ಹೇಳುತ್ತಾನೆ:—ಎಲೈ ಷಣ್ಮುಖನೆ! ಧರ್ಮರಾಜನಿಗೆ ಮೂರ್ತಿಯೆಂಬುವಳು ಪತ್ನಿಯಾಗಿದ್ದಳು. ಆಕೆಯಲ್ಲಿ ಶ್ರೀಮನ್ನಾರಾಯಣನೇ ಸಾಕ್ಷಾತ್ತಾಗಿ ನರನಾರಾಯಣರಾಗಿ ಅವತರಿಸಿದನು.

೬೧. ಅವರಿಬ್ಬರೂ ತಪಸ್ಸನ್ನು ಮಾಡುವ ಅಭಿಲಾಷೆಯುಳ್ಳವರಾಗಿ ತಂದೆಯ ಅಪ್ಪಣೆಯನ್ನು ಪಡೆದು ಅಲ್ಲಿಯ ಎರಡು ಪರ್ವತಗಳ ಶಿಖರಗಳಲ್ಲಿಯೂ ನಿಂತು ರೂಪುಗೊಂಡ ತಪೋಜ್ವಾಲೆಗಳಂತೆ ಕಾಣುತ್ತಿದ್ದರು.

ತೌ ದೃಷ್ಟ್ವಾ ವಿಸ್ಮಿತಃ ಶಕ್ರಃ ಪ್ರೇಷಯಾಮಾಸ ಮನ್ಮಥಂ ।
ಸಗಣಂ ತಪಸೋ ಧ್ವಂಸೋ ಯಥಾ ಸ್ಯಾದ್ಗಂಧಮಾದನಂ ॥ ೬೨ ॥
ವಿಕ್ರಮ್ಯ ವಿಧಿವತ್ತೇ ತು ನಾರಾಯಣಬಲೋದಯಂ ।
ಜ್ಞಾತ್ವಾ ಹತಮನಸ್ಕಾನ್ ತಾನುವಾಚ ಜಗತೀಪತಿಃ ॥ ೬೩ ॥
ಹರಿರುವಾಚ :—
ಕಿಮರ್ಥಮಾಗತಾ ಯೂಯಮಾತಿಥ್ಯಂ ಗೃಹ್ಯತಾಮಿತಿ ॥ ೬೪ ॥
ಇತ್ಯುಕ್ತ್ವಾ ಫಲಮೂಲಾನಿ ತೇಭ್ಯೋ ದತ್ತ್ವೋರ್ವಶೀಂ ತಥಾ ।
ದತ್ವಾಂತರ್ಧಿಮಗಾದೇವ ಪಶ್ಯತಾಂ ವಿಘ್ನಕಾರಿಣಾಂ ॥ ೬೫ ॥
ತೇ ತು ಗತ್ವಾ ದಿವಂ ಭೀತಾಃ ಶಕ್ರಾಯೋಚುರ್ಬಲಂ ಹರೇಃ ।
ಶಕ್ರಸ್ತಾಮುರ್ವಶೀಂ ಪ್ರಾಪ್ಯ ಹರ್ಷೇಣೈಕಯುತೋಽಭವತ್ ॥ ೬೬ ॥
ತತಃ ಪ್ರಭೃತಿ ತತ್ತೀರ್ಥಂ ಉರ್ವಶೀನಾಮತಃ ಪೃಥಕ್ ।
ಪ್ರಸಿದ್ಧಂ ಯತ್ರ ಭಗವಾನ್ಸ್ವಯಮಾಸ್ತೇ ತಪೋಮಯಃ ॥ ೬೭ ॥

---

೬೨. ಈ ಇಬ್ಬರ ತಪಸ್ಸನ್ನೂ ಕಂಡು ಮಹೇಂದ್ರನು ವಿಸ್ಮಯಗೊಂಡು ತಪೋಭಂಗವನ್ನುಂಟುಮಾಡಲೆಳಸಿ ಮನ್ಮಥನನ್ನು ಪರಿವಾರದೊಡನೆ ಕರೆದು ನಾರಾಯಣ ಮಹರ್ಷಿಯು ನೆಲಸಿದ್ದ ಗಂಧಮಾದನ ಪರ್ವತಕ್ಕೆ ಕಳುಹಿಸಿ ಕೊಟ್ಟನು.

೬೩. ಅವರೂ ಒಡೆಯನ ಅಪ್ಪಣೆಯನ್ನನುಸರಿಸಿ ಪರಾಕ್ರಮದಿಂದ ಬಂದರೂ ನಾರಾಯಣನ ತಪೋಬಲದ ಮಹಿಮೆಯನ್ನು ಪ್ರತ್ಯಕ್ಷವಾಗಿ ಕಂಡು ತಿಳಿದು ಮನಸ್ಸಿನ ಸಂರಂಭವನ್ನು ತ್ಯಜಿಸಿದರು. ಅವರನ್ನು ಕಂಡು ಲೋಕೇಶ್ವರ ನಾದ ಶ್ರೀಹರಿಯು ಹೇಳಿದನು.

೬೪. ಶ್ರೀಹರಿಯು ಹೇಳುತ್ತಾನೆ:—"ಅಯ್ಯಾ! ನೀವು ಇಲ್ಲಿಗೆ ಯಾವ ಕಾರ್ಯದ ಸಾಧನೆಗಾಗಿ ಬಂದಿರುವಿರಿ? ಇದೋ, ಆತಿಥ್ಯವನ್ನು ಸ್ವೀಕರಿಸಿರಿ."

೬೫. ಇಂತೆಂದು ಹೇಳಿ ಅವರೆಲ್ಲರಿಗೂ ಫಲಮೂಲಾದಿಗಳನ್ನು ಒಪ್ಪಿಸಿ ಅತಿಥಿಪೂಜೆಯನ್ನು ಯಥಾಕ್ರಮವಾಗಿ ಮಾಡಿಸಿಕೊಂಡ ಅವರಿಗೇ ತಪಸ್ಸಿಗೆ ವಿಘ್ನಮಾಡಲು ಅನುಕೂಲಳಾದ ಊರ್ವಶಿಯನ್ನೂ ಸಹ ನಿರ್ಮಿಸಿಕೊಟ್ಟು ಆ ಪರಮಾತ್ಮನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಅವರೆಲ್ಲರೂ ನೋಡುತ್ತಲೇ ಇದ್ದರು.

೬೬. ಅವರು ಅತ್ಯಂತ ಭಯಗೊಂಡವರಾಗಿ ಸ್ವರ್ಗಲೋಕವನ್ನು ಸೇರಿ ಮಹೇಂದ್ರನಿಗೆ ಶ್ರೀ ಹರಿಯ ಪರಾಕ್ರಮವನ್ನು ವಿವರಿಸಿದರು. ಮಹೇಂದ್ರ ನಾದರೊ ಆ ಊರ್ವಶಿಯನ್ನು ಪಡೆದು ಪರಮಸಂತೋಷವನ್ನು ಹೊಂದಿದನು.

೬೭. ಅಂದಿನಿಂದ ಆ ತೀರ್ಥವು ಬೇರೆಯಾಗಿ ಊರ್ವಶೀತೀರ್ಥವೆಂಬ

ತತ್ರ ಸ್ನಾತ್ವಾ ವಿಧಾನೇನ ಉಪೋಷ್ಯ ರಜನೀದ್ವಯಂ ।
ಪೂಜಯಿತ್ವಾ ಹರಿಸ್ತತ್ರ ನರೋ ನಾರಾಯಣೋ ಭವೇತ್ ॥ ೩೮ ॥
ಉರ್ವಶೀಕುಂಡಮಾಸಾದ್ಯ ಕಾಮನಾವಶತೋ ನರಃ ।
ಉರ್ವಶೀಲೋಕಮಾಪ್ನೋತಿ ಸ್ನಾನಮಾತ್ರೇಣ ಪುತ್ರಕ ॥ ೩೯ ॥
ಸದೈವ ಭಗವಾಂಸ್ತತ್ರ ಉರ್ವಶೀಕುಂಡಸನ್ನಿಧೌ ।
ಭೂತಾನಾಂ ಭಾವಯನ್ಭವ್ಯಂ ತಪೋಮೂರ್ತಿರ್ವ್ಯವಸ್ಥಿತಃ ॥ ೪೦ ॥
ಆಮೋದಂ ತದುಪರಿ ವೈ ಪ್ರಭಂಜನೋಽಪಿ
ಶ್ರೀಭರ್ತುರ್ಹರತಿ ಪದಾಂಬುಜೈಕಲಬ್ಧಂ ।
ಯತ್ಸಂಗಾತ್ಕಲಿಯುಗಕಲ್ಮಷಾತುರಾಣಾಂ
ಉತ್ಸಂಗೇ ನ ಭವತಿ ಪಾಪಭಾರಪಾಕಃ ॥ ೪೧ ॥
ಯತ್ಸಂಗಾದ್ಧರ್ಷಮುಪಾವಹತ್ಪದಶ್ರೀ
ನಿರ್ವಿಣ್ಣೋ ಗಿರಿವಿವರೇಽಚ್ಯುತೈಕಸೇವೀ ।
ಶ್ರೀಭರ್ತುಶ್ಚರಣಯುಗಂ ವಹನ್ಸಮಂತಾ
ದಭ್ಯೇತಿ ಪ್ರಶಮಮಹಸ್ತಪಃ ಸಮೀರೇ ॥ ೪೨ ॥

---

ಹೆಸರಿನಿಂದಲೇ ಪ್ರಸಿದ್ಧವಾಗಿರುವುದು. ಅಲ್ಲಿ ತಪೋನಿಷ್ಠನಾದ ಭಗವಂತನು ತಾನೇ ಸಾಕ್ಷಾತ್ತಾಗಿ ವಾಸಮಾಡುತ್ತಿರುವನು.

೩೮. ಅಲ್ಲಿ ವಿಧಿಯನ್ನನುಸರಿಸಿ ಸ್ನಾನವನ್ನು ಮಾಡಿ ಎರಡು ರಾತ್ರಿಗಳ ಉಪವಾಸವನ್ನು ಮಾಡಿ ಶ್ರೀ ಹರಿಯ ಪೂಜೆಯನ್ನು ಮಾಡಲು ಯಾವ ಮನುಷ್ಯನಾದರೂ ಸಾಕ್ಷಾತ್‌ನಾರಾಯಣನೇ ಆಗುತ್ತಾನೆ.

೩೯. ಎಲೈ ಪುತ್ರನೆ! ಯಾವನು ಮನಸ್ಸಿನಲ್ಲಿ ಅಭಿಲಾಷೆಯನ್ನಿಟ್ಟುಕೊಂಡು ಊರ್ವಶೀಕುಂಡದಲ್ಲಿ ಸ್ನಾನವನ್ನು ಮಾಡುವನೊ, ಅವನು ಆ ಸ್ನಾನದ ಫಲವಾಗಿಯೇ ಊರ್ವಶಿಯ ಲೋಕವನ್ನು ಸೇರುವನು.

೪೦. ಅಲ್ಲಿ ಊರ್ವಶೀಕುಂಡದ ಸಮೀಪದಲ್ಲಿ ಸರ್ವಕಾಲದಲ್ಲಿಯೂ ಭಗವಂತನು ಸಕಲ ಪ್ರಾಣಿಗಳ ಅಭೀಪ್ಸಿತಗಳನ್ನೆಲ್ಲ ನೆರವೇರಿಸುತ್ತ ತಪೋಮೂರ್ತಿಯಾಗಿ ನಿಂತಿರುವನು.

೪೧. ಆ ಪರ್ವತದ ಮೇಲಿನ ವಾಯುವೂ ಕೂಡ ಅಲ್ಲಿ ನೆಲಸಿರುವ ಲಕ್ಷ್ಮೀರಮಣನ ಪಾದಕಮಲಗಳಿಂದ ಹೊರಸೂಸುವ ನರುಗಂಪನ್ನು ಹೊತ್ತು ಬೀಸುತ್ತಿರುವುದು. ಆ ವಾಯುವಿನ ಸ್ಪರ್ಶಮಾತ್ರದಿಂದಲೇ ಕಲಿಯುಗದ ಅನೇಕ ಕಲ್ಮಷಗಳಿಂದ ಕೂಡಿರುವ ಮನುಷ್ಯರಲ್ಲಿಯೂ ಸಹ ಪಾಪಕೋಟಿಗಳ ದುಷ್ಫಲಗಳು ಎಂದಿಗೂ ಕಾಣಲಾರವು.

೪೨. ಆ ಪರ್ವತದ ತಪ್ಪಲುಗಳಲ್ಲಿ ವಾಸಮಾಡಿಕೊಂಡು ಪರಮಾತ್ಮ

ಗೀರ್ವಾಣಾನುಪಹಸತಿ ಸ್ವಘೇನಪೂರ್ಣಃ
ಕೀಟೋಽಪಿ ಪ್ರಶಮಿತದುರ್ನಯೋ ನಿರೀಹಃ ।
ಯತ್ರಸ್ಥಃ ಕುಸುಮನಿವೇದಮಾತ್ಮಯೋಗ
ಪರ್ಯುಷ್ಟಂ ಜಹದುಪಯಾಸ್ಯತೇ ಪದಂ ತತ್ ॥ ೭೩ ॥
ಯತ್ರೇತ್ವಾ ಮುನಿಮತಯೋ ಬಹಿಃ ಪದಾರ್ಥಾನ್
ನಾಪಶ್ಯನ್ನಿಹಿತಪದಾಂಬುಜೈಕಭಾಜಃ ।
ಯತ್ರಸ್ಥಃ ಸ್ವಯಮಪಿ ಗೋಪತಿರ್ಜನಾನಾ
ಮಾಧತ್ತೇ ಸ್ವಪದಮನುಕ್ರಮಾಗತಾನಾಂ ॥ ೭೪ ॥
ಬಹೂನಿ ಸಂತಿ ತೀರ್ಥಾನಿ ಗಿರೌ ನಾರಾಯಣಾಶ್ರಿತೇ ।
ಸರ್ವಪಾಪಹರಾಣ್ಯಾಶು ತಾನ್ಯಹಂ ವೇದ ನೋ ಜನಃ ॥ ೭೫ ॥

---

ನನ್ನೇ ಅನನ್ಯ ಭಕ್ತಿಯಿಂದ ಸೇವಿಸುತ್ತಿರುವ ಭಕ್ತನು ಆ ವಾಯುವಿನ ಸಂಗದಿಂದಲೇ ಸಂತೋಷವನ್ನು ಹೊಂದಿದವನಾಗಿ ಉತ್ತಮಪದವಿಯನ್ನೂ ಐಶ್ವರ್ಯವನ್ನೂ ಉದಾಸೀನಭಾವದಿಂದ ನೋಡುವನು; ಇಂದ್ರಿಯನಿಗ್ರಹವೆಂಬ ಮಹತ್ತರವಾದ ತಪಸ್ಸಿನಿಂದ ಕೂಡಿದ ಪ್ರಾಣವಾಯುಗಳಲ್ಲಿ ಪರಮಾತ್ಮನ ಪಾದಯುಗಳವನ್ನು ಧರಿಸಿಕೊಂಡು ಎಲ್ಲೆಲ್ಲಿಯೂ ನಿರ್ಭಯವಾಗಿ ಸುಳಿದಾಡುವನು.

೭೩. ಅಲ್ಲಿ ಅನೇಕ ದುರ್ನಯಗಳ ಫಲವಾಗಿ ಅತಿಪಾಪಭೂಯಿಷ್ಠವಾದ ಶರೀರವನ್ನು ಪಡೆದಿರುವ ಕೀಟವೂ ಸಹ, ಸಕಲ ದೋಷಗಳನ್ನು ಕಳೆದುಕೊಂಡು ಆಶಾಪಾಶದಿಂದ ಮುಕ್ತವಾಗಿ ದೇವತೆಗಳನ್ನೂ ಹಾಸ್ಯಮಾಡುತ್ತಿರುವುದು. ಅಲ್ಲಿರುವ ಭಕ್ತನು ಆತ್ಮಯೋಗದ ಪೂಜೆಯಿಂದ ಕೂಡಿದ ಪುಷ್ಪವನ್ನು ಪರಮಾತ್ಮನಿಗೆ ನಿವೇದನ ಮಾಡುವುದರಿಂದಲೇ ಪರಾತ್ಪರವಾದ ಶಾಶ್ವತ ಪದವನ್ನು ಪಡೆಯುವನು.

೭೪. ಆ ಪರ್ವತವನ್ನು ಸೇರುವ ಮಹಾಮುನಿಗಳ ಮನಸ್ಸುಗಳು ಶ್ರೀಹರಿಯ ಪಾದಕಮಲಗಳಲ್ಲಿಯೇ ಏಕಾಗ್ರಗತಿಯುಳ್ಳವುಗಳಾಗಿ ಬಾಹ್ಯ ಪ್ರಪಂಚದ ಯಾವ ಪದಾರ್ಥಗಳನ್ನೂ ನೋಡುವ ಅಭಿಲಾಷೆಯಿಂದ ಕೂಡಿರಲಾರವು. ಅಲ್ಲಿಯೇ ಪರಮಾತ್ಮನು ಸನ್ನಿಹಿತನಾಗಿ ಭಕ್ತಿಯುಕ್ತರಾಗಿ ಬಂದು ಸೇರುವ ಸಕಲಜನರಿಗೂ ತಾನೇ ತನ್ನ ಪದವಿಯನ್ನನುಗ್ರಹಿಸುವನು.

೭೫. ಶ್ರೀನಾರಾಯಣನು ಆಶ್ರಯಿಸಿರುವ ಈ ಪರ್ವತೋತ್ತಮದಲ್ಲಿ ಅನೇಕ ತೀರ್ಥಗಳು ನೆಲಸಿರುವುವು. ಅವುಗಳೆಲ್ಲವೂ ಸೇವಿಸುವವರ ಸಮಸ್ತ ಪಾಪಗಳನ್ನೂ ನಾಶಮಾಡುವುವು. ಅವುಗಳ ಸಂಖ್ಯೆಯನ್ನೂ ಪ್ರಭಾವಗಳನ್ನೂ ಆಮೂಲಾಗ್ರವಾಗಿ ನಾನೂ ತಿಳಿಯೆನು. ಅಲ್ಲದೆ ಯಾವ ಜನರೂ ತಿಳಿದಿರಲಾರರು.

ಸಂಸಾರಕುಹರೇ ಘೋರೇ ಯತ್ರಸ್ಥ ಗತಿಮಾತ್ಮನಃ ।
ಉರ್ವಶೀಕುಂಡಮಾಸಾದ್ಯ ದಿನಮೇಕಂ ವಸೇನ್ನರಃ ॥ ೭೬ ॥
ಉರ್ವಶೀದಕ್ಷಿಣೇ ಭಾಗೇ ಆಯುಧಾನಿ ಜಗತ್ಪತೇಃ ।
ವಿದ್ಯಂತೇ ದರ್ಶನಾತ್ತೇಷಾಂ ನ ಶಸ್ತ್ರಭಯಭಾಗ್ಭವೇತ್ ॥ ೭೭ ॥
ಯ ಇದಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।
ಸರ್ವಪಾಪವಿನಿರ್ಮುಕ್ತಃ ಸಾಲೋಕ್ಯಂ ಲಭತೇ ಹರೇಃ ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯ ಸಂವಾದೇ "ಪಂಚಧಾರಾದಿತೀರ್ಥಮಾಹಾತ್ಮ್ಯವರ್ಣನಂ" ನಾಮ ಸಪ್ತಮೋಽಧ್ಯಾಯಃ

---

೭೬. ಭಯಂಕರವಾದ ಈ ಸಂಸಾರವೆಂಬ ಕೋಟಲೆಯಲ್ಲಿ ಸಿಕ್ಕಿ ಆತ್ಮನ ಉದ್ಧಾರವನ್ನು ಬಯಸುವವನು ಊರ್ವಶೀಕುಂಡವನ್ನು ಸೇರಿ ಅಲ್ಲಿ ಒಂದು ದಿನವಾದರೂ ವಾಸಮಾಡಬೇಕು.

೭೭. ಆ ಊರ್ವಶೀಕುಂಡದ ದಕ್ಷಿಣ ದಿಗ್ಭಾಗದಲ್ಲಿ ಪರಮಾತ್ಮನ ಶಂಖ, ಚಕ್ರ, ಗದಾ, ಖಡ್ಗಗಳೆಂಬ ಆಯುಧಗಳು ಕಾಣುತ್ತಿರುವುವು. ಅವುಗಳನ್ನು ನೋಡುವುದರಿಂದ ಮನುಷ್ಯನಿಗೆ ಯಾವ ಶಸ್ತ್ರಾಸ್ತ್ರಗಳಿಂದಲೂ ಭಯವು ಸಂಭವಿಸುವುದಿಲ್ಲವು.

೭೮. ಯಾವ ಮನುಷ್ಯನು ಈ ಚರಿತ್ರೆಯನ್ನು ಭಕ್ತಿಯಿಂದ ಕೇಳುವನೊ, ಅಥವಾ ಸಮಾಧಾನವುಳ್ಳ ಮನಸ್ಸಿನಿಂದ ಇತರರಿಗೆ ಶ್ರವಣಮಾಡಿಸುವನೊ, ಅವನು ಸಮಸ್ತ ಪಾತಕಗಳಿಂದಲೂ ಮುಕ್ತನಾಗಿ ಶ್ರೀ ಹರಿಯ ಸಾಲೋಕ್ಯವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮ ಮಾಹಾತ್ಮ್ಯದ ಶಿವಕಾರ್ತಿಕೇಯ ಸಂವಾದದಲ್ಲಿ "ಪಂಚಧಾರಾದಿತೀರ್ಥ ಮಾಹಾತ್ಮ್ಯ ವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

## ವಿವಿಧತೀರ್ಥವರ್ಣನಂ

ಶಿವ ಉವಾಚ :—

**ಬ್ರಹ್ಮಕುಂಡಾದ್ದಕ್ಷಿಣತೋ ನರವಾಸಗಿರಿರ್ಮಹಾನ್ ।**
**ಯತ್ರ ಭಗವತಾ ಮೇರುಃ ಸ್ಥಾಪಿತೋ ಲೋಕಸುಂದರಃ ॥ ೧ ॥**

ಸ್ಕಂದ ಉವಾಚ :—

**ಕಥಂ ಭಗವತಾ ಮೇರುಃ ಸ್ಥಾಪಿತೋ ನರಸನ್ನಿಧೌ ।**
**ಮಹತ್ಕುತೂಹಲಂ ತಾತ ಕಥ್ಯತಾಂ ಯದಿ ರೋಚತೇ ॥ ೨ ॥**

ಮಹದೇವ ಉವಾಚ :—

**ಯದಾ ಭಗವತೋ ವಾಸೋ ವಿಶಾಲಾಯಾಂ ಸಮಾಗತಃ ।**
**ದೇವಾ ಮಹರ್ಷಯಃ ಸಿದ್ಧಾಃ ಸವಿದ್ಯಾಧರಚಾರಣಾಃ ॥ ೩ ॥**
**ವಿಹಾಯ ಮೇರುಶೃಂಗಾಣಿ ಭಗವದ್ದರ್ಶನೋತ್ಸುಕಾಃ ।**
**ಭಗವದ್ದರ್ಶನಾಹ್ಲಾದತಿರಸ್ಕೃತಸುರಾಲಯಾಃ ॥ ೪ ॥**

---

## ಕನ್ನಡದ ಅನುವಾದ

### ವಿವಿಧತೀರ್ಥವರ್ಣನ

೧. ಶಿವನು ಹೇಳುತ್ತಾನೆ:—"ಎಲೈ ಷಣ್ಮುಖನೇ! ಈ ಬ್ರಹ್ಮಕುಂಡದ ದಕ್ಷಿಣದಿಕ್ಕಿಗೆ ನರಮಹರ್ಷಿಗೆ ನಿವಾಸವಾದ ಉನ್ನತವಾದ ಪರ್ವತವೊಂದಿರುವುದು. ಅಲ್ಲಿ ಭಗವಂತನು ಹಿಂದೆ ಭುವನೈಕಸುಂದರನಾದ ಮೇರುಪರ್ವತವನ್ನು ಸ್ಥಾಪಿಸಿರುವನು."

೨. ಸ್ಕಂದನು ಕೇಳುತ್ತಾನೆ:—"ತಂದೆಯೆ! ಭಗವಂತನು ನರಮಹರ್ಷಿಯ ಸನ್ನಿಧಿಯಲ್ಲಿ ಮೇರುಪರ್ವತವನ್ನು ಹೇಗೆ ಸ್ಥಾಪಿಸಿದನು? ಇದನ್ನು ಕೇಳಲು ನನಗೆ ಅತ್ಯಂತ ಕುತೂಹಲವುಂಟಾಗಿರುವುದು. ನಿನಗೆ ಇಷ್ಟವಿದ್ದರೆ ಈ ವಿಚಾರವನ್ನು ನನಗೆ ತಿಳಿಸು."

೩-೪. ಮಹಾದೇವನು ಹೇಳುತ್ತಾನೆ:—"ವತ್ಸ! ಶ್ರೀಮನ್ನಾರಾಯಣ[illegible] ಬದರಿಕಾಶ್ರಮದಲ್ಲಿ ಬಂದು ನೆಲಸಿದ ಮೇಲೆ ದೇವತೆಗಳೂ, ಮಹರ್ಷಿಗಳ[illegible] ಸಿದ್ಧರೂ, ವಿದ್ಯಾಧರರೂ, ಚಾರಣರೂ ಒಟ್ಟುಗೂಡಿ ಭಗವಂತನ ದರ್ಶನಲಾಭ[illegible] ಉತ್ಸುಕರಾಗಿ ಮೇರು ಪರ್ವತದ ಶಿಖರಗಳನ್ನು ತ್ಯಜಿಸಿ ಅಲ್ಲಿಗೆ ಬಂ[illegible] ಪರಮಾತ್ಮನ ದರ್ಶನದಿಂದುಂಟಾದ ಸಂತೋಷದ ಭರದಲ್ಲಿ ಸ್ವರ್ಗಾದಿ ಲೋ[illegible]ಗಳನ್ನೂ ತಿರಸ್ಕರಿಸಿ ಅಲ್ಲಿಯೇ ನಿಂತುಬಿಟ್ಟರು.

ತದಾ ತು ಭಗವಾಂಸ್ತೇಷಾಂ ಸುಖಹೇತೋಃ ಷಡಾನನ ।
ಉತ್ಪಾಟ್ಯ ಮೇರುಶೃಂಗಾಣಿ ಕರೇಣೈಕೇನ ಲೀಲಯಾ ।
ಸ್ಥಾಪಯಾಮಾಸ ಸರ್ವೇಷಾಂ ಭಗವಾನ್ಪ್ರೀತಿವರ್ಧನಃ ॥ ೫ ॥
ತತಃ ಸರ್ವೇ ಸಮಾಲೋಕ್ಯ ಗಿರಿಂ ಕಾಂಚನನಿರ್ಮಿತಂ ।
ಪ್ರಸನ್ನಾಸ್ತುಷ್ಟುವುಃ ಸರ್ವೇ ನಾರಾಯಣಮನಾಮಯಂ ॥ ೬ ॥
ಯೋಽಸ್ಮತ್ಸುಖಾಯ ಭವವಿಶ್ರಮಣಾಯ ಬಿಭ್ರ
ಲ್ಲೀಲಾತನೂಃ ಕನಕಶೈಲಮಿಹಾನಿನಾಯ ।
ಜೇತಾ ಸುರಾರ್ದನಶತಂ ತ್ರಿದಶೈಕಪಕ್ಷ
ಸ್ತಸ್ಮೈ ವಿಧೇಮ ನಮ ಉಗ್ರತಪಃಶ್ರಿಯಾಯ ॥ ೭ ॥
ಯದ್ಯತ್ಕರೋತಿ ಕೃಪಯಾ ಕೃಪಣಾರ್ತಿತೂಲ
ಶೈಲಾಗ್ನಿರಾಶ್ರಿತಕೃದೇಕವಿದಾಂ ವರಿಷ್ಠಃ ।
ಸ್ವೇನೈವ ತೇನ ಕರಣೇನ ಸ ತುಷ್ಯತಾಂ ನೋ
ಯಸ್ಯಾನ್ವಕಾರಿ ಪುರುಷೇಣ ನ ಕೇನಚಿದ್ವೈ ॥ ೮ ॥

---

೫. ಎಲೈ ಷಡಾನನನೆ! ಆಗ ಭಗವಂತನು ಅವರಿಗೆ ಸೌಖ್ಯವನ್ನುಂಟು ಮಾಡುವವನಾಗಿ ಒಂದೇ ಕೈಯಿಂದ ಅನಾಯಾಸವಾಗಿಯೇ ಮೇರು ಪರ್ವತದ ಶೃಂಗಗಳನ್ನು ಕಿತ್ತು ತಂದು ಬದರೀಕ್ಷೇತ್ರದಲ್ಲಿ ಸ್ಥಾಪಿಸಿ ಸಕಲ ಜನರಿಗೂ ಪ್ರೀತಿ ಸಂತೋಷವನ್ನು ಹೆಚ್ಚಿಸಿದನು.

೬. ಬಳಿಕ ಅಲ್ಲಿ ನೆರೆದಿದ್ದವರೆಲ್ಲರೂ ಚಿನ್ನದಿಂದ ಕೂಡಿದ ಪರ್ವತಶಿಖರಗಳನ್ನು ನೋಡಿ ಪ್ರಸನ್ನಮನಸ್ಕರಾಗಿ ಜರಾಮರಣವರ್ಜಿತನಾದ ಶ್ರೀಮನ್ನಾರಾಯಣನನ್ನು ಸ್ತೋತ್ರಮಾಡತೊಡಗಿದರು.

೭. ದೇವತೆಗಳು ಹೇಳುತ್ತಾರೆ:—“ ಯಾವನು ನಮಗೆ ಸೌಖ್ಯವನ್ನುಂಟು ಮಾಡಿ ಸಂಸಾರದಿಂದ ವಿಶ್ರಾಂತಿಯನ್ನು ಕೊಡಲು ಅನೇಕ ಲೀಲಾರೂಪಗಳಾದ ಶರೀರಗಳನ್ನು ಧರಿಸಿ ಈಗ ಈ ಮೇರುಪರ್ವತವನ್ನು ಇಲ್ಲಿಗೆ ತಂದಿರಿಸಿದನೊ, ದೇವತೆಗಳ ಶತ್ರುಗಳಾದ ನೂರಾರು ರಾಕ್ಷಸರನ್ನು ಜಯಿಸಿದನೊ, ಅವರಲ್ಲಿಯೇ ಪಕ್ಷಪಾತವುಳ್ಳವನಾಗಿರುವನೊ, ಮತ್ತು ಉಗ್ರವಾದ ತಪಸ್ಸೆಂಬ ಸಂಪತ್ತನ್ನು ಪಡೆದಿರುವನೊ, ಅಂತಹ ಲೋಕನಾಯಕನಿಗೆ ನಮಸ್ಕಾರವನ್ನು ಮಾಡುವೆವು.

೮. ದರಿದ್ರರ ಕಷ್ಟಪರಂಪರೆಯೆಂಬ ಹತ್ತಿಯ ರಾಶಿಗೆ ಬೆಂಕಿಯ ಕಿಡಿಯಾಗಿರುವವನೂ, ಆಶ್ರಿತರಿಗೆ ಅಭೀಷ್ಟಗಳನ್ನು ನೆರವೇರಿಸಿಕೊಡುವವನೂ, ಆತ್ಮೈಕ್ಯವನ್ನು ತಿಳಿದವರಲ್ಲಿ ಉತ್ತಮನಾದವನೂ, ಆದ ಯಾವ ಪರಮಾತ್ಮನು ಲೋಕಾನುಗ್ರಹದ ದೃಷ್ಟಿಯಿಂದ ಇತರ ಪದಾರ್ಥಗಳ ಇಚ್ಛೆಯಿಲ್ಲದೆಯೇ ಕೇವಲ ತನ್ನ ಇಂದ್ರಿಯಗಳಿಂದಲೇ ಸರ್ವವ್ಯಾಪಾರವನ್ನೂ ನಡೆಸುವನೊ, ಯಾವನ

ಅಸ್ಮಾಕಮುನ್ನತಧಿಯಾಂ ವಿದಧಾತಿ ಸಮ್ಯಕ್
ಶಿಕ್ಷಾಂ ಪಿತೇವ ಕರುಣೋ ನಿಜಲಾಭಪೂರ್ಣಃ ।
ತ್ರೈಲೋಕ್ಯರಕ್ಷಣವಿಚಕ್ಷಣ ದೃಷ್ಟಿಪಾತ
ಪೂರ್ಣಾಂಬುಧಿರಸೌ ವಿಪದಃ ಪ್ರಪಾಯಾತ್ ॥ ೯ ॥

ಋಷಯ ಊಚುಃ :—

ಯೇನಾಽಧ್ಯಸ್ತಂ ಭಾತಿ ಸಮಸ್ತಂ ಜಗದೇಕಂ
ಕ್ರೀಡಾಭಾಂಡಂ ಸತ್ಯತಯಾಽಜಸ್ಯ ವಿಭೂಮ್ನಃ ।
ಭಾನಾಂ ವೃದ್ಧಂ ಯದ್ವದನೇಪ್ಯಾಶ್ರಿತಮೂರ್ತಿಃ
ತಸ್ಮೈ ನಿತ್ಯಂ ಶಾಶ್ವತ ತುಭ್ಯಂ ಪ್ರಣಮಾಮ ॥ ೧೦ ॥

ಸಿದ್ಧಾ ಊಚುಃ :—

ಯತ್ಕೃಪಾಲವತ ಏವ ಮಹಾಂತಃ
ಸಿದ್ಧಿಮಾಯುರಿತರೇ ಭವಭಾಜಃ ।
ತೇಽಚಿರೇಣ ಭವಭೀಮಪಯೋಧಿಂ
ತೀರ್ಣವಂತ ಇತಿ ನಃ ಸುಮನೀಷಾ ॥ ೧೧ ॥

---

ಲೀಲಾವಿನೋದಗಳನ್ನು ಮತ್ತೆ ಯಾವ ಪುರುಷನೂ ಅನುಕರಿಸಲಾರನೊ, ಅಂತಹ ಪರಮಾತ್ಮನು ನಮ್ಮಲ್ಲಿ ಪ್ರಸನ್ನನಾಗಲಿ.

೯. ಯಾವನು ತಂದೆಯಂತೆ ಕೃಪಾಪೂರ್ಣನಾಗಿ ಉತ್ತಮ ಬುದ್ಧಿಯುಕ್ತರಾದ ನಮಗೆ ಚೆನ್ನಾಗಿ ಶಿಕ್ಷೆಯನ್ನು ವಿಧಿಸುವನೊ, ಯಾವನು ಸ್ವಾತ್ಮಲಾಭದಿಂದಲೇ ಸಂಪೂರ್ಣಕಾಮನಾಗಿರುವನೊ, ಮೂರುಲೋಕಗಳನ್ನೂ ರಕ್ಷಿಸುವ ವಿಚಕ್ಷಣೆಯುಳ್ಳ ಕಡೆಗಣ್ಣಿನ ನೋಟವೆಂಬ ದಿವ್ಯಾಮೃತದ ಸಮುದ್ರದಂತಿರುವ ಆ ಶ್ರೀಹರಿಯು ನಮ್ಮನ್ನು ವಿಪತ್ತುಗಳಿಂದ ಕಾಪಾಡಲಿ.

೧೦. ಋಷಿಗಳು ಹೇಳುತ್ತಾರೆ:—ಜನ್ಮರಹಿತನೂ ಸರ್ವವ್ಯಾಪಕನೂ ಆದ ಯಾವನಿಂದ ಅಧ್ಯಸ್ತವಾಗಿ ಈ ಸಮಸ್ತ ಪ್ರಪಂಚವೂ ಮಕ್ಕಳಾಟದ ಕುಡಿಕೆಯಂತಿದ್ದರೂ ಸತ್ಯವೆಂದೇ ತೋರುತ್ತಿರುವುದೊ, ಯಾವನ ಮುಖದಲ್ಲಿ ಕೋಟಿ ಸೂರ್ಯರ ಪ್ರಕಾಶದ ಸಮೂಹವು ಕಾಣುತ್ತಿರುವುದೊ, ಯಾವನು ಆಶ್ರಿತರಿಗೆ ತನ್ನ ದರ್ಶನವನ್ನು ಕೊಡುತ್ತಿರುವನೊ, ಅಂತಹ ಶಾಶ್ವತನಾದ ನಿನಗೆ ನಿರಂತರವೂ ನಾವು ಪ್ರಣಾಮಗಳನ್ನು ಮಾಡವೆವು.

೧೧. ಸಿದ್ಧರು ಹೇಳುತ್ತಾರೆ:—ಯಾವನ ಕೃಪಾಲೇಶದ ಮಾತ್ರದಿಂದಲೇ ಮಹಾತ್ಮರು ಸಿದ್ಧಿಯನ್ನು ಹೊಂದುವರೊ, ಅವನಿಂದಲೇ ಸಂಸಾರಭಾಗಿಗಳಾದ ಇತರರೂ ಅತ್ಯಲ್ಪಕಾಲದಲ್ಲಿಯೇ ಭಯಂಕರವಾದ ಈ ಸಂಸಾರ ಸಮುದ್ರವನ್ನು ದಾಟುವರೆಂಬುದೇ ನಮ್ಮ ನಿಶ್ಚಯವಾಗಿರುವುದು.

ವಿದ್ಯಾಧರಾ ಊಚುಃ :—

ವಿಭೋ ಸದ್ಗುಣಗ್ರಾಮ ಕಲ್ಯಾಣಮೂರ್ತೇ
ಪರೇಶಾನ ಸಂಮಾನ ಸಂತಾನಹೇತೋ ।
ಭವತ್ಪಾದಪದ್ಮಾಸವಾಸ್ವಾದಮತ್ತಾಃ
ಕೃತಾರ್ಥಾ ನ ಚಿತ್ರಂ ಭವತ್ಯತ್ರ ಕಿಂಚಿತ್ ॥ ೧೨ ॥
ತತಸ್ತುಷ್ಟೋಽಥ ಭಗವಾಂಸ್ತೇಷಾಮಾಸೀದ್ದಿವೌಕಸಃ ।
ವರಂ ವೃಣುಧ್ವಮಿತ್ಯುಕ್ತಾಸ್ತೇ ಪ್ರೋಚುರ್ವರದರ್ಷಭಂ ॥ ೧೩ ॥
ಪರಿತುಷ್ಟೋ ಭವಾನ್ಸಾಕ್ಷಾದ್ದೇವದೇವೋ ರಮಾಪತಿಃ ।
ಬದರೀ ನ ತ್ವಯಾ ತ್ಯಾಜ್ಯಾ ನ ಚ ಮೇರುಃ ಕದಾಚನ ॥ ೧೪ ॥
ಮೇರುಶೃಂಗಂ ಪ್ರಪಶ್ಯಂತಿ ಯೇ ಜನಾಃ ಪುಣ್ಯಭಾಗಿನಃ ।
ತೇಷಾಂ ವೈ ತ್ವತ್ಪ್ರಸಾದೇನ ಮೇರೌ ವಾಸಃ ಪ್ರಜಾಯತಾಂ ॥ ೧೫ ॥
ತತ್ರ ಭುಕ್ತ್ವಾ ಚಿರಾದ್ಭೋಗಾನ್ಭೂಯಾದಂತೇ ಲಯಸ್ತ್ವಯಿ ।
ಏವಮಸ್ತ್ವಿತಿ ಚಾಭಾಷ್ಯ ತತ್ರೈವಾಂತರ್ಹಿತೋ ಹರಿಃ ॥ ೧೬ ॥

---

೧೨. ವಿಧ್ಯಾಧರರು ಹೇಳುತ್ತಾರೆ:—ಸರ್ವವ್ಯಾಪಿಯೂ, ಸಕಲಸದ್ಗುಣನಿಲಯನೂ, ದಿವ್ಯಸುಂದರವಿಗ್ರಹನೂ, ಪರಾತ್ಪರನೂ, ಸರ್ವೇಶ್ವರನೂ, ಪೂಜೆಯ ಪರಂಪರೆಗೆ ವಿಷಯನಾದವನೂ ಆದ ಓ ಸ್ವಾಮಿಯೆ! ನಿನ್ನ ಪಾದಕಮಲಗಳ ಮಧುವನ್ನು ಪಾನಮಾಡಿ ಮದಿಸಿದವರು ಕೃತಕೃತ್ಯರಾಗಿರುವರೆಂಬ ವಿಷಯದಲ್ಲಿ ಸ್ವಲ್ಪವೂ ಆಶ್ಚರ್ಯಪಡಬೇಕಾದುದಿಲ್ಲ.''

೧೩. ದೇವತೆಗಳ ಈ ಸ್ತೋತ್ರಗಳಿಂದ ಸಂತೋಷಗೊಂಡ ಭಗವಂತನು ಅವರೆದುರಿನಲ್ಲಿ ಪ್ರತ್ಯಕ್ಷನಾಗಿ, ''ನಿಮಗೆ ಬೇಕಾದ ವರವನ್ನು ಬೇಡಿರಿ'' ಎಂದನು. ಇಂತು ನುಡಿದ ವರಪ್ರದರಲ್ಲಿ ಅತ್ಯುತ್ತಮನಾದ ಆತನನ್ನು ಕುರಿತು ಅವರೂ ಬೇಡಿಕೊಂಡರು.

೧೪–೧೬. ''ದೇವದೇವನೂ, ಲಕ್ಷ್ಮೀರಮಣನೂ ಆದ ಎಲೈ ಪ್ರಭುವೇ! ನೀನು ಸಂತೋಷಗೊಂಡಿರುವೆಯೋ ಆದರೆ ನೀನು ಈ ಬದರಿಕಾಶ್ರಮವನ್ನು ಎಂದಿಗೂ ತ್ಯಜಿಸಲಾಗದು. ಹಾಗೆಯೇ ಮೇರುಪರ್ವತವನ್ನು ನೀನು ಎಂದಿಗೂ ಎಡಬಿಡಬಾರದು. ಪುಣ್ಯವಂತರಾದ ಯಾರು ನಿನ್ನಿಂದ ಸ್ಥಾಪಿಸಲ್ಪಟ್ಟಿರುವ ಈ ಮೇರುಶೃಂಗವನ್ನು ನೋಡುತ್ತಾರೆಯೋ ಅವರು ನಿನ್ನ ಅನುಗ್ರಹಕ್ಕೆ ಪಾತ್ರರಾಗಿ ಅವರಿಗೆ ಮೇರುಪರ್ವತದಲ್ಲಿಯೇ ಸಾಕ್ಷಾತ್ತಾಗಿ ವಾಸಮಾಡುವ ಪುಣ್ಯವುಂಟಾಗಲಿ. ಅವರು ಅಲ್ಲಿ ಬಹುಕಾಲ ಅನೇಕ ಭೋಗಗಳನ್ನನುಭವಿಸಿ ಕೊನೆಗೆ ನಿನ್ನಲ್ಲಿಯೇ ಲಯವನ್ನು ಹೊಂದಲಿ.'' ಶ್ರೀಹರಿಯು ಅವರಿಗೆ ಹಾಗೆಯೇ ಆಗಲೆಂದು ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

ತತಃ ಪ್ರಭೃತಿ ತೇ ಸರ್ವೇ ಮೇರುಶೃಂಗವಿಹಾರಿಣಃ ।
ನರನಾರಾಯಣಸ್ಯಾಂತೇ ಪಾಲ್ಯಮಾನಾ ಮುಹುರ್ಮುಹುಃ ॥ ೧೭ ॥
ಕದಾಚಿದ್ದಿವಿ ತಿಷ್ಠಂತಿ ಕದಾಚಿನ್ಮೇರುಮಧ್ಯತಃ ।
ನಿರ್ವಿಶಂಕಾ ನಿರುದ್ವೇಗಾ ಋಷಯಶ್ಚ ತಪೋಧನಾಃ ॥ ೧೮ ॥
ಭಗವಾನಪಿ ತತ್ರೈವ ನರರೂಪೇಣ ತಿಷ್ಠತಿ ।
ಧನುರ್ಬಾಣಧರಃ ಶ್ರೀಮಾಂಸ್ತಪಸಾ ಪಾವಕೋಪಮಃ ।
ಆನಂದಮೃಷಿವೃಂದಸ್ಯ ಜನಯಂಸ್ತಪ ಆಸ್ಥಿತಃ ॥ ೧೯ ॥
ತತಸ್ತು ಪರಮಂ ತೀರ್ಥಂ ಲೋಕಪಾಲಾಭಿವಂದಿತಂ ।
ಯತ್ರ ಸಂಸ್ಥಾಪಯಾಮಾಸ ಲೋಕಪಾಲಾನ್ಹರಿಃ ಸ್ವಯಂ ॥ ೨೦ ॥

ಸ್ಕಂದ ಉವಾಚ :—

ಕಥಂ ಭಗವತಾ ತತ್ರ ಲೋಕಪಾಲಾಶ್ಚ ಸ್ಥಾಪಿತಾಃ ।
ಮಹತ್ಕೌತೂಹಲಂ ತಾತ ಕಥಯಸ್ವ ಮಹಾಮತೇ ॥ ೨೧ ॥

ಶಿವ ಉವಾಚ :—

ಏಕದಾ ಮೇರುಮಧ್ಯಸ್ಥಾಶ್ರಯಾನಿಹ ಹರನ್ಹರಿಃ ।
ದೇವಾನಾಮೃಷಿಮುಖ್ಯಾನಾಂ ಚರಿತಂ ದ್ರಷ್ಟುಮುದ್ಯತಃ ॥ ೨೨ ॥

---

೧೭. ಆ ದಿನದ ಮೊದಲುಗೊಂಡು ಅವರೆಲ್ಲರೂ ಮೇರುಶೃಂಗದಲ್ಲಿಯೇ ವಿಹಾರಮಾಡುತ್ತ ನರನಾರಾಯಣರಿಂದ ಪಾಲಿಸಲ್ಪಟ್ಟವರಾಗಿ ಬಹಳ ಕಾಲದ ವರೆಗೂ ಅಲ್ಲಿಯೇ ನೆಲಸಿದ್ದರು.

೧೮. ತಪಸ್ಸಂಪನ್ನರಾದ ಮಹರ್ಷಿಗಳೂ ಕೂಡ ಕೆಲವು ವೇಳೆ ಸ್ವರ್ಗ ದಲ್ಲಿಯೂ, ಹಲವು ವೇಳೆ ಮೇರುಶೃಂಗದ ಮಧ್ಯದಲ್ಲಿಯೂ ವಾಸಮಾಡುತ್ತ ಯಾವ ವಿಧವಾದ ಅನುತಾಪವೂ, ಮನಃಕ್ಲೇಶವೂ ಇಲ್ಲದಂತೆ ಸುಖವಾಗಿರುವರು.

೧೯. ಷಡ್ಗುಣೈಶ್ವರ್ಯಸಮನ್ವಿತನಾದ ಶ್ರೀಮನ್ನಾರಾಯಣನೂ ಬಿಲ್ಲು ಬಾಣಗಳನ್ನು ಧರಿಸಿ ತಪಸ್ಸಿನಿಂದ ಬೆಂಕಿಯಂತೆ ಜ್ವಲಿಸುತ್ತ ಅಲ್ಲಿಯೇ ನರನ ರೂಪದಿಂದ ಶಾಶ್ವತವಾಗಿ ನೆಲಸಿರುವನು. ಅಲ್ಲದೆ ಆ ಸ್ವಾಮಿಯು ಮಹರ್ಷಿ ಸಮೂಹದ ಆನಂದವನ್ನು ವೃದ್ಧಿಗೊಳಿಸುತ್ತ ತಪಸ್ಸನ್ನು ಮಾಡುತ್ತಿರುವನು.

೨೦. ಅಲ್ಲಿ ಲೋಕಪಾಲಕರಿಂದಲೂ ನಮಸ್ಕರಿಸಲ್ಪಡುತ್ತಿರುವ ಉತ್ತಮ ವಾದ ಮತ್ತೊಂದು ತೀರ್ಥವಿರುವುದು. ಅಲ್ಲಿ ಮಹಾವಿಷ್ಣುವು ತಾನೇ ಲೋಕ ಪಾಲಕರನ್ನು ಸ್ಥಾಪನೆಮಾಡಿರುವನು.

೨೧. ಸ್ಕಂದನು ಪ್ರಶ್ನೆಮಾಡುತ್ತಾನೆ :—"ಮಹಾಪ್ರಾಜ್ಞನಾದ ತಂದೆಯೆ! ಭಗವಂತನಿಂದ ಲೋಕಪಾಲಕರು ಅಲ್ಲಿ ಹೇಗೆ ಸ್ಥಾಪಿತರಾದರು? ಅತ್ಯಂತ ಕುತೂಹಲವಾದ ವ್ಯಾಪಾರದಿಂದ ಕೂಡಿದ ಈ ಚರಿತ್ರೆಯನ್ನು ನನಗೆ ನಿರೂಪಿಸು."

೨೨. ಶಿವನು ಹೇಳುತ್ತಾನೆ :—"ವತ್ಸ! ಒಮ್ಮೆ ಮೇರುಪರ್ವತದಲ್ಲಿರುವ

**ತಂ ದೃಷ್ಟ್ವಾ ಸಹಸೋತ್ಥಾಯ ನಮಸ್ಕೃತ್ಯ ದಿವೌಕಸಃ ।**
**ಊಚುಸ್ತೇ ವಿನಯಾತ್ಸರ್ವೇ ಪ್ರಸೀದ ಭಗವನ್ವಿಭೋ ॥ ೨೩ ॥**
**ಕ್ಷಣಂ ವಿಶ್ರಾಮ್ಯ ವಿಧಿವದ್ದೃಷ್ಟ್ವಾ ತಾಂ ವಿರಲಾಂ ಭುವಮ್ ।**
**ಸಾನ್ನಿಧ್ಯಮೃಷಿವೇದಾನಾಮಯುಕ್ತಂ ಭಾವಯನ್ಮಿಥಃ ॥ ೨೪ ॥**
**ತತಃ ಪ್ರಹಸ್ಯ ಭಗವಾನುವಾಚ ಮಧುಸೂದನಃ ।**
**ಲೋಕಪಾಲಾನ್ಸಮಾಹೂಯ ನಾತ್ರ ಸ್ಥೇಯಂ ಭವದ್ವಿಧೈಃ ॥ ೨೫ ॥**
**ಋಷಯಸ್ತಾಪಸಾಃ ಸಿದ್ಧಾಃ ಸಸ್ತ್ರೀಕಾ ನಿವಸಂತಿ ಹಿ ।**
**ಭವದ್ವಿಧಾನಾಮಾಸ್ಥಾನಂ ಪುರೈವ ಕಲ್ಪಿತಂ ಮಯಾ ॥ ೨೬ ॥**
**ತತಃ ಸ ತ್ವರಿತೋ ಗತ್ವಾ ರಮ್ಯೇ ಗಿರಿವರೇ ಹರಿಃ ।**
**ಲೋಕಪಾಲಾನ್ಸಮಾಹೂಯ ಸ್ಥಾಪಯಾಮಾಸ ತಾನ್ಗುಹ ॥ ೨೭ ॥**
**ತತ್ರೈವ ಶೈಲದಂಡೇನ ಹತ್ವಾಽದ್ರಿಂ ಜಲಕಾಂಕ್ಷಯಾ ।**
**ಕ್ರೀಡಾಪುಷ್ಕರಣೀಂ ತೇಷಾಂ ನಿರ್ಮಮೇ ಸುಮನೋಹರಾಮ್ ॥ ೨೮ ॥**

---

ಆಶ್ರಯಸ್ಥಾನಗಳನ್ನೆಲ್ಲ ಶ್ರೀಹರಿಯು ಇಲ್ಲಿಗೆ ತಂದವನಾಗಿ ದೇವತೆಗಳೂ ಮಹರ್ಷಿ ಮುಖ್ಯರೆನಿಸಿದವರೂ ಹೇಗೆ ವಾಸಿಸುತ್ತಿರುವರೆಂಬುದನ್ನು ನೋಡಬೇಕೆಂಬ ಅಪೇಕ್ಷೆಯಿಂದ ಅಲ್ಲಿಗೆ ಬಂದನು.

೨೩. ಆತನನ್ನು ಕಾಣುತ್ತಲೆ ಸಂಭ್ರಮದಿಂದೆದ್ದು ದೇವತೆಗಳೆಲ್ಲರೂ ನಮಸ್ಕಾರಗಳನ್ನು ಮಾಡಿ "ಭಗವಂತನಾದ ಎಲೈ ಸ್ವಾಮಿಯೆ! ನಮ್ಮಲ್ಲಿ ಪ್ರಸನ್ನನಾಗು" ಎಂದು ವಿನಯಾನ್ವಿತರಾಗಿ ಪ್ರಾರ್ಥಿಸಿದರು.

೨೪. ಭಗವಂತನು ಒಂದು ಕ್ಷಣಮಾತ್ರ ವಿಶ್ರಮಿಸಿಕೊಂಡು ಆ ಭೂಮಿಯು ನಿರ್ಮಾನುಷವಾಗಿರುವುದನ್ನು ಕಂಡು ಮಹರ್ಷಿಗಳೂ ದೇವತೆಗಳೂ ಪರಸ್ಪರರ ಸಮೀಪದಲ್ಲಿಯೇ ವಾಸಮಾಡುವುದು ಉಚಿತವಲ್ಲವೆಂದು ಮನಸ್ಸಿಗೆ ತಂದುಕೊಂಡನು.

೨೫. ಅಲ್ಲದೆ ಮಧುಸೂದನನಾದ ಆ ಸ್ವಾಮಿಯು ನಗುತ್ತಲೇ ಸಮಸ್ತ ಲೋಕಪಾಲಕರನ್ನೂ ತನ್ನ ಬಳಿಗೆ ಕರೆಯಿಸಿಕೊಂಡು ಹೇಳತೊಡಗಿದನು. "ಇಲ್ಲಿ ನಿಮ್ಮಂತಹ ದೇವತೆಗಳು ನೆಲಸುವುದು ಯೋಗ್ಯವಲ್ಲ.

೨೬. ಮಹರ್ಷಿಗಳೂ, ತಪಸ್ವಿಗಳೂ, ಸಿದ್ಧರೂ ಇಲ್ಲಿ ತಮ್ಮ ಪತ್ನಿಯರೊಡನೆ ವಾಸಮಾಡುತ್ತಿರುವರಲ್ಲವೆ. ನಿಮ್ಮಂತಿರುವ ಲೋಕನಾಯಕರಿಗೆ ನಾನು ಮೊದಲೇ ಬೇರೆ ನಿವಾಸವನ್ನು ಕಲ್ಪಿಸಿರುವೆನು."

೨೭–೨೮. ಎಲೈ ಷಣ್ಮುಖನೆ! ಆಗ ಪರಮಾತ್ಮನು ವೇಗವಾಗಿ ಬಂದು ಮನೋಹರವಾದ ಮೇರುಶೃಂಗದಲ್ಲಿ ಲೋಕಪಾಲಕರೆಲ್ಲರನ್ನೂ ಕರೆದು ಸ್ಥಾಪನೆ ಮಾಡಿದನು. ಅವರಿಗೆ ನೀರಿನ ಅನುಕೂಲವನ್ನು ಕಲ್ಪಿಸಲು ತನ್ನ ಕೈಯೊಳಗಿನ

ಸಸ್ತ್ರೀಕಾ ಯತ್ರ ಗೀರ್ವಾಣಾ ವಿಚರಂತಿ ನಿಜೇಚ್ಛಯಾ ।
ಗಾಯಂತಿ ಹ್ಯನುಮೋದಂತಿ ಗಂಧರ್ವಾಂಸ್ತ್ರಿದಿವೌಕಸಾಂ ॥ ೨೯ ॥
ವನಾನಿ ಕುಸುಮಾಮೋದರಮ್ಯಾಣಿ ಪರಿತೋಷತಃ ।
ದಿನಾನಿ ಯತ್ರ ಗಚ್ಛಂತಿ ಕ್ಷಣಪ್ರಾಯಾಣಿ ದೇಹಿನಾಂ ॥ ೩೦ ॥
ಭಗವಾನಪಿ ತತ್ರೈವ ತೇಷಾಮಾನಂದಮಾವಹನ್ ।
ದ್ವಾದಶ್ಯಾಂ ಪೌರ್ಣಮಾಸ್ಯಾಂ ಚ ಸ್ವಯಮಾಯಾತಿ ಮಜ್ಜನೇ ॥ ೩೧ ॥
ತತ್ಪಶ್ಚಾದೃಷಯಃ ಸರ್ವೇ ಮುನಯಶ್ಚ ತಪೋಧನಾಃ ।
ಯತ್ರ ಸ್ನಾತ್ವಾ ವಿಧಾನೇನ ಗುಹ ಮಧ್ಯಾಹ್ನಕಾಲತಃ ।
ಅಸಂಗಂ ಪರಮಂ ಜ್ಯೋತಿರ್ಜಲೇ ಪಶ್ಯಂತಿ ಚಕ್ಷುಷಾ ॥ ೩೨ ॥
ಸರ್ವತೀರ್ಥಾವಗಾಹೇನ ಯತ್ಫಲಂ ಪರಿಕೀರ್ತಿತಂ ।
ತತ್ಫಲಂ ತತ್ಕ್ಷಣಾದೇವ ದಂಡಪುಷ್ಕರಿಣೀಕ್ಷಣಾತ್ ॥ ೩೩ ॥
ಯತ್ರ ಕಾಮ್ಯಾನಿ ಕರ್ಮಾಣಿ ಸಫಲಾನಿ ಮನೀಷಿಣಾಂ ।
ಯತ್ರ ಪಿಂಡಪ್ರದಾನೇನ ಗಯಾತೋಽಷ್ಟಗುಣಂ ಫಲಂ ॥ ೩೪ ॥

---

ಕಲ್ಲಿನ ದಂಡದಿಂದ ಪರ್ವತವನ್ನು ಸೀಳಿ ಅತ್ಯಂತ ಮನೋಹರವಾದ ಕ್ರೀಡಾ ಸರೋವರವೊಂದನ್ನು ಅಲ್ಲಿಯೇ ನಿರ್ಮಿಸಿದನು.

೨೯. ಅಲ್ಲಿ ದೇವತೆಗಳು ತಮ್ಮ ತಮ್ಮ ಸ್ತ್ರೀಯರೊಡನೆ ಯಥೇಚ್ಛವಾಗಿ ವಿಹರಿಸುತ್ತಿರುವರು. ಸ್ವರ್ಗನಿವಾಸಿಗಳಾದ ಅವರೊಡನೆ ಗಂಧರ್ವರು ಸಹ ಸೇರಿಕೊಂಡು ಗೀತಗಳನ್ನು ಹಾಡುತ್ತ ಅನುಮೋದಿಸುತ್ತಿರುವರು.

೩೦. ಅಲ್ಲಿರುವ ವನಗಳೆಲ್ಲವೂ ಪುಷ್ಪಗಳ ಸುಗಂಧಗಳಿಂದ ಮನೋಹರ ಗಳಾಗಿರುವುವು. ಅಲ್ಲಿ ವಾಸಮಾಡುವವರಿಗೆ ಮನಸ್ಸಂತೋಷದಿಂದ ದಿವಸಗಳೂ ಕೂಡ ಕೇವಲ ಕ್ಷಣಗಳಂತೆಯೇ ಕಳೆದುಹೋಗುತ್ತಿರುವುವು.

೩೧–೩೨. ಭಗವಂತನು ಕೂಡ ಆ ದೇವತೆಗಳಿಗೆ ಆನಂದವನ್ನುಂಟು ಮಾಡುವವನಾಗಿ ಪ್ರತಿ ಮಾಸದಲ್ಲಿಯೂ ಶುಕ್ಲಕೃಷ್ಣ ದ್ವಾದಶಿಯ ದಿನಗಳ ಲ್ಲಿಯೂ ಮತ್ತು ಪೌರ್ಣಮಿಯ ದಿನಗಳಲ್ಲಿಯೂ ತಾನೇ ಸ್ನಾನಮಾಡಲು ಬಿಜೆಗೈಯುವನು. ಆ ಬಳಿಕ ಸಮಸ್ತ ಮಹರ್ಷಿಗಳೂ, ತಪೋನಿಧಿಗಳಾದ ಮಹಾಮುನಿಗಳೂ ಮಧ್ಯಾಹ್ನದ ವೇಳೆಯಲ್ಲಿ ಸ್ನಾನಮಾಡುವಾಗ ಆ ತೀರ್ಥದ ಜಲದಲ್ಲಿ ತಮ್ಮ ಜ್ಞಾನಚಕ್ಷುಸ್ಸುಗಳಿಂದ ಅಸಂಗವೂ ಪರಾತ್ಪರವೂ ಆದ ದಿವ್ಯ ಜ್ಯೋತಿಯೊಂದನ್ನು ಕಾಣುವರು.

೩೩–೩೪. ಇತರ ಸಮಸ್ತ ತೀರ್ಥಗಳಲ್ಲಿಯೂ ಸ್ನಾನ ಮಾಡುವುದರಿಂದ ಯಾವ ಫಲವು ಶಾಸ್ತ್ರೋಕ್ತವಾಗಿರುವುದೊ, ಆ ಫಲವೇ ಒಂದು ಕ್ಷಣಮಾತ್ರ ಈ ದಂಡಪುಷ್ಕರಿಣಿಯೆಂಬ ತೀರ್ಥದ ದರ್ಶನದಿಂದ ಜನರಿಗೆ ಲಭಿಸುವುದು.

ಯಜ್ಞೋ ದಾನಂ ತಪಃ ಕರ್ಮ ಸರ್ವಮಕ್ಷಯಮುಚ್ಯತೇ ।
ದ್ವಾದಶ್ಯಾಂ ಶುಕ್ಲಪಕ್ಷಸ್ಯ ಜ್ಯೇಷ್ಠೇ ಮಾಸಿ ಷಡಾನನ ।
ತತ್ರ ಸ್ನಾತ್ವಾ ವಿಧಾನೇನ ಕೃತಕೃತ್ಯೋ ಭವೇದ್ಯತಃ ॥ ೩೫ ॥
ಬದರೀತೀರ್ಥಮಧ್ಯೇ ತು ಗುಪ್ತಮೇತತ್ಸುರೋತ್ತಮೈಃ ।
ನ ವಾಚ್ಯಂ ಯತ್ರ ಕುತ್ರಾಪಿ ತವ ಪ್ರೀತ್ಯಾ ಮಯೋದಿತಂ ॥ ೩೬ ॥
ವಕ್ತವ್ಯಂ ಕಿಮಿಹ ಬಹು ಪ್ರಭೂತಪುಣ್ಯಾಃ
ಪಶ್ಯಂತಿ ಪ್ರಥಿತಮಿದಂ ಸುರೈಕಗುಪ್ತಂ ।
ನಾನ್ಯೇಷಾಂ ಕಥಮಪಿ ಚೇತಸಿ ಪ್ರಸಂಗಾತ್
ದೇವೈಃ ಸ್ಯಾದನುದಿನಚಿಂತಿತಂ ಗುಹ್ಯೈತತ್ ॥ ೩೭ ॥
ಯೇಷಾಂ ವೈ ಭಗವತಿ ಚೇತ್ಸಮುಗ್ರಕರ್ಮ
ಸ್ವಾಧ್ಯಾಯಾಭ್ಯಸನವಿಧಿಕ್ರಮೇಣ ಜಾತಂ ।
ಪಶ್ಯಂತಿ ತ್ರಿಭುವನದುರ್ಲಭಂ ಸುತೀರ್ಥಂ
ದಂಡೋದಂ ನ ಭವತಿ ಚಾನ್ಯಥಾ ಸುದೃಷ್ಟಂ ॥ ೩೮ ॥

---

ಇಲ್ಲಿ ಬುದ್ಧಿವಂತರು ಮಾಡಿದ ಕಾಮ್ಯಕರ್ಮಗಳೆಲ್ಲವೂ ಫಲದಾಯಕಗಳಾಗುವುವು. ಇಲ್ಲಿ ಪಿತೃದೇವತೆಗಳಿಗೆ ಪಿಂಡಪ್ರದಾನವನ್ನು ಮಾಡುವುದರಿಂದ ಗಯಾಕ್ಷೇತ್ರದಲ್ಲಿ ಮಾಡಿದ ಪಿಂಡದಾನದ ಎಂಟರಷ್ಟು ಫಲವು ಕೈಗೂಡುವುದು.

೩೫. ಈ ತೀರ್ಥದಲ್ಲಿ ಮಾಡಿದ ಯಜ್ಞ, ದಾನ, ತಪಸ್ಸು, ಸತ್ಕಾರ್ಯಗಳೆಲ್ಲವೂ ಅಕ್ಷಯಫಲದಾಯಕಗಳೆಂದು ಹೇಳಲ್ಪಟ್ಟಿರುವುದು. ಎಲೈ ಷಣ್ಮುಖನೆ! ಜ್ಯೇಷ್ಠಮಾಸದ ಶುಕ್ಲಪಕ್ಷದ ದ್ವಾದಶಿಯ ದಿನದಲ್ಲಿ ಶಾಸ್ತ್ರೋಕ್ತ ಪ್ರಕಾರವಾಗಿ ಇಲ್ಲಿ ಸ್ನಾನವನ್ನು ಮಾಡಲು ಮನುಷ್ಯನು ಕೃತಕೃತ್ಯನಾಗುವನು.

೩೬. ಬದರಿಕಾಶ್ರಮದಲ್ಲಿರುವ ತೀರ್ಥಗಳೆಲ್ಲವುಗಳ ಮಧ್ಯೆ ಈ ತೀರ್ಥವು ದೇವತೆಗಳಿಗೆ ಏಕಾಂತ ಸ್ಥಳವಾಗಿರುವುದು. ಇದರ ವಿಷಯವಾಗಿ ಎಲ್ಲೆಡೆಗಳಲ್ಲಿಯೂ ಬಹಿರಂಗವಾಗಿ ಪ್ರಸಂಗವನ್ನು ಮಾಡಬಾರದು. ನಿನ್ನಲ್ಲಿರುವ ಪ್ರೀತಿಯಿಂದಲೇ ನಾನು ನಿನಗೆ ಇದನ್ನು ವಿವರಿಸಿರುವೆನು.

೩೭. ಈ ವಿಷಯದಲ್ಲಿ ಹೆಚ್ಚಾಗಿ ಹೇಳತಕ್ಕುದೇನಿರುವುದು? ದೇವತೆಗಳಿಂದ ಅತ್ಯಂತ ಗುಪ್ತವಾಗಿಡಲ್ಪಟ್ಟಿರುವ ಮಾಹಾತ್ಮ್ಯೆಯುಳ್ಳ ಈ ತೀರ್ಥವನ್ನು ಮಹತ್ತರವಾದ ಪುಣ್ಯವನ್ನು ಸಂಪಾದಿಸಿದವರು ಮಾತ್ರ ನೋಡಬಲ್ಲರು. ಎಲೈ ಗುಹನೆ! ಇತರರಿಗೆ ಯಾವ ವಿಧದಿಂದಲೂ ಲಭಿಸುವುದಿಲ್ಲ. ಈ ತೀರ್ಥದ ಮಾಹಾತ್ಮ್ಯೆಯನ್ನು ಕುರಿತು ದೇವತೆಗಳು ಪ್ರತಿನಿತ್ಯವೂ ತಮ್ಮ ಅಂತರಂಗದಲ್ಲಿ ಚಿಂತನೆಮಾಡುತ್ತಿರುವರು.

೩೮. ವೇದಾಭ್ಯಾಸವನ್ನು ವಿಧಿವಿಹಿತ ಮಾರ್ಗದಿಂದ ಮಾಡಿಕೊಂಡು

ದಂಡೋದಕಾತ್ಪರಂ ತೀರ್ಥಂ ನ ವಿಷ್ಣೋಃ ಸದೃಶೋಽಪರಃ ।
ವಿಶಾಲಾಸದೃಶಂ ಕ್ಷೇತ್ರಂ ನ ಭೂತಂ ನ ಭವಿಷ್ಯತಿ ॥ ೩೯ ॥
ಸೇವನೀಯಾ ಪ್ರಯತ್ನೇನ ವಿಶಾಲಾ ಚ ವಿಚಕ್ಷಣೈಃ ।
ಯ ಇಚ್ಛೇತ್ಸತತಂ ಧಾಮ ಭಗವತ್ಪಾರ್ಶ್ವವರ್ತಿ ವೈ ॥ ೪೦ ॥

ಸ್ಕಂದ ಉವಾಚ :—

ಗಂಗಾಮಾಶ್ರಿತ್ಯ ತೀರ್ಥಾನಿ ಕಾನಿ ಸಂತೀಹ ತತ್ಪದೇ ।
ಶ್ರೇಯಸ್ಕರಾಣಿ ಭೂರೀಣಿ ಸಂಕ್ಷೇಪಾತ್ತಾನಿ ಮೇ ವದ ॥ ೪೧ ॥

ಮಹದೇವ ಉವಾಚ :—

ಗಂಗಾಯಾಂ ಯತ್ರ ಸಂಯೋಗೋ ಮಾನಸೋದ್ಭೇದಸನ್ನಿಧೌ ।
ತತ್ತೀರ್ಥಂ ವಿಮಲಂ ಪುಣ್ಯಂ ಪ್ರಯಾಗಾದಧಿಕಂ ಮಹತ್ ॥ ೪೨ ॥
ತ್ರಿಂಶದ್ವರ್ಷಸಹಸ್ರಾಣಿ ವಾಯುಭೋಜನತೋ ಭವೇತ್ ।
ತತ್ಫಲಂ ಸ್ನಾನಮಾತ್ರೇಣ ಗಂಗಾಯಾಃ ಸಂಗಮೇ ನೃಣಾಂ ॥ ೪೩ ॥

---

ಸಕಲ ಕರ್ಮಗಳನ್ನೂ ಪರಮಾತ್ಮನಿಗೆ ಯಾರು ಅರ್ಪಣೆಮಾಡಿರುವರೊ, ಅವರು ಮಾತ್ರ ಮೂರು ಲೋಕಗಳಲ್ಲಿಯೂ ದುರ್ಲಭವಾದ ಮಹಿಮೆಯುಳ್ಳ ಈ ತೀರ್ಥವನ್ನು ನೋಡಲು ಸಮರ್ಥರಾಗುವರು. ಆ ಸಾಧನ ಸಂಪತ್ತಿಯಿಲ್ಲದವರಿಗೆ ದಂಡಪುಷ್ಕರಿಣೀತೀರ್ಥದ ದರ್ಶನವು ಸುಲಭವಾಗಿ ಲಭಿಸುವುದಿಲ್ಲ.

೩೯. ದಂಡೋದಕಕ್ಕಿಂತಲೂ ಉತ್ತಮವಾದ ತೀರ್ಥವಿಲ್ಲವು. ಮಹಾವಿಷ್ಣುವಿಗೆ ಸಮಾನನಾದ ದೇವತೆಯಿರುವುದಿಲ್ಲವು. ವಿಶಾಲೆಯೆಂದು ಹೆಸರಾದ ಬದರಿಕಾಶ್ರಮಕ್ಕೆ ಸದೃಶವಾದ ಕ್ಷೇತ್ರವು ಎಲ್ಲಿಯೂ ಇರಲಿಲ್ಲವಲ್ಲದೆ ಮುಂದೆಲ್ಲಿಯೂ ಉಂಟಾಗುವುದಿಲ್ಲ.

೪೦. ಯಾವ ವಿಚಕ್ಷಣರಾದವರು ಭಗವಂತನ ಪಾರ್ಶ್ವವರ್ತಿಗಳಾಗಿದ್ದು ಶಾಶ್ವತವಾದ ವೈಕುಂಠದಲ್ಲಿ ವಾಸಮಾಡಲು ಅಪೇಕ್ಷಿಸುವರೊ, ಅವರೆಲ್ಲರೂ ಪ್ರಯತ್ನಪೂರ್ವಕವಾಗಿಯೂ ಬದರೀಕ್ಷೇತ್ರವನ್ನು ಸೇವಿಸಲೇಬೇಕು.

೪೧. ಸ್ಕಂದನು ಕೇಳುತ್ತಾನೆ:—“ ಎಲೈ ತಂದೆಯೆ ! ಪುಣ್ಯಪ್ರದವಾದ ಈ ಕ್ಷೇತ್ರದಲ್ಲಿ ಗಂಗಾ ಪ್ರವಾಹವನ್ನು ಸೇರಿದಂತೆ ಶ್ರೇಯಸ್ಕರಗಳೂ, ಪ್ರಭಾವಾನ್ವಿತಗಳೂ ಆದ ಯಾವ ಯಾವ ತೀರ್ಥಗಳು ನೆಲಸಿರುವುವು? ಅವುಗಳನ್ನು ಸಂಕ್ಷೇಪವಾಗಿ ನನಗೆ ತಿಳಿಸುವವನಾಗು.”

೪೨. ಮಹಾದೇವನು ಹೇಳುತ್ತಾನೆ:— “ಮಾನಸೋದ್ಭೇದತೀರ್ಥದ ಉದಕವು ಗಂಗೆಯೊಡನೆ ಸೇರುವ ಸ್ಥಳದಲ್ಲಿರುವ ತೀರ್ಥವು ನಿರ್ಮಲವೂ ಪುಣ್ಯಪ್ರದವೂ ಆಗಿ ಪ್ರಯಾಗಕ್ಷೇತ್ರಕ್ಕಿಂತಲೂ ಅತ್ಯಧಿಕವಾದ ಫಲವನ್ನು ಕೊಡುವ ಮಹಿಮೆಯುಳ್ಳದಾಗಿರುವುದು.

೪೩. ಮನುಷ್ಯರು ಮುವ್ವತ್ತು ಸಾವಿರ ವರ್ಷಗಳು ಕೇವಲ ವಾಯು

**ಸಂಗಮಾದ್ದಕ್ಷಿಣೇ ತೀರ್ಥಂ ಧರ್ಮಕ್ಷೇತ್ರಂ ಪ್ರಕೀರ್ತಿತಂ ।**
**ಯತ್ರ ಮೂರ್ತ್ಯಾಂ ಸ್ಮೃತೌ ಜಾತೌ ನರನಾರಾಯಣಾವೃಷೀ ॥ ೪೪ ॥**
**ತತ್ಕ್ಷೇತ್ರಂ ಪಾವನಂ ಮರ್ತ್ಯೈಃ ಸರ್ವೇಷಾಮುತ್ತಮೋತ್ತಮಂ ।**
**ಧರ್ಮಸ್ತತ್ರೈವ ಭಗವಾಂಶ್ಚತುಷ್ಪಾದವತಿಷ್ಠತಿ ॥ ೪೫ ॥**
**ಯತ್ರ ಯಜ್ಞಾಸ್ತಪೋ ದಾನಂ ಯತ್ಕಿಂಚಿತ್ಕ್ರಿಯತೇ ನೃಭಿಃ ।**
**ತತ್ಪುಣ್ಯಸ್ಯ ಕ್ಷಯೋ ನಾಸ್ತಿ ಕಲ್ಪಕೋಟಿಶತೈರಪಿ ॥ ೪೬ ॥**
**ತತೋ ದಕ್ಷಿಣದಿಗ್ಭಾಗ ಉರ್ವಶೀಸಂಗಮಾಭಿಧಂ ।**
**ಸರ್ವಪಾಪಹರಂ ಪುಂಸಾಂ ಸ್ನಾನಮಾತ್ರೇಣ ದೇಹಿನಾಂ ॥ ೪೭ ॥**
**ಕೂರ್ಮೋದ್ಧಾರಸ್ತತಃ ಸಾಕ್ಷಾದ್ಧರಿಭಕ್ತ್ಯೈಕಸಾಧನಂ ।**
**ಸ್ನಾನಮಾತ್ರೇಣ ಭೂತಾನಾಂ ಸತ್ವಶುದ್ಧಿಃ ಪ್ರಜಾಯತೇ ॥ ೪೮ ॥**
**ಬ್ರಹ್ಮಾವರ್ತಸ್ತತಃ ಸಾಕ್ಷಾದ್ಬ್ರಹ್ಮಲೋಕೈಕಕಾರಣಂ ।**
**ದರ್ಶನಾದೇವ ತೀರ್ಥಸ್ಯ ಸರ್ವಪಾಪಕ್ಷಯೋ ಭವೇತ್ ॥ ೪೯ ॥**

---

ಭೋಜನವನ್ನೇ ಮಾಡುವುದರಿಂದ ಯಾವ ಫಲವು ಲಭಿಸುವುದೊ, ಆ ಫಲವೇ ಗಂಗಾಸಂಗಮದಲ್ಲಿ ಒಂದು ಸ್ನಾನವನ್ನು ಮಾಡುವ ಮಾತ್ರದಿಂದಲೇ ಮನುಷ್ಯರಿಗೆ ಲಭಿಸುವುದು.

೪೪. ಈ ಸಂಗಮಕ್ಕೆ ದಕ್ಷಿಣದಿಕ್ಕಿನಲ್ಲಿ ಧರ್ಮಕ್ಷೇತ್ರವೆಂಬ ತೀರ್ಥವು ಪ್ರಸಿದ್ಧಿಯನ್ನು ಹೊಂದಿರುವುದು. ಅಲ್ಲಿರುವ ವಿಗ್ರಹದಲ್ಲಿಯೇ ಋಷಿವರ್ಯರಾದ ನರನಾರಾಯಣರೀರ್ವರೂ ಜನ್ಮವನ್ನು ತಾಳಿದರೆಂದು ಕೇಳಿರುವೆವು.

೪೫. ಮರ್ತ್ಯಲೋಕದೊಳಗೆಲ್ಲ ಆ ಕ್ಷೇತ್ರವೇ ಪರಮಪಾವನವೆನಿಸಿ ಸಕಲ ತೀರ್ಥಗಳಲ್ಲಿಯೂ ಉತ್ತಮೋತ್ತಮವಾಗಿರುವುದು. ಅಲ್ಲಿ ಮಾತ್ರ ಭಗವಂತನಾದ ಧರ್ಮದೇವತೆಯು ಯಾವಾಗಲೂ ನಾಲ್ಕು ಕಾಲುಗಳ ಮೇಲೆಯೂ ಸ್ಥಿರವಾಗಿ ನಿಂತಿರುವನು.

೪೬. ಅಲ್ಲಿ ಮನುಷ್ಯರಿಂದ ಮಾಡಲ್ಪಡುವ ಯಜ್ಞಗಳು, ತಪಸ್ಸು, ದಾನ ಮುಂತಾದ ಯಾವ ಸತ್ಕರ್ಮಗಳಿರುವುವೊ, ಅವುಗಳಿಗೆ ಅನೇಕ ನೂರುಕೋಟಿ ಕಲ್ಪಗಳಾದರೂ ಪುಣ್ಯವು ಕ್ಷೀಣತೆಯನ್ನು ಹೊಂದುವುದಿಲ್ಲವು.

೪೭. ಅದಕ್ಕೂ ದಕ್ಷಿಣದಿಕ್ಕಿನ ಪ್ರದೇಶದಲ್ಲಿ ಊರ್ವಶೀಸಂಗಮವೆಂಬ ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡುವುದರಿಂದಲೇ ಮನುಷ್ಯರಿಗೆ ಸಮಸ್ತ ಪಾಪಗಳೂ ನಾಶವಾಗುವುವು.

೪೮. ಬಳಿಕ ಮಹಾ ವಿಷ್ಣುವಿನ ಭಕ್ತಿಗೆ ಸಾಕ್ಷಾತ್ತಾಗಿ ಏಕಾಂತಕಾರಣವಾಗಿರುವ ಕೂರ್ಮೋದ್ಧಾರವೆಂಬ ತೀರ್ಥವಿರುವುದು. ಅಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಮನುಷ್ಯರಿಗೆ ಚಿತ್ತಶುದ್ಧಿಯುಂಟಾಗುವುದು.

೪೯. ಅದರ ಕೆಳಗಡೆಯೆ ಬ್ರಹ್ಮಾವರ್ತಕ್ಷೇತ್ರವಿರುವುದು. ಅದು ಬ್ರಹ್ಮ

**ಬಹೂನಿ ಸಂತಿ ತೀರ್ಥಾನಿ ದುರ್ಗಮಾನೀಹ ದೇಹಿನಾಂ ।**
**ಸಂಕ್ಷೇಪೇಣ ಕಥಿತಂ ವತ್ಸ ತವಾದರವಶಾದಿದಂ ॥ ೫೦ ॥**
**ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾ ಸಮಾಹಿತಃ ।**
**ಸರ್ವಪಾಪವಿನಿರ್ಮುಕ್ತಃ ಪದಂ ವಿಷ್ಣೋಃ ಪ್ರಪದ್ಯತೇ ॥ ೫೧ ॥**
**ರಾಜಾ ವಿಜಯಮಾಪ್ನೋತಿ ಸುತಾರ್ಥೀ ಲಭತೇ ಸುತಂ ।**
**ಕನ್ಯಾರ್ಥೀ ಲಭತೇ ಕನ್ಯಾಂ ಕನ್ಯಾ ವಿಂದತಿ ಸತ್ಪತಿಂ ॥ ೫೨ ॥**
**ಧನಾರ್ಥೀ ಧನಮಾಪ್ನೋತಿ ಸರ್ವಕರ್ಮೈಕಸಾಧನಂ ॥ ೫೩ ॥**
**ಮಾಸಮಾತ್ರಂ ನರೋ ಭಕ್ತ್ಯಾ ಶೃಣುಯಾದ್ಯಃ ಸಮಾಹಿತಃ ।**
**ತಸ್ಯಾಭೀಷ್ಟಸಮಾವಾಪ್ತಿರ್ದುರ್ಲಭಾಽಪಿ ನ ಸಂಶಯಃ ॥ ೫೪ ॥**
**ಆಧಿವ್ಯಾಧಿಭಯಂ ಘೋರಂ ದಾರಿದ್ರ್ಯಂ ಕಲಹಂ ತಥಾ ।**
**ಯಸ್ಯ ಗೇಹೇಷು ಮಾಹಾತ್ಮ್ಯಂ ತತ್ರೈತಾನಿ ನ ಕರ್ಹಿಚಿತ್ ॥ ೫೫ ॥**

---

ಲೋಕದ ಪ್ರಾಪ್ತಿಗೇ ನಿಕಟವಾದುದೂ, ಏಕಾಂತವಾದುದೂ ಆದ ಸಾಧನವಾಗಿರುವುದು. ಆ ತೀರ್ಥದ ದರ್ಶನಮಾತ್ರದಿಂದಲೇ ಸಕಲ ಪಾತಕಗಳ ಸಂಕ್ಷಯವುಂಟಾಗುವುದು.

೫೦. ಎಲೈ ಪ್ರಿಯ ಪುತ್ರನೆ! ಸಾಮಾನ್ಯ ಮಾನವರಿಗೆ ದುರ್ಗಮಗಳಾದ ಅನೇಕ ತೀರ್ಥಗಳು ಈ ಪ್ರದೇಶದಲ್ಲಿ ನೆಲಸಿರುವುವು. ನಿನ್ನಲ್ಲಿರುವ ಆದರಕ್ಕೆ ಒಳಪಟ್ಟು ನಾನು ಕೆಲವನ್ನು ಮಾತ್ರ ಸಂಕ್ಷೇಪವಾಗಿ ವಿವರಿಸಿರುವೆನು.

೫೧–೫೨. ಯಾವನು ಈ ಕ್ಷೇತ್ರಮಾಹಾತ್ಮ್ಯೆಯನ್ನು ಪ್ರತಿದಿನದಲ್ಲಿಯೂ ಭಕ್ತಿಯುಕ್ತನಾಗಿ ಕೇಳುವನೊ, ತದೇಕನಿಷ್ಠವಾದ ಮನಸ್ಸಿನಿಂದ ಇತರರಿಗೆ ಶ್ರವಣಮಾಡಿಸುವನೊ, ಆ ಪುಣ್ಯವಂತನು ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ಮಹಾವಿಷ್ಣುವಿನ ಲೋಕವಾದ ವೈಕುಂಠವನ್ನು ಸೇರುವನು. ಈ ಪುರಾಣದ ಶ್ರವಣದಿಂದ ಮಹಾರಾಜನಾದವನು ಯುದ್ಧದಲ್ಲಿ ದಿಗ್ವಿಜಯವನ್ನು ಪಡೆಯುತ್ತಾನೆ. ಸಂತತಿಹೀನನಾದವನು ಸತ್ಪುತ್ರನನ್ನು ಪಡೆಯುವನು. ಮದುವೆಯಾಗಲೆಳಸುವವನಿಗೆ ಉತ್ತಮ ಕನ್ಯೆಯು ಸಿಕ್ಕುವಳು. ಕನ್ಯೆಯೂ ಕೂಡ ಉತ್ತಮನಾದ ಪತಿಯನ್ನು ಸೇರಿ ಸುಖಪಡುವಳು.

೫೩. ಧನಕ್ಕಾಗಿ ಪರಿತಪಿಸುತ್ತಿರುವ ಮಾನವನು ಸಮಸ್ತ ಅಭೀಪ್ಸಿತಗಳಿಗೂ ಸಾಧನಭೂತವೆನಿಸಿದ ಧನವನ್ನೂ ಹೊಂದುವನು.

೫೪–೫೫. ಯಾವನು ಒಂದು ತಿಂಗಳವರೆಗೂ ಭಕ್ತಿಯಿಂದಲೂ ಸಮಾಹಿತ ಮನಸ್ಸಿನಿಂದಲೂ ಈ ಮಾಹಾತ್ಮ್ಯವನ್ನು ಕೇಳುವನೋ, ಅವನಿಗೆ ಅತ್ಯಂತ ದುರ್ಲಭಗಳಾದ ಕೋರಿಕೆಗಳೂ ಈಡೇರುವುವೆಂಬ ವಿಷಯದಲ್ಲಿ ಸಂದೇಹವೇ ಇಲ್ಲವು. ಯಾವನ ಮನೆಯಲ್ಲಿ ಬದರಿಕಾಕ್ಷೇತ್ರ ಮಾಹಾತ್ಮ್ಯದ ಪುರಾಣ

ನಾಪಮೃತ್ಯುರ್ನ ಸರ್ಪಾದಿದೌರ್ಭಾಗ್ಯಂ ಚಾಪಿ ವರ್ತತೇ ।
ದುಃಸ್ವಪ್ನಗ್ರಹಪೀಡಾ ಚ ಪರರಾಷ್ಟ್ರಭಯಂ ತಥಾ ॥ ೫೬ ॥
ಯುದ್ಧೇ ಯಾತ್ರಾಪ್ರಯಾಣೇ ಚ ಪಠನೀಯಂ ಪ್ರಯತ್ನತಃ ।
ವಿವಾಹೇ ಚ ವಿವಾದೇ ಚ ಶುಭಕರ್ಮಣಿ ಯತ್ನತಃ ॥ ೫೭ ॥
ಪೂರ್ಣಂ ವಾಽಧ್ಯಾಯಮಾತ್ರಂ ವಾ ತದರ್ಧಂ ವಾ ವಿಚಕ್ಷಣೈಃ ।
ಸರ್ವಕಾರ್ಯಪ್ರಸಿದ್ಧಿಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಬದರಿಕಾಶ್ರಮಮಾಹಾತ್ಮ್ಯೇ ಶಿವಕಾರ್ತಿಕೇಯ ಸಂವಾದೇ "ವಿವಿಧತೀರ್ಥವರ್ಣನಂ" ನಾಮ ಅಷ್ಟಮೋಽಧ್ಯಾಯಃ

**ಬದರಿಕಾಶ್ರಮಮಾಹಾತ್ಮ್ಯಂ ಸಂಪೂರ್ಣಂ**

---

ಶ್ರವಣವು ನಡೆಯುತ್ತಿರುವುದೊ, ಆ ಮನೆಯಲ್ಲಿ ಮಾನಸಿಕ, ಶಾರೀರಕ ವ್ಯಾಧಿಗಳ ಭಯವಾಗಲಿ, ಭಯಂಕರವಾದ ದಾರಿದ್ರ್ಯದುಃಖವಾಗಲಿ, ಅಂತಃಕಲಹಗಳಾಗಲಿ ಎಂದಿಗೂ ಉಂಟಾಗಲಾರವು.

೫೬. ಆ ಪ್ರದೇಶದಲ್ಲಿ ಅಕಾಲಮರಣಗಳಾಗಲಿ, ಸರ್ಪಗಳೇ ಮೊದಲಾದ ಹಿಂಸ್ರಜಂತುಗಳ ಪೀಡೆಗಳಾಗಲಿ, ದುಸ್ಸ್ವಪ್ನಗಳಾಗಲಿ, ದುಷ್ಟಗ್ರಹಗಳ ಪೀಡೆಗಳಾಗಲಿ ಪರರಾಷ್ಟ್ರಗಳ ಮತ್ತು ಪರರಾಜರ ಭಯವಾಗಲಿ ಸಂಭವಿಸಲಾರದು.

೫೭. ಯುದ್ಧವು ಸಂಭವಿಸುವ ಪ್ರಸಂಗದಲ್ಲಿಯಾಗಲಿ, ತೀರ್ಥಯಾತ್ರೆಗಳಿಗೆ ಹೊರಡುವಾಗಲೂ, ವಿವಾಹಗಳೇ ಮುಂತಾದ ಶುಭಕಾರ್ಯಗಳಲ್ಲಿಯೂ, ವಾಗ್ವಾದಗಳನ್ನು ನಡೆಸುವ ಸಂಭವವುಂಟಾದ ಕಾಲದಲ್ಲಿಯೂ ಈ ಮಾಹಾತ್ಮ್ಯವನ್ನು ಪ್ರಯತ್ನಪೂರ್ವಕವಾಗಿ ಪಠನಮಾಡಬೇಕು.

೫೮. ಯಾರು ಈ ಬದರಿಕಾಶ್ರಮ ಮಾಹಾತ್ಮ್ಯದ ಗ್ರಂಥದಲ್ಲಿ ಸಮಸ್ತವನ್ನಾಗಲಿ, ಒಂದು ಅಧ್ಯಾಯ ಮಾತ್ರವನ್ನಾಗಲಿ, ಅರ್ಧ ಅಧ್ಯಾಯವನ್ನಾದರೂ ಬುದ್ಧಿವಂತರಾಗಿ ಪಠನಶ್ರವಣಗಳನ್ನು ಮಾಡುವರೊ, ಅವರಿಗೆ ಸಮಸ್ತ ಕಾರ್ಯಗಳಲ್ಲಿಯೂ ಸಂಸಿದ್ಧಿಯು ಲಭಿಸುವುದೆಂಬುದರಲ್ಲಿ ವಿಚಾರಣೆಯನ್ನು ಮಾಡಬೇಕಾದ ಆವಶ್ಯಕತೆಯೇ ಇರಲಾರದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಬದರಿಕಾಶ್ರಮಮಾಹಾತ್ಮ್ಯದ ಶಿವಕಾರ್ತಿಕೇಯ ಸಂವಾದದಲ್ಲಿ "ವಿವಿಧತೀರ್ಥವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

**ಬದರಿಕಾಶ್ರಮಮಾಹಾತ್ಮ್ಯವು ಮುಗಿದುದು**

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಕಾರ್ತಿಕಮಾಸಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

**ಕಾರ್ತಿಕವ್ರತಪ್ರಶಂಸಾವರ್ಣನಂ**

ಋಷಯ ಊಚುಃ:—

**ಸೂತ ನಃ ಕಥಿತಂ ಪುಣ್ಯಂ ಮಾಹಾತ್ಮ್ಯಮಾಶ್ವಿನಸ್ಯ ಚ ।**
**ಭೂಯೋಽನ್ಯಂ ಶ್ರೋತುಮಿಚ್ಛಾಮಃ ಕಾರ್ತಿಕಸ್ಯ ಚ ವೈಭವಂ ॥ ೧ ॥**
**ಕಲೌ ಕಲುಷಚಿತ್ತಾನಾಂ ನರಾಣಾಂ ಪಾಪಕರ್ಮಣಾಂ ।**
**ಸಂಸಾರಾಬ್ಧೌ ನಿಮಗ್ನಾನಾಂ ಅನಾಯಾಸೇನ ಕಾ ಗತಿಃ ॥ ೨ ॥**

---

### ಕನ್ನಡದ ಅನುವಾದ

**ಕಾರ್ತಿಕವ್ರತಪ್ರಶಂಸಾವರ್ಣನ**

೧. ಋಷಿಗಳು ಕೇಳುತ್ತಾರೆ:—'' ಎಲೈ ಸೂತನೇ! ಆಶ್ವಿನ (ಆಶ್ವಯುಜ) ಮಾಸದ ಪುಣ್ಯಕರವಾದ ಮಾಹಾತ್ಮ್ಯೆಯನ್ನು ನಮಗೆ ಹೇಳಿದ್ದಾಯಿತು. ಈಗ ನಾವು ಕಾರ್ತಿಕಮಾಸದ ವೈಭವವನ್ನು ಕೇಳಲು ಇಚ್ಛೆಪಡುತ್ತಿದ್ದೇವೆ.

೨. ಕಲಿಯುಗದಲ್ಲಿ ನೈರ್ಮಲ್ಯವಿಲ್ಲದ ಮನಸ್ಸುಳ್ಳವರೂ, ಪಾಪಕರ್ಮ ಮಾಡುವವರೂ ಆಗಿ, ಸಂಸಾರಸಮುದ್ರದಲ್ಲಿ ಮುಳುಗಿರುವ ಮನುಷ್ಯರಿಗೆ ಅನಾಯಾಸವಾಗಿ ಮೋಲನ್ನುಂಟುಮಾಡತಕ್ಕ ಸಾಧನವು ಯಾವುದು?

**ಕೋ ಧರ್ಮಸ್ಸರ್ವಧರ್ಮಾಣಾಮಧಿಕೋ ಮೋಕ್ಷಸಾಧಕಃ ।**
**ಇಹಾಽಪಿ ಮುಕ್ತಿದೋ ನೄಣಾಂ ಏತತ್ತ್ವಂ ಕಥಯ ಪ್ರಭೋ ॥ ೩ ॥**

**ಸೂತ ಉವಾಚ :—**

**ಭವದ್ಭಿರ್ಯದಹಂ ಪೃಷ್ಟಃ ತದೇತತ್ಪೃಷ್ಟವಾನ್ಮುನಿಃ ।**
**ನಾರದೋ ಬ್ರಹ್ಮಣಃ ಪುತ್ರೋ ಬ್ರಹ್ಮಾಣಂ ತು ಜಗದ್ಗುರುಂ ॥ ೪ ॥**
**ತಥೈವ ಸತ್ಯಭಾಮಾ ಚ ಶ್ರೀಕೃಷ್ಣಂ ಜಗದೀಶ್ವರಂ ।**
**ಅಪೃಚ್ಛತ್ಕಾರ್ತಿಕಸ್ಯೈವ ವೈಭವಂ ಶ್ರವಣೋತ್ಸುಕಾ ॥ ೫ ॥**
**ವಾಲಖಿಲ್ಯೈಶ್ಚ ಋಷಿಭಿಃ ಯದುಕ್ತಮೃಷಿಸಂಸದಿ ।**
**ಶ್ರೀಸೂರ್ಯಾರುಣಸಂವಾದರೂಪೇಣಾತಿಮನೋಹರಂ ॥ ೬ ॥**
**ಕೈಲಾಸೇ ಶಂಕರೇಣೈವ ಕಾರ್ತಿಕಸ್ಯ ಚ ವೈಭವಂ ।**
**ವರ್ಣಿತಂ ಷಣ್ಮುಖಸ್ಯಾಗ್ರೇ ನಾನಾಖ್ಯಾನಸಮನ್ವಿತಂ ॥ ೭ ॥**
**ಪೃಥುಂ ಪ್ರತಿ ನಾರದೇನ ಕಥಿತಂ ಚ ಮಹಾತ್ಮ್ಯಕಂ ।**
**ಕಾರ್ತಿಕಸ್ಯ ಚ ವಿಪ್ರೇಂದ್ರಾ ಶೃತ್ವಾ ಬ್ರಹ್ಮಮುಖಾತ್ಪುರಾ ॥ ೮ ॥**

---

೩. ಸರ್ವ ಧರ್ಮಗಳಿಗಿಂತಲೂ ಅಧಿಕವಾಗಿ ಮೋಕ್ಷಸಾಧಕವಾಗಿರುವ ಧರ್ಮವಾವುದು? ಎಲೈ ಪ್ರಭುವೇ! ಇಲ್ಲಿ ಕೂಡ ನರರಿಗೆ ಮುಕ್ತಿದಾಯಕ ವಾಗಿರುವ ಆ ಧರ್ಮವು ಯಾವುದು? ಇದನ್ನು ನನಗೆ ತಿಳಿಸಬೇಕು.''

೪. ಸೂತಪುರಾಣಿಕನು ಹೇಳುತ್ತಾನೆ:—'' ನೀವು ನನ್ನಲ್ಲಿ ಯಾವ ಪ್ರಶ್ನೆ ಯನ್ನು ಕೇಳಿದಿರೋ ಅದನ್ನೇ ಬ್ರಹ್ಮಪುತ್ರನಾದ ನಾರದಮುನಿಯು ಜಗದ್ಗುರು ವಾದ ಬ್ರಹ್ಮನನ್ನೂ ಕೇಳಿದನು.

೫. ಅದೇ ರೀತಿಯಲ್ಲಿಯೇ ಕಾರ್ತಿಕದ ವೈಭವವನ್ನು ಕೇಳಬೇಕೆಂಬ ಕುತೂಹಲವುಳ್ಳವಳಾಗಿ ಸತ್ಯಭಾಮಾದೇವಿಯು ಜಗದೀಶ್ವರನಾದ ಶ್ರೀಕೃಷ್ಣ ನನ್ನು ಪ್ರಶ್ನೆಮಾಡಿದಳು.

೬. ಋಷಿಗಳ ಸಭೆಯಲ್ಲಿ ವಾಲಖಿಲ್ಯ ಋಷಿಗಳು ಶ್ರೀ ಸೂರ್ಯಾರುಣ ಸಂವಾದ ರೂಪದಿಂದ ಅತಿ ಮನೋಹರವಾದ ಈ ಕಾರ್ತಿಕ ಮಾಹಾತ್ಮ್ಯೆಯನ್ನು ವಿವರಿಸಿದರು.

೭. ಕೈಲಾಸದಲ್ಲಿ ಷಣ್ಮುಖನ ಎದುರಿನಲ್ಲಿ ನಾನಾ ಆಖ್ಯಾನಗಳಿಂದ ಕೂಡಿದ ಈ ಕಾರ್ತಿಕಮಾಹಾತ್ಮ್ಯವು ಶ್ರೀಶಂಕರನಿಂದಲೇ ವರ್ಣಿಸಲ್ಪಟ್ಟಿತು.

೮. ಎಲೈ ವಿಪ್ರಶ್ರೇಷ್ಠರೇ! ಪೂರ್ವದಲ್ಲಿ ಬ್ರಹ್ಮನ ಮುಖದಿಂದ ಕೇಳಿ ತಿಳಿದುಕೊಂಡ ನಾರದನು ಪೃಥುರಾಜನಿಗಾಗಿ ಈ ಕಾರ್ತಿಕಮಾಹಾತ್ಮ್ಯೆಯನ್ನು ವಿಸ್ತರಿಸಿ ಹೇಳಿದನು.

ಏಕದಾ ನಾರದೋ ಯೋಗೀ ಸತ್ಯಲೋಕಮುಪಾಗತಃ ।
ಪಪ್ರಚ್ಛ ವಿನಯೇನೈವ ಸರ್ವಲೋಕಪಿತಾಮಹಂ ॥ ೯ ॥

ನಾರದ ಉವಾಚ :—

ಪಾಪೇಂಧನಸ್ಯ ಘೋರಸ್ಯ ಶುಷ್ಕಾರ್ದ್ರಸ್ಯ ಚ ಭೂರಿಶಃ ।
ಕೋ ವಹ್ನಿರ್ದಹತೇ ಬ್ರಹ್ಮನ್ ತದ್ಭವಾನ್ ವಕ್ತುಮರ್ಹತಿ ॥ ೧೦ ॥
ನಾಜ್ಞಾತಂ ತ್ರಿಷು ಲೋಕೇಷು ಬ್ರಹ್ಮಾಂಡಾಂತರ್ಗತಸ್ಯ ಯತ್ ।
ವಿದ್ಯತೇ ತವ ದೇವೇಶ ತ್ರಿವಿಧಸ್ಯ ಸುನಿಶ್ಚಿತಂ ॥ ೧೧ ॥
ಮಾಸಾನಾಂ ಪ್ರವರೋ ಮಾಸೋ ದೇವಾನಾಮುತ್ತಮೋತ್ತಮಃ ।
ತೀರ್ಥಾನಿ ತದ್ವಿಶೇಷೇಣ ಕಥಯಸ್ವ ಪಿತಾಮಹ ॥ ೧೨ ॥

ಬ್ರಹ್ಮೋವಾಚ :—

ಮಾಸಾನಾಂ ಕಾರ್ತಿಕಶ್ಶ್ರೇಷ್ಠೋ ದೇವಾನಾಂ ಮಧುಸೂದನಃ ।
ತೀರ್ಥಂ ನಾರಾಯಣಾಖ್ಯಂ ಹಿ ತ್ರಿತಯಂ ದುರ್ಲಭಂ ಕಲೌ ॥ ೧೩ ॥

ನಾರದ ಉವಾಚ :—

ಭಗವಂಸ್ತವ ದಾಸೋಽಸ್ಮಿ ಭಕ್ತೋಽಸ್ಮಿ ಹರಿವಲ್ಲಭ ।
ವೈಷ್ಣವಾನ್ ಬ್ರೂಹಿ ಮೇ ಧರ್ಮಾನ್ ಸರ್ವತೋಽಸಿ ಪಿತಾಮಹ ॥ ೧೪ ॥

---

೯. ಒಂದಾನೊಂದು ಕಾಲದಲ್ಲಿ ಯೋಗಿಯಾದ ನಾರದನು ಸತ್ಯಲೋಕಕ್ಕೆ ಹೋದನು. ಹೋಗಿ ಸರ್ವಲೋಕಗಳಿಗೂ ಪಿತಾಮಹನಾದ ಬ್ರಹ್ಮನನ್ನು ವಿನಯದಿಂದ ಹೀಗೆ ಪ್ರಶ್ನೆಮಾಡಿದನು.

೧೦. ನಾರದನು ಕೇಳುತ್ತಾನೆ:—"ಎಲೈ ಬ್ರಹ್ಮನೇ! ಘೋರಪಾಪವೆಂಬ ಒಣಗಿದ ಮತ್ತು ಹಸಿಯಾಗಿರುವ ಕಟ್ಟಿಗೆಯನ್ನು ಯಾವ ಬೆಂಕಿಯು ಸುಡುತ್ತದೆ? ಅದನ್ನು ನೀನು ಹೇಳಬೇಕು.

೧೧. ಮೂರು ಲೋಕಗಳಲ್ಲಿಯೂ ನಿನಗೆ ತಿಳಿಯದಿರುವಂತಹುದು ಯಾವುದೂ ಇಲ್ಲವು. ಎಲೈ ದೇವೇಶನೇ, ಬ್ರಹ್ಮಾಂಡದೊಳಗಿನ ಭೂತ ಭವಿಷ್ಯತ್ ವರ್ತಮಾನಗಳೆಂಬ ತ್ರಿವಿಧನಿಶ್ಚಯವನ್ನು ನೀನು ಚೆನ್ನಾಗಿ ಬಲ್ಲೆ.

೧೨. ಎಲೈ ಪಿತಾಮಹನೇ, ಮಾಸಗಳಲ್ಲಿ ಉತ್ತಮವಾದ ಮಾಸ, ದೇವತೆಗಳಲ್ಲೆಲ್ಲ ಉತ್ತಮೋತ್ತಮನಾದ ದೇವತೆ, ವಿಶೇಷವಾದ ತೀರ್ಥಗಳೂ ಯಾವುವೆಂಬುದನ್ನು ನನಗೆ ತಿಳಿಸಬೇಕು."

೧೩. ಬ್ರಹ್ಮನು ಹೇಳುತ್ತಾನೆ:—"ಮಾಸಗಳಲ್ಲಿ ಕಾರ್ತಿಕಮಾಸವು ಶ್ರೇಷ್ಠವಾದುದು. ದೇವತೆಗಳಲ್ಲಿ ಮಧುಸೂದನನು ಶ್ರೇಷ್ಠನು. ನಾರಾಯಣವೆಂಬ ತೀರ್ಥವು ಶ್ರೇಷ್ಠವಾದುದು. ಈ ಮೂರೂ ಕಲಿಯುಗದಲ್ಲಿ ದುರ್ಲಭವಾದುವು."

೧೪. ನಾರದನು ಕೇಳುತ್ತಾನೆ:—'ಭಗವನ್! ನಾನು ನಿನ್ನ ದಾಸನಾಗಿ

ಆದೌ ಕಾರ್ತಿಕಮಾಹಾತ್ಮ್ಯಂ ವಕ್ತುಮರ್ಹಸಿ ಮೇ ಪ್ರಭೋ ।
ದೀಪದಾನಸ್ಯ ಮಾಹಾತ್ಮ್ಯಂ ವ್ರತಿನಾಂ ನಿಯಮಾಂಸ್ತಥಾ ॥ ೧೫ ॥
ಗೋಪೀಚಂದನಮಾಹಾತ್ಮ್ಯಂ ತುಲಸ್ಯಾಶ್ಚ ತಥಾ ವಿಭೋ ।
ಧಾತ್ರ್ಯಾಶ್ಚೈವ ಚ ಮಾಹಾತ್ಮ್ಯಂ ವಿಧಿಂ ಸ್ನಾನಾದಿಕಸ್ಯ ಚ ।
ವ್ರತಾರಂಭಃ ಕದಾ ಕಾರ್ಯಃ ಉದ್ಯಾಪನವಿಧಿಂ ತಥಾ ॥ ೧೬ ॥
ಯತ್ಕಿಂಚಿದ್ವೈಷ್ಣವಂ ಧರ್ಮಂ ತತ್ಸರ್ವಂ ವಕ್ತುಮರ್ಹಸಿ ।
ಯೇನಾಹಂ ತ್ವತ್ಪ್ರಸಾದೇನ ಪದಂ ಯಾಸ್ಯಾಮ್ಯನಾಮಯಂ ॥ ೧೭ ॥

ಸೂತ ಉವಾಚ :—

ಇತಿ ಪುತ್ರವಚಃ ಶ್ರುತ್ವಾ ಬ್ರಹ್ಮಾ ಹರ್ಷಸಮನ್ವಿತಃ ।
ರಾಧಾದಾಮೋದರಂ ಸ್ಮೃತ್ವಾ ಪ್ರೋವಾಚ ಮನುಜಂ ಪ್ರತಿ ॥ ೧೮ ॥

ಬ್ರಹ್ಮೋವಾಚ :—

ಸಾಧು ಪೃಷ್ಟಂ ತ್ವಯಾ ಪುತ್ರ ಲೋಕೋದ್ಧರಣಹೇತವೇ ।
ಕಥಯಾಮಿ ನ ಸಂದೇಹಃ ಕಾರ್ತಿಕಸ್ಯ ಚ ವೈಭವಂ ॥ ೧೯ ॥

---

ದ್ದೇನೆ. ಭಕ್ತನಾಗಿದ್ದೇನೆ. ಎಲೈ ಹರಿವಲ್ಲಭನೇ! ನನಗೆ ವೈಷ್ಣವಧರ್ಮಗಳನ್ನು ತಿಳಿಸು. ಪಿತಾಮಹಾ! ನೀನು ಸರ್ವಜ್ಞನಾಗಿರುವೆ.

೧೫. ಪ್ರಭುವೆ! ಮೊದಲು ನನಗೆ ಕಾರ್ತಿಕಮಾಹಾತ್ಮ್ಯೆಯನ್ನು ಹೇಳುವವನಾಗು. ದೀಪದಾನದ ಮಾಹಾತ್ಮ್ಯೆಯನ್ನು ಹೇಳು. ವ್ರತವನ್ನು ಧರಿಸಿದವರು ಅನುಸರಿಸಬೇಕಾದ ನಿಯಮಗಳನ್ನು ತಿಳಿಸು.

೧೬. ವಿಭುವೇ! ಗೋಪೀಚಂದನದ ಮಾಹಾತ್ಮ್ಯೆಯನ್ನೂ, ಹಾಗೆಯೇ ತುಲಸಿಯ ಮಾಹಾತ್ಮ್ಯವನ್ನೂ ನನಗೆ ತಿಳಿಸು. ಧಾತ್ರಿಯ ಮಾಹಾತ್ಮ್ಯೆಯನ್ನೂ ಸ್ನಾನಾದಿಗಳ ವಿಧಿಯನ್ನೂ ವಿಶದಪಡಿಸು. ವ್ರತಾರಂಭವನ್ನು ಯಾವಾಗ ಮಾಡಬೇಕು? ಉದ್ಯಾಪನವಿಧಿಯನ್ನು ಯಾವಾಗ ನಡೆಸಬೇಕು?

೧೭. ವೈಷ್ಣವ ಧರ್ಮವಾವಾವುದಿದೆಯೊ ಅದೆಲ್ಲವನ್ನೂ ನನಗೆ ಹೇಳಬೇಕು. ಹಾಗೆ ತಿಳಿಸುವುದರಿಂದ ನಾನು ನಿನ್ನ ಪ್ರಸಾದದಿಂದ ರೋಗಾದ್ಯಪಾಯಗಳಿಂದ ದೂರವಾದ ಪದವಿಯನ್ನು ಪಡೆಯುತ್ತೇನೆ.

೧೮. ಸೂತಪುರಾಣಿಕನು ಹೇಳುತ್ತಾನೆ:—ಪುತ್ರನಾದ ನಾರದನ ಈ ವಚನವನ್ನಾಲಿಸಿ ಬ್ರಹ್ಮನು ಹರ್ಷದಿಂದ ಕೂಡಿದವನಾಗಿ ರಾಧಾದಾಮೋದರರನ್ನು ಸ್ಮರಿಸಿ ತನ್ನ ತನುಜನನ್ನು ಕುರಿತು ಹೀಗೆಂದು ನುಡಿದನು :—

೧೯. ಬ್ರಹ್ಮನು ಹೇಳುತ್ತಾನೆ:—"ಎಲೈ ಪುತ್ರನೇ! ಲೋಕವನ್ನು ಉದ್ಧರಿಸುವುದಕ್ಕೋಸ್ಕರ ನೀನು ಕೇಳಿದ್ದು ಬಹು ಒಳ್ಳೆಯದಾಯಿತು. ಕಾರ್ತಿಕ ಮಾಸದ ವೈಭವವನ್ನು ಹೇಳುತ್ತೇನೆ. ಇದರಲ್ಲಿ ಸಂಶಯವಿಲ್ಲವು.

ಏಕತಸ್ಸರ್ವತೀರ್ಥಾನಿ ಸರ್ವೇ ಯಜ್ಞಾಸ್ಸದಕ್ಷಿಣಾಃ ।
ಕಾರ್ತಿಕಸ್ಯ ತು ಮಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೨೦ ॥
ಏಕತಃ ಪುಷ್ಕರೇ ವಾಸಃ ಕುರುಕ್ಷೇತ್ರೇ ಹಿಮಾಲಯೇ ।
ಏಕತಃ ಕಾರ್ತಿಕಃ ಪುತ್ರ ಸರ್ವಪುಣ್ಯಾಧಿಕೋ ಮತಃ ॥ ೨೧ ॥
ಸ್ವರ್ಣಾನಿ ಮೇರುತುಲ್ಯಾನಿ ಸರ್ವದಾನಾನಿ ಚೈಕತಃ ।
ಏಕತಃ ಕಾರ್ತಿಕೋ ವತ್ಸ ಸರ್ವದಾ ಕೇಶವಪ್ರಿಯಃ ॥ ೨೨ ॥
ಯತ್ಕಿಂಚಿತ್ಕ್ರಿಯತೇ ಪುಣ್ಯಂ ವಿಷ್ಣುಮುದ್ದಿಶ್ಯ ಕಾರ್ತಿಕೇ ।
ತಸ್ಯ ಕ್ಷಯಂ ನ ಪಶ್ಯಾಮಿ ಮಯೋಕ್ತಂ ತವ ನಾರದ ॥ ೨೩ ॥
ಸೋಪಾನಭೂತಂ ಸ್ವರ್ಗಸ್ಯ ಮಾನುಷ್ಯಂ ಪ್ರಾಪ್ಯ ದುರ್ಲಭಂ ।
ತಥಾತ್ಮಾನಂ ಸಮಾದದ್ಯಾತ್ ನ ಭ್ರಶ್ಯೇತ ಯಥಾ ಪುನಃ ॥ ೨೪ ॥
ದುಷ್ಪ್ರಾಪ್ಯಂ ಪ್ರಾಪ್ಯ ಮಾನುಷ್ಯಂ ಕಾರ್ತಿಕೋಕ್ತಂ ಚರೇನ್ನ ಯಃ ।
ಧರ್ಮಂ ಧರ್ಮಭೃತಾಂ ಶ್ರೇಷ್ಠ ಸ ಮಾತಾಪಿತೃಘಾತಕಃ ॥ ೨೫ ॥

---

೨೦. ಸರ್ವ ತೀರ್ಥಗಳೂ, ತಕ್ಕ ತಕ್ಕ ದಕ್ಷಿಣೆಗಳಿಂದ ಕೂಡಿದ ಸಮಸ್ತ ಯಜ್ಞಗಳೂ ಒಂದು ಕಡೆ ಒಟ್ಟುಗೂಡಿದರೂ ಕಾರ್ತಿಕಮಾಸದ ಹದಿನಾರನೆಯ ಒಂದು ಭಾಗದ ಮಹಿಮೆಯನ್ನು ಪಡೆಯಲಾರವು.

೨೧. ಪುಷ್ಕರದಲ್ಲಿ, ಕುರುಕ್ಷೇತ್ರದಲ್ಲಿ, ಅಥವಾ ಹಿಮಾಲಯದಲ್ಲಿ ವಾಸ ವೊಂದು ಕಡೆ, ಕಾರ್ತಿಕಮಾಸವೊಂದು ಕಡೆ. ವತ್ಸ! ಈ ಕಾರ್ತಿಕವು ಸರ್ವ ಪುಣ್ಯಗಳಿಗಿಂತಲೂ ಅಧಿಕವೆಂದು ಭಾವಿಸುತ್ತಾರೆ.

೨೨. ಮೇರು ಪರ್ವತಕ್ಕೆ ಸಮಾನವಾದಷ್ಟು ಸುವರ್ಣ ದಕ್ಷಿಣೆಯಿಂದ ಕೂಡಿದ ಸರ್ವದಾನಗಳೂ ಒಂದು ಕಡೆ. ವತ್ಸಾ! ಸರ್ವದಾ ಕೇಶವನಿಗೆ ಪ್ರಿಯವಾದ ಕಾರ್ತಿಕ ಮಾಸವಿನ್ನೊಂದು ಕಡೆ.

೨೩. ಕಾರ್ತಿಕ ಮಾಸದಲ್ಲಿ ವಿಷ್ಣುವನ್ನುದ್ದೇಶಿಸಿ ಎಷ್ಟೊಂದು ಸ್ವಲ್ಪ ಪುಣ್ಯವನ್ನೇ ಮಾಡಿದರೂ ಅದಕ್ಕೆ ಕ್ಷಯವೆಂಬುದನ್ನು ನಾನು ಕಾಣೆ. ನಾರದಾ! ಇದನ್ನು ನಾನು ನಿನಗೆ ಹೇಳಿದ್ದೇನೆ.

೨೪. ಸ್ವರ್ಗಕ್ಕೆ ಸೋಪಾನದಂತಿರುವ ದುರ್ಲಭವಾದ ಮನುಷ್ಯಜನ್ಮವನ್ನು ಪಡೆದಮೇಲೆ ಮತ್ತೆ ಅದರಿಂದ ಚ್ಯುತಿಹೊಂದದೆ ಇರಬೇಕಾದರೆ ಹೇಗೊ ಹಾಗೆ ನಡೆದುಕೊಳ್ಳಬೇಕು.

೨೫. ಎಲೈ ಧರ್ಮಧಾರಿಗಳಲ್ಲಿ ಶ್ರೇಷ್ಠನಾದ ನಾರದನೇ! ಬಹುಕಷ್ಟದಿಂದ ದೊರಕಿಸಿಕೊಳ್ಳಬಹುದಾದ ಮನುಷ್ಯಜನ್ಮವನ್ನು ಪಡೆದೂ ಕಾರ್ತಿಕಮಾಸಕ್ಕೆ ಹೇಳಿರುವ ಧರ್ಮವನ್ನು ಯಾವನು ಆಚರಿಸುವುದಿಲ್ಲವೋ ಅವನು ಮಾತಾಪಿತೃ ಘಾತಕನಾಗುತ್ತಾನೆ.

ಕಾರ್ತಿಕಃ ಖಲು ವೈ ಮಾಸಃ ಸರ್ವಮಾಸೇಷು ಚೋತ್ತಮಃ ।
ಪುಣ್ಯಾನಾಂ ಪರಮಂ ಪುಣ್ಯಂ ಪಾವನಾನಾಂ ಚ ಪಾವನಂ ॥ ೨೬ ॥
ಅಸ್ಮಿನ್ ಮಾಸೇ ತ್ರಯಸ್ತ್ರಿಂಶದ್ದೇವಾಸ್ಸನ್ನಿಹಿತಾ ಮುನೇ ।
ಅತ್ರ ಸ್ನಾನಾನಿ ದಾನಾನಿ ಭೋಜನಾನಿ ವ್ರತಾನಿ ಚ ॥ ೨೭ ॥
ತಿಲಧೇನೂ ಹಿರಣ್ಯಂ ಚ ರಜತಂ ಭೂಮಿವಾಸಸೀ ।
ಗೋಪ್ರದಾನಾನಿ ಕುರ್ವಂತಿ ಸರ್ವಭಾವೇನ ನಾರದ ॥ ೨೮ ॥
ತಾನಿ ದಾನಾನಿ ದತ್ತಾನಿ ಗೃಹ್ಣಂತಿ ವಿಧಿವತ್ಸುರಾಃ ।
ಯತ್ಕಿಂಚಿದ್ದತ್ತಂ ವಿಪ್ರೇಂದ್ರ ತಪಶ್ಚೈವ ತಥಾ ಕೃತಂ ॥ ೨೯ ॥
ತದಕ್ಷಯ್ಯಫಲಂ ಪ್ರೋಕ್ತಂ ವಿಷ್ಣುನಾ ಪ್ರಭವಿಷ್ಣುನಾ ।
ಪಾಪಾನಾಂ ಮೋಕ್ಷಣಂ ಚೈವ ಕಾರ್ತಿಕೇ ಮಾಸಿ ಶಸ್ಯತೇ ॥ ೩೦ ॥
ತಸ್ಮಾದ್ಯತ್ನೇನ ವಿಪ್ರೇಂದ್ರ ಕಾರ್ತಿಕೇ ಮಾಸಿ ದೀಯತೇ ।
ಯತ್ಕಿಂಚಿತ್ಕಾರ್ತಿಕೇ ದತ್ತಂ ವಿಷ್ಣುಮುದ್ದಿಶ್ಯ ಮಾನವೈಃ ॥ ೩೧ ॥
ತದಕ್ಷಯಂ ಹಿ ಲಭತೇ ಅನ್ನದಾನಂ ವಿಶೇಷತಃ ।
ಯಥಾ ನದೀನಾಂ ವಿಪ್ರೇಂದ್ರ ಶೈಲಾನಾಂ ಚೈವ ನಾರದ ॥ ೩೨ ॥

---

೨೬. ಕಾರ್ತಿಕಮಾಸವು ಸರ್ವ ಮಾಸಗಳಲ್ಲೂ ಉತ್ತಮವಾದ ಮಾಸವು; ಪುಣ್ಯಕರವಾದವುಗಳಲ್ಲೆಲ್ಲ ಪರಮ ಪುಣ್ಯಕರವು; ಪಾವನವಾದವುಗಳಿಗೂ ಪಾವನವಾದುದು.

೨೭–೨೮. ಎಲೈ ಮುನಿಯೇ! ಈ ಮಾಸದಲ್ಲಿ ಮುವತ್ತುಮೂರು ದೇವತೆಗಳೂ ಸನ್ನಿಧಿಗೊಂಡಿರುವರು. ಈ ಮಾಸದಲ್ಲಿ ಸ್ನಾನಗಳನ್ನೂ, ದಾನಗಳನ್ನೂ, ಭೋಜನಗಳನ್ನೂ, ವ್ರತಗಳನ್ನೂ, ತಿಲ, ಧೇನು, ಹಿರಣ್ಯ, ರಜತ, ಭೂಮಿ, ವಸ್ತ್ರ ಮುಂತಾದ ದಾನಗಳನ್ನೂ, ಗೋದಾನಗಳನ್ನೂ ಸರ್ವಭಾವಗಳಿಂದಲೂ ಮಾಡುತ್ತಾರೆ.

೨೯–೩೦. ಹಾಗೆ ಕೊಟ್ಟ ಆ ದಾನಗಳನ್ನು ವಿಧಿವತ್ತಾಗಿ ಕೊಟ್ಟ ದಾನಗಳೆಂದೇ ದೇವತೆಗಳು ಗ್ರಹಿಸುತ್ತಾರೆ. ವಿಪ್ರೇಂದ್ರಾ! ಕಾರ್ತಿಕದಲ್ಲಿ ಕೊಟ್ಟ ದಾನವು ವಿಷ್ಟು ಅಲ್ಪವೇ ಆಗಿರಲಿ, ಮಾಡಿದ ತಪಸ್ಸು ಎಷ್ಟು ಸ್ವಲ್ಪವೇ ಆಗಿರಲಿ, ಅದು ಅಕ್ಷಯಫಲವನ್ನು ಕೊಡುತ್ತದೆ. ಹೀಗೆಂದು ಸರ್ವಪ್ರಭುವಾದ ವಿಷ್ಣುವೇ ಹೇಳಿರುತ್ತಾನೆ. ಪಾಪಗಳಿಂದ ಬಿಡುಗಡೆಯೂ ಸಹ ಕಾರ್ತಿಕಮಾಸದಲ್ಲಿ ಪ್ರಶಸ್ತವಾಗಿ ನಡೆಯುತ್ತದೆ.

೩೧–೩೨. ಆದುದರಿಂದ, ಎಲೈ ವಿಪ್ರಶ್ರೇಷ್ಠನೇ! ಕಾರ್ತಿಕಮಾಸದಲ್ಲಿ ಪ್ರಯತ್ನಪೂರ್ವಕವಾಗಿ ದಾನಮಾಡುತ್ತಾರೆ. ಮಾನವರು ವಿಷ್ಣುವನ್ನುದ್ದೇಶ ಮಾಡಿಕೊಂಡು ಕಾರ್ತಿಕಮಾಸದಲ್ಲಿ ಅಲ್ಪಸ್ವಲ್ಪವನ್ನೇನನ್ನು ದಾನಮಾಡುತ್ತಾ

**ಉದಧೀನಾಂ ಚ ವಿಪ್ರರ್ಷೇ ಕ್ಷಯೋ ನೈವೋಪಪದ್ಯತೇ ।**
**ದಾನಂ ಕಾರ್ತಿಕಮಾಸೇ ತು ಯತ್ಕಿಂಚಿದ್ದೀಯತೇ ಮುನೇ ॥ ೩೩ ॥**
**ನ ತಸ್ಯಾಸ್ತಿ ಕ್ಷಯೋ ವಿಪ್ರ ಪಾಪಂ ಯಾತಿ ಸಹಸ್ರಧಾ ।**
**ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ಪರಾನ್ನಂ ಯಸ್ತು ವರ್ಜಯೇತ್॥ ೩೪॥**
**ದಿನೇ ದಿನೇಽತಿಕೃಚ್ಛ್ರಸ್ಯ ಫಲಂ ಪ್ರಾಪ್ನೋತ್ಯಯತ್ನತಃ ।**
**ನ ಕಾರ್ತಿಕಸಮೋ ಮಾಸೋ ನ ಕೃತೇನ ಸಮಂ ಯುಗಂ ॥ ೩೫ ॥**
**ನ ವೇದಸದೃಶಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಂ ।**
**ನ ಚಾನ್ನಸದೃಶಂ ದಾನಂ ನ ಸುಖಂ ಭಾರ್ಯಯಾ ಸಮಂ ॥ ೩೬ ॥**
**ನ್ಯಾಯೇನೋಪಾರ್ಜಿತಂ ದ್ರವ್ಯಂ ದುರ್ಲಭಂ ದಾನಕಾರಿಣಾಂ ।**
**ದುರ್ಲಭಂ ಮರ್ತ್ಯಧರ್ಮಾಣಾಂ ತೀರ್ಥೇ ಚ ಪ್ರತಿಪಾದನಂ ॥ ೩೭ ॥**
**ಕಾರ್ತಿಕೇ ಮುನಿಶಾರ್ದೂಲ ಶಾಲಿಗ್ರಾಮಶಿಲಾರ್ಚನಂ ।**
**ಸ್ಮರಣಂ ವಾಸುದೇವಸ್ಯ ಕರ್ತವ್ಯಂ ಪಾಪಭೀರುಣಾ ॥ ೩೮ ॥**
**ಏತಾದೃಶಂ ಕಾರ್ತಿಕಂ ಚ ಅಕೃತೇನ್ನೈವ ಯೋ ನಯೇತ್ ।**
**ಪೂರ್ವಂ ಕೃತಸ್ಯ ಪುಣ್ಯಸ್ಯ ಕ್ಷಯಮಾಪ್ನೋತ್ಯಸಂಶಯಂ ॥ ೩೯ ॥**

---

ರೆಯೊ ಅದು ಅಕ್ಷಯಫಲವನ್ನುಂಟುಮಾಡುತ್ತದೆ. ಅನ್ನದಾನವು ವಿಶೇಷ ಫಲಕಾರಿಯಾದದ್ದು. ವಿಪ್ರೇಂದ್ರನಾದ ಓ ನಾರದಾ! ನದಿಗಳಿಗೂ ಬೆಟ್ಟಗಳಿಗೂ ಸಾಗರಗಳಿಗೂ ನಾಶವೆಂಬುದು ಹೇಗೆ ಉಂಟಾಗುವುದೇ ಇಲ್ಲವೋ ಕಾರ್ತಿಕ ಮಾಸದಲ್ಲಿ ಯಾವುದೊಂದು ಸ್ವಲ್ಪವನ್ನೇ ಆಗಲಿ ಕೊಟ್ಟ ದಾನವೂ ಹಾಗೆಯೇ.

೩೪–೩೬. ಅದಕ್ಕೆ ಕ್ಷಯವಿಲ್ಲ. ಆತನ ಪಾಪವು ಸಾವಿರಕಡೆಗೆ ಓಡಿಹೋಗುತ್ತದೆ. ಕಾರ್ತಿಕಮಾಸ ಬಂದುದನ್ನು ಕಂಡು ಯಾರು ಪರಾನ್ನವನ್ನು ವರ್ಜಿಸುತ್ತಾರೆಯೊ ಅವರು ದಿನದಿನವೂ ಅತಿಕೃಛ್ರವ್ರತವನ್ನು ಮಾಡಿದ ಫಲವನ್ನು ಶ್ರಮವಿಲ್ಲದೆಯೆ ಪಡೆದುಕೊಳ್ಳುತ್ತಾರೆ. ಕಾರ್ತಿಕಕ್ಕೆ ಸಮನಾದ ಮಾಸವಿಲ್ಲ. ಕೃತಯುಗಕ್ಕೆ ಸಮಾನವಾದ ಯುಗವಿಲ್ಲ, ವೇದಕ್ಕೆ ಸರಿದೂಗುವ ಶಾಸ್ತ್ರವಿಲ್ಲ, ಗಂಗೆಗೆ ಸಮವಾದ ತೀರ್ಥವಿಲ್ಲ, ಅನ್ನದಾನಕ್ಕೆ ಎಣೆಯಾದ ದಾನವಿಲ್ಲ, ಹೆಂಡತಿಗೆ ಸಮನಾದ ಸುಖವಿಲ್ಲವು.

೩೭. ದಾನಮಾಡುವವರಿಗೆ ನ್ಯಾಯದಿಂದ ಸಂಪಾದಿಸಿದ ದ್ರವ್ಯವು ದೊರೆಯುವುದು ದುರ್ಲಭ. ಮರ್ತ್ಯಧರ್ಮವುಳ್ಳವರಿಗೆ ತೀರ್ಥದಲ್ಲಿ ಮರಣವು ದೊರೆಯುವುದೂ ದುರ್ಲಭವು.

೩೮. ಎಲೈ ಮುನಿಶ್ರೇಷ್ಠನೇ! ಕಾರ್ತಿಕಮಾಸದಲ್ಲಿ ಪಾಪಭೀರುವಾದವನು ಸಾಲಿಗ್ರಾಮದ ಅರ್ಚನೆಯನ್ನೂ ವಾಸುದೇವನ ಸ್ಮರಣೆಯನ್ನೂ ಮಾಡಬೇಕು.

೩೯. ಈ ರೀತಿ ದಾನವ್ರತಗಳನ್ನು ಮಾಡದೆಯೆ ಯಾವನು ಕಾರ್ತಿಕ

ನಾರದ ಉವಾಚ :—

ಅಶಕ್ತೇನ ಕಥಂ ಕಾರ್ಯಂ ಕಾರ್ತಿಕವ್ರತಮುತ್ತಮಂ ।
ಯೇನ ತತ್ಫಲಮಾಪ್ನೋತಿ ತನ್ಮೇ ವದ ಪಿತಾಮಹ ॥ ೪೦ ॥

ಬ್ರಹ್ಮೋವಾಚ :—

ಅಶಕ್ತಸ್ತು ಯದಾ ಮರ್ತ್ಯಃ ತದೈವಂ ವ್ರತಮಾಚರೇತ್ ।
ಅನ್ಯಸ್ಮೈ ದ್ರವಿಣಂ ದತ್ವಾ ಕಾರಯೇತ್ಕಾರ್ತಿಕವ್ರತಂ ॥ ೪೧ ॥
ತಸ್ಮಾತ್ಪುಣ್ಯಂ ಪ್ರಗೃಹ್ಣೀತ ದಾನಸಂಕಲ್ಪಪೂರ್ವಕಂ ।
ದ್ರವ್ಯದಾನೇಽಪ್ಯಶಕ್ತಶ್ಚೇತ್ ಯದಾ ದೇವರ್ಷಿಸತ್ತಮ ॥ ೪೨ ॥
ತದಾ ತೇನ ಪ್ರಕರ್ತವ್ಯಂ ಪಾನಂ ತೀರ್ಥಜಲಸ್ಯ ಚ ।
ತತ್ರಾಪ್ಯಶಕ್ತೋ ಯೋ ಮರ್ತ್ಯಸ್ತೇನ ನಿತ್ಯಂ ಹರೇರ್ಮುದಾ ॥ ೪೩ ॥
ಸ್ಮರಣಂ ಚ ಪ್ರಕರ್ತವ್ಯಂ ನಾಮ್ನಾ ನಿಯಮಪೂರ್ವಕಂ ।
ಅಖಂಡಿತಂ ತದಾ ತೇನ ಕಾರ್ತಿಕವ್ರತಜಂ ಫಲಂ ॥ ೪೪ ॥
ವಿಷ್ಣೋಃ ಶಿವಸ್ಯ ವಾ ಕುರ್ಯಾದಾಲಯೇ ಹರಿಜಾಗರಂ ।
ಶಿವವಿಷ್ಣೋರ್ಗೃಹಾಽಭಾವೇ ಸರ್ವದೇವಾಲಯೇಷ್ವಪಿ ॥ ೪೫ ॥

---

ಮಾಸವನ್ನು ಕಳೆಯುತ್ತಾನೆಯೊ ಅವನು ತಾನು ಹಿಂದೆ ಮಾಡಿದ ಪುಣ್ಯಗಳನ್ನೂ ನಾಶಪಡಿಸಿಕೊಳ್ಳುತ್ತಾನೆ. ಇದರಲ್ಲಿ ಸಂಶಯವಿಲ್ಲವು."

೪೦. ನಾರದನು ಕೇಳುತ್ತಾನೆ:— "ಎಲೈ ಪಿತಾಮಹನೇ! ಅಶಕ್ತನು ಉತ್ತಮವಾದ ಕಾರ್ತಿಕ ವ್ರತವನ್ನು ಮಾಡುವುದು ಹೇಗೆ? ಏನು ಮಾಡಿದರೆ ಆ ಫಲವನ್ನು ಪಡೆಯುತ್ತಾನೆ? ಅದನ್ನು ನನಗೆ ತಿಳಿಸು."

೪೧. ಬ್ರಹ್ಮನು ಹೇಳುತ್ತಾನೆ:—"ಮನುಷ್ಯನು ಅಶಕ್ತನಾಗಿರುವಾಗ ಹೀಗೆ ವ್ರತವನ್ನಾಚರಿಸಬೇಕು; ಬೇರೊಬ್ಬನಿಗೆ ಹಣ ಕೊಟ್ಟು ಅವನಿಂದ ಕಾರ್ತಿಕ ವ್ರತವನ್ನು ಮಾಡಿಸಬೇಕು.

೪೨–೪೪. ದಾನಸಂಕಲ್ಪಪೂರ್ವಕವಾಗಿ ಆತನಿಂದ ಪುಣ್ಯವನ್ನು ಪರಿಗ್ರಹಿಸಬೇಕು. ಎಲೈ ದೇವರ್ಷಿ ಶ್ರೇಷ್ಠನೇ! ಮರ್ತ್ಯನಾದವನು ಹಣ ಕೊಡುವುದಕ್ಕೂ ಅಶಕ್ತನಾಗಿದ್ದರೆ, ಆಗ ಆತನು ತೀರ್ಥಜಲವನ್ನು ಪಾನಮಾಡಬೇಕು. ಯಾವನು ಅದಕ್ಕೂ ಅಶಕ್ತನಾಗಿರುವನೋ ಅವನು ನಿತ್ಯವೂ ನಿಯಮಪೂರ್ವಕವಾಗಿ ಸಂತೋಷದಿಂದ ಹರಿನಾಮಸ್ಮರಣೆಯನ್ನು ಮಾಡುತ್ತಿರಬೇಕು. ಹಾಗೆ ಮಾಡಿದರೆ ಕಾರ್ತಿಕವ್ರತವನ್ನು ಮಾಡಿದ ಫಲವು ಆತನಿಗೆ ತಪ್ಪಿಹೋಗುವುದಿಲ್ಲವು.

೪೫. ವಿಷ್ಣುವಿನ ಅಥವಾ ಶಿವನ ಆಲಯದಲ್ಲಿ ಹರಿಭಜನಪೂರ್ವಕವಾಗಿ ಜಾಗರಣೆ ಮಾಡಬೇಕು. ಶಿವವಿಷ್ಣುಗಳ ಆಲಯವಿಲ್ಲದೆ ಹೋದಾಗ ಯಾವ ದೇವಾಲಯಗಳಲ್ಲಿಯಾದರೂ ಜಾಗರಣೆ ಮಾಡಬಹುದು.

ದುರ್ಗಾಟವ್ಯಾಂ ಸ್ಥಿತೋ ವಾಽಥ ಯದಿ ವಾಽಽಪದ್ಗತೋ ಭವೇತ್ ।
ಕುರ್ಯಾದಶ್ವತ್ಥಮೂಲೇ ತು ತುಲಸೀನಾಂ ವನೇಷ್ವಪಿ ॥ ೪೬ ॥
ವಿಷ್ಣುನಾಮಪ್ರಬಂಧಾನಾಂ ಗಾಯನಂ ವಿಷ್ಣುಸನ್ನಿಧೌ ।
ಗೋಸಹಸ್ರಪ್ರದಾನಸ್ಯ ಫಲಮಾಪ್ನೋತಿ ಮಾನವಃ ॥ ೪೭ ॥
ವಾದ್ಯಕೃತ್ಪುರುಷಶ್ಚಾಪಿ ವಾಜಪೇಯಫಲಂ ಲಭೇತ್ ।
ಸರ್ವತೀರ್ಥಾವಗಾಹೋತ್ಥಂ ನರ್ತಕಃ ಫಲಮಾಪ್ನುಯಾತ್ ॥ ೪೮ ॥
ಸರ್ವಮೇತಲ್ಲಭೇತ್ಪುಣ್ಯಂ ಏತೇಷಾಂ ದ್ರವ್ಯದಃ ಪುಮಾನ್ ।
ಶ್ರವಣಾದ್ದರ್ಶನಾದ್ವಾಪಿ ಷಡಂಶಂ ಫಲಮಾಪ್ನುಯಾತ್ ॥ ೪೯ ॥
ಆಪದ್ಗತೋ ಯದಾಪ್ಯಂಭೋ ನ ಲಭೇತ್ಕುತ್ರಚಿನ್ನರಃ ।
ವ್ಯಾಧಿತೋ ವಾಥವಾ ಕುರ್ಯಾತ್ ವಿಷ್ಣೋರ್ನಾಮ್ನಾಽಪಿ ಮಾರ್ಜನಂ ॥
ಉದ್ಯಾಪನವಿಧಿಂ ಕರ್ತುಂ ಅಶಕ್ತೋ ಯೋ ವ್ರತಸ್ಥಿತಃ ।
ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ವ್ರತಸಂಪೂರ್ತಿಹೇತವೇ ॥ ೫೧ ॥

---

೪೬. ದಟ್ಟವಾದ ಆಡವಿಯಲ್ಲಿ ಇದ್ದಾಗಲೂ ಈ ಕಾರ್ತಿಕವ್ರತವನ್ನು ನಡಸಬಹುದು. ಆಪತ್ತಿಗೆ ಗುರಿಯಾದವನಾದರೆ ಅಶ್ವತ್ಥಮೂಲದಲ್ಲಿಯೂ ತುಲಸಿಯ ವನದಲ್ಲಿಯೂ ವ್ರತವನ್ನು ಮಾಡಬೇಕು.

೪೭. ವಿಷ್ಣು ಸನ್ನಿಧಿಯಲ್ಲಿ ವಿಷ್ಣುನಾಮವನ್ನೊಳಗೊಂಡ ಪ್ರಬಂಧಗಳನ್ನು ಗಾನಮಾಡಬೇಕು. ಅದರಿಂದ ಮಾನವರು ಒಂದು ಸಾವಿರ ಗೋವುಗಳನ್ನು ದಾನ ಮಾಡಿದಷ್ಟು ಫಲವನ್ನು ಪಡೆಯುತ್ತಾರೆ.

೪೮. ವಾದ್ಯವನ್ನು ನುಡಿಸಿದಾತನು ವಾಜಪೇಯದ ಫಲವನ್ನು ಪಡೆಯುತ್ತಾನೆ. ನರ್ತಕನು ಸರ್ವ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವನ್ನು ಪಡೆಯುತ್ತಾನೆ.

೪೯. ಇವರೆಲ್ಲರಿಗೂ ಹಣವನ್ನು ಕೊಡುವ ಮನುಷ್ಯನು ಈ ಎಲ್ಲ ಕಾರ್ಯಗಳ ಪುಣ್ಯವನ್ನೂ ಪಡೆಯುತ್ತಾನೆ. ಇವನ್ನು ಕೇಳುವುದರಿಂದ ಅಥವಾ ನೋಡುವುದರಿಂದ ಮಾನವನು ಈ ವ್ರತದ ಆರನೆಯ ಒಂದು ಅಂಶದ ಫಲವನ್ನು ಪಡೆಯುತ್ತಾನೆ.

೫೦. ಆಪತ್ತಿಗೆ ಸಿಕ್ಕಿ ಎಲ್ಲಿಯೂ ನೀರು ದೊರೆಯದಿದ್ದರಾಗಲಿ, ವ್ಯಾಧಿಗೊಳಗಾಗಿದ್ದರಾಗಲಿ ವಿಪ್ರನು ಭಗವಂತನ ನಾಮಗಳನ್ನು ಉಚ್ಚರಿಸುತ್ತ ಮಾರ್ಜನೆ ಮಾಡಿಕೊಳ್ಳಬೇಕು.

೫೧. ಯಾವನು ವ್ರತಾನುಷ್ಠಾನಮಾಡಿ ಉದ್ಯಾಪನೆ ಮಾಡುವುದಕ್ಕೆ ಅಶಕ್ತನಾಗಿರುವನೋ ಅವನು ವ್ರತವು ಪೂರ್ತಿಯಾಗುವುದಕ್ಕಾಗಿ ವ್ರತಾನಂತರದಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

ಅಶಕ್ತೋ ದೀಪದಾನಾಯ ಪರದೀಪಂ ಪ್ರಬೋಧಯೇತ್ ।
ತಸ್ಯ ವಾ ರಕ್ಷಣಂ ಕುರ್ಯಾತ್ ವಾತಾದಿಭ್ಯಃ ಪ್ರಯತ್ನತಃ ॥ ೫೨ ॥
ಶ್ರೀವಿಷ್ಣೋಃ ಪೂಜನಾಭಾವೇ ತುಲಸೀಧಾತ್ರಿಪೂಜನಂ ।
ಸರ್ವಾಭಾವೇ ವ್ರತೀ ಕುರ್ಯಾತ್ ಬ್ರಾಹ್ಮಣಾನಾಂ ಗವಾಮಪಿ ।
ತಸ್ಯಾಪ್ಯಭಾವೇ ಮನಸಿ ವಿಷ್ಣೋರ್ನಾಮಾನುಕೀರ್ತನಂ ॥ ೫೩ ॥
ನಾರದ ಉವಾಚ :–
ಬ್ರಹ್ಮನ್ ಬ್ರೂಹಿವಿಶೇಷೇಣ ಧರ್ಮಾನ್ ಕಾರ್ತಿಕಸಂಭವಾನ್ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಕಾರ್ತಿಕವ್ರತಪ್ರಶಂಸಾ ವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೫೨. ದೀಪದಾನ ಮಾಡಲು ಅಶಕ್ತನಾದವನು ಪರರು ಹೊತ್ತಿಸಿಟ್ಟ ದೀಪವನ್ನು ಪ್ರಜ್ವಲಗೊಳಿಸಬೇಕು. ಅಥವಾ ಆ ದೀಪವು ಗಾಳಿ ಮೊದಲಾದವುಗಳಿಂದ ನಂದಿಹೋಗದಂತೆ ಅದನ್ನು ಪ್ರಯತ್ನಪೂರ್ವಕವಾಗಿ ರಕ್ಷಣೆಯನ್ನಾದರೂ ಮಾಡಬೇಕು.

೫೩. ಶ್ರೀ ವಿಷ್ಣುವಿನ ಪೂಜೆಗೆ ಅವಕಾಶವಿಲ್ಲದಾಗ ತುಲಸಿ ಅಥವಾ ನೆಲ್ಲಿಯ ಗಿಡವನ್ನು ಪೂಜಿಸಬೇಕು. ಯಾವುದಕ್ಕೂ ಅವಕಾಶವಿಲ್ಲದಾಗ ವ್ರತಧಾರಿಯು ಬ್ರಾಹ್ಮಣಪೂಜೆಯನ್ನಾಗಲಿ ಗೋಪೂಜೆಯನ್ನಾಗಲಿ ಮಾಡಬೇಕು. ಅದೂ ಆಗದಿದ್ದಲ್ಲಿ ಮನಸ್ಸಿನಲ್ಲಿ ವಿಷ್ಣುವಿನ ನಾಮಕೀರ್ತನೆಯನ್ನು ಮಾಡತಕ್ಕದ್ದು."

೫೪. ನಾರದನು ಕೇಳುತ್ತಾನೆ:—"ಎಲೈ ಬ್ರಹ್ಮದೇವನೇ, ಈ ಕಾರ್ತಿಕಮಾಸದಲ್ಲಿ ಸಂಭವಿಸುವ ಧರ್ಮಗಳನ್ನು ವಿಶೇಷವಾಗಿ ತಿಳಿಸಬೇಕು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಕಾರ್ತಿಕವ್ರತಪ್ರಶಂಸಾವರ್ಣನ"ವೆಂಬ ಒಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ಕಾರ್ತಿಕವ್ರತಧರ್ಮನಿರೂಪಣಂ

ಬ್ರಹ್ಮೋವಾಚ :—

ಅಥ ಕಾರ್ತಿಕಮಾಸಸ್ಯ ಧರ್ಮಾನ್ವಕ್ಷ್ಯಾಮಿ ನಾರದ ।
ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ಪರಾನ್ನಂ ಯಸ್ತು ವರ್ಜಯೇತ್ ॥೧॥
ಸ ತು ಮೋಕ್ಷಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಸರ್ವೇಷಾಮೇವ ಧರ್ಮಾಣಾಂ ಗುರುಪೂಜಾ ಪರಾ ಮತಾ ।
ಗುರುಶುಶ್ರೂಷಯಾ ಸರ್ವಂ ಪ್ರಾಪ್ನೋತಿ ಋಷಿಸತ್ತಮ ॥ ೨ ॥
ಗುರೌ ತುಷ್ಟೇ ಚ ತುಷ್ಟಾಸ್ಸ್ಯುಃ ದೇವಾಸ್ಸರ್ವೇ ಸವಾಸವಾಃ ।
ಗುರೌ ರುಷ್ಟೇ ಚ ರುಷ್ಟಾಸ್ಸ್ಯುಃ ದೇವಾಸ್ಸರ್ವೇ ಸವಾಸವಾಃ ॥ ೩ ॥
ಕಾರ್ತಿಕೇ ಮಾಸಿ ಸಂಪ್ರಾಪ್ತೇ ಕೃತ್ವಾ ಕರ್ಮಾಣಿ ಭೂರಿಶಃ ।
ಅಕೃತ್ವಾ ಗುರುಶುಶ್ರೂಷಾಂ ನರಕಾನೇವ ವಿಂದತಿ ॥ ೪ ॥
ಯತ್ಕಿಂಚಿದ್ವಾ ಸಮಾದಿಷ್ಟೋ ಗುರುಣಾ ತತ್ಸಮಾಚರೇತ್ ॥ ೫ ॥

---

## ಕನ್ನಡದ ಅನುವಾದ

### ಕಾರ್ತಿಕವ್ರತಧರ್ಮನಿರೂಪಣ

೧–೨. ಬ್ರಹ್ಮನು ಹೇಳುತ್ತಾನೆ:—"ನಾರದಾ! ಇನ್ನು ಕಾರ್ತಿಕ ಮಾಸದಲ್ಲಿ ಅನುಷ್ಠಿಸಬೇಕಾದ ಧರ್ಮಗಳನ್ನು ಹೇಳುತ್ತೇನೆ; ಕೇಳು. ಕಾರ್ತಿಕ ಮಾಸವು ಬಂದುದನ್ನು ಕಂಡು ಯಾವನು ಪರಾನ್ನವನ್ನು ವರ್ಜಿಸುತ್ತಾನೆಯೋ ಅವನು ಮೋಕ್ಷವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಬೇರೆ ವಿಚಾರಮಾಡಬೇಕಾದುದೇ ಇಲ್ಲವು. ಎಲ್ಲ ಧರ್ಮಗಳಲ್ಲಿಯೂ ಗುರುಪೂಜೆಯು ಸರ್ವೋತ್ಕೃಷ್ಟವಾದುದೆಂದು ಪ್ರಾಜ್ಞರ ಅಭಿಪ್ರಾಯವು. ಎಲೈ ಋಷಿಶ್ರೇಷ್ಠನೇ! ಗುರುಶುಶ್ರೂಷೆಯಿಂದ ಮಾನವನು ಸರ್ವವನ್ನೂ ಸಾಧಿಸಿಕೊಳ್ಳುತ್ತಾನೆ.

೩. ಗುರುವು ಸಂತುಷ್ಟನಾದರೆ ಇಂದ್ರನೊಡಗೂಡಿದ ಸಮಸ್ತ ದೇವತೆಗಳೂ ಸಂತುಷ್ಟರಾಗುತ್ತಾರೆ. ಗುರುವು ರೋಷಗೊಂಡುದಾದರೆ ಇಂದ್ರನೊಡಗೂಡಿದ ಸಮಸ್ತದೇವತೆಗಳೂ ರುಷ್ಟರಾಗುತ್ತಾರೆ.

೪–೫. ಒದಗಿಬಂದಿರುವ ಕಾರ್ತಿಕಮಾಸದಲ್ಲಿ ವ್ರತಿಯು ಅನೇಕವಾಗಿ ಕರ್ಮಗಳನ್ನು ಮಾಡಿದರೂ ಗುರುಶುಶ್ರೂಷೆ ಮಾಡದೆ ಇದ್ದರೆ ನರಕಗಳನ್ನೇ ಪಡೆಯುತ್ತಾನೆ. ಗುರುವು ಏನನ್ನಾದರೂ ಅಪ್ಪಣೆಮಾಡಿದರೆ ಅದನ್ನು ತಪ್ಪದೆ ಮಾಡಬೇಕು.

**ಆಜ್ಞಪ್ತೋ ಗುರುಣಾ ವಿಪ್ರ ನ ತದ್ವಾಕ್ಯಂ ತು ಲಂಘಯೇತ್ ।**
**ಯದಿ ದುಃಖಾದಿಕಂ ಪ್ರಾಪ್ತಂ ಗುರುಂ ತು ಶರಣಂ ವ್ರಜೇತ್ ॥ ೬ ॥**
**ಮಾತೃತ್ವೇ ಚ ಪಿತೃತ್ವೇ ಚ ಗುರುಮೇವ ಸ್ಮರೇದ್ಬುಧಃ ।**
**ಗುರೌ ನ ಪ್ರಾಪ್ಯತೇ ಯತ್ತನ್ನಾನ್ಯತ್ರಾಪಿ ಹಿ ಲಭ್ಯತೇ ॥ ೭ ॥**
**ಗುರುಪ್ರಸಾದಂ ಸರ್ವಂ ತು ಪ್ರಾಪ್ನೋತ್ಯೇವ ನ ಸಂಶಯಃ ।**
**ಮೇಧಾವೀ ಕಪಿಲಶ್ಚೈವ ಸುಮತಿಶ್ಚ ಮಹಾತಪಾಃ ।**
**ಗೌತಮಸ್ಯ ಗುರೋಸ್ಸಮ್ಯಕ್ ಸೇವಯಾಽಮರತಾಂ ಗತಾಃ ॥ ೮ ॥**

---

೬. ಗುರುವಿನಿಂದ ಆಜ್ಞಪ್ತನಾಗಿ ಶಿಷ್ಯನಾದವನು ಆ ವಾಕ್ಯವನ್ನೆಂದಿಗೂ ಮೀರಬಾರದು. ದುಃಖ ಮುಂತಾದ್ದುಂಟಾದರೆ ಆಗ ಗುರುವನ್ನೆ ಶರಣುಹೋಗಬೇಕು.

೭. ಬುದ್ಧಿವಂತನಾದವನು ಗುರುವನ್ನೆ ತಂದೆಯೆಂದೂ, ತಾಯಿಯೆಂದೂ ನೆನೆಯಬೇಕು. ಗುರುವಿನಲ್ಲಿ ಯಾವುದು ದೊರೆಯುವುದಿಲ್ಲವೋ ಅದು ಬೇರೆ ಕಡೆಯಲ್ಲೆಲ್ಲಿಯೂ ದೊರೆಯುವುದಿಲ್ಲವು.

೮. ಗುರುಪ್ರಸಾದದಿಂದ ಸರ್ವವನ್ನೂ ಪಡೆದೇ ಪಡೆಯಬಹುದು. ಇದರಲ್ಲಿ ಸಂಶಯವಿಲ್ಲ. ಮೇಧಾವಿ, ಕಪಿಲ, ಸುಮತಿ ಎಂಬ ಈ ಮೂವರು ಮಹಾತಪಸ್ವಿಗಳೂ ತಮ್ಮ ಗುರುವಾದ ಗೌತಮನಿಗೆ ಮಾಡಿದ ಉತ್ತಮ ಸೇವೆಯಿಂದ ಅಮರತ್ವವನ್ನು ಪಡೆದರು.*

---

*ಸಾರೋದ್ಧಾರದಲ್ಲಿ ನಿರೂಪಿತವಾಗಿರುವ ಕಾರ್ತಿಕ ಮಾಹಾತ್ಮ್ಯದಲ್ಲಿ ಈ ಕಥೆ ಪ್ರಸಿದ್ಧವಾಗಿದೆ: "ಹಿಂದೆ ಭಾಗೀರಥೀತೀರದ ಸಿದ್ಧಾಶ್ರಮದಲ್ಲಿ ಗೌತಮ ಋಷಿಯು ವಾಸವಾಗಿದ್ದನು. ಆತನಿಗೆ ಮೇಧಾವಿ, ಕಪಿಲ, ಸುಮತಿ ಎಂಬ ಮೂವರು ಶಿಷ್ಯರಿದ್ದರು. ಇವರು ಚಿಕ್ಕಂದಿನಿಂದಲೂ ಗೌತಮ ಋಷಿಯ ಶಿಷ್ಯರಾಗಿ ಅತನ ಸೇವೆಯನ್ನು ಮಾಡಿಕೊಂಡಿದ್ದರು.

ಒಂದು ದಿನ ಗೌತಮನು ಆ ಮೂವರನ್ನೂ ಕರೆದು, "ಎಲೈ ಶಿಷ್ಯರೇ! ನೀವು ಜಾಗ್ರತೆಯಾಗಿ ಕಾಡಿಗೆ ಹೋಗಿ ಸಮಿತ್ತು, ಫಲ ಮತ್ತು ಕುಶಗಳನ್ನು ತೆಗೆದುಕೊಂಡು ಬನ್ನಿರಿ" ಎಂದು ಅಪ್ಪಣೆಮಾಡಿದನು. ಅಂತೆಯೇ ಅವರು ಕಾಡಿಗೆ ಹೋಗಿ ಮಧ್ಯಾಹ್ನದ ವೇಳೆಗೆ ಸ್ವಲ್ಪ ಮಾತ್ರ ಸಮಿತ್ತು ಮೊದಲಾದುವನ್ನು ತೆಗೆದುಕೊಂಡುಬಂದರು. ಅದನ್ನು ಕಂಡು ಗೌತಮನಿಗೆ ಬಹಳ ಕೋಪಬಂದಿತು. ಅವನು ರೇಗಿ ಅವರನ್ನು ಕುರಿತು, "ಎಲಾ! ನೀವು ಬೆಳಿಗ್ಗೆಯೇ ಕಾಡಿಗೆ ಹೋದಿರಿ; ಈಗ ಮಧ್ಯಾಹ್ನವಾಗಿದೆ. ನೀವು ತಂದಿರುವ ಸಮಿತ್ತು ಹಣ್ಣು ಮುಂತಾದುವಾದರೋ ಇಷ್ಟು ಸ್ವಲ್ಪವಾಗಿದೆ. ಇಷ್ಟು ಹೊತ್ತೂ ಏನುಮಾಡುತ್ತಿದ್ದಿರಿ? ಎಲಾ ತುಂಟರಿರಾ! ನಿಮಗೇನಾದರೂ ಬದುಕಬೇಕೆಂಬ ಆಶೆಯಿರುವುದಾದರೆ ಪುನಃ ಕಾಡಿಗೆ ಹೋಗಿ ತುಂಬಾ ಹೂ ಹಣ್ಣುಗಳನ್ನು ತೆಗೆದುಕೊಂಡು ಬನ್ನಿರಿ. ಇಲ್ಲದಿದ್ದರೆ ನಿಮಗೆ ಉಳಿಗಾಲವೇ ಇರುವುದಿಲ್ಲ" ಎಂದನು.

ಮೂವರು ಶಿಷ್ಯರೂ, ಗುರುವಾದ ಗೌತಮನ ಆ ಮಾತನ್ನು ಕೇಳಿ ಹೆದರಿ ಹಸಿವು ಬಾಯಾರಿಕೆಗಳಿಂದ ಬೇಸತ್ತಿದ್ದರೂ ಪುನಃ ಕಾಡಿಗೆ ಹೋದರು. ಅಲ್ಲಿ ಕಾಡಿಂದ ಕಾಡಿಗೆ

**ತಸ್ಮಾತ್ಸರ್ವಪ್ರಯತ್ನೇನ ಕಾರ್ತಿಕೇ ವಿಷ್ಣುತತ್ಪರಃ ।**
**ಗುರುಸೇವಾಂ ಪ್ರಕುರ್ವೀತ ತತೋ ಮೋಕ್ಷಮವಾಪ್ನುಯಾತ್ ॥ ೯ ॥**
**ನರೇಭ್ಯೋ ವೈಷ್ಣವಂ ಧರ್ಮಂ ಯೋ ದದಾತಿ ದ್ವಿಜೋತ್ತಮಃ ।**
**ಸ ಸಾಗರಮಹೀದಾನೇ ತತ್ಪುಣ್ಯಂ ಲಭತೇ ಹಿ ಸಃ ॥ ೧೦ ॥**
**ತಿಲಧೇನುಂ ಹಿರಣ್ಯಂ ಚ ರಜತಂ ಭೂಮಿವಾಸಸೀ ।**
**ಗೋಪ್ರದಾನಾನಿ ದಾಸ್ಯಂತಿ ಸರ್ವಭಾವೇನ ಸುವ್ರತ ॥ ೧೧ ॥**

---

೯. ಆದ್ದರಿಂದ ಸರ್ವಪ್ರಯತ್ನದಿಂದಲೂ ಕಾರ್ತಿಕಮಾಸದಲ್ಲಿ ಗುರುತತ್ಪರನಾಗಿ ಗುರುಸೇವೆಯನ್ನು ಮಾಡಬೇಕು. ಅದರಿಂದ ಮೋಕ್ಷವನ್ನು ಪಡೆಯುತ್ತಾನೆ.

೧೦. ಯಾವ ದ್ವಿಜೋತ್ತಮನು ನರರಿಗೆ ವೈಷ್ಣವ ಧರ್ಮವನ್ನು ಕೊಡುತ್ತಾನೋ ಅವನು ಸಮುದ್ರಸಮೇತವಾದ ಸಮಸ್ತಭೂಮಂಡಲವನ್ನೂ ದಾನ ಮಾಡಿದ ಪುಣ್ಯವನ್ನು ಪಡೆಯುತ್ತಾನೆ.

೧೧. ಎಲೈ ಸುವ್ರತನೇ! ಕಾರ್ತಿಕ ಮಾಸದಲ್ಲಿ ಚಿನ್ನ, ಬೆಳ್ಳಿ, ಭೂಮಿ, ಬಟ್ಟೆ, ಗೋವು ಇವುಗಳನ್ನು ಸರ್ವಭಾವಗಳಿಂದಲೂ ದಾನಮಾಡುತ್ತಾರೆ.

---

ಅಲೆಯುತ್ತಿರುವಾಗಲೆ ಸಂಜೆಯಾಯಿತು. ಬಾಯಾರಿ ಬಳಲಿದ್ದುದರಿಂದ ಅವರು ಒಂದಾನೊಂದು ಸರೋವರದಲ್ಲಿಳಿದು ಸ್ನಾನ ಸಂಧ್ಯಾವಂದನೆಗಳನ್ನು ಮಾಡಿಕೊಂಡು ಹಣ್ಣು ಮೊದಲಾದುವನ್ನು ಹುಡುಕುತ್ತ ಭಯಂಕರವಾದ ಮತ್ತೊಂದು ಕಾಡನ್ನು ಸೇರಿದರು.

ಆಗಲೇ ರಾತ್ರಿಯೂ ಆಯಿತು. ಎತ್ತೆತ್ತಲೂ ಕಗ್ಗತ್ತಲೆಯಾಯಿತು. ಸಿಂಹ ಹುಲಿ ಮುಂತಾದ ಕ್ರೂರ ಮೃಗಗಳ ಆರ್ಭಟ ಕೇಳತೊಡಗಿತು. ಅವರಿಗೆ ಬಹಳ ಭಯವೂ ಆಯಿತು. "ಅಯ್ಯೋ! ಕತ್ತಲು ಕವಿಯಿತು. ಈ ಗೊಂಡಾರಣ್ಯದಲ್ಲಿ ಫಲಾದಿಗಳೂ ಕಾಣುವುದಿಲ್ಲ. ದಿಕ್ಕುಗಳೇ ತೋರದಾಗಿವೆ. ಏನನ್ನು ತಾನೆ ತೆಗೆದುಕೊಂಡು ಗುರುಗಳ ಬಳಿಗೆ ಹೋಗಲಾದೀತು? ನಮಗೆ ಇನ್ನೇನುಗತಿಯಾಗುವುದೋ!" ಎಂದು ಯೋಚಿಸುತ್ತಲೇ ಮುಂದು ಮುಂದಕ್ಕೆ ಹೋದರು. ಹಾಗೆಯೇ ನಡೆಯುತ್ತ ಕಣ್ಣುಕಾಣದೆ ಹುಲ್ಲು ಮುಚ್ಚಿದ ಬಾವಿಯೊಂದರಲ್ಲಿ ಬಿದ್ದುಬಿಟ್ಟರು. ಅಲ್ಲಿದ್ದ ವಿಷ ಸರ್ಪಗಳು ಅವರನ್ನು ಕಚ್ಚಿದುವು. ಒಡನೆಯೇ ಅವರು ಮೃತರಾದರು.

ಇತ್ತ ಗೌತಮನು ರಾತ್ರಿಯಾದರೂ ಶಿಷ್ಯರು ಆಶ್ರಮಕ್ಕೆ ಬಾರದಿರಲು, ಅವರನ್ನು ಪುನಃ ಕಾಡಿಗಟ್ಟಿದುದಕ್ಕೆ ತನ್ನನ್ನು ತಾನೇ ಹಳಿದುಕೊಂಡು ಬೆಳಗಾಗುತ್ತಲೇ ತನ್ನ ಹೆಂಡತಿಯೊಡನೆ ಕಾಡಿಗೆ ಬಂದು ಅವರನ್ನು ಹುಡುಕತೊಡಗಿದನು. ಮೂವರೂ ಬಾವಿಯಲ್ಲಿ ಬಿದ್ದು ಮೃತರಾಗಿದ್ದುದು ಅವನಿಗೆ ಸ್ವಲ್ಪಹೊತ್ತಿನಲ್ಲಿಯೇ ಗೊತ್ತಾಯಿತು. ಅವನಿಗೆ ಹಿಡಿಸಲಾರದಷ್ಟು ದುಃಖವಾಯಿತು. ಅವರಿಗಾಗಿ ಬಹಳವಾಗಿ ಪ್ರಲಪಿಸಿದನು. ಅವನ ಪ್ರಲಾಪವನ್ನು ಕೇಳಿ ಅಲ್ಲಿದ್ದ ಸರ್ಪಗಳು ಅವನಲ್ಲಿಗೆ ಬಂದು, "ಎಲೈ ಮುನಿಯೆ! ಇವರು ತಮ್ಮ ಪಾಪಗಳಿಂದ ತಾವೇ ಮೃತರಾಗಿದ್ದಾರೆ. ಸುಮ್ಮನೆ ಇವರಿಗೇಕೆ ಅಳುವೆ! ಸಮಾಧಾನ ತಂದುಕೊ" ಎಂದುವು.

**ಸರ್ವೇಷಾಮೇವ ದಾನಾನಾಂ ಕನ್ಯಾದಾನಂ ವಿಶಿಷ್ಯತೇ ।**
**ಸಹಸ್ರಮೇವ ಧೇನೂನಾಂ ಶತಂ ಚಾನಡುಹಾಂ ಸಮಂ ॥ ೧೨ ॥**
**ದಶಾಽನಡುತ್ಸಮಂ ಯಾನಂ ದಶಯಾನಸಮೋ ಹಯಃ ।**
**ಹಯದಾನಸಹಸ್ರೇಭ್ಯೋ ಗಜದಾನಂ ವಿಶಿಷ್ಯತೇ ॥ ೧೩ ॥**
**ಗಜದಾನಸಹಸ್ರಾಣಾಂ ಸ್ವರ್ಣದಾನಂ ಚ ತತ್ಸಮಂ ।**
**ಸ್ವರ್ಣದಾನಸಹಸ್ರಾಣಾಂ ವಿದ್ಯಾದಾನಂ ಚ ತತ್ಸಮಂ ॥ ೧೪ ॥**

---

೧೨. ಸರ್ವದಾನಗಳಲ್ಲಿಯೂ ಕನ್ಯಾದಾನವು ಬಹು ವಿಶೇಷವಾದುದು. ಸಹಸ್ರ ಗೋವುಗಳ ದಾನಕ್ಕೆ ನೂರು ಗೂಳಿಗಳ ದಾನವು ಸಮವಾಗುವುದು.

೧೩. ಹತ್ತು ವೃಷಭಗಳ ದಾನವು ಯಾನದಾನಕ್ಕೆ ಸಮವಾಗುವುದು. ಹತ್ತುಯಾನಕ್ಕೆ ಒಂದು ಕದುರೆಯ ದಾನವು ಸಮಾನ. ಸಾವಿರ ಕುದುರೆಗಳ ದಾನಕ್ಕಿಂತಲೂ ಗಜದಾನವು ವಿಶೇಷವಾಗಿರುತ್ತದೆ.

೧೪. ಸಾವಿರ ಗಜದಾನಗಳಿಗೆ ಸ್ವರ್ಣದಾನವು ಸಮವಾಗುವುದು. ಸ್ವರ್ಣ ದಾನಗಳ ಸಹಸ್ರಕ್ಕೆ ವಿದ್ಯಾದಾನವು ಸಮವಾಗಿರುವುದು.

---

ಗೌತಮನು, “ಅಯ್ಯೋ ಪಾಪ! ಇವರು ಕೆಲಸದಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಯಾವಾಗಲೂ ಪಾಪವನ್ನೇ ಮಾಡಿದವರಲ್ಲ. ನೀವು ಲೋಕನಿಷ್ಠುರರು. ಇವರನ್ನು ಅನ್ಯಾಯವಾಗಿ ಕಡಿದು ಕೊಂದಿರಿ. ಇವರು ಅಕಾಲಮೃತ್ಯುವಿಗೆ ತುತ್ತಾಗಿದ್ದಾರೆ. ಈ ದೋಷವು ನಿಮ್ಮದೂ ಅಲ್ಲ. ಇವರದೂ ಅಲ್ಲ. ಇವರಿಗೆ ಸಾವು ತಂದವನು ಯಮನು. ಈಗ ನಾನು ಅವನನ್ನೇ ಶಪಿಸುತ್ತೇನೆ” ಎಂದನು. ಯಮನನ್ನು ಶಪಿಸುವುದಕ್ಕೆ ಕೈಗೆ ನೀರನ್ನು ತೆಗೆದುಕೊಂಡನು. ಕೂಡಲೇ ಯಮನು ಅಲ್ಲಿಗೆ ಬಂದು, “ಗೌತಮ! ಇವರಿಗಿದು ಅಕಾಲಮರಣವಲ್ಲ. ಸರ್ಪದಂಶನವು ನಿಮಿತ್ತವಾಗಿ ಇವರಿಗೆ ಕಾಲಮೃತ್ಯುವೇ ಬಂದಿರುವುದು. ಇದರಲ್ಲಿ ನನ್ನ ಅಪರಾಧವೇನೂ ಇರುವುದಿಲ್ಲ. ಯೋಚಿಸಿ ಶಾಪವನ್ನು ಕೊಡು” ಎಂದು ಹೇಳಿದನು.

ಗೌತಮನಿಗೆ ಆಶ್ಚರ್ಯವಾಯಿತು. ಆದರೂ ಶಿಷ್ಯರು ಆ ರೀತಿ ಮಡಿದುದು ಅವನಿಗೆ ಹಿತವಾಗಲಿಲ್ಲ. ಅವರ ಅಗಲಿಕೆ ಅವನಿಗೆ ಬಹಳ ಸಂಕಟವನ್ನು ತಂದಿತು. “ಹಾಗಾದರೆ ನಾನು ಸಂಪಾದಿಸಿರುವ ಪುಣ್ಯದಿಂದಲೂ, ನಿನ್ನ ಕೃಪೆಯಿಂದಲೂ ಇವರು ಮತ್ತೆ ಬದುಕಲಿ. ಇವರನ್ನುಳಿದು ನನ್ನ ಬಾಳು ಹಸನಾಗುವುದಿಲ್ಲ” ಎಂದು ಕೇಳಿಕೊಂಡನು. ಅದಕ್ಕೆ ಯಮನು ಒಪ್ಪಿದನು. ಒಡನೆಯೇ ಮೇಧಾವಿ, ಕಪಿಲ, ಸುಮತಿಗಳು ಮೂವರೂ ಎದ್ದುಬಂದು ಗುರುವಾದ ಗೌತಮನಿಗೂ, ಯಮಧರ್ಮನಿಗೂ ನಮಸ್ಕಾರ ಮಾಡಿದರು. ಗೌತಮನು ಅವರ ಗುರುಭಕ್ತಿಗೆ ಮೆಚ್ಚಿ ‘ಸಮಸ್ತ ವಿದ್ಯೆಗಳೂ ನಿಮಗೆ ಫಲಿಸಲಿ’ ಎಂದು ವರಕೊಟ್ಟನು. ಆಗಲೇ ಇಂದ್ರನೂ ಅಲ್ಲಿ ಪ್ರತ್ಯಕ್ಷನಾಗಿ, “ಅಯ್ಯಾ ನೀವು ಮೂವರೂ ಗುರುಪೂಜಾಮಹಿಮೆಯಿಂದ ಹದಿನಾಲ್ಕುಲೋಕಗಳನ್ನು ಗೆದ್ದಿರಿ. ಅದರ ಫಲವಾಗಿ ನೀವು ನಿಮ್ಮ ದೇಹದೊಡನೆಯೇ ನನ್ನ ಲೋಕಕ್ಕೆ ಬನ್ನಿರಿ” ಎಂದು ಆ ಮೂವರಿಗೂ ಹೇಳಿದನು. ಅಂತೆಯೆ ಅವರು ವಿಮಾನದಲ್ಲಿ ಕುಳಿತು ಇಂದ್ರಲೋಕಕ್ಕೆ ತೆರಳಿದರು. ಯಮನು ತನ್ನ ಲೋಕಕ್ಕೆ ಹೋದನು. ಗೌತಮನು ಆಶ್ರಮಕ್ಕೆ ಹಿಂತಿರುಗಿದನು.

ವಿದ್ಯಾದಾನಾತ್ಕೋಟಿಗುಣಂ ಭೂಮಿದಾನಂ ವಿಶಿಷ್ಯತೇ ।
ಭೂಮಿದಾನಸಹಸ್ರೇಣ ಗೋಪ್ರದಾನಂ ವಿಶಿಷ್ಯತೇ ॥ ೧೫ ॥
ಗೋಪ್ರದಾನಸಹಸ್ರೇಭ್ಯೋ ಹ್ಯನ್ನದಾನಂ ವಿಶಿಷ್ಯತೇ ।
ಅನ್ನಾಧಾರಮಿದಂ ಪ್ರೋಕ್ತಂ ತಸ್ಮಾದ್ದೇಯಂ ತು ಕಾರ್ತಿಕೇ ॥ ೧೬ ॥
ಪರಾನ್ನವರ್ಜನಾದೇವ ಲಭೇಚ್ಚಾಂದ್ರಾಯಣಂ ಫಲಂ ।
ದಿನೇದಿನೇಽತಿಕೃಚ್ಛ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೭ ॥
ಕಾರ್ತಿಕೇ ವರ್ಜಯೇನ್ಮಾಂಸಂ ಸಂಧಾನಂ ಚ ವಿಶೇಷತಃ ।
ರಾಕ್ಷಸೀಂ ಯೋನಿಮಾಪ್ನೋತಿ ಸಕೃನ್ಮಾಂಸಸ್ಯ ಭಕ್ಷಣಾತ್ ॥ ೧೮ ॥
ಪ್ರವೃತ್ತಾನಾಂ ತು ಭಕ್ಷ್ಯಾಣಾಂ ಕಾರ್ತಿಕೇ ನಿಯಮೇ ಕೃತೇ ।
ಅವಶ್ಯಂ ವಿಷ್ಣುರೂಪತ್ವಂ ಪ್ರಾಪ್ಯತೇ ಮೋಕ್ಷದಂ ಪದಂ ॥ ೧೯ ॥
ಬ್ರಾಹ್ಮಣೇಭ್ಯೋ ಮಹೀಂ ದತ್ವಾ ಗ್ರಹಣೇ ಸೂರ್ಯಚಂದ್ರಯೋಃ ।
ಯತ್ಫಲಂ ಲಭತೇ ವತ್ಸ ತತ್ಫಲಂ ಭೂಮಿಶಾಯಿನಃ ॥ ೨೦ ॥
ಭೋಜನಂ ದ್ವಿಜದಂಪತ್ಯೋಃ ಪೂಜನಂ ಚ ವಿಲೇಪನೈಃ ।
ಕಂಬಲಾನಿ ಚ ರತ್ನಾನಿ ವಾಸಾಂಸಿ ವಿವಿಧಾನಿ ಚ ॥ ೨೧ ॥

---

೧೫. ವಿದ್ಯಾದಾನಕ್ಕಿಂತಲೂ ಭೂಮಿದಾನವು ಕೋಟಿಪಾಲು ಹೆಚ್ಚಿನದು. ಸಹಸ್ರಭೂಮಿದಾನಕ್ಕಿಂತಲೂ ಗೋದಾನವು ಶ್ರೇಷ್ಠವಾಗಿರುವುದು.

೧೬–೧೭. ಗೋದಾನ ಸಹಸ್ರಗಳಿಗಿಂತಲೂ ಅನ್ನದಾನವು ಶ್ರೇಷ್ಠವು. ಈ ಎಲ್ಲಕ್ಕೂ ಅನ್ನವೇ ಆಧಾರವೆಂದು ಹೇಳಿದೆ. ಆದ್ದರಿಂದ ಕಾರ್ತಿಕಮಾಸದಲ್ಲಿ ಅನ್ನದಾನ ಮಾಡಬೇಕು. ಪರಾನ್ನವರ್ಜನದಿಂದಲೇ ಮಾನವನು ಚಾಂದ್ರಾಯಣ ವ್ರತವನ್ನು ಮಾಡಿದ ಫಲವನ್ನು ಪಡೆಯುತ್ತಾನೆ; ದಿನದಿನವೂ ಅತಿಕೃಚ್ಛ್ರ ವ್ರತವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

೧೮. ಕಾರ್ತಿಕಮಾಸದಲ್ಲಿ ಮಾಂಸವನ್ನು ಬಿಡಬೇಕು. ಮದ್ಯೋತ್ಪಾದನೆಯನ್ನು ವಿಶೇಷವಾಗಿ ತೊರೆಯಬೇಕು. ಆಗ ಒಂದು ಸಲ ಮಾಂಸ ಭಕ್ಷಣ ಮಾಡುವುದರಿಂದ ರಾಕ್ಷಸಜನ್ಮವನ್ನು ಪಡೆಯುತ್ತಾನೆ.

೧೯. ನಿಷಿದ್ಧವಲ್ಲದ ಆಹಾರ ವಸ್ತುಗಳ ವಿಷಯದಲ್ಲಿ ಕಾರ್ತಿಕಮಾಸದಲ್ಲಿ ನಿಯಮ ಮಾಡಿಕೊಂಡ ಪಕ್ಷದಲ್ಲಿ ವಿಷ್ಣುಸಾರೂಪ್ಯವೂ, ಮೋಕ್ಷದಾಯಕವಾದ ಪದವಿಯೂ ಅವಶ್ಯವಾಗಿ ದೊರೆಯುತ್ತದೆ.

೨೦. ವತ್ಸಾ! ಸೂರ್ಯಚಂದ್ರಗ್ರಹಣಗಳ ಕಾಲದಲ್ಲಿ ಬ್ರಾಹ್ಮಣರಿಗೆ ಭೂಮಿಯನ್ನು ದಾನಮಾಡಿದರೆ ಯಾವ ಫಲವು ಬರುವುದೋ, ಆ ಫಲವು ನೆಲದ ಮೇಲೆ ಮಲಗುವವನಿಗೆ ದೊರೆಯುವುದು.

೨೧–೨೨. ಎಲೈ ಸುವ್ರತನೇ! ದ್ವಿಜದಂಪತಿಗಳಿಗೆ ಭೋಜನಮಾಡಿಸ

ತೂಲಿಕಾಶ್ಚ ಪ್ರಧಾತವ್ಯಾಃ ಪ್ರಚ್ಛಾದನಪಟ್ಟೈಸ್ಸಹ ।
ಉಪಾನಹಾವಾತಪತ್ರಂ ಕಾರ್ತಿಕೇ ದೇಹಿ ಸುವ್ರತ ॥ ೨೨ ॥
ಕಾರ್ತಿಕೇ ಕ್ಷಿತಿಶಾಯಿಯೊ ಚ ಹನ್ಯಾತ್ಪಾಪಂ ಯುಗಾರ್ಜಿತಂ ।
ಜಾಗರಂ ಕಾರ್ತಿಕೇ ಮಾಸಿ ಯಃ ಕರೋತ್ಯರುಣೋದಯೇ ॥ ೨೩ ॥
ದಾಮೋದರಾಗ್ರೇ ದೇವರ್ಷೇ ಗೋಸಹಸ್ರಫಲಂ ಲಭೇತ್ ।
ನದೀಸ್ನಾನಂ ಕಥಾ ವಿಷ್ಣೋಃ ವೈಷ್ಣವಾನಾಂ ಚ ದರ್ಶನಂ ॥ ೨೪ ॥
ನ ಭವೇತ್ಕಾರ್ತಿಕೇ ಯಸ್ಯ ಹರೇತ್ಪುಣ್ಯಂ ದಶಾಬ್ದಿಕಂ ।
ಪುಷ್ಕರಂ ಯಸ್ಸ್ಮರೇತ್ಪ್ರಾಜ್ಞಃ ಕರ್ಮಣಾ ಮನಸಾ ಗಿರಾ ॥ ೨೫ ॥
ಕಾರ್ತಿಕೇ ಮುನಿಶಾರ್ದೂಲ ಲಕ್ಷಕೋಟಿಗುಣಂ ಭವೇತ್ ।
ಪ್ರಯಾಗೇ ಮಾಘಮಾಸೇ ತು ಪುಷ್ಕರಂ ಕಾರ್ತಿಕೇ ತಥಾ ॥ ೨೬ ॥
ಅವಂತೀ ಮಾಧವೇ ಮಾಸಿ ಹನ್ಯಾತ್ಪಾಪಂ ಯುಗಾರ್ಜಿತಂ ।
ಧನ್ಯಾಸ್ತೇ ಮಾನವಾ ಲೋಕೇ ಕಲಿಕಾಲೇ ವಿಶೇಷತಃ ॥ ೨೭ ॥
ಯೇ ಕುರ್ವಂತಿ ನರಾ ನಿತ್ಯಂ ಪ್ರೀತ್ಯರ್ಥಂ ಹರಿಪೂಜನಂ ।
ತಾರಿತಾಸ್ತೈಶ್ಚ ಪಿತರೋ ನರಕಾಚ್ಚ ನ ಸಂಶಯಃ ॥ ೨೮ ॥

---

ಬೇಕು. ವಿಲೇಪನಗಳಿಂದ ಪೂಜೆಮಾಡಬೇಕು. ಕಂಬಳಿಗಳನ್ನೂ ರತ್ನಗಳನ್ನೂ ಬಗೆಬಗೆಯ ಬಟ್ಟೆಗಳನ್ನೂ ಹೊದೆಯುವ ಬಟ್ಟೆಗಳೊಡನೆ ಮೆತ್ತೆಯ ಹಾಸಿಗೆಗಳನ್ನೂ ಕೊಡಬೇಕು. ಪಾದರಕ್ಷೆಗಳನ್ನೂ, ಛತ್ರಿಯನ್ನೂ ಕಾರ್ತಿಕಮಾಸದಲ್ಲಿ ದಾನಮಾಡು.

೨೩–೨೮. ನೆಲದ ಮೇಲೆ ಮಲಗುವವನು ಯುಗಯುಗಗಳಲ್ಲಿಯೂ ಸಂಪಾದಿಸಿದ ಪಾಪವನ್ನು ನಾಶಪಡಿಸಿಕೊಳ್ಳುತ್ತಾನೆ. ಎಲೈ ದೇವರ್ಷಿಯೇ! ಯಾವನು ಕಾರ್ತಿಕಮಾಸದಲ್ಲಿ ಅರುಣೋದಯ ಕಾಲದಲ್ಲಿ ದಾಮೋದರನೆದುರಿಗೆ ಜಾಗರಣೆಮಾಡುತ್ತಾನೊ ಅವನು ಗೋಸಹಸ್ರವನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ. ನದೀಸ್ನಾನ, ವಿಷ್ಣುವಿನ ಕಥೆ, ವೈಷ್ಣವರ ದರ್ಶನ—ಇವು ಯಾರಿಗೆ ಉಂಟಾಗುವುದಿಲ್ಲವೊ ಅವನಿಗೆ ಹತ್ತು ವರ್ಷದಲ್ಲಿ ಗಳಿಸಿದ ಪುಣ್ಯವು ನಾಶವಾಗುತ್ತದೆ. ಯಾವ ಪ್ರಾಜ್ಞನು ಕಾರ್ತಿಕಮಾಸದಲ್ಲಿ ಕಾರ್ಯ, ಮನಸ್ಸು ಮತ್ತು ಮಾತುಗಳಿಂದ ಪುಷ್ಕರಕ್ಷೇತ್ರವನ್ನು ಸ್ಮರಿಸುತ್ತಾನೆಯೋ ಅವನಿಗೆ, ಆ ಪುಣ್ಯವು ಲಕ್ಷಕೋಟಿಯಷ್ಟು ಹೆಚ್ಚಾಗುವುದು. ಮಾಘಮಾಸದಲ್ಲಿ ಪ್ರಯಾಗ, ಕಾರ್ತಿಕದಲ್ಲಿ ಪುಷ್ಕರಕ್ಷೇತ್ರ, ಚೈತ್ರಮಾಸದಲ್ಲಿ ಅವಂತಿ,—ಇವು ಯುಗಯುಗಗಳಲ್ಲಿಯೂ ಸಂಪಾದಿಸಿರುವ ಪಾಪವನ್ನು ನಾಶಮಾಡುತ್ತವೆ. ಯಾವ ಮನುಷ್ಯರು ಭಗವತ್ಪ್ರೀತಿಗಾಗಿ ನಿತ್ಯವೂ ಹರಿಪೂಜೆಯನ್ನು ಮಾಡುತ್ತಾರೆಯೊ ಅವರೇ ಈ ಲೋಕದಲ್ಲಿ ಧನ್ಯರು. ಕಲಿಕಾಲದಲ್ಲಂತೂ ಅಂತಹವರು ವಿಶೇಷ ಧನ್ಯರು.

ಕ್ಷೀರಾದಿಸ್ನಪನಂ ವಿಷ್ಣೋಃ ಕ್ರಿಯತೇ ಪಿತೃಕಾರಣಾತ್ ।
ಕಲ್ಪಕೋಟಿಂ ದಿವಂ ಪ್ರಾಪ್ಯ ವಸಂತಿ ತ್ರಿದಿವೈಸ್ಸಹ ॥ ೨೯ ॥
ಕಾರ್ತಿಕೇ ನಾರ್ಚಿತೋ ಯೈಸ್ತು ಕೃಷ್ಣಸ್ತು ಕಮಲೇಕ್ಷಣಃ ।
ಜನ್ಮಕೋಟಿಷು ವಿಪ್ರೇಂದ್ರ ನ ತೇಷಾಂ ಕಮಲಾ ಗೃಹೇ ॥ ೩೦ ॥
ಅಹೋ ಮುಷ್ಟಾ ವಿನಷ್ಟಾಸ್ತೇ ಪತಿತಾಃ ಕಲಿಕಂದರೇ ।
ಯೈರ್ನಾರ್ಚಿತೋ ಹರಿರ್ಭಕ್ತ್ಯಾ ಕಮಲೈರಸಿತೈಸ್ಸಿತೈಃ ॥ ೩೧ ॥
ಪದ್ಮೇನೈಕೇನ ದೇವೇಶಂ ಯೋಽರ್ಚಯೇತ್ಕಮಲಾಪತಿಂ ।
ವರ್ಷಾಯುತಸಹಸ್ರಸ್ಯ ಪಾಪಸ್ಯ ಕುರುತೇ ಕ್ಷಯಂ ।
ಪುಷ್ಕರಾರ್ಚನಯೋಗೇನ ಶ್ವೇತೋ ಮುಕ್ತಿಮವಾಪ ಹ ॥ ೩೨ ॥

---

ಅವರು ತಮ್ಮ ಪಿತೃಗಳನ್ನು ಕೂಡ ನರಕಕ್ಕೆ ಬೀಳದಂತೆ ದಾಟಿಸುತ್ತಾರೆ. ಇದರಲ್ಲಿ ಸಂಶಯವಿಲ್ಲವು.

೨೯. ಪಿತೃಗಳಿಗೋಸ್ಕರವಾಗಿ ವಿಷ್ಣುವಿಗೆ ಕ್ಷೀರವೇ ಮೊದಲಾದವುಗಳಿಂದ ಅಭಿಷೇಕ ಮಾಡಿದಲ್ಲಿ ಮಾನವರು ಸ್ವರ್ಗವನ್ನು ಪಡೆದು ಅಲ್ಲಿ ದೇವತೆಗಳೊಡನೆ ಕಲ್ಪಕೋಟಿಕಾಲ ವಾಸಿಸುತ್ತಾರೆ.

೩೦. ಎಲೈ ವಿಪ್ರೇಂದ್ರನೇ! ಯಾರಿಂದ ಕಮಲನಯನನಾದ ವಿಷ್ಣುವು ಕಾರ್ತಿಕಮಾಸದಲ್ಲಿ ಅರ್ಚಿಸಲ್ಪಡುವುದಿಲ್ಲವೋ ಅವರಿಗೆ ಕೀಟಗಳ ಅನೇಕ ಕೋಟಿ ಜನ್ಮಗಳುಂಟಾಗುತ್ತವೆ. ಅವರ ಮನೆಯಲ್ಲಿ ಲಕ್ಷ್ಮಿಯು ನೆಲಸುವುದಿಲ್ಲ.

೩೧. ಯಾರು ಭಕ್ತಿಯಿಂದ ಹರಿಯನ್ನು ಕನ್ನೈದಿಲೆ ಬೆಳುನೈದಿಲೆಗಳಿಂದ ಅರ್ಚಿಸುವುದಿಲ್ಲವೋ ಅವರು ಕದಿಯಲ್ಪಟ್ಟವರೂ ನಾಶಹೊಂದಿದವರೂ ಕಲಿ ಕಂದರದಲ್ಲಿ ಬಿದ್ದವರೂ ಆಗುತ್ತಾರೆ.

೩೨. ಯಾವನು ಕಮಲಾಪತಿಯಾದ ದೇವೇಶನನ್ನು ಒಂದು ಪದ್ಮದಿಂದ ಲಾದರೂ ಅರ್ಚಿಸುತ್ತಾನೆಯೋ ಅವನು ಅಯುತ ಸಹಸ್ರವರ್ಷಗಳ ಕಾಲ ಸಂಪಾದಿಸಿದ ಪಾಪವನ್ನೂ ನಾಶಮಾಡುತ್ತಾನೆ. ಕಮಲಪುಷ್ಪಗಳಿಂದ ಅರ್ಚನೆ ಮಾಡಿದ್ದರಿಂದ ಶ್ವೇತನು ಮುಕ್ತಿಯನ್ನು ಪಡೆದನು.*

---

*** ಬ್ರಾಹ್ಮಪುರಾಣದಲ್ಲಿ ಶ್ವೇತರಾಜನ ಕಥೆ:—ಪೂರ್ವದಲ್ಲಿ ಕಾಶ್ಮೀರ ದೇಶದಲ್ಲಿ ಶ್ವೇತನೆಂಬ ರಾಜನೊಬ್ಬನಿದ್ದನು. ಇವನು ಅನೇಕ ಪುಣ್ಯಕಾರ್ಯಗಳನ್ನು ಮಾಡುತ್ತ ಮಹಾವೈಷ್ಣವನೆನಿಸಿ ರಾಜ್ಯವಾಳುತ್ತಿದ್ದು ಮಗನಿಗೆ ರಾಜ್ಯಾಭಿಷೇಕಮಾಡಿ ತಪವನ್ನೆಸಗಲು ಪುಷ್ಕರಕ್ಷೇತ್ರಕ್ಕೆ ಬಂದನು. ಅವನು ತೀವ್ರವಾದ ತಪಸ್ಸಿನಿಂದ ಶರೀರವನ್ನು ಶೋಷಿಸುತ್ತ, ಶ್ರೀಮನ್ನಾರಾಯಣನನ್ನು ಸ್ತುತಿಸುತ್ತಿರಲು ಒಂದು ದಿನ ಅವನ ಮೈಯಿಂದ ಓರ್ವ ಮಹಾ ಭಯಂಕರನಾದ ಪುರುಷನು ಹೊರಬಂದು ಎದುರುನಿಂತನು. ಅವನನ್ನು ಕಂಡು ಶ್ವೇತನು, "ಅಯ್ಯಾ! ನೀನು ಯಾರು? ಎಲ್ಲಿಂದ ಬಂದೆ?" ಎಂದು ಕೇಳಿದನು.**

**ಅಪರಾಧಸಹಸ್ರಾಣಿ ತಥಾ ಸಪ್ತಶತಾನಿ ಚ ।**
**ಪದ್ಮೇನೈಕೇನ ದೇವೇಶಃ ಕ್ಷಮತೇ ಪ್ರಣತೋಽರ್ಚಿತಃ ॥ ೩೩ ॥**
**ತುಲಸೀಪತ್ರಲಕ್ಷೇಣ ಕಾರ್ತಿಕೇ ಯೋಽರ್ಚಯೇದ್ಧರಿಂ ।**
**ಪತ್ರೇ ಪತ್ರೇ ಮುನಿಶ್ರೇಷ್ಠ ಮೌಕ್ತಿಕಂ ಲಭತೇ ಫಲಂ ॥ ೩೪ ॥**

---

೩೩. ನಮಸ್ಕಾರಪೂರ್ವಕವಾಗಿ ಒಂದು ಪದ್ಮದಿಂದ ದೇವೇಶನನ್ನು ಅರ್ಚಿಸಿದರೆ, ಆತನು ಸುಪ್ರೀತನಾಗಿ ಅಪರಾಧ ಸಹಸ್ರಗಳನ್ನೇ ಅಲ್ಲದೆ, ಇನ್ನೂ ಏಳುನೂರು ಅಪರಾಧಗಳನ್ನು ಕ್ಷಮಿಸುತ್ತಾನೆ.

೩೪. ಎಲೈ ಮುನಿಶ್ರೇಷ್ಠನೇ ಕಾರ್ತಿಕಮಾಸದಲ್ಲಿ ಯಾವನು ಲಕ್ಷತುಲಸೀ ಪತ್ರಗಳಿಂದ ಹರಿಯನ್ನು ಅರ್ಚಿಸುತ್ತಾನೆಯೋ ಅವನು ಪತ್ರಪತ್ರಕ್ಕೂ ಮುತ್ತಿನಷ್ಟು ಪುಣ್ಯಫಲವನ್ನು ಪಡೆಯುತ್ತಾನೆ.

---

ಆ ಭಯಂಕರ ವ್ಯಕ್ತಿಯು ಒಬ್ಬ ಬೇಡರವನಾಗಿದ್ದನು. ಅವನು ಹೇಳಿದ್ದನು "ಮಹಾರಾಜ! ಹಿಂದಣ ಜನ್ಮದಲ್ಲಿ ನೀನು ಜನಸ್ಥಾನದ ದೊರೆಯಾಗಿದ್ದೆ. ನೀನು ಆಗ ಬೇಟೆಯಲ್ಲಿ ಮೃಗರೂಪವನ್ನು ಧರಿಸಿದ್ದ ಒಬ್ಬ ಮುನಿಯನ್ನು ಕೊಂದೆ. ಆದರಿಂದ ಬ್ರಹ್ಮಹತ್ಯೆಯು ಹುಟ್ಟಿತು. ಬಳಿಕ ನೀನು ಒಂದು ರಾತ್ರಿ ಆ ಬ್ರಹ್ಮಹತ್ಯೆಯ ಭಯದಿಂದ ಬಿಡುಗಡೆ ಹೊಂದುವೆನೆಂದು ಬಗೆದು ಕಾರ್ತಿಕಮಾಸದಲ್ಲಿ ವಿಷ್ಣುವನ್ನು ಪರಮ ಭಕ್ತಿಯಿಂದ ಕಮಲಗಳಿಂದ ಪೂಜಿಸಿ ಸೇವಿಸಿದೆ. ಆ ಸಮಯದಲ್ಲಿಯೇ ನಿನಗೆ ಉದರ ವ್ಯಾಧಿಯು ಬಂದು ಪ್ರಾಣಗಳು ಕಂಠಗತಗಳಾಗಿ ನಿನ್ನ ಹೆಂಡತಿಯಾದ ನಾರಾಯಣಿ ಎಂಬಾಕೆಯನ್ನೇ ಸ್ಮರಿಸುತ್ತ, ಮೃತಿಯೊಂದಿದೆ. ಆ ಪುಣ್ಯದ ಫಲವಾಗಿ ನೀನು ಸ್ವರ್ಗವನ್ನು ಸೇರಿದೆ. ನಾನೂ ಸಹ ನನ್ನ ತೇಜಸ್ಸಿನಿಂದ ಒಂದು ಕಲ್ಪಕಾಲ ನಿನ್ನೊಡನೆಯೇ ಇದ್ದೆನು.

ಒಂದು ಕಲ್ಪ ಕಳೆದಬಳಿಕ ನೀನು ಈ ಕಾಶ್ಮೀರದೇಶದ ಅರಸನಾದ ಸುಮನಸನ ಮಗನಾಗಿ ಜನಿಸಿದೆ. ಅಯ್ಯಾ ಶ್ವೇತರಾಜನೇ! ಈ ಜನ್ಮದಲ್ಲಿಯೂ ನೀನು ವಿಷ್ಣುವನ್ನು ಪೂಜಿಸಿದ ಫಲವಾಗಿ ಶುದ್ಧನಾಗಿದ್ದೀಯೆ. ಆದುದರಿಂದ ನಾನು ನಿನ್ನ ದೇಹದಿಂದ ವ್ಯಾಧರೂಪದಿಂದ ಹೊರಬಂದಿರುವೆನು. ನಾನೂ ಶುದ್ಧನಾಗಿರುವೆನು."

ವ್ಯಾಧನು ಹೇಳಿದ ವೃತ್ತಾಂತವನ್ನು ಕೇಳಿ ಶ್ವೇತರಾಜನು ಆಶ್ಚರ್ಯಗೊಂಡನು. ಅವನು, "ಎಲೈ ವ್ಯಾಧನೇ! ನೀನು ಪೂರ್ವಜನ್ಮದ ಕಥೆಯನ್ನು ನನಗೆ ಜ್ಞಾಪಿಸಿದೆ. ಆದುದರಿಂದ ನೀನು ಧರ್ಮವ್ಯಾಧನೆಂದು ಪ್ರಸಿದ್ಧನಾಗು" ಎಂದು ಆ ವ್ಯಾಧನಿಗೆ ವರವನ್ನು ಕೊಟ್ಟನು. ಹೀಗೆ ನುಡಿದು ಆ ದೊರೆಯು ವಿಮಾನವನ್ನೇರಿ ಪರಪದಕ್ಕೆ ತೆರಳಿದನು.

ಆದುದರಿಂದಲೇ,

"ಸಹಸ್ರಕಮಲೈಃ ಪೂಜಾ ಕಾರ್ತಿಕೇ ಮಧುಸೂದನೇ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥

ಸಹಸ್ರಕಮಲಗಳಿಂದ ಮಧುಸೂದನನನ್ನು ಪೂಜಿಸಿದುದಾದರೆ ಕಲ್ಪಕೋಟಿ ಶತಗಳಾದರೂ ಮಾನವನಿಗೆ ಪುನರ್ಜನ್ಮವಿರುವುದಿಲ್ಲ ಎಂಬ ಶ್ಲೋಕವು ಪ್ರಸಿದ್ಧವಾಗಿರುವುದು.

ಮುಖೇ ಶಿರಸಿ ದೇಹೇ ತು ಕೃಷ್ಣೋತ್ತೀರ್ಣಾಂತು ಯೋ ವಹೇತ್ ।
ತುಲಸೀಂ ಕೃಷ್ಣನಿರ್ಮಾಲ್ಯೈಃ ಯೋ ಗಾತ್ರಂ ಪರಿಮಾರ್ಜಯೇತ್ ।
ಸರ್ವರೋಗೈಸ್ತಥಾ ಪಾಪೈಃ ಮುಕ್ತೋ ಭವತಿ ಮಾನವಃ ॥ ೩೫ ॥
ಶಂಖೋದಕಂ ಹರೇರ್ಭಕ್ತಿಃ ನಿರ್ಮಾಲ್ಯಂ ಪಾದಯೋರ್ಜಲಂ ।
ಚಂದನಂ ಧೂಪಶೇಷಂ ಚ ಬ್ರಹ್ಮಹತ್ಯಾಪಹಾರಕಂ ॥ ೩೬ ॥
ಕಾರ್ತಿಕೇ ಮಾಸಿ ವಿಪ್ರೇಂದ್ರ ಪ್ರಾತಸ್ಸ್ನಾನಪರಾಯಣಃ ।
ವಿಪ್ರೇಭ್ಯಶ್ಚಾನ್ನದಾನಂ ತು ಕುರ್ಯಾಚ್ಛಕ್ತ್ಯನುಸಾರತಃ ॥ ೩೭ ॥
ಸರ್ವೇಷಾಮೇವ ದಾನಾನಾಂ ಅನ್ನದಾನಂ ವಿಶಿಷ್ಯತೇ ।
ಅನ್ನೇನ ಜಾಯತೇ ಲೋಕೋ ಹ್ಯನ್ನೇನೈವಾಭಿವರ್ಧತೇ ॥ ೩೮ ॥
ಅನ್ನಂ ಹಿ ಸರ್ವಭೂತಾನಾಂ ಪ್ರಾಣಭೂತಂ ಪರಂ ವಿದುಃ ।
ಅನ್ನದಸ್ಸರ್ವದೋ ಲೋಕೇ ಸರ್ವಯಜ್ಞಾದಿಕೃದ್ಭವೇತ್ ॥ ೩೯ ॥
ತೀರ್ಥಸ್ನಾನೇನ ಕಿಂ ತಸ್ಯ ದೇವಯಾತ್ರಾದಿನಾಪಿ ಕಿಂ ।
ಸರ್ವಂ ಸಂಪದ್ಯತೇ ಬ್ರಹ್ಮನ್ ಅನ್ನದಾನಾನ್ನ ಸಂಶಯಃ ॥ ೪೦ ॥

---

೩೫. ಯಾವನು ಕೃಷ್ಣನ ಮೈಮೇಲಿನಿಂದ ಎತ್ತಿಕೊಂಡ ತುಲಸಿಯನ್ನು ಮುಖದಲ್ಲಿ, ತಲೆಯಲ್ಲಿ ಅಥವಾ ದೇಹದಲ್ಲಿ ಧರಿಸುತ್ತಾನೆಯೋ, ಯಾವನು ವಿಷ್ಣುವಿನ ನಿರ್ಮಾಲ್ಯಗಳಿಂದ ತನ್ನ ಶರೀರವನ್ನೂ ಮಾರ್ಜನೆಮಾಡಿಕೊಳ್ಳುತ್ತಾನೆಯೋ ಅಂತಹ ಮಾನವನು ಸರ್ವರೋಗಗಳಿಂದಲೂ, ಸರ್ವ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೩೬. ಶಂಖೋದಕ, ಹರಿಯ ಭಕ್ತಿ, ಹರಿಯ ನಿರ್ಮಾಲ್ಯಗಳನ್ನು, ಹರಿಯ ಪಾದ ತೊಳೆದ ಜಲ, ಚಂದನ, ಧೂಪಶೇಷ, — ಇವಿಷ್ಟು ಬ್ರಹ್ಮಹತ್ಯಾ ಪರಿಹಾರಕಗಳು.

೩೭. ವಿಪ್ರೇಂದ್ರಾ! ಕಾರ್ತಿಕ ಮಾಸದಲ್ಲಿ ಪ್ರಾತಃಸ್ನಾನಪರಾಯಣನಾಗಿ ತನ್ನ ಶಕ್ತಿಗೆ ಅನುಸಾರವಾಗಿ ವಿಪ್ರರಿಗೆ ಅನ್ನದಾನ ಮಾಡಬೇಕು.

೩೮. ಸರ್ವದಾನಗಳಲ್ಲಿಯೂ ಅನ್ನದಾನವೇ ವಿಶೇಷವಾದುದು. ಅನ್ನದಿಂದ ಲೋಕದ ಉತ್ಪತ್ತಿಯಾಗುತ್ತದೆ. ಅನ್ನದಿಂದಲೆ ಅದು ಅಭಿವೃದ್ಧಿಹೊಂದುತ್ತದೆ.

೩೯—೪೦. ಅನ್ನವೇ ಸರ್ವಭೂತಗಳಿಗೂ ಪ್ರಾಣಸ್ವರೂಪವಾಗಿರುವ ಬಹು ಶ್ರೇಷ್ಠವಸ್ತುವೆಂದು ತಿಳಿಯುತ್ತಾರೆ. ಅನ್ನಕೊಡುವವನು ಲೋಕದಲ್ಲಿ ಸರ್ವವನ್ನು ಕೊಟ್ಟವನಾಗುತ್ತಾನೆ; ಸರ್ವಯಜ್ಞಾದಿಗಳನ್ನೂ ಮಾಡಿದವನಾಗುತ್ತಾನೆ. ಆತನಿಗೆ ತೀರ್ಥಸ್ನಾನದಿಂದ ಏನು ಪ್ರಯೋಜನ? ದೇವಸನ್ನಿಧಿ, ಕ್ಷೇತ್ರಯಾತ್ರೆ ಮೊದಲಾದುವುಗಳಿಂದೆ ತಾನೆ ಏನು ಪ್ರಯೋಜನ? ಅಯ್ಯಾ ಬ್ರಾಹ್ಮಣನೇ! ಅನ್ನದಾನದಿಂದ ಅವಷ್ಟನ್ನೂ ಪಡೆಯುಬಹುದು. ಇದರಲ್ಲಿ ಸಂಶಯವಿಲ್ಲ.

**ಸತ್ಯಕೇತುರ್ದ್ವಿಜಃ ಪೂರ್ವಂ ಚಾನ್ನದಾನೇನ ಕೇವಲಂ ।**
**ಸರ್ವಪುಣ್ಯಫಲಂ ಪ್ರಾಪ್ಯ ಮೋಕ್ಷಂ ಪ್ರಾಪ ಸುದುರ್ಲಭಂ ॥ ೪೧ ॥**
**ಕಾರ್ತಿಕವ್ರತನಿಷ್ಠಸ್ತು ಕುರ್ಯಾದ್ಗೋದಾನಮುತ್ತಮಂ ।**
**ವ್ರತಂ ಸಂಪೂರ್ಣತಾಂ ಯಾತಿ ಗೋದಾನೇನ ನ ಸಂಶಯಃ ॥ ೪೨ ॥**

---

೪೧. ಪೂರ್ವದಲ್ಲಿ ಸತ್ಯಕೇತುವೆಂಬ ದ್ವಿಜನು ಕೇವಲ ಅನ್ನದಾನದಿಂದಲೇ ಸರ್ವಪುಣ್ಯಫಲವನ್ನೂ ಪಡೆದು ಬಹು ದುರ್ಲಭವಾದ ಮೋಕ್ಷವನ್ನೂ ಸಂಪಾದಿಸಿದನು.†

೪೨. ಕಾರ್ತಿಕ ವ್ರತದಲ್ಲಿ ತೊಡಗಿರುವವನು ಉತ್ತಮವಾದ ಗೋದಾನವನ್ನು ಮಾಡಬೇಕು. ಗೋದಾನದಿಂದ ವ್ರತವು ಸಂಪೂರ್ಣವಾಗುತ್ತದೆ. ಇದರಲ್ಲಿ ಸಂಶಯವಿಲ್ಲವು.

---

† **ಸಾರೋದ್ಧಾರದಲ್ಲಿ ಸತ್ಯಕೇತುವಿನ ಕಥೆ:—** ಪೂರ್ವದಲ್ಲಿ ಸತ್ಯಜಿತ್ ಎಂಬ ವಿಪ್ರನೋರ್ವನಿದ್ದನು. ಅವನು ಬಹಳ ಧರ್ಮಿಷ್ಠನು. ಯಾವ ಕಾಮನೆಗಳೂ ಅವನಿಗಿರಲಿಲ್ಲ. ಯಾವಾಗಲೂ ತೀರ್ಥಯಾತ್ರೆಗಳಲ್ಲಿಯೇ ಅವನು ಕಾಲ ಕಳೆಯುತ್ತಿದ್ದನು. ಆದರಲ್ಲಿಯೂ ಅವನು ಸತತವೂ ಗಂಗಾನದಿಯನ್ನೇ ಸ್ಮರಿಸುತ್ತಿದ್ದನು. ಒಂದು ಸಲ ಅವನು ತೀರ್ಥಯಾತ್ರೆಯನ್ನು ಮಾಡುತ್ತ ವಿಶಾಲಾನಗರಿಗೆ ಬಂದನು. ಅವನು ಅಲ್ಲಿ ಜನರು ತೋರಿದ ಸತ್ಯಕೇತುವೆಂಬ ವಿಪ್ರನ ಮನೆಗೆ ಬಂದನು.

ಸತ್ಯಕೇತುವಾದರೋ ತನ್ನ ಮನೆಗೆ ಬಂದ ಸತ್ಯಜಿತುವು ಹಸಿವು ಬಾಯಾರಿಕೆಗಳಿಂದ ಬಳಲಿರುವುದನ್ನರಿತು ಅವನಿಗೆ ಒಡನೆಯೆ ಅರ್ಘ್ಯಪಾದ್ಯಾದಿಗಳನ್ನಿತ್ತು "ಅಯ್ಯಾ ವಿಪ್ರನೇ! ಇಂದು ನೀನು ನನ್ನ ಮನೆಗೆ ಬಂದುದರಿಂದ ನನ್ನ ಜನ್ಮವು ಸಾರ್ಥಕವಾಯಿತು. ನನ್ನ ಪಿತೃಗಳು ತೃಪ್ತರಾದರು. ದೇವತೆಗಳು ಸುಪ್ರೀತರಾದರು. ಎಲೈ ಬ್ರಾಹ್ಮಣನೇ! ನಿನ್ನ ಮನವೊಪ್ಪಿದಂತೆ ಊಟಮಾಡು. ನೀನು ಊಟಮಾಡಿದರೆ ನನಗೆ ಬೇರೊಂದು ಕರ್ತವ್ಯವೇ ಇಲ್ಲುವುದಿಲ್ಲ. ನಿನ್ನ ದರ್ಶನದಿಂದ ನನಗೆ ಅಲಭ್ಯವಾದದ್ದೇನೂ ಇರುವುದಿಲ್ಲ" ಎಂದು ಹೇಳಿದನು.

ಸತ್ಯಜಿತುವು, "ನಿನ್ನ ಶುಶ್ರೂಷೆಯಿಂದಲೂ, ನಿನ್ನ ವಿನಯವಾಕ್ಯಗಳಿಂದಲೂ ತೃಪ್ತನಾಗಿದ್ದೇನೆ. ಎಲೈ ಸತ್ಯಕೇತುವೇ! ಲೋಕದಲ್ಲಿ ಅನ್ನದಾತೃಗಳು ಎಷ್ಟೋ ಮಂದಿ ಇದ್ದಾರೆ. ಅವರಲ್ಲಿ ನಿನಗೆ ಸಮಾನರಾದವರಾರೂ ಇರುವುದಿಲ್ಲ. ನಾನೂ ಕಂಡಿಲ್ಲ. ನೀನು ಗೃಹಸ್ಥಾಶ್ರಮಿಗಳಲ್ಲಿ ಶ್ರೇಷ್ಠನಾಗಿರುವೆ. ನೀನು ಗಂಗಾಯಾತ್ರೆಯನ್ನು ಮಾಡಿರುವೆಯೋ ಇಲ್ಲವೊ?" ಎಂದನು. ಆಗ ಸತ್ಯಕೇತುವು, "ಎಲೈ ದ್ವಿಜನೇ! ನನ್ನ ಮನೆಯಲ್ಲಿ ಅತಿಥಿಗಳಿಗೆ ಅನ್ನವಿಡುವವನು ಮತ್ತಾರೂ ಇಲ್ಲ. ಆದರಿಂದ ನನಗಿನ್ನೂ ಗಂಗಾಸ್ನಾನವಾಗಿಲ್ಲ" ಎಂದನು. ಅದನ್ನು ಕೇಳಿ ಸತ್ಯಜಿತುವು ಅವನನ್ನು ದೂಷಿಸುತ್ತ, "ಅಯ್ಯಾ ವಿಪ್ರಾ! ನೀನು ಗಂಗಾಸ್ನಾನವನ್ನು ಮಾಡಿಲ್ಲ. ಆದುದರಿಂದ ನಾನು ನಿನ್ನ ಮನೆಯಲ್ಲಿ ಊಟಮಾಡುವುದಿಲ್ಲ" ಎಂದು ಹೇಳಿ ಒಡನೆಯೇ ಸ್ನಾನಕ್ಕಾಗಿ ಗಂಗಾನದಿಗೆ ಬಂದನು.

ಸತ್ಯಜಿತುವು ಬಂದೊಡನೆಯೇ ಗಂಗಾದೇವಿಯು ಅಂತರ್ಧಾನವಾದಳು. ಅವನು ಸ್ನಾನಕ್ಕೆ ನದಿಯಲ್ಲಿ ನೀರನ್ನು ಕಾಣದೆ ಕೈಮುಗಿದು ಗಂಗೆಯನ್ನು ಸ್ತುತಿಸಿದನು. "ದೇವಿ!

**ಗೋದಾನಾತ್ ಪರಮಂ ದಾನಂ ಸಂಸಾರಾರ್ಣವತಾರಕಂ ।**
**ನಾಸ್ತಿ ನಾರದ ಲೋಕೇऽಸ್ಮಿನ್ ಸುಶರ್ಮಾ ಬ್ರಾಹ್ಮಣೋ ಯಥಾ ॥೪೩॥**
**ಕಾರ್ತಿಕೇ ಮಾಸಿ ವಿಪ್ರೇಂದ್ರ ದತ್ವಾ ದಾನಾನ್ಯನೇಕಶಃ ।**
**ಹರಿಸ್ಮೃತಿವಿಹೀನಶ್ಚೇತ್ ನ ಪುನಂತಿ ಕದಾಚನ ॥ ೪೪ ॥**

---

೪೩. ನಾರದಾ! ಈ ಲೋಕದಲ್ಲಿ ಸಂಸಾರ ಸಮುದ್ರವನ್ನು ದಾಟಿಸುವ ಗೋದಾನಕ್ಕಿಂತ ಶ್ರೇಷ್ಠವಾದ ಮತ್ತೊಂದು ದಾನವಿರುವುದಿಲ್ಲವು. ಸುಶರ್ಮ ನೆಂಬ ಬ್ರಾಹ್ಮಣನು ಈ ಗೋದಾನದಿಂದಲೇ ಸದ್ಗತಿಯನ್ನು ಪಡೆದನು.‡

೪೪. ವಿಪ್ರೇಂದ್ರಾ! ಕಾರ್ತಿಕಮಾಸದಲ್ಲಿ ಅನೇಕ ಪ್ರಕಾರವಾಗಿ ದಾನ

---

ನಾನು ಸ್ವಲ್ಪವೂ ಪಾಪಮಾಡಿರುವುದಿಲ್ಲ. ನನಗೆ ದರ್ಶನವನ್ನು ದಯಪಾಲಿಸು. ಒಂದು ವೇಳೆ ನಾನು ಅನ್ಯಾಯಮಾಡಿದ್ದರೆ ಕ್ಷಮಿಸು.'' ಗಂಗಾದೇವಿಯು ಪ್ರತ್ಯಕ್ಷಳಾಗಿ "ಅಯ್ಯಾ ಸತ್ಯಜಿತುವೇ! ನೀನು ಸತ್ಯಕೇತುವಿನ ಮನೆಗೆ ಹೋಗಿ ಅವನನ್ನು ಸಮಾಧಾನ ಪಡಿಸಿ ಅವನ ಮನೆಯಲ್ಲಿ ಊಟಮಾಡಿ ಬಾ. ಅವನ ಮನೆಯ ಭೋಜನದಿಂದ ಅನೇಕರು ಮುಕ್ತಿಯನ್ನು ಪಡೆದರು'' ಎಂದಳು. ಗಂಗೆಯ ಮಾತನ್ನು ಕೇಳಿ ಸತ್ಯಜಿತುವು ಸತ್ಯಕೇತುವಿನ ಮನೆಗೆ ಬಂದು ಊಟಮಾಡಿ ಅವನಿಂದ ಬೀಳ್ಕೊಂಡು ಗಂಗೆಗೆ ಬಂದನು. ಗಂಗೆಯು ಪ್ರತ್ಯಕ್ಷಳಾದಳು; ಸ್ನಾನಮಾಡಿ ಪವಿತ್ರನಾದನು. ಸತ್ಯಕೇತುವಾದರೋ ಕೇವಲ ಅನ್ನದಾನದ ಪುಣ್ಯದಿಂದಲೇ ಮುಕ್ತಿಯನ್ನು ಪಡೆದನು.

‡ ಸುಶರ್ಮನೆಂಬೊಬ್ಬ ಬ್ರಾಹ್ಮಣನಿದ್ದನು. ಇವನು ವೇದ ವೇದಾಂಗ ಪಾರಂ ಗತನು. ಶಾಂತನೂ, ಜಿತೇಂದ್ರಿಯನೂ ಆದ ಈತನು ಅನೇಕ ಯಜ್ಞಗಳನ್ನು ಮಾಡಿದ್ದನು; ಐಶ್ವರ್ಯವಂತ; ಪ್ರತಿನಿತ್ಯವೂ ದಾನಮಾಡುತ್ತಿದ್ದನು. ಸಮಸ್ತ ಭೂತ ಗಳಲ್ಲಿಯೂ ಈತನು ದಯಾವಂತನಾಗಿದ್ದನು. ಒಳ್ಳೆಯ ಪೌರಾಣಿಕ; ಬಂಧುಗಳಿಗೆ ಉಪಕಾರಿ. ಈತನಿಗೆ ಹಲವು ಮಂದಿ ಮಕ್ಕಳಿದ್ದರು.

ಸುಶರ್ಮನು ವಾರ್ಧಕ್ಯದಲ್ಲಿ ಗೃಹಕೃತ್ಯದ ಭಾರವನ್ನೆಲ್ಲ ಮಕ್ಕಳಿಗೆ ವಹಿಸಿ ವನವನ್ನು ಸೇರಿ ವಿಷ್ಣುವನ್ನೇ ಆರಾಧಿಸುತ್ತಿದ್ದು, ಉಗ್ರವಾದ ತಪಸ್ಸನ್ನು ಮಾಡುತ್ತಲೇ ದೇಹವನ್ನು ತೊರೆದು ಸ್ವರ್ಗವನ್ನು ಸೇರಿದನು. ಅಲ್ಲಿ ಒಂದು ಸಲ ಯಮದೂತರು ಬಂದು ದೇವ ದೂತರನ್ನು ಸೋಲಿಸಿದರು. ಆಗ ಇಂದ್ರನು ಸೋತ ದೇವದೂತರನ್ನು ಕುರಿತು, "ಎಲೈ ದೂತರೇ! ನಾನು ಅಪ್ಪಣೆಮಾಡುತ್ತೇನೆ. ಧರ್ಮಿಷ್ಠರು ಸ್ವರ್ಗಕ್ಕೆ ಬರಲಿ. ಪಾಪಿಷ್ಠರು ನರಕಕ್ಕೆ ಹೋಗಲಿ. ಅದರಲ್ಲಿಯೂ ಗೋದಾನಮಾಡಿದವರು ಪಾಪಿಷ್ಠ ರಾದರೂ ಸ್ವರ್ಗವನ್ನು ಸೇರಲಿ. ಗೋದಾನದಿಂದ ಸಮಸ್ತ ಪಾಪಗಳೂ ನಶಿಸುವುವು'' ಎಂದು ಹೇಳಿದನು.

ಈ ಮಾತನ್ನು ಕೇಳಿ ಸುಶರ್ಮನು ಅಂತರಿಕ್ಷಮಾರ್ಗದಿಂದಲೇ ತನ್ನ ಮಕ್ಕಳನ್ನು ಸಂಬೋಧಿಸಿ "ಅಯ್ಯಾ ಮಕ್ಕಳಿರಾ! ನೀವು ಸ್ವರ್ಗವನ್ನು ಪಡೆಯಬಯಸಿರುವುದೇ ಆದರೆ ನನ್ನ ಮಾತಿನಂತೆ ಗೋದಾನಮಾಡಿರಿ. ಗೋದಾನಕ್ಕಿಂತಲೂ ಶ್ರೇಷ್ಠವಾದ ದಾನವು ಮೂರು ಲೋಕಗಳಲ್ಲಿಯೂ ಇರುವುದಿಲ್ಲ'' ಎಂದು ಹೇಳಿದನು. ಸುಶರ್ಮನ ಮಕ್ಕಳಾದರೋ ತಂಧೆಯ ಮಾತನ್ನು ಕೇಳಿ ಆಶ್ಚರ್ಯಗೊಂಡು ವಿಧ್ಯುಕ್ತವಾಗಿ ಗೋದಾನ ಗಳನ್ನು ಮಾಡಿದರು. ಕ್ರಮವಾಗಿ ಅವರೆಲ್ಲರೂ ಸ್ವರ್ಗವನ್ನೇ ಸೇರಿದರು.

**ನಾಮಸ್ಮರಣಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ।**
**ಪುಷ್ಕರೇಣ ಯಥಾ ಪೂರ್ವಂ ನಾರಕೀಯಾಶ್ಚ ಮೋಚಿತಾಃ ॥ ೪೫ ॥**
**ಗೋವಿಂದ ಗೋವಿಂದ ಹರೇ ಮುರಾರೇ**
**ಗೋವಿಂದ ಗೋವಿಂದ ಮುಕುಂದ ಕೃಷ್ಣ ।**
**ಗೋವಿಂದ ಗೋವಿಂದ ರಥಾಂಗಪಾಣೇ**
**ಗೋವಿಂದ ದಾಮೋದರ ಮಾಧವೇತಿ ॥ ೪೬ ॥**

---

ಗಳನ್ನು ಮಾಡಿ ಹರಿಸ್ಮೃತಿಯಿಲ್ಲದವನಾದ ಪಕ್ಷದಲ್ಲಿ ಆ ದಾನಗಳು ಅವನನ್ನು ಎಂದಿಗೂ ಪವಿತ್ರಗೊಳಿಸಲಾರವು.

೪೫. ನಾಮಸ್ಮರಣೆಯ ಮಹಾತ್ಮೆಯನ್ನು ವಿವರಿಸಲು ನನಗೆ ಶಕ್ಯವಿಲ್ಲವು. ಪೂರ್ವದಲ್ಲಿ ಪುಷ್ಕರನೆಂಬವನು ನಾಮಸಂಕೀರ್ತನೆಯ ಮಹಾತ್ಮೆಯಿಂದ ನರಕವಾಸಿಗಳಿಗೂ ಬಿಡುಗಡೆಯನ್ನುಂಟುಮಾಡಿದನು.§

೪೬. "ಗೋವಿಂದ, ಗೋವಿಂದ, ಹರಿ, ಮುರಾರಿ, ಗೋವಿಂದ,

---

§ **ಪುಷ್ಕರನ ವಿಷಯದಲ್ಲಿ ಸಾರೋದ್ಧಾರದ ಕಥೆ:—** ಪೂರ್ವದಲ್ಲಿ ನಂದಿಗ್ರಾಮದಲ್ಲಿ ಪುಷ್ಕರ ಎಂಬ ಹೆಸರಿನ ಇಬ್ಬರು ಬ್ರಾಹ್ಮಣರಿದ್ದರು. ಅವರಲ್ಲಿ ಒಬ್ಬನು ಪುಣ್ಯಾತ್ಮ; ಇನ್ನೊಬ್ಬನು ಪಾಪಿಷ್ಠ. ಒಂದುದಿನ ಯಮನು ಪಾಪಿಪುಷ್ಕರನನ್ನು ಕರೆದುತರಲು ದೂತರಿಗೆ ಅಪ್ಪಣೆಮಾಡಿದನು. ಅವರು ಪಾಪಿಪುಷ್ಕರನನ್ನು ಬಿಟ್ಟು, ಪುಣ್ಯಾತ್ಮನಾದ ಪುಷ್ಕರನನ್ನೇ ಕರೆದುತಂದರು. ಯಮನು ದೂತರನ್ನೆಲ್ಲ ಗದರಿ ಆ ಪುಣ್ಯವಂತಪುಷ್ಕರನನ್ನು ಬಹುಮಾನಪೂರ್ವಕವಾಗಿ ನೋಡಿ "ಪುಷ್ಕರ! ನಿನ್ನನ್ನು ಕರೆದುತರಲು ನಾನು ಅಪ್ಪಣೆ ಮಾಡಿರಲಿಲ್ಲ. ಆದುದರಿಂದ ನೀನು ಹೊರಟುಹೋಗು" ಎಂದನು. ಅವನಾದರೊ "ಅಯ್ಯಾ ಯಮನೇ! ನಾನು ನರಕಗಳೆಲ್ಲವನ್ನೂ ನೋಡಬಯಸುತ್ತೇನೆ" ಎಂದನು. ಯಮನು ತೋರಿದ ನರಕಗಳನ್ನೂ, ಹಾಹಾಕಾರ ಮಾಡುತ್ತಿದ್ದ ಪಾಪಿಷ್ಠ ನಾರಕಿಗಳನ್ನೂ ನೋಡಿ ಪುಷ್ಕರನು ಬಹಳವಾಗಿ ಹೆದರಿ ಅವರನ್ನು ಕುರಿತು, "ಅಯ್ಯಾ ನಾರಕಿಗಳಿರಾ! ನೀವು ಹಿಂದೆ ಪಾಪಪುಣ್ಯಗಳ ವಿವೇಚನೆಯನ್ನೇ ಮಾಡದೆ ಪಾಪಗಳನ್ನು ಮಾಡಿ ನರಕಗಳನ್ನು ಅನುಭವಿಸುತ್ತಿರುವಿರಿ. ಈಗ ಹಾಹಾಕಾರವಾಡಿ ಫಲವೇನು? ಭಗವನ್ನಾಮವನ್ನಾದರೂ ಸ್ಮರಿಸಿದಿರಾ!" ಎಂದನು. ಅದಕ್ಕೆ ನಾರಕಿಗಳು, "ಎಲೈ ಪುಷ್ಕರನೇ! ನೀನು ಸ್ವಲ್ಪ ನಿಲ್ಲು. ನಿನ್ನನ್ನು ಸೋಕಿ ಬೀಸಿದ ಗಾಳಿಯಿಂದ ನಮಗೆಲ್ಲ ಒಳ್ಳೆಯದಾಗುವುದು" ಎಂದರು. ಯಮನಾದರೋ "ಪುಷ್ಕರ! ಇನ್ನು ನೀನಿಲ್ಲಿರಕೂಡದು. ಹೊರಡು" ಎಂದನು. ಪುಷ್ಕರನು "ಯಮಧರ್ಮರಾಜ! ಈ ಪಾಪಿಗಳನ್ನು ನರಕದಿಂದ ಬಿಡಿಸದೆ ನಾನು ಹೋಗುವದೆಂತು? ನಾನು ಸರ್ವಭೂತಾಂತರ್ಯಾಮಿಯಾದ ಗೋವಿಂದನನ್ನು ಆರಾಧಿಸಿರುವುದೇ ಆದರೆ, ಆ ಪುಣ್ಯದಿಂದ ಈ ನಾರಕಿಗಳೆಲ್ಲ ಮುಕ್ತರಾಗಲಿ" ಎಂದು ಹೇಳಿ "ಗೋವಿಂದ! ಗೋವಿಂದಾ!!" ಎಂದು ಗಟ್ಟಿಯಾಗಿ ವಿಷ್ಣುನಾಮ ಸ್ಮರಣೆಯನ್ನು ಮಾಡಿದನು. ಕೂಡಲೇ ಅಲ್ಲಿದ್ದ ಪಾಪಿಗಳೆಲ್ಲರೂ ನರಕಮುಕ್ತರಾಗಿ ದಿವ್ಯರೂಪಧರರಾಗಿ, "ಓ ಪುಷ್ಕರ! ನಿನ್ನ ಕೀರ್ತಿಯು ವಿಸ್ತರಿಸುವುದು" ಎಂದು ಹೇಳಿ ವೈಕುಂಠಕ್ಕೆ ತೆರಳಿದರು. ಪುಷ್ಕರನು ಸಹ ಯಮನಿಂದ ಬೀಳ್ಕೊಂಡು ಕೇವಲ ಭಗವನ್ನಾಮಸ್ಮರಣೆಯ ಮಹಿಮೆಯಿಂದಲೇ ಪರಮಪದವನ್ನು ಸೇರಿದನು.

ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಂ ।
ಕಾರ್ತಿಕೇ ಯಃ ಪಠೇನ್ಮರ್ತ್ಯಃ ಶ್ರದ್ಧಾಭಕ್ತಿಸಮನ್ವಿತಃ ॥ ೪೭ ॥
ಯೈರ್ನ ಶ್ರುತಂ ಭಾಗವತಂ ಪುರಾಣಂ
ನಾರಾಧಿತೋ ವೈ ಪುರುಷಃ ಪುರಾಣಃ ।
ಹುತಂ ಮುಖೇ ನೈವ ಧರಾಽಮರಾಣಾಂ
ತೇಷಾಂ ವೃಥಾ ಜನ್ಮ ಗತಂ ನರಾಣಾಂ ॥ ೪೮ ॥
ಕಾರ್ತಿಕೇ ಮಾಸಿ ವಿಪ್ರೇಂದ್ರ ಯಸ್ತು ಗೀತಾಂ ಪಠೇನ್ನರಃ ।
ತಸ್ಯ ಪುಣ್ಯಫಲಂ ವಕ್ತುಂ ಮಮ ಶಕ್ತಿರ್ನ ವಿದ್ಯತೇ ॥ ೪೯ ॥
ಗೀತಾಯಾಸ್ತು ಸಮಂ ಶಾಸ್ತ್ರಂ ನ ಭೂತಂ ನ ಭವಿಷ್ಯತಿ ।
ಸರ್ವಪಾಪಹರಾ ನಿತ್ಯಂ ಗೀತೈಕಾ ಮೋಕ್ಷದಾಯಿನೀ ॥ ೫೦ ॥
ಏಕೇನಾಧ್ಯಾಯಪಾಠೇನ ಸರ್ವಪಾಪಕೃತೋಽಪಿ ಚ ।
ಮುಚ್ಯಂತೇ ನರಕಾದ್ಘೋರಾಜ್ಜಡೋ ವೈ ಬ್ರಾಹ್ಮಣೋ ಯಥಾ॥ ೫೧ ॥

---

ಗೋವಿಂದ, ಮುಕುಂದ, ಕೃಷ್ಣ, ಗೋವಿಂದ, ಗೋವಿಂದ, ಚಕ್ರಪಾಣಿ, ಗೋವಿಂದ, ದಾಮೋದರ! ಮಾಧವ!!" ಎಂಬುದು ನಾಮಸ್ಮರಣೆಯು.

೪೭. ಶ್ರದ್ಧಾಭಕ್ತಿಗಳಿಂದ ಕೂಡಿದಾತನು ಕಾರ್ತಿಕಮಾಸದಲ್ಲಿ ಭಾಗವತದ ಅರ್ಧಶ್ಲೋಕವನ್ನೋ, ಕಾಲುಶ್ಲೋಕವನ್ನೋ ಆದರೂ ನಿತ್ಯವೂ ಪಾರಾಯಣ ಮಾಡಬೇಕು.

೪೮. ಯಾರು ಭಾಗವತ ಪುರಾಣವನ್ನು ಶ್ರವಣಮಾಡಿರುವುದಿಲ್ಲವೋ, ಪುರಾಣಪುರುಷನನ್ನು ಯಾರು ಆರಾಧಿಸಿರುವುದಿಲ್ಲವೋ, ಯಾರು ಬ್ರಾಹ್ಮಣರಿಗೆ ದಾನಮಾಡಿಲ್ಲವೊ ಅಂತಹ ನರರ ಜನ್ಮವು ವ್ಯರ್ಥವಾಗಿ ಕಳೆದಂತೆಯೆ !

೪೯-೫೦. ಎಲೈ ವಿಪ್ರಶ್ರೇಷ್ಠನೇ! ಕಾರ್ತಿಕಮಾಸದಲ್ಲಿ ಯಾವ ನರನು ಗೀತೆಯನ್ನು ಪಠಿಸುತ್ತಾನೆಯೊ ಅವನ ಪುಣ್ಯವನ್ನು ಇಷ್ಟೆಂದು ಹೇಳಲು ನನಗೆ ಶಕ್ತಿಯಿಲ್ಲವು. ಗೀತೆಗೆ ಸಮಾನವಾದ ಶಾಸ್ತ್ರವು ಹಿಂದೆ ಇರಲಿಲ್ಲ; ಮುಂದೆ ಹುಟ್ಟು ವುದಿಲ್ಲ. ನಿತ್ಯವೂ ಸರ್ವಪಾಪಪರಿಹಾರಕವಾಗಿಯೂ, ಮೋಕ್ಷದಾಯಕ ವಾಗಿಯೂ ಇರುವುದು ಗೀತೆಯೊಂದೇ.

೫೧. ಸರ್ವಪಾಪಗಳನ್ನೂ ಮಾಡಿದವನೇ ಆದರೂ ಗೀತೆಯ ಒಂದು ಅಧ್ಯಾಯವನ್ನು ಪಠಿಸುವುದರಿಂದಲೇ, ಜಡನೆಂಬ ಬ್ರಾಹ್ಮಣನಂತೆ ಘೋರ ವಾದ ನರಕದಿಂದ ಬಿಡುಗಡೆಹೊಂದುತ್ತಾನೆ.*

---

* **ಸಾರೋದ್ಧಾರದಲ್ಲಿ ಜಡನ ಕಥೆ:**—ವಿದರ್ಭದೇಶದಲ್ಲಿ ಕೌಶಿಕ ಗೋತ್ರೋದ್ಭವ ನಾದ ಜಡನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಸ್ವಧರ್ಮವನ್ನು ತ್ಯಜಿಸಿ ಪರಸ್ತ್ರೀ ಗಾಮಿಯೂ, ಹೆಂಡಕುಡುಕನೂ, ಕಳ್ಳನೂ ಆದನು. ಅವನು ಒಂದು ದಿನ ಉತ್ತರ

**ಶಾಲಿಗ್ರಾಮಶಿಲಾದಾನಂ ಯಃ ಕುರ್ಯಾತ್ಕಾರ್ತಿಕೇ ಮುನೇ ।**
**ತಸ್ಯ ಪುಣ್ಯಸ್ಯ ವಿಶ್ರಾಂತಿಃ ವಿಷ್ಣುನಾ ನ ನಿರೂಪಿತಾ ॥ ೫೨ ॥**
**ಶಾಲಿಗ್ರಾಮಂ ಸಮಭ್ಯರ್ಚ್ಯ ಶ್ರೋತ್ರಿಯಾಯ ಮಹಾಮುನೇ ।**
**ದಾನಂ ಯಃ ಕುರುತೇ ವಿಪ್ರ ತಸ್ಯ ಪುಣ್ಯಫಲಂ ಶೃಣು ॥ ೫೩ ॥**
**ಸಪ್ತಸಾಗರಪರ್ಯಂತಂ ಭೂದಾನಾದ್ಯತ್ಫಲಂ ಭವೇತ್ ।**
**ಶಾಲಿಗ್ರಾಮಶಿಲಾದಾನಾತ್ ತತ್ಫಲಂ ಸಮವಾಪ್ನುಯಾತ್ ॥ ೫೪ ॥**

---

೫೨. ಯಾವನು ಕಾರ್ತಿಕಮಾಸದಲ್ಲಿ ಸಾಲಿಗ್ರಾಮ ಶಿಲೆಯನ್ನು ದಾನ ಮಾಡುವನೋ, ಅವನ ಪುಣ್ಯವಿಷ್ಟೆಂದು ಮಹಾವಿಷ್ಣುವೇ ನಿರೂಪಿಸಿರುವುದಿಲ್ಲ.

೫೩. ಎಲೈ ಮಹಾಮುನಿಯೇ! ಸಾಲಿಗ್ರಾಮಶಿಲೆಯನ್ನು ಚೆನ್ನಾಗಿ ಅರ್ಚನೆಮಾಡಿ ಶ್ರೋತ್ರಿಯನಿಗೆ ಯಾವನು ದಾನಮಾಡುತ್ತಾನೆಯೋ ಅವನ ಪುಣ್ಯದ ಫಲವನ್ನು ಕೇಳು.

೫೪. ಸಪ್ತ ಸಮುದ್ರಗಳವರೆಗೂ ಇರುವ ಭೂಮಿಯನ್ನು ದಾನಮಾಡುವುದರಿಂದ ಯಾವ ಫಲವುಂಟಾಗುವುದೋ ಸಾಲಿಗ್ರಾಮಶಿಲೆಯ ದಾನದಿಂದಲೂ ಅದೇ ಫಲವನ್ನು ಪಡೆಯಲಾಗುತ್ತದೆ.

---

ದಿಕ್ಕಿನಲ್ಲಿ ಕಳ್ಳತನಮಾಡಿ ಬಹಳ ಹಣವನ್ನು ತೆಗೆದುಕೊಂಡು ಬರುತ್ತ ಒಂದಾನೊಂದು ಮರದ ಕೆಳಗೆ ಇತರ ಕಳ್ಳರ ಕೈಗೆ ಸಿಕ್ಕಿ ಘಾತಿಸಲ್ಪಟ್ಟನು.

ಆ ಜಡನ ಮಗನು ಅವನನ್ನು ನಿತ್ಯವೂ ಎಷ್ಟು ಹುಡುಕಿದರೂ ತಂದೆಯ ಸುದ್ದಿಯೇ ತಿಳಿಯದಿರಲು ಆವನಿಗೆ ಉತ್ತರ ಕ್ರಿಯೆಗಳನ್ನು ಮಾಡಲು ಸಾಮಗ್ರಿಗಳೆಲ್ಲವನ್ನೂ ತೆಗೆದುಕೊಂಡು ಕಾಶಿಗೆ ಹೊರಟನು. ಮಾರ್ಗದಲ್ಲಿ ಅವನು ಏಳೆಂಟು ಕಡೆ ತಂಗಿ ಒಂದು ಕಡೆ ತನ್ನ ತಂದೆಯನ್ನು ಕಳ್ಳರು ಘಾತಿಸಿದ ಸ್ಥಳದಲ್ಲಿಯೇ ಕುಳಿತು ಸಂಧ್ಯಾವಂದನೆಯನ್ನುಮಾಡಿ ಭಗವದ್ಗೀತೆಯ ಮೂರನೆಯ ಅಧ್ಯಾಯವನ್ನು ಪಠಿಸಿದನು. ಆ ಕೂಡಲೇ ಒಂದು ಘೋರ ಶಬ್ದವಾಯಿತು. ಅದರೊಡನೆಯೆ ಒಂದು ದಿವ್ಯವಿಮಾನವೂ ಅಂತರಿಕ್ಷದಲ್ಲಿ ಕಾಣಿಸಿಕೊಂಡಿತು. ಅದರಲ್ಲಿ ಜಡನು ಕುಳಿತಿದ್ದನು.

ಜಡಪುತ್ರನಾದರೂ ತಂದೆಯನ್ನು ಕಂಡು ನಮಸ್ಕರಿಸಿ ಸಂಗತಿಯೇನೆಂದು ಕೇಳಿದನು. ಅವನು, “ಎಲೈ ಮಗನೇ! ನೀನು ಕಾಶಿಗೆ ಹೋಗಿ ಮಾಡಬೇಕೆಂದಿದ್ದ ಕಾರ್ಯವೆಲ್ಲವೂ ಇಲ್ಲಿಯೇ ಮಾಡಿದಂತಾಯಿತು. ನೀನು ಕೃತ ಕೃತ್ಯನಾಗಿರುವೆ. ಹಿಂತಿರುಗು. ನೀನೀಗ ಮಾಡಿದ ಗೀತಾಧ್ಯಾಯಪಾಠದಿಂದ ನಾನು ಮುಕ್ತನಾದೆನು. ವತ್ಸ! ನನ್ನ ಅಣ್ಣಂದಿರೇ ಮೊದಲಾದ ನನ್ನ ಬಂಧುಗಳಾರಾರು ನರಕವನ್ನು ಹೊಂದಿದ್ದರೊ ಅವರನ್ನೂ ಸಹ ನೀನು ಗೀತಾಪಠನ ಮಾಹಾತ್ಮ್ಯದಿಂದ ಉದ್ಧರಿಸುವವನಾಗು. ನಿನಗೆ ಮಂಗಳವಾಗಲಿ” ಎಂದು ಹೇಳಿ ಸ್ವರ್ಗಕ್ಕೆ ಹೊರಟು ಹೋದನು. ಆ ಮಗನೂ ಸಹ ಕಾಲ ಕ್ರಮದಲ್ಲಿ ನರಕಲೋಕಕ್ಕೆ ಹೋಗಿ ಆ ಪಾಪಿಗಳಿಗೆ ಗೀತಾಪಠನ ಪುಣ್ಯವನ್ನಿತ್ತು ಅವರೆಲ್ಲರನ್ನೂ ಮುಕ್ತರನ್ನಾಗಿಸಿ ತಾನೂ ಪರಮ ಪದವಿಯನ್ನು ಪಡೆದನು.

**ಶಾಲಿಗ್ರಾಮಶಿಲಾದಾನಾತ್ ಕಾರ್ತಿಕೇ ಬ್ರಾಹ್ಮಣೀ ಯಥಾ ।**
**ವಿಧವಾ ಸಧವಾ ಜಾತಾ ವಿವಾಹೇ ಪಂಚಮೇಽಹನಿ ॥ ೫೫ ॥**
**ತಸ್ಮಾತ್ತು ಕಾರ್ತಿಕೇ ಮಾಸಿ ಸ್ನಾನದಾನಪುರಸ್ಸರಂ ।**
**ಶಾಲಿಗ್ರಾಮಶಿಲಾದಾನಂ ಕರ್ತವ್ಯಂ ನಾತ್ರ ಸಂಶಯಃ ॥ ೫೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಕಾರ್ತಿಕವ್ರತಧರ್ಮ ನಿರೂಪಣಂ" ನಾಮ ದ್ವಿತಿಯೋಽಧ್ಯಾಯಃ**

---

೫೫. ವಿವಾಹದ ಐದನೆಯ ದಿವಸ ವಿಧವೆಯಾದ ಬ್ರಾಹ್ಮಣಿಯು ಕಾರ್ತಿಕಮಾಸದಲ್ಲಿ ಸಾಲಿಗ್ರಾಮ ದಾನಮಾಡಿದ ಫಲವಾಗಿ ಸಧವೆಯಾದಳು.†

೫೬. ಆದ್ದರಿಂದ ಕಾರ್ತಿಕಮಾಸದಲ್ಲಿ ಸ್ನಾನದಾನ ಪೂರ್ವಕವಾಗಿ ಸಾಲಿಗ್ರಾಮ ಶಿಲಾದಾನವನ್ನು ಮಾಡಬೇಕು. ಇದರಲ್ಲಿ ಸಂಶಯವಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ಕಾರ್ತಿಕವ್ರತಧರ್ಮನಿರೂಪಣ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

---

† ವಿಧವೆ ಸಧವೆಯಾದ ಕಥೆ:— ಗೋದಾವರೀ ತೀರದಲ್ಲಿ ಮಹಾ ಪಾಪಿಯೂ, ದುರಾಚಾರನೂ ಆದ ಒಬ್ಬ ವೈಶ್ಯನಿದ್ದನು. ಅವನು ಒಂದಾನೊಂದು ದಿನ ತನ್ನಲ್ಲಿ ಸಾಲ ತೆಗೆದುಕೊಂಡಿದ್ದ ಬ್ರಾಹ್ಮಣನನ್ನು ಕತ್ತಿಯಿಂದ ಕಡಿದು ಕೊಂದನು. ಈ ಪಾಪದ ಫಲವಾಗಿ ಅವನು ಸತ್ತ ಬಳಿಕ ಮಹಾರೌರವ ನರಕದಲ್ಲಿ ಬಿದ್ದನು. ಅವನ ಮಗ ಧರ್ಮಚಾರನು ತನ್ನ ಹೆಸರಿಗೆ ತಕ್ಕಂತೆ ತನ್ನ ತಂದೆಯ ಹಣವನ್ನೆಲ್ಲ ಧರ್ಮಕಾರ್ಯ ಗಳಲ್ಲಿಯೇ ವಿನಿಯೋಗಮಾಡುತ್ತಿದ್ದನು. ಒಂದುದಿನ ಲೋಮಶಮುನಿಯು ಅವನಲ್ಲಿಗೆ ಬಂದು, "ಅಯ್ಯಾ ಶೆಟ್ಟಿ! ನೀನು ಶಾಲಿಗ್ರಾಮ ಶಿಲೆಯನ್ನು ಬ್ರಾಹ್ಮಣನಿಗೆ ದಾನಮಾಡಿ ನಿಮ್ಮ ತಂದೆಯನ್ನು ರೌರವ ನರಕದಿಂದ ಬಿಡಿಸಬಾರದೆ!" ಎಂದು ಹೇಳಿದನು.

ಧರ್ಮಾಚಾರನು ಇದೇನು ಮಹಾದಾನವೆಂದು ಲೋಮಶಮುನಿಯ ಮಾತನ್ನು ಅಲ್ಲಗಳೆದನು. ಕೆಲಕಾಲದ ಮೇಲೆ ಅವನೂ ಮಡಿದನು. ಅನೇಕ ಕಲ್ಪಗಳವರೆಗೆ ನರಕವಾಸಮಾಡಿ ಆಮೇಲೆ ಕ್ರಮವಾಗಿ ನೀಚಜನ್ಮಗಳನ್ನೆಲ್ಲ ಎತ್ತಿ ಕಡೆಗೆ ತನಗಿದ್ದ ಪುಣ್ಯ ಶೇಷದಿಂದ ಹತ್ತು ಸ್ತ್ರೀಜನ್ಮಗಳನ್ನೆತ್ತಿದನು. ಹನ್ನೊಂದನೆಯ ಸ್ತ್ರೀಜನ್ಮದಲ್ಲಿ ಯಾಜಕನೆಂಬ ಬ್ರಾಹ್ಮಣನ ಮಗಳಾಗಿ ಜನಿಸಿದನು. ಮಗಳು ವಯಸ್ಸಿಗೆ ಬಂದ ಮೇಲೆ ಯಾಜಕನು ಅವಳನ್ನು ಅನುರೂಪವರನಿಗೆ ಕೊಟ್ಟು ಮದುವೆಮಾಡಿದನು. ಆದರೆ ಮದುವೆಯ ಐದನೆಯ ದಿನವೇ ವರನು ವಾಂತಿರೋಗ ಬಂದು ಸತ್ತನು. ಮಗಳು ವಿಧವೆಯಾಗಲು ಯಾಜಕನು ಕೊರಗಿ ಅವಳ ಗಂಡನು ಬದುಕುವುದೆಂತೆಂದು ಯೋಚಿಸಿ ಕಾರ್ತಿಕದಲ್ಲಿ ಶಾಲಿಗ್ರಾಮ ಶಿಲೆಯನ್ನು ಬ್ರಾಹ್ಮಣನಿಗೆ ದಾನಮಾಡಿಸಿದನು. ಅದರಿಂದ ಅಳಿಯನು ಬದುಕಿದನು. ಅದೇ ಪುಣ್ಯದಿಂದಲೇ ಧರ್ಮಾಚಾರನು ಮತ್ತೊಂದು ಜನ್ಮದಲ್ಲಿ ವಿಷ್ಣು ಯಶನೆಂಬ ಬ್ರಾಹ್ಮಣನಾಗಿ ಹುಟ್ಟಿ ಕಡೆಗೆ ಶಾಲಿಗ್ರಾಮದಾನಮಾಡಿ ಮುಕ್ತಿಯನ್ನು ಪಡೆದನು.

॥ ಶ್ರೀಃ ॥

## ಅಥ ತೃತೀಯೋಽಧ್ಯಾಯಃ

### ಕಾರ್ತಿಕವೈಭವವರ್ಣನಂ

ಬ್ರಹ್ಮೋವಾಚ :—

ಭೂಯಃ ಶೃಣುಷ್ವ ವಿಪ್ರೇಂದ್ರ ಕಾರ್ತಿಕಸ್ಯ ಚ ವೈಭವಂ ।
ದಶಮೀದಿನಮಾರಭ್ಯ ದಶಮ್ಯಾಂ ತು ಸಮಾಪಯೇತ್ ॥ ೧ ॥
ಪೌರ್ಣಮಾಸೀಂ ಸಮಾರಭ್ಯ ಪೌರ್ಣಮಾಸ್ಯಾಂ ಸಮಾಪಯೇತ್ ।
ಆಶ್ವಿನಸ್ಯ ಹರಿದಿನೀಂ ಸಮಾರಭ್ಯ ತು ಭಕ್ತಿಮಾನ್ ॥ ೨ ॥
ದಾಮೋದರಂ ನಮಸ್ಕೃತ್ಯ ಕುರ್ಯಾತ್ಸಂಕಲ್ಪಮಾತ್ಮನಃ ।
ದಾಮೋದರ ನಮಸ್ತೇಽಸ್ತು ಸರ್ವಪಾಪ ವಿನಾಶನ ॥ ೩ ॥
ಕಾರ್ತಿಕಸ್ಯ ವ್ರತಂ ಕರ್ತುಮನುಜ್ಞಾಂ ದಾತುಮರ್ಹಸಿ ।
ನಿರ್ವಿಘ್ನಂ ಕುರು ದೇವೇಶ ಆಮಾಸಂ ಪುರುಷೋತ್ತಮ ॥ ೪ ॥
ಇತಿ ಸಂಪ್ರಾರ್ಥ್ಯ ವಿಧಿನಾ ಕಾರ್ತಿಕವ್ರತಮಾಚರೇತ್ ।
ಅನೂರುಂ ವದತಾ ಪ್ರೋಕ್ತಂ ಭಾಸ್ಕರೇಣ ಶ್ರುತಂ ಮಯಾ ।
ಕಲೌ ಚ ಸ್ವರ್ಗಗಮನಕಾರಣಂ ಶ್ರೂಯತಾಂ ಹಿ ತತ್ ॥ ೫ ॥

---

## ಕನ್ನಡದ ಅನುವಾದ

### ಕಾರ್ತಿಕವೈಭವವರ್ಣನ

೧–೨. ಬ್ರಹ್ಮನು ಹೇಳುತ್ತಾನೆ:— "ವಿಪ್ರೇಂದ್ರಾ! ಕಾರ್ತಿಕಮಾಸದ ವೈಭವವನ್ನು ಇನ್ನೂ ಕೇಳುವವನಾಗು. ಕಾರ್ತಿಕ ವ್ರತವನ್ನು ಆಶ್ವೀಜ ಮಾಸದ ದಶಮಿಯ ದಿನ ಪ್ರಾರಂಭ ಮಾಡಿ ಕಾರ್ತಿಕ ದಶಮಿಯ ದಿನ ಸಮಾಪ್ತಿಮಾಡ ತಕ್ಕದ್ದು. ಅಥವಾ ಆಶ್ವೀಜ ಪೌರ್ಣಮಿಯಲ್ಲಿ ಪ್ರಾರಂಭಿಸಿ ಕಾರ್ತಿಕ ಪೌರ್ಣಮೆಯಲ್ಲಿ ಸಮಾಪ್ತಿ ಮಾಡತಕ್ಕದ್ದು. ಭಕ್ತಿವಂತನಾದವನು ಆಶ್ವೀಜಮಾಸದ ಹಿಂದಿನಿಂದಲೇ ವ್ರತವನ್ನು ಆರಂಭಮಾಡಿ ನಡೆಸಬೇಕು.

೩–೪. ದಾಮೋದರನನ್ನು ನಮಸ್ಕರಿಸಿ ಮೊದಲು ಸಂಕಲ್ಪಮಾಡಬೇಕು. "ದಾಮೋದರ! ಸರ್ವಪಾಪವಿನಾಶಕನಾದ ನಿನಗೆ ಸಮಸ್ಕಾರವು. ಕಾರ್ತಿಕ ವ್ರತವನ್ನು ಮಾಡುವುದಕ್ಕೆ ನನಗೆ ಅನುಜ್ಞೆಯನ್ನು ಕೊಡಬೇಕು. ದೇವೇಶ, ಪುರುಷೋತ್ತಮಾ! ಈ ಮಾಸದ ಕೊನೆಯವರೆಗೂ ನನಗೆ ನಿರ್ವಿಘ್ನತೆಯನ್ನುಂಟು ಮಾಡು."

೫. ಇಂತೆಂದು ಪ್ರಾರ್ಥನೆ ಮಾಡಿ ವಿಧಿಪ್ರಕಾರವಾಗಿ ಕಾರ್ತಿಕ ವ್ರತವನ್ನಾಚರಿಸಬೇಕು. ಆ ಕಾರ್ತಿಕ ವ್ರತವು ಅರುಣನನ್ನು ಕುರಿತು ಮಾತನಾಡುತ್ತಾ

ಸೂರ್ಯ ಉವಾಚ :—

ದ್ವಾದಶಾನಾಂ ತು ಮಾಸಾನಾಂ ಮಾರ್ಗಶಿರ್ಷೋಽತಿಪುಣ್ಯದಃ ॥ ೬ ॥
ತಸ್ಮಾತ್ಪುಣ್ಯಫಲಂ ಪ್ರೋಕ್ತೋ ವೈಶಾಖೋ ನರ್ಮದಾತಟೇ ।
ತತೋ ಲಕ್ಷಗುಣಃ ಪ್ರೋಕ್ತಃ ಪ್ರಯಾಗೇ ಮಾಘಮಾಸಕಃ ॥ ೭ ॥
ತಸ್ಮಾನ್ಮಹಾಫಲಃ ಪ್ರೋಕ್ತಃ ಕಾರ್ತಿಕೋ ಜಲಮಾತ್ರಕೇ ।
ಏಕತಸ್ಸರ್ವದಾನಾನಿ ವ್ರತಾನಿ ನಿಯಮಾಸ್ತಥಾ ॥ ೮ ॥
ಏಕತಃ ಕಾರ್ತಿಕಸ್ನಾನಂ ಬ್ರಹ್ಮಣಾ ತುಲಯಾ ಧೃತಂ ।
ಸಂತತಿಶ್ಚೈವ ಸಂಪತ್ತಿಃ ಕಲೌ ಯೇಷಾಂ ಪ್ರಜಾಯತೇ ॥ ೯ ॥
ಅವಶ್ಯಂ ತೈಃ ಕೃತಂ ವಿದ್ಧಿ ಕಾರ್ತಿಕಸ್ನಾನಮಾದರಾತ್ ।
ಸ್ನಾನಂ ಚ ದೀಪದಾನಂ ಚ ತುಲಸೀವನಪಾಲನಂ ॥ ೧೦ ॥
ಭೂಮಿಶಯ್ಯಾ ಬ್ರಹ್ಮಚರ್ಯಂ ತಥಾ ದ್ವಿದಲವರ್ಜನಂ ।
ವಿಷ್ಣುಸಂಕೀರ್ತನಂ ಸತ್ಯಂ ಪುರಾಣಶ್ರವಣಂ ತಥಾ ॥ ೧೧ ॥
ಕಾರ್ತಿಕೇ ಮಾಸಿ ಕುರ್ವಂತಿ ಜೀವನ್ಮುಕ್ತಾಸ್ತ ಏವ ಹಿ ।
ನ ಕಾರ್ತಿಕಸಮಂ ಧರ್ಮಮರ್ಥ್ಯಂ ನೋ ಕಾರ್ತಿಕಾತ್ಪರಂ ॥ ೧೨ ॥

---

ಭಾಸ್ಕರನಿಂದ ಹೇಳಲ್ಪಟ್ಟಿತು. ಅದನ್ನು ನಾನು ಕೇಳಿದ್ದೇನೆ. ಕಲಿಯುಗದಲ್ಲಾದರೋ ಅದು ಸ್ವರ್ಗಕ್ಕೆ ಹೋಗಲು ಕಾರಣವಾದುದು. ಅದನ್ನು ಆಲಿಸಿರಿ.

೬. ಸೂರ್ಯನು ಹೇಳುತ್ತಾನೆ:—ದ್ವಾದಶ ಮಾಸಗಳಲ್ಲೆಲ್ಲ ಮಾರ್ಗಶೀರ್ಷ ಮಾಸವು ಅತಿ ಪುಣ್ಯಪ್ರದವಾದುದು.

೭. ವೈಶಾಖಮಾಸವು ನರ್ಮದಾ ತೀರದಲ್ಲಿ ಅದಕ್ಕಿಂತಲೂ ಹೆಚ್ಚು ಪುಣ್ಯ ಫಲವುಳ್ಳುದೆಂದು ಹೇಳಲ್ಪಟ್ಟಿದೆ. ಪ್ರಯಾಗದಲ್ಲಿ ಮಾಘಮಾಸವು ಅದಕ್ಕಿಂತಲೂ ಲಕ್ಷ ಪಾಲು ಹೆಚ್ಚೆಂದು ಹೇಳಲಾಗಿದೆ.

೮–೧೨. ಕಾರ್ತಿಕವು ಜಲಮಾತ್ರದಲ್ಲಿ ಆ ಪ್ರಯಾಗ ಮಾಘಮಾಸಕ್ಕಿಂತಲೂ ಮಹಾಫಲದಾಯಕವೆಂದು ಹೇಳಿದೆ. ಸರ್ವದಾನಗಳೂ, ವ್ರತಗಳೂ ನಿಯಮಗಳೂ ಒಂದು ಕಡೆ; ಕಾರ್ತಿಕ ಸ್ನಾನವೇ ಒಂದು ಕಡೆ; ಹೀಗೆ ತಕ್ಕಡಿಯಲ್ಲಿಟ್ಟು ಬ್ರಹ್ಮನು ತೂಗಿದನು. ಸಂತತಿಯೂ, ಸಂಪತ್ತೂ ಕಲಿಯುಗದಲ್ಲಿ ಯಾರಿಗೆ ಉಂಟಾಗುವುದೋ ಅವರು ಕಾರ್ತಿಕಸ್ನಾನವನ್ನು ಆದರದಿಂದ ಮಾಡಿದವರಾಗಿರಬೇಕೆಂದು ತಿಳಿದುಕೊ. ಸ್ನಾನ, ದೀಪದಾನ, ತುಲಸೀವನಪಾಲನ, ಭೂಮಿಶಯ್ಯೆ, ಬ್ರಹ್ಮಚರ್ಯ, ಹಾಗೆಯೆ ದ್ವಿದಲಧಾನ್ಯಗಳನ್ನು ವರ್ಜಿಸುವುದು, ವಿಷ್ಣುಸಂಕೀರ್ತನ, ಸತ್ಯವನ್ನು ನುಡಿಯುವುದು, ಪುರಾಣಶ್ರವಣ, ಇವನ್ನು ಕಾರ್ತಿಕಮಾಸದಲ್ಲಿ ಯಾರು ಮಾಡುತ್ತಾರೆಯೋ ಅವರೇ ಜೀವನ್ಮುಕ್ತರು. ಕಾರ್ತಿಕಕ್ಕೆ ಸಮಾನವಾಗಿ ಧರ್ಮಸಾಧಕವಾದ ಮಾಸವು ಮತ್ತೊಂದಿಲ್ಲ. ಚತುರ್ವಿಧ

**ನ ಕಾರ್ತಿಕಸಮಂ ಕಾಮ್ಯಂ ಮೋಕ್ಷದಾನಂ ನ ಕಾರ್ತಿಕಾತ್ ।**
**ಯುಧಿಷ್ಠಿರೇಣ ಧರ್ಮಾರ್ಥಮರ್ಥಾರ್ಥಂ ಚ ಧ್ರುವೇಣ ಚ ॥ ೧೩ ॥**
**ಶ್ರೀಕೃಷ್ಣೇಣ ತು ಕಾಮಾರ್ಥಂ ಮೋಕ್ಷಾರ್ಥಂ ನಾರದೇನ ಚ ।**
**ಕೃತಮೇತದ್ವ್ರತಂ ತಸ್ಮಾತ್ ಶ್ರೇಷ್ಠಂ ಕೃಷ್ಣಪ್ರಿಯಂ ಚ ಹಿ ॥ ೧೪ ॥**

ಅರುಣ ಉವಾಚ :—

**ಬ್ರೂಹಿ ಭಾಸ್ಕರ ಸರ್ವಾತ್ಮನ್ ಕದಾರಭ್ಯ ವ್ರತಂ ಕೃತಂ ।**
**ಸಫಲಂ ಜಾಯತೇ ಸಮ್ಯಕ್ ಕಾಚ ಪೂಜ್ಯಾ ಚ ದೇವತಾ ॥ ೧೫ ॥**

ಭಾಸ್ಕರ ಉವಾಚ :—

**ಅಹಂ ವಿಷ್ಣುಶ್ಚ ಶರ್ವಶ್ಚ ದೇವೀ ವಿಘ್ನೇಶ್ವರಸ್ತಥಾ ।**
**ಏಕೋಽಹಂ ಪಂಚಧಾ ಜಾತೋ ನಾಟ್ಯೇ ಸೂತ್ರಧರೋ ಯಥಾ ॥ ೧೬ ॥**
**ಅಸ್ಮಾಕಂ ಸರ್ವ ಏವೈತೇ ಭೇದಾ ವಿದ್ಧಿ ಖಗೇಶ್ವರ ।**
**ತಸ್ಮಾತ್ಸೌರೈಶ್ಚ ಗಾಣೇಶೈಃ ಶಾಕ್ತೈಶ್ಶೈವೈಶ್ಚ ವೈಷ್ಣವೈಃ ॥ ೧೭ ॥**
**ಕರ್ತವ್ಯಂ ಕಾರ್ತಿಕಸ್ನಾನಂ ಸರ್ವಪಾಪಾಪನುತ್ತಯೇ ।**
**ಸೂರ್ಯಸ್ಯ ಪ್ರೀತಯೇ ಕಾರ್ಯಂ ತುಲಾಸಂಸ್ಥೇ ದಿವಾಕರೇ ॥ ೧೮ ॥**

---

ಪುರುಷಾರ್ಥಸಾಧಕವಾದುದೂ ಕಾರ್ತಿಕವೇ! ಇದಕ್ಕಿಂತಲೂ ಮೇಲಾದುದು ಮತ್ತೊಂದಿಲ್ಲ.

೧೩–೧೪. ಕಾರ್ತಿಕಕ್ಕೆ ಸಮವಾದ ಕಾಮ್ಯದಾಯಕವೂ, ಮೋಕ್ಷದಾಯಕವೂ ಆದ ವ್ರತವಿರುವುದಿಲ್ಲವು. ಯುಧಿಷ್ಠಿರನಿಂದ ಧರ್ಮಾರ್ಥವಾಗಿಯೂ, ಧ್ರುವನಿಂದ ಅರ್ಥಕ್ಕಾಗಿಯೂ, ಶ್ರೀಕೃಷ್ಣನಿಂದ ಕಾಮಾರ್ಥವಾಗಿಯೂ, ನಾರದನಿಂದ ಮೋಕ್ಷಕ್ಕಾಗಿಯೂ ಈ ವ್ರತವು ಆಚರಿಸಲ್ಪಟ್ಟಿದೆ. ಆದುದರಿಂದ ಇದು ಶ್ರೇಷ್ಠವೂ ಶ್ರೀಕೃಷ್ಣನಿಗೆ ಪ್ರಿಯವೂ ಆಗಿರುವುದು.

೧೫. ಅರುಣನು ಕೇಳುತ್ತಾನೆ:— ಸರ್ವಾತ್ಮಕನಾದ ಎಲೈ ಭಾಸ್ಕರನೇ! ಈ ವ್ರತವನ್ನು ಎಂದಿನಿಂದ ಆರಂಭಿಸಿದರೆ ಚೆನ್ನಾಗಿ ಫಲವನ್ನು ಕೊಡುತ್ತದೆ? ಇಲ್ಲಿ ಪೂಜ್ಯನಾದ ದೇವತೆ ಯಾರು?, ಇವನ್ನು ಹೇಳು.

೧೬. ಭಾಸ್ಕರನು ಹೇಳುತ್ತಾನೆ:—'ನಾನು (ಸೂರ್ಯ), ವಿಷ್ಣು, ಶರ್ವ (ಶಿವ), ದೇವಿ, ವಿಘ್ನೇಶ್ವರ ಇವರು ಪೂಜ್ಯರಾದ ದೇವತೆಗಳು. ನಾಟ್ಯದಲ್ಲಿ ಸೂತ್ರಧಾರನು ಹೇಗೋ ಹಾಗೆ ನಾನೊಬ್ಬನೇ ಐದು ಬಗೆಯಾಗಿರುವನು.

೧೭–೧೮. ಎಲೈ ಪಕ್ಷಿರಾಜನೆ! ಇವೆಲ್ಲವೂ ನನ್ನ ಬೇರೆ ಬೇರೆ ಪ್ರಕಾರಗಳೆಂದು ತಿಳಿದುಕೊ. ಆದುದರಿಂದ ಸೌರರೂ, ಗಾಣಾಪತ್ಯರೂ, ಶಾಕ್ತರೂ, ಶೈವರೂ, ವೈಷ್ಣವರೂ ಸರ್ವಪಾಪಪರಿಹಾರಕ್ಕಾಗಿ ಕಾರ್ತಿಕಸ್ನಾನವನ್ನು ಮಾಡತಕ್ಕದು. ಸೂರ್ಯಪ್ರೀತಿಗಾಗಿ, ಸೂರ್ಯನು ತುಲೆಯಲ್ಲಿರುವಾಗ ಆಶ್ವಿನ

ಈಷತ್ಪೂರ್ಣಾಂ ಸಮಾರಭ್ಯ ಯಾವತ್ಕಾರ್ತಿಕಪೂರ್ಣಿಮಾ ।
ತಾವತ್ ಸ್ನಾನಂ ವಿಧಾತವ್ಯಂ ಶಿವಸಂತುಷ್ಟಯೇ ನರೈಃ ॥ ೧೯ ॥
ದೇವೀಪಕ್ಷಂ ಸಮಾರಭ್ಯ ಮಹಾರಾತ್ರಿಚತುರ್ದಶೀ ।
ತಾವತ್ಸ್ನಾನಂ ವಿಧಾತವ್ಯಂ ದೇವೀ ಸಂಪ್ರೀಯತಾಮಿತಿ ॥ ೨೦ ॥
ಗಣಪಕ್ಷಂ ಸಮಾರಭ್ಯ ಕೃಷ್ಣಾ ಯಾ ಕಾರ್ತಿಕೇ ಭವೇತ್ ।
ಚತುರ್ಥೀ ತಾವದೇವಸ್ಯಾತ್ ಸ್ನಾನಂ ಗಣಪತುಷ್ಟಯೇ ॥ ೨೧ ॥
ಏಕಾದಶೀಂ ಸಮಾರಭ್ಯ ಆಶ್ವಿನಸ್ಯಾಸಿತೇತರಾಂ ।
ಏಕಾದಶ್ಯಾಂ ಕಾರ್ತಿಕಸ್ಯ ಶುಕ್ಲಾಯಾಂ ಪರಿಪೂರ್ಯತೇ ।
ಕೃತಂ ಯೇನ ತು ತಸ್ಯ ಸ್ಯಾತ್ ಪರಿತುಷ್ಟೋ ಜನಾರ್ದನಃ ॥ ೨೨ ॥
ನ ಕಾರ್ತಿಕಸಮೋ ಮಾಸೋ ನ ಕಾಶೀಸದೃಶೀ ಪುರೀ ।
ನ ಪ್ರಯಾಗಸಮಂ ತೀರ್ಥಂ ನ ದೇವಃ ಕೇಶವಾತ್ಪರಃ ॥ ೨೩ ॥
ಪ್ರಸಂಗಾದ್ವಾ ಬಲಾತ್ಕಾರೈಃ ಜ್ಞಾತ್ವಾಽಜ್ಞಾತ್ವಾ ಕೃತಂ ಭವೇತ್ ।
ಸ್ನಾನಂ ಕಾರ್ತಿಕಮಾಸಸ್ಯ ನ ಪಶ್ಯೇದ್ಯಮಯಾತನಾಂ ॥ ೨೪ ॥

---

ಪೂರ್ಣಿಮೆಯಿಂದ ಆರಂಭಮಾಡಿ ಕಾರ್ತಿಕ ಪೂರ್ಣಿಮೆಯವರೆಗೂ ವ್ರತವನ್ನು ಮಾಡಬೇಕು. ಶಿವನ ಸಂತುಷ್ಟಿಗಾಗಿ ಅದೇ ಕಾಲದಲ್ಲಿ ಸ್ನಾನವನ್ನೂ ಮಾಡ ತಕ್ಕುದು.

೨೦. ದೇವೀ ಪಕ್ಷವನ್ನು (ನವರಾತ್ರಿ) ಮೊದಲುಮಾಡಿಕೊಂಡು ಮಹಾ ಶಿವರಾತ್ರಿಯ ಚತುರ್ದಶಿಯವರೆಗಿನ ಕಾಲದಲ್ಲಿ, 'ದೇವಿಯು ತೃಪ್ತಳಾಗಲಿ' ಎಂಬ ಭಾವನೆಯಿಂದಲೇ ಸ್ನಾನವನ್ನಾಚರಿಸತಕ್ಕುದು.

೨೧. ಗಣಪಕ್ಷವನ್ನು ಪ್ರಾರಂಭಮಾಡಿಕೊಂಡು ಕಾರ್ತಿಕ ಕೃಷ್ಣಪಕ್ಷದ ಚತುರ್ಥಿಯವರೆಗೂ ಗಣಪತಿಯ ಸಂತುಷ್ಟಿಗಾಗಿ ಸ್ನಾನವನ್ನಾಚರಿಸಬೇಕು.

೨೨. ಆಶ್ವಿನ ಮಾಸದ ಶುಕ್ಲಪಕ್ಷದ ಏಕಾದಶಿಯನ್ನು ಮೊದಲುಮಾಡಿ ಕೊಂಡು ಕಾರ್ತಿಕ ಶುಕ್ಲ ಏಕಾದಶಿಯಲ್ಲಿ ಮುಗಿಯುವಂತೆ ಯಾರು ವ್ರತಾನು ಷ್ಠಾನ ಮಾಡುವರೋ ಅವರ ವಿಷಯದಲ್ಲಿ ಜನಾರ್ದನನು ಪರಿತುಷ್ಟನಾಗು ತ್ತಾನೆ.

೨೩. ಕಾರ್ತಿಕಕ್ಕೆ ಸಮವಾದ ಮಾಸವಿಲ್ಲ. ಕಾಶಿಗೆ ಸಮನಾದ ಪಟ್ಟಣವಿಲ್ಲ. ಪ್ರಯಾಗಕ್ಕೆ ಸಮನಾದ ತೀರ್ಥವಿಲ್ಲ. ಕೇಶವನಿಗಿಂತ ಮಿಗಿಲಾದ ದೇವನಿಲ್ಲ.

೨೪. ಸಂದರ್ಭಾನುಸಾರವಾಗಿಯಾಗಲಿ, ಬಲಾತ್ಕಾರದಿಂದಲಾಗಲಿ, ತಿಳಿದಾಗಲಿ ತಿಳಿಯದೆ ಆಗಲಿ, ಹೇಗೊ ಕಾರ್ತಿಕ ಸ್ನಾನವನ್ನು ಮಾಡಿದರೆ ಆತನು ಯಮಯಾತನೆಯನ್ನು ಕಾಣುವುದಿಲ್ಲ.

**ಸ್ನಾನಾರ್ಥಂ ಚೇನ್ನ ಸಾಮರ್ಥ್ಯಂ ದತ್ವಾನ್ಯಸ್ಮೈ ಧನಾದಿಕಂ ।**
**ಸ್ನಾನಸ್ಯ ತಸ್ಯ ಹಸ್ತಸ್ಯ ಗ್ರಹಣಾತ್ ಪುಣ್ಯಭಾಗ್ಭವೇತ್ ॥ ೨೫ ॥**
**ಅಥವಾ ಕಾರ್ತಿಕಸ್ನಾನಂ ಯೇ ಕುರ್ವಂತಿ ದ್ವಿಜಾತಯಃ ।**
**ತೇಷಾಂ ಪ್ರಾವರಣಂ ದತ್ವಾ ಸ್ನಾನಜಂ ಫಲಮಾಪ್ನುಯಾತ್ ॥ ೨೬ ॥**
**ರಾಧಾದಾಮೋದರಃ ಪೂಜ್ಯಃ ಕಾರ್ತಿಕೇ ತು ವಿಶೇಷತಃ ॥ ೨೭ ॥**
**ಸ್ವರ್ಣಸ್ಯ ವಾಥ ತಾಮ್ರಸ್ಯಾಪ್ಯಭಾವೇ ಶುಲ್ಬಜಾಮಪಿ ।**
**ಮೃಜ್ಜ್ಯಾಂ ವಾ ಚಿತ್ರಜಾತಾಂ ವಾಽಥವಾ ಪಿಷ್ಟಚಿತ್ರಿತಾಂ ॥ ೨೮ ॥**
**ದಾಮೋದರಸ್ಯ ರಾಧಾಯಾಃ ತುಲಸ್ಯಾಧೋಽರ್ಚಯಂತಿ ಯೇ ।**
**ಮೂರ್ತಿಂ ತೇ ತು ನರಾ ಜ್ಞೇಯಾ ಜೀವನ್ಮುಕ್ತಾ ನ ಸಂಶಯಃ ॥ ೨೯ ॥**
**ಅಪಿ ಪಾಪಸಹಸ್ರಾಢ್ಯಃ ಕಾರ್ತಿಕಸ್ನಾನತೋ ನರಃ ।**
**ಮುಕ್ತೋಽವಶ್ಯಂ ಸ ಭವತಿ ನಾತ್ರ ಕಾರ್ಯಾ ವಿಚಾರಣಾ ॥ ೩೦ ॥**
**ತುಲಸ್ಯಭಾವೇ ಕರ್ತವ್ಯಾ ಪೂಜಾ ಧಾತ್ರೀತಲೇ ಖಗ ।**
**ಮುಖ್ಯಪೂಜಾವಿಧಾನಂ ತು ಕರ್ತವ್ಯಂ ಸೂರ್ಯಮಂಡಲೇ ॥ ೩೧ ॥**

---

೨೫. ಸ್ನಾನಕ್ಕೆ ಸಾಮರ್ಥ್ಯವಿಲ್ಲದಿದ್ದಲ್ಲಿ ಬೇರೊಬ್ಬನಿಗೆ ಧನಾದಿಗಳನ್ನು ಕೊಟ್ಟು ಸ್ನಾನಮಾಡಿದ ಆತನ ಕೈಯನ್ನು ಹಿಡಿದುಕೊಳ್ಳುವುದರಿಂದ ಪುಣ್ಯಭಾಗಿಯಾಗುತ್ತಾನೆ.

೨೬. ಅಥವಾ ಯಾವ ಬ್ರಾಹ್ಮಣರು ಕಾರ್ತಿಕಸ್ನಾನ ಮಾಡುತ್ತಾರೆಯೋ ಅವರಿಗೆ ದಕ್ಷಿಣೆಯೊಡನೆ ವರಣವನ್ನಿತ್ತು ಆ ಮೂಲಕ ಸ್ನಾನದಿಂದುಂಟಾಗುವ ಫಲವನ್ನು ಪಡೆಯತಕ್ಕುದು.

೨೭–೨೯. ಕಾರ್ತಿಕದಲ್ಲಿ ವಿಶೇಷರೀತಿಯಿಂದ ರಾಧಾಮಾಧವರನ್ನು ಪೂಜಿಸಬೇಕು. ಚಿನ್ನದ ಅಥವಾ ಬೆಳ್ಳಿಯ ಅದೂ ಇಲ್ಲವಾದರೆ ತಾಮ್ರದಿಂದ ಮಾಡಿದ, ಅಥವಾ ಮಣ್ಣಿನಿಂದ ನಿರ್ಮಿಸಿದ ಅಥವಾ ಚಿತ್ರದಲ್ಲಿ ಬರೆದ ಅಥವಾ ರಂಗವಲ್ಲಿ ಮುಂತಾದ ಹಿಟ್ಟಿನಿಂದ ಚಿತ್ರಿಸಿದ ದಾಮೋದರ ಮತ್ತು ರಾಧೆಯರ ಮೂರ್ತಿಗಳನ್ನು ತುಲಸಿಯ ಬುಡದಲ್ಲಿಟ್ಟು ಯಾರು ಪೂಜಿಸುವರೊ ಆ ಮನುಷ್ಯರು ಜೀವನ್ಮುಕ್ತರೆಂದೇ ತಿಳಿಯಬೇಕು. ಇದರಲ್ಲಿ ಸಂಶಯವಿಲ್ಲವು.

೩೦. ಸಹಸ್ರಾರು ಪಾಪಗಳಿಂದ ತುಂಬಿದವನೇ ಆದರೂ ಕಾರ್ತಿಕ ಸ್ನಾನದಿಂದ ಮನುಷ್ಯನು ಅವಶ್ಯಕವಾಗಿಯೂ ಮುಕ್ತನಾಗುತ್ತಾನೆ; ಇಲ್ಲಿ ವಿಚಾರಮಾಡಬೇಕಾದುದೇ ಇಲ್ಲವು.

**೩೧.** ಎಲೈ ಖಗನೆ! ತುಲಸಿಯಿಲ್ಲವಾದ ಪಕ್ಷದಲ್ಲಿ, ನೆಲ್ಲಿಯ ಮರದ ಕೆಳಗೆ ಪೂಜೆ ಮಾಡಬೇಕು. ಮುಖ್ಯ ಪೂಜಾವಿಧಾನವನ್ನು ಸೂರ್ಯಮಂಡಲದಲ್ಲಿ ಮಾಡಬೇಕು.

ಅಪ್ರತ್ಯಕ್ಷಾಸ್ಸರ್ವದೇವಾಃ ಪ್ರತ್ಯಕ್ಷೋ ಭಗವಾನಯಂ ।
ಸರ್ವೇ ದೇವಾಃ ಕಾಲವಶಾಃ ಕಾಲಕಾಲೋ ದಿವಾಕರಃ ॥ ೩೨ ॥
ಏತದಾರಾಧನೇಽಶಕ್ತಃ ಪ್ರತಿಮಾಂ ಪೂಜಯೇನ್ನರಃ ।
ಪ್ರತಿಮಾತೋಽಧಿಕಂ ಪುಣ್ಯಂ ಬ್ರಾಹ್ಮಣಸ್ಯ ತು ಪೂಜನೇ ॥ ೩೩ ॥
ದರಿದ್ರೋ ದಾನಪಾತ್ರಂ ಸ್ಯಾತ್ ವಿದ್ಯಾವಾಂಸ್ತು ವಿಶೇಷತಃ ।
ವಿಪ್ರಾಽಭಾವೇ ಪೂಜನೀಯಾ ಗಾವಃ ಕೃಷ್ಣಾ ಮನೋಹರಾಃ ॥ ೩೪ ॥
ವಿಷ್ಣೋರ್ಮೂರ್ತಿರ್ಜಂಗಮತಃ ಸ್ಥಾವರಾತಿಪ್ರಶಸ್ಯತೇ ।
ಶೂದ್ರಸ್ಥಾಪಿತಮೂರ್ತೀನಾಂ ನಮಸ್ಕಾರಂ ಕರೋತಿ ಯಃ ।
ಪಿತೃಭಿರ್ನಿರಯಂ ಯಾತಿ ದಶಪೂರ್ವೈರ್ದಶಾಽಪರೈಃ ॥ ೩೫ ॥
ಶೂದ್ರಾರ್ಚಿತಸ್ಯ ಸಂಸ್ಪರ್ಶಾತ್ ದಹೇದಾಸಪ್ತಮಂ ಕುಲಂ ॥ ೩೬ ॥
ತಸ್ಮಾದ್ವಿಚಾರ್ಯ ವಿಪ್ರೈರ್ಯಾ ಸ್ಥಾಪಿತಾ ತಾಂ ಸಮರ್ಚಯೇತ್ ।
ತತೋಽಪಿ ಯಾ ದೇವತಾಭಿಃ ಕೃತಾ ಸಾ ಭುಕ್ತಿಮುಕ್ತಿದಾ ॥ ೩೭ ॥

---

೩೨. ಸಮಸ್ತ ದೇವತೆಗಳೂ ಅಪ್ರತ್ಯಕ್ಷರಾದವರು. ಸೂರ್ಯಭಗವಂತನಾದ ನಾನಾದರೊ ಪ್ರತ್ಯಕ್ಷನಾದವನು. ಸರ್ವದೇವತೆಗಳೂ ಕಾಲಕ್ಕೆ ವಶರಾದವರು; ದಿವಾಕರನಾದ ನಾನು ಕಾಲಕಾಲನಾದವನು.

೩೩. ಈ ರೀತಿ ಆರಾಧನೆ ಮಾಡಲು ಅಶಕ್ತನಾದವನು ಪ್ರತಿಮೆಯನ್ನು ಪೂಜೆಮಾಡಬೇಕು. ಬ್ರಾಹ್ಮಣನನ್ನುಪೂಜಿಸುವುದರಿಂದ ಪ್ರತಿಮಾಪೂಜೆಗಿಂತಲೂ ಅಧಿಕಪುಣ್ಯವುಂಟಾಗುತ್ತದೆ.

೩೪. ದರಿದ್ರನು ದಾನಕ್ಕೆ ಪಾತ್ರನಾಗುತ್ತಾನೆ; ವಿದ್ಯಾವಂತನಾದವನು ವಿಶೇಷ ಪಾತ್ರನು. ಬ್ರಾಹ್ಮಣನಿಲ್ಲದಿದ್ದರೆ ಮನೋಹರವಾದ ಕೃಷ್ಣವರ್ಣದ ಗೋವುಗಳನ್ನು ಪೂಜಿಸತಕ್ಕುದು.

೩೫. ವಿಷ್ಣುವಿನ ಜಂಗಮಮೂರ್ತಿಗಿಂತಲೂ ಸ್ಥಾವರಮೂರ್ತಿಯು ಪ್ರಶಸ್ತವಾದುದು. ಶೂದ್ರನಿಂದ ಸ್ಥಾಪಿತವಾದ ಮೂರ್ತಿಗಳಿಗೆ ಯಾವನು ನಮಸ್ಕಾರ ಮಾಡುತ್ತಾನೆಯೋ ಅವನು ಹಿಂದಿನ ಹತ್ತು ತಲೆಯ ಮತ್ತು ಮುಂದಿನ ಹತ್ತು ತಲೆಯ ಪಿತೃಗಳಿಂದೊಡಗೂಡಿ ನರಕವನ್ನೈದುತ್ತಾನೆ.

೩೬. ಶೂದ್ರನು ಅರ್ಚಿಸಿದ ಮೂರ್ತಿಯನ್ನು ಸ್ಪರ್ಶಿಸುವುದರಿಂದ ಏಳು ತಲೆಯವರೆಗೂ ಕುಲವನ್ನು ದಹಿಸುತ್ತಾನೆ.

೩೭. ಆದುದರಿಂದ ಚೆನ್ನಾಗಿ ವಿಚಾರಮಾಡಿ ಯಾವ ಮೂರ್ತಿಯು ಬ್ರಾಹ್ಮಣರಿಂದ ಸ್ಥಾಪಿತವಾಗಿದೆಯೋ ಅದನ್ನೇ ಅರ್ಚಿಸತಕ್ಕುದು. ಅದಕ್ಕಿಂತಲೂ

ಮೂರ್ತ್ಯಭಾವೇ ಪೂಜನೀಯೋಽಶ್ವತ್ಥೋ ವಾಥ ವಟೋಽಥ ವಾ ।
ಅಶ್ವತ್ಥರೂಪೀ ವಿಷ್ಣುಃ ಸ್ಯಾದ್ವಟರೂಪೀ ಶಿವೋ ಯತಃ ॥ ೩೮ ॥
ಕಾರ್ತಿಕೇ ತುಲಸೀಶಾಕಂ ತಾಂಬೂಲಂ ವಾ ನರಾಧಮಃ ।
ಅಜ್ಞಾನಾಜ್ಜ್ಞಾನತೋ ವಾಪಿ ಭುಂಜಾನೋ ನಿರಯಂ ವ್ರಜೇತ್ ॥ ೩೯ ॥
ಶಾಲಿಗ್ರಾಮಶಿಲಾಚಕ್ರೇ ನಿತ್ಯಂ ಸನ್ನಿಹಿತೋ ಹರಿಃ ।
ತಸ್ಮಾತ್ಸರ್ವಪ್ರಯತ್ನೇನ ಶಾಲಿಗ್ರಾಮಂ ಪ್ರಪೂಜಯೇತ್ ॥ ೪೦ ॥
ರುದ್ರಶಾಪವಶಾದ್ಗಾವೋ ವಿಷ್ಠಾಭಕ್ಷಣತತ್ಪರಾಃ ।
ತಥಾಪಿ ತಾಃ ಪೂಜನೀಯಾ ಲೋಕದ್ವಯಫಲಪ್ರದಾಃ ॥ ೪೧ ॥
ಬ್ರಹ್ಮಾಂಶಕಸಮುದ್ಭೂತೇ ಪಾಲಾಶೇ ಯಸ್ತು ಭೋಜನಂ ।
ಕುರ್ಯಾತ್ಕಾರ್ತಿಕಮಾಸೇಽಸೌ ವಿಷ್ಣುಲೋಕಂ ಪ್ರಯಾಸ್ಯತಿ ॥ ೪೨ ॥
ಅಶ್ವತ್ಥರೂಪೀ ಭಗವಾನ್ ವಟರೂಪೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ಕಾರ್ತಿಕೇಽಶ್ವತ್ಥಮರ್ಚಯೇತ್ ॥ ೪೩ ॥

---

ಅಧಿಕವಾದುದೆಂದರೆ, ದೇವತೆಗಳಿಂದ ಸ್ಥಾಪನೆಮಾಡಲ್ಪಟ್ಟಿರುವುದು; ಅದು ಭಕ್ತಿಮುಕ್ತಿಗಳನ್ನು ಕೊಡುವಂಥದು.

೩೮. ಮೂರ್ತಿಯ ಅಭಾವದಲ್ಲಿ ಅಶ್ವತ್ಥವನ್ನೊ ವಟವೃಕ್ಷವನ್ನೊ ಪೂಜೆ ಮಾಡಬೇಕು. ಏಕೆಂದರೆ, ವಿಷ್ಣುವು ಅಶ್ವತ್ಥರೂಪಿ; ಶಿವನು ವಟರೂಪಿ.

೩೯. ಕಾರ್ತಿಕಮಾಸದಲ್ಲಿ ತುಲಸೀಶಾಕವನ್ನೂ, ತಾಂಬೂಲವನ್ನೂ ಯಾವ ನರಾಧಮನು ಅಜ್ಞಾನದಿಂದಲೇ ಆಗಲಿ, ಜ್ಞಾನದಿಂದಲೇ ಆಗಲಿ ಸೇವಿಸುತ್ತಾನೆಯೊ ಅವನು ನರಕಕ್ಕೆ ಹೋಗುತ್ತಾನೆ.

೪೦. ಸಾಲಿಗ್ರಾಮ ಶಿಲಾಚಕ್ರದಲ್ಲಿ ನಿತ್ಯವೂ ಹರಿಯು ನೆಲಸಿರುವನು. ಆದುದರಿಂದ ಸರ್ವಪ್ರಯತ್ನದಿಂದಲೂ ಸಾಲಿಗ್ರಾಮವನ್ನು ಪೂಜಿಸಬೇಕು.

೪೧. ರುದ್ರನ ಶಾಪಕ್ಕೊಳಗಾಗಿ ಹಸುಗಳು ಅಮೇಧ್ಯಭಕ್ಷಣದಲ್ಲಿ ಆಸಕ್ತವಾಗಿವೆಯಾದರೂ ಅವು ಪೂಜಾರ್ಹಗಳು; ಎರಡು ಲೋಕಗಳ ಫಲವನ್ನೂ ಕೊಡುವಂಥವು.

೪೨. ಕಾರ್ತಿಕಮಾಸದಲ್ಲಿ ಯಾರು ಬ್ರಹ್ಮಾಂಶದಿಂದುದ್ಭವಿಸಿರುವ ಪಲಾಶಪತ್ರದಲ್ಲಿ (ಮುತ್ತುಗದೆಲೆಯಲ್ಲಿ) ಭೋಜನಮಾಡುತ್ತಾರೆಯೋ ಅವರು ವಿಷ್ಣುಲೋಕವನ್ನು ಸೇರುತ್ತಾರೆ.

೪೩. ಭಗವಂತನಾದ ನಾರಾಯಣನು ಅಶ್ವತ್ಥರೂಪಿಯು; ವಟರೂಪಿಯು ಸದಾಶಿವನು. ಆದುದರಿಂದ ಸರ್ವಪ್ರಯತ್ನದಿಂದಲೂ ಕಾರ್ತಿಕದಲ್ಲಿ ಅಶ್ವತ್ಥವನ್ನು ಅರ್ಚಿಸಬೇಕು.

ಯಾ ನಾರೀ ಕಾರ್ತಿಕೇ ಮಾಸಿ ಲಕ್ಷಂ ಕುರ್ಯಾತ್ಪ್ರದಕ್ಷಿಣಾಃ ।
ರಾಧಾದಾಮೋದರಂ ಪೂಜ್ಯ ಮಂದವಾರೇ ಚ ತತ್ತಲೇ ॥ ೪೪ ॥
ದಂಪತೀ ಭೋಜಯೇದ್ರಾಧಾದಾಮೋದರಸ್ವರೂಪಿಣೌ ।
ಭೋಜಯಿತ್ವಾ ಸಪತ್ನೀಕಾನ್ ಪಶ್ಚಾದ್ಭುಂಜೀತ ವಾಗ್ಯತಃ ॥ ೪೫ ॥
ವಂಧ್ಯಾಽಪಿ ಲಭತೇ ಪುತ್ರಂ ಇತರಾಸಾಂ ತು ಕಾಕಥಾ ।
ಸದಾ ಸನ್ನಿಹಿತೋ ವಿಷ್ಣುಃ ದ್ವಿಪತ್ಸು ಬ್ರಾಹ್ಮಣೇ ಯಥಾ ॥ ೪೬ ॥
ಬೋಧಿದ್ರುಮೇ ಪಾದಪೇಷು ಶಾಲಿಗ್ರಾಮೇ ಶಿಲಾಸು ಚ ।
ತಸ್ಮಾದಶ್ವತ್ಥಮೂಲೇ ವೈ ಕರ್ತವ್ಯಂ ವಿಷ್ಣುಪೂಜನಂ ॥ ೪೭ ॥
ಅಶ್ವತ್ಥಪೂಜಾಸ್ಪರ್ಶೇನ ಕರ್ತವ್ಯಾ ಶನಿವಾಸರೇ ।
ಅನ್ಯವಾರೇಽಶ್ವತ್ಥಸಂಗಾತ್ ದರಿದ್ರೋ ಜಾಯತೇ ನರಃ ॥ ೪೮ ॥
ಸ್ನಾನಂ ಜಾಗರಣಂ ದೀಪಂ ತುಲಸೀವನಪಾಲನಂ ।
ಕಾರ್ತಿಕೇ ಮಾಸಿ ಕುರ್ವಂತಿ ತೇ ನರಾ ವಿಷ್ಣುಮೂರ್ತಯಃ ॥ ೪೯ ॥
ಸಂಮಾರ್ಜನಂ ವಿಷ್ಣುಗೃಹೇ ಸ್ವಸ್ತಿಕಾದಿ ನಿವೇದನಂ ।
ವಿಷ್ಣೋಃ ಪೂಜಾಂ ಚ ಯೇ ಕುರ್ಯುರ್ಜೀವನ್ಮುಕ್ತಾಸ್ತು ತೇ ನರಾಃ ॥

---

೪೪–೪೭. ಯಾವ ನಾರಿಯು ಕಾರ್ತಿಕಮಾಸದಲ್ಲಿ ಶನಿವಾರದ ದಿನ ಶ್ರೀ ರಾಧಾದಾಮೋದರರನ್ನು ಪೂಜಿಸಿ ಲಕ್ಷಪ್ರದಕ್ಷಿಣೆ ಮಾಡುತ್ತಾಳೆಯೋ, ರಾಧಾ ದಾಮೋದರ ಸ್ವರೂಪಿಗಳಾದ ದಂಪತಿಗಳಿಗೆ ಭೋಜನಮಾಡಿಸುತ್ತಾಳೆಯೋ, ಪತ್ನಿಸಮೇತರಾದವರಿಗೆ ಭೋಜನ ಮಾಡಿಸಿ ಮೌನವಾಗಿ ಭೋಜನಮಾಡುತ್ತಾಳೆಯೋ ಅವಳು ಬಂಜೆಯೇ ಆದರೂ ಪುತ್ರನನ್ನು ಪಡೆಯುತ್ತಾಳೆ; ಉಳಿದವರ ವಿಷಯದಲ್ಲಿ ಹೇಳತಕ್ಕುದೇನು? ವಿಷ್ಣುವು ಬ್ರಾಹ್ಮಣರಲ್ಲಿ ಸದಾ ಸನ್ನಿಹಿತನಾಗಿ ರುತ್ತಾನೆ. ಅದೇ ರೀತಿ ಮರಗಳಲ್ಲಿ ಅಶ್ವತ್ಥವೃಕ್ಷದಲ್ಲಿಯೂ, ಶಿಲೆಗಳಲ್ಲಿ ಸಾಲಿಗ್ರಾಮದಲ್ಲಿಯೂ ಸದಾ ವಾಸಿಸಿರುತ್ತಾನೆ. ಆದುದರಿಂದ ಅಶ್ವತ್ಥಮೂಲ ದಲ್ಲಿ ವಿಷ್ಣುಪೂಜೆಯನ್ನು ಮಾಡಬೇಕು.

೪೮. ಶನಿವಾರದಲ್ಲಿ ಅಶ್ವತ್ಥಪೂಜೆಯನ್ನು ವೃಕ್ಷಸ್ಪರ್ಶಪೂರ್ವಕವಾಗಿ ಮಾಡಬೇಕು. ಬೇರೆ ವಾರದಲ್ಲಿ ಅಶ್ವತ್ಥಸ್ಪರ್ಶದಿಂದ ನರನು ದರಿದ್ರನಾಗುತ್ತಾನೆ.

೪೯. ಯಾರು ಕಾರ್ತಿಕಮಾಸದಲ್ಲಿ ಸ್ನಾನವನ್ನೂ, ಜಾಗರಣೆಯನ್ನೂ, ದೀಪ ಇಡುವುದನ್ನೂ, ತುಲಸೀವನದ ಪಾಲನೆಯನ್ನೂ ಮಾಡುತ್ತಾರೆಯೋ ಆ ನರರು ಶ್ರೀಮಹಾವಿಷ್ಣುಸ್ವರೂಪರೇ ಸರಿ.

೫೦. ಯಾರು ವಿಷ್ಣುಗೃಹದಲ್ಲಿ ಸಂಮಾರ್ಜನೆಯನ್ನೂ, ಸ್ವಸ್ತಿಕ ಮೊದಲಾ ದವುಗಳ ರಂಗವಲ್ಲಿಗಳ ನಿವೇದನವನ್ನೂ, ವಿಷ್ಣುಪೂಜೆಯನ್ನೂ ಮಾಡುವರೋ ಆ ಮನುಷ್ಯರು ಜೀವನ್ಮುಕ್ತರೇ ಸರಿ.

**ಸ್ನಾನಕಾಲಂ ಪ್ರವಕ್ಷ್ಯಾಮಿ ತೀರ್ಥಾದಿಷು ಚ ಯತ್ಫಲಂ ।**
**ಸ್ನಾನಧರ್ಮಾಶ್ಚ ಯೇ ಕೇಚಿತ್ ತಾನ್‌ಸರ್ವಾನ್ ಮೇ ನಿಬೋಧತ॥೫೧॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಕಾರ್ತಿಕವೈಭವ ವರ್ಣನಂ" ನಾಮ ತೃತಿಯೋಽಧ್ಯಾಯಃ**

---

೫೧. ಸ್ನಾನಕಾಲವನ್ನು ತಿಳಿಸುತ್ತೇನೆ. ತೀರ್ಥಾದಿಗಳಲ್ಲಿ ಏನು ಫಲವುಂಟೋ ಅದನ್ನು ಹೇಳುತ್ತೇನೆ. ಎಲೈ ಅರುಣನೇ! ಸ್ನಾನಧರ್ಮಗಳು ಯಾವುವುಂಟೋ ಅವನ್ನೂ ತಿಳಿಸುತ್ತೇನೆ. ನನ್ನಿಂದ ಅವುಗಳನ್ನು ಕೇಳಿ ಅರಿತುಕೋ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಕಾರ್ತಿಕವೈಭವವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಕಾರ್ತಿಕಸ್ನಾನವಿಧಿನಿರೂಪಣಂ

ಬ್ರಹ್ಮೋವಾಚ :—

ನಾಡೀದ್ವಯಾವಶಿಷ್ಟಾಯಾಂ ರಾತ್ರ್ಯಾಂ ಗಚ್ಛೇಜ್ಜಲಾಶಯಂ ।
ತುಲಸೀಮೃತ್ತಿಕಾಯುಕ್ತಃ ಸವಸ್ತ್ರಕಲಶೋ ಮುನೇ ॥ ೧ ॥
ಆಗತ್ಯ ತೋಯನಿಕಟೇ ತೀರೇ ಸಂಸ್ಥಾಪ್ಯ ಪಾತ್ರಕಂ ।
ಪಾದಪ್ರಕ್ಷಾಲನಂ ಕೃತ್ವಾ ದೇಶಕಾಲಾದಿ ಚೋಚ್ಚರೇತ್ ॥ ೨ ॥
ಸ್ಮರೇದ್ಗಂಗಾದಿಕಾ ನದ್ಯೋ ವಿಷ್ಣುಶರ್ವಾದಿದೇವತಾಃ ।
ನಾಭಿಮಾತ್ರೇ ಜಲೇ ಸ್ಥಿತ್ವಾ ಮಂತ್ರಮೇತಮುದೀರಯೇತ್ ॥ ೩ ॥
ಕಾರ್ತಿಕೇಽಹಂ ಕರಿಷ್ಯಾಮಿ ಪ್ರಾತಸ್ಸ್ನಾನಂ ಜನಾರ್ದನ ।
ಪ್ರೀತ್ಯರ್ಥಂ ತವ ದೇವೇಶ ದಾಮೋದರ ಮಯಾ ಸಹ ॥ ೪ ॥
ನಿತ್ಯೇ ನೈಮಿತ್ತಿಕೇ ಕೃತ್ವಾ ಕಾರ್ತಿಕೇ ಪಾಪನಾಶನ ।
ಸ್ನಾನಂ ಚಾರ್ಘ್ಯಂ ಪ್ರದಾಸ್ಯಾಮಿ ನಿರ್ವಿಘ್ನಂ ಕುರು ಕೇಶವ ॥ ೫ ॥

---

### ಕನ್ನಡದ ಅನುವಾದ

#### ಕಾರ್ತಿಕಸ್ನಾನವಿಧಿನಿರೂಪಣ

೧. ಬ್ರಹ್ಮನು ಹೇಳುತ್ತಾನೆ :—“ ಎಲೈ ಮುನಿಯೇ ! ರಾತ್ರಿಯಲ್ಲಿ ಎರಡು ಗಳಿಗೆಗಳು ಉಳಿದಿರುವಾಗಲೆ ತುಲಸೀಮೃತ್ತಿಕೆಯನ್ನೂ, ವಸ್ತ್ರಕಲಶಗಳನ್ನೂ ತೆಗೆದುಕೊಂಡು ಜಲಾಶಯಕ್ಕೆ ಹೋಗಬೇಕು.

೨. ಜಲಾಶಯದ ಬಳಿಗೆ ಬಂದು ದಡದಮೇಲೆ ಪಾತ್ರೆಯನ್ನಿಟ್ಟು ಕಾಲು ತೊಳೆದುಕೊಂಡು ದೇಶಕಾಲಾದಿಗಳನ್ನು ಉಚ್ಚರಿಸಬೇಕು.

೩. ಗಂಗಾದಿ ನದಿಗಳನ್ನೂ, ಶಿವ, ವಿಷ್ಣು, ಮೊದಲಾದ ದೇವತೆಗಳನ್ನೂ ಸ್ಮರಿಸಬೇಕು. ಹೊಕ್ಕುಳವರೆಗೂ ನೀರಿನಲ್ಲಿ ನಿಂತು ಮುಂದೆ ನಿರೂಪಿಸುವ ಈ ಮಂತ್ರವನ್ನು ಹೇಳಿಕೊಳ್ಳಬೇಕು.

೪. ‘ಓ ಜನಾರ್ದನಾ! ನಾನು ಈ ಕಾರ್ತಿಕಮಾಸದಲ್ಲಿ ಪ್ರಾತಃಸ್ನಾನ ಮಾಡುತ್ತೇನೆ. ದೇವೇಶಾ! ದಾಮೋದರಾ, ನನ್ನಲ್ಲಿ ನಿನಗೆ ಪ್ರೀತಿಯುಂಟಾಗಲೆಂದೇ ಈ ಪ್ರಾತಃಸ್ನಾನವನ್ನು ಮಾಡುತ್ತೇನೆ.

೫. ಎಲೈ ಪಾಪನಾಶಕನೇ! ಕಾರ್ತಿಕದಲ್ಲಿ ಸ್ನಾನಮಾಡಿ, ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಿ ಅರ್ಘ್ಯಕೊಡುತ್ತೇನೆ. ಕೇಶವಾ! ನನಗೆ ನಿರ್ವಿಘ್ನತೆಯನ್ನುಂಟುಮಾಡು.”

ತೀರ್ಥಾಧಿದೇವತಾಭ್ಯಶ್ಚ ಕ್ರಮಾದರ್ಘ್ಯಾದಿ ದಾಪಯೇತ್ ।
ಗೃಹಾಣಾರ್ಘ್ಯಂ ಮಯಾ ದತ್ತಂ ರಾಧಯಾ ಸಹಿತೋ ಹರೇ ॥ ೬ ॥
ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೭ ॥
ವ್ರತಿನಃ ಕಾರ್ತಿಕೇ ಮಾಸಿ ಸ್ನಾತಸ್ಯ ವಿಧಿವನ್ಮಮ ।
ಗೃಹಾಣಾರ್ಘ್ಯಂ ಮಯಾ ದತ್ತಂ ದನುಜೇಂದ್ರನಿಷೂದನ ॥ ೮ ॥
ಕಿರಣಾ ಧೂತಪಾಪಾ ಚ ಪುಣ್ಯತೋಯಾ ಸರಸ್ವತೀ ।
ಗಂಗಾ ಚ ಯಮುನಾ ಚೈವ ಪಂಚನದ್ಯಃ ಪುನಂತು ಮಾಂ ॥ ೯ ॥
ಅನ್ಯಾಸಾಂ ಚ ನದೀನಾಂ ಚ ದದ್ಯಾದರ್ಘ್ಯಂ ಯಥಾವಿಧಿ ।
ಜಾಹ್ನವೀಸ್ಮರಣಂ ಕುರ್ಯಾತ್ ಸರ್ವತೀರ್ಥೇಷು ಮಾನವಃ ॥ ೧೦ ॥
ನಾನ್ಯತೀರ್ಥಂ ತು ಜಾಹ್ನವ್ಯಾಂ ಸ್ಮರಣೀಯಂ ಕದಾಚನ ।
ಏತಾನ್ಮಂತ್ರಾನ್ಸಮುಚ್ಚಾರ್ಯ ಮಲಸ್ನಾನಂ ಸಮಾಚರೇತ್ ॥ ೧೧ ॥
ಮೃತ್ಸ್ನಾನಂ ಚ ಪಿತೃಸ್ನಾನಂ ಗುರುಸ್ನಾನಂ ತತಃ ಪರಂ ।
ತತಸ್ತು ಪಾವಮಾನೀಭಿರಭಿಷಿಂಚೇತ್ಸ್ವಮಸ್ತಕಂ ॥ ೧೨ ॥

---

೬. ತರುವಾಯ ತೀರ್ಥಾಧಿದೇವತೆಗಳಿಗೂ ಕ್ರಮವಾಗಿ ಅರ್ಘ್ಯ ಮೊದಲಾದವನ್ನು ಕೊಡಬೇಕು. "ರಾಧೆಯಿಂದೊಡಗೂಡಿದ ಹರಿಯೇ! ನಾನು ಕೊಟ್ಟ ಅರ್ಘ್ಯವನ್ನು ಸ್ವೀಕರಿಸು.

೭. ಕಮಲನಾಭ! ನಿನಗೆ ನಮಸ್ಕಾರವು. ಜಲಶಾಯಿಯೇ! ನಿನಗೆ ನಮಸ್ಕಾರವು. ಹೃಷೀಕೇಶಾ! ನಿನಗೆ ನಮಸ್ಕಾರವು. ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು.

೮. ಎಲೈ ದನುಜೇಂದ್ರವಿನಾಶಕನೇ! ಕಾರ್ತಿಕಮಾಸದಲ್ಲಿ ವ್ರತಗ್ರಹಣವನ್ನು ಮಾಡಿ ವಿಧಿವತ್ತಾಗಿ ಸ್ನಾನಮಾಡಿ ನಾನು ಭಕ್ತಿಯಿಂದ ನಿನಗಾಗಿ ಕೊಟ್ಟ ಅರ್ಘ್ಯವನ್ನು ಗ್ರಹಣಮಾಡು.

೯. ಕಿರಣಾ, ಧೂತಪಾಪಾ, ಪುಣ್ಯಜಲಗಳುಳ್ಳ ಸರಸ್ವತೀ, ಗಂಗಾ, ಯಮುನಾ ಈ ಪಂಚನದಿಗಳು ನನ್ನನ್ನು ಪವಿತ್ರಮಾಡಲಿ."

೧೦–೧೧. ಉಳಿದ ನದಿಗಳಿಗೂ ಯಥಾವಿಧಿಯಾಗಿ ಅರ್ಘ್ಯವನ್ನು ಕೊಡತಕ್ಕದ್ದು. ಮಾನವನು ಸರ್ವತೀರ್ಥಗಳಲ್ಲಿಯೂ ಜಾಹ್ನವೀ ಸ್ಮರಣೆಯನ್ನು ಮಾಡಬೇಕು. ಜಾಹ್ನವಿಯಲ್ಲಾದರೊ ಬೇರೊಂದು ತೀರ್ಥವನ್ನು ಎಂದೆಂದಿಗೂ ಸ್ಮರಿಸಲಾಗದು. ಈ ಮಂತ್ರಗಳನ್ನು ಚೆನ್ನಾಗಿ ಉಚ್ಚಾರಮಾಡಿ ಮಲಸ್ನಾನವನ್ನು ಮಾಡಬೇಕು.

೧೨. ಆ ಬಳಿಕ, ಮೃತ್ತಿಕಾಸ್ನಾನವನ್ನೂ, ಪಿತೃಸ್ನಾನವನ್ನೂ, ಗುರು

ಅಘಮರ್ಷಣಕಂ ಕೃತ್ವಾ ಸ್ನಾನಾಂಗಂ ತರ್ಪಣಂ ತಥಾ ।
ತತಃ ಪುರುಷಸೂಕ್ತೇನ ಜಲಂ ಶಿರಸಿ ಸಿಂಚಯೇತ್ ॥ ೧೩ ॥
ತತಸ್ತು ಬಹಿರಾಗತ್ಯ ತೀರ್ಥಂ ಶಿರಸಿ ನಿಕ್ಷಿಪೇತ್ ।
ತೀರ್ಥಂ ಪೀತ್ವಾ ತ್ರಿವಾರಂ ತು ತುಲಸೀಂ ಗೃಹ್ಯ ಪಾಣಿನಾ ॥ ೧೪ ॥
ತತೋ ಜಲಾದ್ವಿನಿಷ್ಕ್ರಮ್ಯ ಚಾಂಚಲಂ ಪೀಡಯೇದ್ಬಹಿಃ ।
ಯನ್ಮಯಾ ದೂಷಿತಂ ತೋಯಂ ಶರೀರಮಲಸಂಚಯೈಃ ॥ ೧೫ ॥
ತದ್ದೋಷಪರಿಹಾರಾರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಂ ।
ವಸ್ತ್ರನಿಷ್ಪೀಡನಂ ಕೃತ್ವಾ ಕುರ್ಯಾಚ್ಚ ತಿಲಕಾದಿಕಂ ॥ ೧೬ ॥

ಸೂತ ಉವಾಚ :—

ಶೃಣುಧ್ವಮೃಷಯಸ್ಸರ್ವೇ ಕಾರ್ತಿಕಸ್ನಾನಜಂ ಫಲಂ ।
ಅರುಣಂ ಪ್ರತಿ ಸೂರ್ಯೇಣ ಯದುಕ್ತಂ ಚ ಸವಿಸ್ತರಂ ॥ ೧೭ ॥

ಅರುಣ ಉವಾಚ :—

ಕಸ್ಮಿನ್ ತೀರ್ಥೇ ವಿಶೇಷೇಣ ಫಲಂ ಕಾರ್ತಿಕಸಂಭವಂ ।
ಕ್ಷೇತ್ರೇ ವಾ ಏತದಾಖ್ಯಾಹಿ ಭಗವನ್ ಸ್ನಾನಯೋಗತಃ ॥ ೧೮ ॥

---

ಸ್ನಾನವನ್ನು ಮಾಡಬೇಕು. ಆ ಬಳಿಕ ಪವಮಾನಮಂತ್ರಗಳಿಂದ ಶಿರಸ್ಸಿನಲ್ಲಿ ಜಲವನ್ನು ಪ್ರೋಕ್ಷಣೆಮಾಡಿಕೊಳ್ಳಬೇಕು.

೧೩. ಅಘಮರ್ಷಣಸೂಕ್ತವನ್ನು ಹೇಳಿಕೊಂಡು ಸ್ನಾನಮಾಡಿ ಸ್ನಾನಾಂಗವಾಗಿ ತರ್ಪಣ ಕೊಡಬೇಕು. ಬಳಿಕ ಪುರುಷಸೂಕ್ತದಿಂದ ಜಲವನ್ನು ತಲೆಯ ಮೇಲೆ ಚುಮುಕಿಸಿಕೊಳ್ಳಬೇಕು.

೧೪. ಆಚಮನಮಾಡಿ ಕೈಯಲ್ಲಿ ತುಲಸಿಯನ್ನು ಹಿಡಿದುಕೊಂಡು ತೀರ್ಥವನ್ನು ಶಿರಸ್ಸಿನಲ್ಲಿ ಇಟ್ಟುಕೊಳ್ಳಬೇಕು.

೧೫–೧೬. ಆ ಬಳಿಕ ನೀರಿನಿಂದ ಹೊರಕ್ಕೆ ಬಂದು ಹೊರಗಡೆ ಬಟ್ಟೆಯನ್ನು ಹಿಂಡಬೇಕು. 'ಶರೀರಸಂಬಂಧವಾದ ಕೊಳೆಗಳಿಂದ ನೀರನ್ನು ನಾನು ದೂಷಿತವನ್ನಾಗಿ ಮಾಡಿದ್ದೇನೆ. ಆ ದೋಷಪರಿಹಾರಕ್ಕಾಗಿ ಯಕ್ಷ್ಮನಿಗೆ ತರ್ಪಣ ಕೊಡುತ್ತೇನೆ' ಎಂದು ಒದ್ದೆಯ ಬಟ್ಟೆಯನ್ನು ಹಿಂಡಿಕೊಂಡು ತಿಲಕಾದಿಗಳನ್ನು ಇಟ್ಟುಕೊಳ್ಳಬೇಕು."

೧೭. ಸೂತಪುರಾಣಿಕನು ಹೇಳುತ್ತಾನೆ:—ಎಲೈ ಋಷಿಗಳಿರಾ! ನೀವೆಲ್ಲರೂ ಕಾರ್ತಿಕ ಸ್ನಾನದಿಂದುಂಟಾಗುವ ಫಲವನ್ನು ಲಾಲಿಸಿ ಕೇಳಿರಿ. ಅರುಣನು ಪ್ರಶ್ನಿಸಲು ಸೂರ್ಯನು ವಿಸ್ತಾರವಾಗಿ ಇದನ್ನು ಅವನಿಗೆ ಹೇಳಿರುತ್ತಾನೆ.

೧೮. ಅರುಣನು ಕೇಳುತ್ತಾನೆ:—"ಎಲೈ ಸೂರ್ಯನೇ! ಕಾರ್ತಿಕಮಾಸದಲ್ಲಿ ಯಾವ ತೀರ್ಥದಲ್ಲಿ ಸ್ನಾನಮಾಡುವುದರಿಂದ ವಿಶೇಷ ಫಲವುಂಟಾಗುವುದು?

ಸೂರ್ಯ ಉವಾಚ :—

ಯತ್ರ ಕುತ್ರಾಽಪಿ ಕರ್ತವ್ಯಂ ಜಲೇ ಸ್ನಾನಂ ತು ಕಾರ್ತಿಕೇ ।
ಉಷ್ಣೋದಕೇನ ಕರ್ತವ್ಯಂ ಸ್ನಾನಂ ಕುತ್ರಾಪಿ ಕಾರ್ತಿಕೇ ॥ ೧೯ ॥
ತತೋ ದಶಗುಣಂ ಪುಣ್ಯಂ ಶೀತತೋಯನಿಮಜ್ಜನಾತ್ ।
ತತಶ್ಶತಗುಣಂ ಪುಣ್ಯಂ ಬಹಿಃ ಕೂಪೋದಕೇ ಸ್ಥಿತಂ ॥ ೨೦ ॥
ಕೂಪಾತ್ಸಹಸ್ರಗುಣಿತಂ ಫಲಂ ವಾಪ್ಯಭಿಷೇಕತಃ ।
ತತೋಽಯುತಗುಣಂ ಪುಣ್ಯಂ ತಡಾಗಸ್ನಾನತೋ ಭವೇತ್ ॥ ೨೧ ॥
ತತೋ ದಶಗುಣಂ ಪುಣ್ಯಂ ನಿರ್ಝರೇಷು ನಿಮಜ್ಜನಾತ್ ।
ತತೋಽಧಿಕತರಂ ಪುಣ್ಯಂ ನದೀಸ್ನಾನಸ್ಯ ಕಾರ್ತಿಕೇ ॥ ೨೨ ॥
ನದ್ಯಾ ದಶಗುಣಂ ಪ್ರೋಕ್ತಂ ತೀರ್ಥಸ್ನಾನಂ ಖಗೋತ್ತಮ ।
ತತೋ ದಶಗುಣಂ ಪುಣ್ಯಂ ನದ್ಯೋರ್ಯತ್ರ ಚ ಸಂಗಮಃ ॥ ೨೩ ॥
ನದೀತ್ರಯಸ್ಯ ಸಂಯೋಗೇ ಪುಣ್ಯಸ್ಯಾಂತೋ ನ ವಿದ್ಯತೇ ।
ಸಿಂಧುಃ ಕೃಷ್ಣಾ ಚ ವೇಣೀ ಚ ಯಮುನಾ ಚ ಸರಸ್ವತೀ ॥ ೨೪ ॥

---

ಯಾವ ಕ್ಷೇತ್ರದಲ್ಲಿ ಅಧಿಕಫಲವು ದೊರೆಯುವುದು! ಭಗವನ್! ಇದನ್ನು ನನಗೆ ತಿಳಿಸಬೇಕು.''

೧೯. ಸೂರ್ಯನು ಹೇಳುತ್ತಾನೆ:—''ಕಾರ್ತಿಕಮಾಸದಲ್ಲಿ ಎಲ್ಲಿಯಾದರೂ ಸರಿ ಪುಣ್ಯಜಲದಲ್ಲಿ ಸ್ನಾನಮಾಡಬೇಕು. ಎಲ್ಲಿಯಾದರೂ ಒಮ್ಮೊಮ್ಮೆ ಕಾರ್ತಿಕ ಮಾಸದಲ್ಲಿ ಬಿಸಿನೀರಿನಲ್ಲಿಯೂ ಸ್ನಾನಮಾಡಬಹುದು.

೨೦. ತಣ್ಣೀರಿನಲ್ಲಿ ಸ್ನಾನಮಾಡುವುದರಿಂದ ಬಿಸಿನೀರಿನ ಸ್ನಾನಕ್ಕಿಂತಲೂ ಹತ್ತರಷ್ಟು ಹೆಚ್ಚಿನ ಪುಣ್ಯವುಂಟು. ಹೊರಗೆ (ಕೂಪೋದಕದಲ್ಲಿ) ಬಾವಿಯ ನೀರಿನಲ್ಲಿ ಸ್ನಾನಮಾಡುವುದರಿಂದ ಇನ್ನೂ ಹೆಚ್ಚಿನ ಫಲವುಂಟಾಗುವುದು.

೨೧. ಬಾವಿಗಿಂತ ಕೊಳದಲ್ಲಿ ಮಿಂದುವುದರಿಂದ ಸಾವಿರಪಾಲು ಫಲವು ಉಂಟಾಗುವುದು. ಅದರ ಅಯುತದಷ್ಟು (ಹತ್ತು ಸಾವಿರದಷ್ಟು) ಪುಣ್ಯವು ಕೆರೆಯಲ್ಲಿ ಸ್ನಾನಮಾಡುವುದರಿಂದ ದೊರೆಯುತ್ತದೆ.

೨೨. ಅದರ ಹತ್ತರಷ್ಟು ಪುಣ್ಯವು ಝರಿಗಳಲ್ಲಿ ಸ್ನಾನ ಮಜ್ಜನ ಮಾಡುವುದರಿಂದ ದೊರೆಯುತ್ತದೆ. ಕಾರ್ತಿಕಮಾಸದಲ್ಲಿ ನದೀಸ್ನಾನದಿಂದ ಅದಕ್ಕಿಂತಲೂ ಅಧಿಕತರವಾದ ಪುಣ್ಯವು ದೊರೆಯುತ್ತದೆ.

೨೩. ಎಲೈ ಖಗೋತ್ತಮನೇ! ತೀರ್ಥಸ್ನಾನವು ನದೀಸ್ನಾನಕ್ಕಿಂತಲೂ ಹತ್ತುಮಡಿಯೆಂದು ಹೇಳಲಾಗಿದೆ. ಅದಕ್ಕಿಂತಲೂ ಹತ್ತರಷ್ಟು ಪುಣ್ಯವು ಎರಡು ನದಿಗಳು ಕೂಡುವ ಸಂಗಮದಲ್ಲಿ ಸ್ನಾನಮಾಡುವುದರಿಂದ ಉಂಟಾಗುತ್ತದೆ.

೨೪–೨೭. ಮೂರು ನದಿಗಳು ಸೇರುವ ಮುಕ್ಕೂಡಲಿನಲ್ಲಿ ಸ್ನಾನಮಾಡಿದ್ದರ

ಗೋದಾವರೀ ವಿಪಾಶಾ ಚ ನರ್ಮದಾ ತಮಸಾ ಮಹೀ ।
ಕಾವೇರೀ ಸರಯೂಃ ಸಿಪ್ರಾ ತಥಾ ಚರ್ಮಣ್ವತೀ ನದೀ ॥ ೨೫ ॥
ವಿತಸ್ತಾ ವೇದಿಕಾ ಶೋಣೋ ವೇತ್ರವತ್ಯಪರಾಜಿತಾ ।
ಗಂಡಕೀ ಗೋಮತೀ ಪೂರ್ಣಾ ಬ್ರಹ್ಮಪುತ್ರಾ ಸರೋವರಂ ॥ ೨೬ ॥
ವಾಗ್ಮತೀ ಚ ಶತದ್ರುಶ್ಚ ತಥಾ ಬದರಿಕಾಶ್ರಮಃ ।
ದುರ್ಲಭಾಃ ಕಾರ್ತಿಕೇ ಕ್ಷೇತ್ರೇ ತೀರ್ಥಾನ್ಯಥ ನಿಬೋಧ ಮೇ ॥ ೨೭ ॥
ಸರ್ವೇಭ್ಯಶ್ಚ ಸ್ಥಲೇಭ್ಯಶ್ಚ ಆರ್ಯಾವರ್ತಂ ತು ಪುಣ್ಯದಂ ।
ಕೊಲ್ಹಾಪುರೀ ತತಃ ಶ್ರೇಷ್ಠಾ ತತಃ ಕಾಂಚೀದ್ವಯಂ ಸ್ಮೃತಂ ॥ ೨೮ ॥
ಅನಂತಸೇನವಸತಿರ್ವರಾಹಕ್ಷೇತ್ರಮೇವ ಚ ।
ಚಕ್ರಕ್ಷೇತ್ರಂ ತತಃ ಪುಣ್ಯಂ ಮುಕ್ತಿಕ್ಷೇತ್ರಂ ತತೋಽಧಿಕಂ ॥ ೨೯ ॥
ಅವಂತಿಕಾ ತತಃ ಶ್ರೇಷ್ಠಾ ತತಃ ಕಾಂಚೀದ್ವಯಂ ಸ್ಮೃತಂ ।
ಅಯೋಧ್ಯಾ ಚ ತತಃ ಶ್ರೇಷ್ಠಾ ಗಂಗಾದ್ವಾರಂ ತತೋಽಧಿಕಂ ॥ ೩೦ ॥
ತತಃ ಕನಖಲಂ ತೀರ್ಥಂ ತತೋ ಮಧುಪುರೀ ವರಾ ।
ಏಕೋಽಪಿ ಕಾರ್ತಿಕೋ ಮಾಸೋ ಮಧುರಾ ಯಮುನೇ ಜಲೇ ॥ ೩೧ ॥

---

ಪುಣ್ಯಕ್ಕೆ ಕೊನೆಯೇ ಇಲ್ಲ. ಸಿಂಧೂ, ಕೃಷ್ಣಾ, ವೇಣೀ, ಯಮುನೆ, ಸರಸ್ವತೀ, ಗೋದಾವರೀ, ವಿಪಾಶಾ, ನರ್ಮದಾ, ತಮಸಾ, ಮಹೀ, ಕಾವೇರೀ, ಶರಯೂ, ಶಿಪ್ರಾ, ಚರ್ಮಣ್ವತೀ, ವಿತಸ್ತಾ, ವೇದಿಕಾ, ಶೋಣ, ವೇತ್ರವತೀ, ಅಪರಾಜಿತಾ, ಗಂಡಕೀ, ಗೋಮತೀ, ಪೂರ್ಣಾ, ಬ್ರಹ್ಮಪುತ್ರಾ (ಮಾನಸ)ಸರೋವರ, ವಾಗ್ಮತೀ, ಶತದ್ರು, ಬದರಿಕಾಶ್ರಮ ಇವು ಕಾರ್ತಿಕದಲ್ಲಿ ದುರ್ಲಭವಾದವುಗಳು. ಇನ್ನು ತೀರ್ಥಗಳನ್ನು ಹೇಳುತ್ತೇನೆ ಕೇಳು.

೨೮. ಎಲ್ಲ ಸ್ಥಳಗಳಿಗಿಂತಲೂ ಆರ್ಯಾವರ್ತವು ಪುಣ್ಯದಾಯಕವಾದುದು. ಕೋಲ್ಹಾಪುರಿಯು ಅದಕ್ಕಿಂತ ಶ್ರೇಷ್ಠವಾದುದು. ಅದಕ್ಕಿಂತಲೂ ಶಿವವಿಷ್ಣು ಕಂಚಿಗಳೂ ಮೇಲೆಂದು ಹೇಳಿದೆ.

೨೯. ಅನಂತಸೇನವಸತಿಯಾದ ವರಾಹಕ್ಷೇತ್ರವೂ ಶ್ರೇಷ್ಠವಾದುದು. ಚಕ್ರಕ್ಷೇತ್ರವು ಅದಕ್ಕಿಂತಲೂ ಪುಣ್ಯಕರವಾದುದು. ಮುಕ್ತಿಕ್ಷೇತ್ರವು ಅದಕ್ಕಿಂತಲೂ ಅಧಿಕವು.

೩೦. ಅವಂತೀ ನಗರವು ಅದಕ್ಕಿಂತಲೂ ಶ್ರೇಷ್ಠವಾದುದು. ಅದಕ್ಕಿಂತಲೂ ಬದರಿಕಾಶ್ರಮವು ಶ್ರೇಷ್ಠವಾದುದು. ಅದಕ್ಕಿಂತಲೂ ಅಯೋಧ್ಯೆಯು ಶ್ರೇಷ್ಠವು. ಗಂಗಾದ್ವಾರವು ಅದಕ್ಕಿಂತಲೂ ಅಧಿಕವು.

೩೧–೩೩. ಅದಕ್ಕಿಂತ ಕನಖಲತೀರ್ಥವು ಮೇಲಾದುದು. ಅದಕ್ಕಿಂತಲೂ ಮಧುರಾಪುರಿಯು ಶ್ರೇಷ್ಠವಾದುದು. ಕಾರ್ತಿಕಮಾಸದಲ್ಲಿ ಮಧುರೆಯ

**ಯೈಃ ಸ್ನಾತಸ್ತೇತು ವೈಕುಂಠೇ ಬಹುಕಾಲಂ ವಸಂತಿ ಹಿ ।**
**ರಾಧಾದಾಮೋದರಸ್ತತ್ರ ಸ್ವಯಂ ಸ್ನಾತಸ್ತು ಕಾರ್ತಿಕೇ ॥ ೩೨ ॥**
**ಅತೋ ಮಧುಪುರೀ ಶ್ರೇಷ್ಠಾ ಯಮುನಾ ಚ ವಿಶೇಷತಃ ॥ ೩೩ ॥**
**ದ್ವಾರಾವತೀ ತತಃ ಶ್ರೇಷ್ಠಾ ಪ್ರತ್ಯಹಂ ಸ್ನಾತಿ ಕೇಶವಃ ।**
**ಷೋಡಶಸ್ತ್ರೀಸಹಸ್ರೇಣ ಸಾರ್ಧಂ ಯಾದವಸಂಯುತಃ ॥ ೩೪ ॥**
**ದ್ವಾರಕಾಯಾಂ ಮೃತ್ತಿಕಾಯಾಃ ತಿಲಕೋ ಯೇನ ಮಸ್ತಕೇ ।**
**ಧಾರ್ಯತೇಽಸೌ ನರೋ ಜ್ಞೇಯೋ ಜೀವನ್ಮುಕ್ತೋ ನ ಸಂಶಯಃ ।**
**ದ್ವಾರಕಾಸ್ನಾನಮಾಹಾತ್ಮ್ಯಂ ನ ವಕ್ತುಂ ಶಕ್ಯತೇ ಮಯಾ ॥ ೩೫ ॥**
**ಗೋವಿಂದಾರ್ಪಿತಚಿತ್ತಾನಾಂ ಜಾಯತೇ ಪುಣ್ಯಭಾಸ್ಕರಾ ।**
**ತತೋ ಭಾಗೀರಥೀ ಶ್ರೇಷ್ಠಾ ಯತ್ರ ವಿಂಧ್ಯೇನ ಸಂಗತಾ ॥ ೩೬ ॥**
**ತಸ್ಮಾದ್ದಶಗುಣಂ ಪುಣ್ಯಂ ತೀರ್ಥರಾಜೇಽತ್ರ ಜಾಯತೇ ॥ ೩೭ ॥**
**ಕಲೌ ದಶಸಹಸ್ರಾಂತೇ ವಿಷ್ಣುಸ್ತ್ಯಕ್ಷ್ಯತಿ ಮೇದಿನೀಂ ।**
**ತದರ್ಧಂ ಜಾಹ್ನವೀತೋಽಯಂ ತದರ್ಧಂ ದೇವತಾಗಣಾಃ ॥ ೩೮ ॥**

---

ಯಮುನಾ ಜಲದಲ್ಲಿ ಯಾರು ಸ್ನಾನಮಾಡುತ್ತಾರೆಯೊ, ಅವರು ವೈಕುಂಠದಲ್ಲಿ ಬಹುಕಾಲ ವಾಸಮಾಡುತ್ತಾರೆ. ಶ್ರೀರಾಧಾದಾಮೋದರನು ಅಲ್ಲಿ ತಾನೇ ಕಾರ್ತಿಕಮಾಸದಲ್ಲಿ ಸ್ನಾನಮಾಡಿದನು. ಆದುದರಿಂದ ಮಧುಪುರಿಯು ಶ್ರೇಷ್ಠವಾದುದು. ಯಮುನೆಯು ಇನ್ನೂ ವಿಶೇಷವಾದುದು.

೩೪-೩೫. ಅದಕ್ಕಿಂತಲೂ ದ್ವಾರಾವತಿಯು ಶ್ರೇಷ್ಠವು. ಅಲ್ಲಿ ಪ್ರತಿದಿನವೂ ಕೇಶವನು ಹದಿನಾರುಸಾವಿರ ಗೋಪಿಕಾಸ್ತ್ರೀಯರೊಡಗೂಡಿ ಯಾದವಸಮೇತನಾಗಿ ಸ್ನಾನಮಾಡುತ್ತಾನೆ. ದ್ವಾರಕೆಯಲ್ಲಿ ಮೃತ್ತಿಕೆಯ ತಿಲಕವನ್ನು ಯಾವನು ಮಸ್ತಕದಲ್ಲಿ ಧರಿಸುತ್ತಾನೆಯೋ ಆ ನರನು ಜೀವನ್ಮುಕ್ತನೆಂದೇ ತಿಳಿಯಬೇಕು. ಇದರಲ್ಲಿ ಸಂಶಯವಿಲ್ಲವು. ದ್ವಾರಕಾಸ್ನಾನದ ಮಾಹಾತ್ಮ್ಯೆಯನ್ನು ಹೇಳುವುದಕ್ಕೆ ನನಗೆ ಶಕ್ಯವಿಲ್ಲವು.

೩೬. ಗೋವಿಂದನಲ್ಲಿಯೇ ನೆಲಸಿದ ಚಿತ್ತವುಳ್ಳವರಿಗೆ ಪುಣ್ಯಕರವಾದ ಸೂರ್ಯಲೋಕವು ಲಭಿಸುತ್ತದೆ. ಎಲೈ ಅರುಣನೇ! ಆ ದ್ವಾರಕಾಸ್ನಾನಕ್ಕಿಂತಲೂ ವಿಂಧ್ಯದೊಡನೆ ಸೇರಿರುವ ಭಾಗೀರಥೀಸ್ನಾನವು ಬಹಳ ಶ್ರೇಷ್ಠವಾದುದು.

೩೭. ತೀರ್ಥರಾಜವಾದ ಪ್ರಯಾಗದಲ್ಲಿ ಸ್ನಾನಮಾಡಿದರೆ ಅದಕ್ಕಿಂತಲೂ ಹತ್ತರಷ್ಟು ಹೆಚ್ಚಿನ ಪುಣ್ಯವುಂಟಾಗುತ್ತದೆ.

೩೮. ಕಲಿಯುಗದಲ್ಲಿ ಹತ್ತುಸಾವಿರವರ್ಷಗಳ ಕೊನೆಯಲ್ಲಿ ವಿಷ್ಣುವು ಭೂಮಿಯನ್ನು ತ್ಯಜಿಸುತ್ತಾನೆ. ಅದರ ಅರ್ಧದಷ್ಟು ಕಾಲದಲ್ಲಿ ದೇವತಾಗಣವೂ ಭೂಮಿಯನ್ನು ತ್ಯಜಿಸುತ್ತವೆ.

**ಯಾವತ್ತಿಷ್ಠತಿ ಗಂಗಾತ್ರ ತಾವತ್ತೀರ್ಥಾನಿ ಸಂತಿಚ ।**
**ಸ್ವೇ ಸ್ವೇ ಸ್ಥಾನೇ ನೃಣಾಂ ಪಾಪಂ ತಾವದೇವ ಹರಂತಿ ಚ ॥ ೩೯ ॥**
**ಯದೈವ ಗಂಗಾ ನಷ್ಟಾಸ್ಯಾತ್ಕೋ ವಾ ತತ್ಪಾಪಮಾಹರೇತ್ ।**
**ವಿಚಾರ್ಯೈವಂ ಸುತೀರ್ಥಾನಿ ಗಮಿಷ್ಯಂತಿ ಧರಾತಲೇ ॥ ೪೦ ॥**
**ತಸ್ಮಾನ್ಮುನೀಶ್ವರಾಃ ಸರ್ವೇ ಯಾವತ್ತಿಷ್ಠತಿ ಜಾಹ್ನವೀ ।**
**ತಾವಚ್ಚ ಕ್ರಿಯತಾಂ ಧರ್ಮಸ್ತತೋ ಭೂಮೌ ನಿಲೀಯತಾಂ ॥ ೪೧ ॥**
**ಸಮಾಧಿಂ ಗೃಹ್ಯ ಸುದೃಢಾಂ ಯಾವತ್ಕೃತಯುಗಂ ಭವೇತ್ ।**
**ಅನ್ಯಥಾ ಕಲಿಕಾಲೇನ ಭ್ರಂಶನೀಯೋ ಭವೇತ್ಸುಧೀಃ ॥ ೪೨ ॥**
**ತತಃ ಶ್ರೇಷ್ಠತರಾ ಕಾಶೀ ಯಸ್ಯಾ ನಾಶೋ ನ ಜಾಯತೇ ।**
**ಯದಾಶ್ರಯೇಣ ಗಂಗಾಪಿ ಸರ್ವಪಾಪಂ ವ್ಯಪೋಹತಿ ॥ ೪೩ ॥**
**ಕಾಶಿಕಾಯಾ ನೈವ ನಾಶೋ ಬ್ರಹ್ಮಣ್ಯಪಿ ಮೃತೇ ಸತಿ ।**
**ಯದ್ದರ್ಶನಾರ್ಥಂ ಗಂಗಾಪಿ ಜಾತಾ ಚೋತ್ತರವಾಹಿನೀ ।**
**ತಸ್ಯಾ ಪಂಚನದಂ ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ॥ ೪೪ ॥**

---

೩೯. ಗಂಗೆಯು ಎಲ್ಲಿಯವರೆಗೆ ಇಲ್ಲಿ ನೆಲಸಿರುವುದೋ ಅಲ್ಲಿಯವರೆಗೆ ತೀರ್ಥಗಳು ಇರುವುವು. ಅಲ್ಲಿಯವರೆಗೂ ತಮ್ಮ ತಮ್ಮ ಸ್ಥಾನದಲ್ಲಿ ಅವುಗಳು ಮನುಷ್ಯರ ಪಾಪವನ್ನು ಅವು ಪರಿಹರಿಸುತ್ತವೆ.

೪೦. 'ಗಂಗೆಯು ನಷ್ಟವಾದ ಮೇಲೆ ಯಾರುತಾನೆ ಈ ಪ್ರಾಣಿಗಳ ಪಾಪವನ್ನು ತೆಗೆದುಕೊಂಡಾರು' ಎಂದು ಯೋಚಿಸಿ ಭೂತಲದಲ್ಲಿನ ಶ್ರೇಷ್ಠ ತೀರ್ಥಗಳೆಲ್ಲವೂ ಹೊರಟುಹೋಗುತ್ತವೆ.

೪೧-೪೨. ಆದುದರಿಂದ ಎಲೈ ಮುನೀಶ್ವರರೇ! ನೀವೆಲ್ಲರೂ ಎಲ್ಲಿಯವರೆಗೂ ಜಾಹ್ನವಿಯಿರುವುದೊ ಅಲ್ಲಿಯವರೆಗೂ ಧರ್ಮವನ್ನು ಮಾಡಿರಿ; ಬಳಿಕ ಬಹು ದೃಢವಾದ ಸಮಾಧಿಯನ್ನು ಗ್ರಹಣಮಾಡಿ ಕೃತಯುಗವು ಬರುವವರೆಗೂ ಭೂಮಿಯಲ್ಲಿ ಅಡಗಿ. ಹಾಗಲ್ಲದಿದ್ದರೆ ಪಂಡಿತನಾದವನು ಕಲಿಕಾಲದ ಪ್ರಭಾವದಿಂದ ಭ್ರಷ್ಟನಾಗುತ್ತಾನೆ.

೪೩. ಗಂಗಾಸ್ನಾನಕ್ಕಿಂತಲೂ ಶ್ರೇಷ್ಠತರವಾದುದು ಕಾಶೀ ಪಟ್ಟಣವು, ಅದಕ್ಕೆ ನಾಶವೇ ಉಂಟಾಗುವುದಿಲ್ಲವು. ಅದರ ಆಶ್ರಯದಿಂದಲೇ ಗಂಗೆಯು ಕೂಡ ಸಮಸ್ತ ಮಾನವರ ಪಾಪಗಳನ್ನೂ ಪರಿಹಾರಮಾಡುತ್ತಿರುವಳು.

೪೪. ಬ್ರಹ್ಮನು ಮೃತನಾದರೂ ಕಾಶಿಗೆ ನಾಶವಿಲ್ಲವೇ ಇರುವುದಿಲ್ಲವು. ಕಾಶೀ ದರ್ಶನಕ್ಕಾಗಿ ಗಂಗೆಯೂ ಸಹ ಉತ್ತರವಾಹಿನಿಯಾದಳು. ಕಾಶಿಯಲ್ಲಿ ಪಂಚನದವೆಂಬ ತೀರ್ಥವಾದರೊ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ.

ಆಗತೇ ಕಾರ್ತಿಕೇ ಮಾಸಿ ರೌರವಂ ನರಕಂ ಗತಾಃ ।
ಆಕ್ರೋಶಂತೇ ತು ಪಿತರೋ ವಂಶೇಽಸ್ಮಾಕಂ ಭವಿಷ್ಯತಿ ॥ ೪೫ ॥
ಕಶ್ಚಿದ್ಭಾಗ್ಯವತಾಂ ಶ್ರೇಷ್ಠೋ ಗತ್ವಾ ಪಂಚನದೇ ಶುಭೇ ।
ಅಸ್ಮಾಕಂ ತರ್ಪಣಂ ಕುರ್ಯಾನ್ನರಕಾರ್ಣವತಾರಕಂ ॥ ೪೬ ॥
ತೀರ್ಥರಾಜಾದಿತೀರ್ಥಾನಿ ಪ್ರಾಪ್ತೇ ಕಾರ್ತಿಕಮಾಸಕೇ ।
ಸ್ನಾನಾರ್ಥಂ ಪಂಚಗಂಗಂ ತು ಸಮಾಯಾಂತಿ ನ ಸಂಶಯಃ ॥ ೪೭ ॥
ಕೃತ್ವಾ ತು ಲಕ್ಷಪಾಪಾನಿ ಸ್ನಾತ್ವಾ ಪಂಚನದೇ ಶುಭೇ ।
ಬಿಂದುಮಾಧವಮಭ್ಯರ್ಚ್ಯ ವಿಲಯಂ ಯಾಂತಿ ತತ್‌ಕ್ಷಣಾತ್ ॥ ೪೮ ॥
ಯೈಸ್ಸ್ನಾತಂ ಕಾರ್ತಿಕೇ ಮಾಸಿ ಸಕೃತ್ಪಂಚನದೇ ಶುಭೇ ।
ಸರ್ವತೀರ್ಥಕೃತಾತ್ ಸ್ನಾನಾತ್ಫಲಂ ಕೋಟಿಗುಣಂ ಭವೇತ್ ॥ ೪೯ ॥

ಬ್ರಹ್ಮೋವಾಚ :—

ಕಾರ್ತಿಕೇ ಮಾಸಿ ಕಾವೇರ್ಯಾಂ ಯಃ ಸ್ನಾನಂ ಕರ್ತುಮಿಚ್ಛತಿ ।
ತಾವತಾ ವೈ ವಿಮುಕ್ತಾಘೋ ವಿಷ್ಣುಸಾಯುಜ್ಯಮಾಪ್ನುಯಾತ್॥ ೫೦ ॥

---

೪೫–೪೬. ಕಾರ್ತಿಕಮಾಸವು ಬರಲಾಗಿ ರೌರವ ನರಕವನ್ನು ಸೇರಿರುವ ಪಿತೃಗಳು, 'ನಮ್ಮ ವಂಶದಲ್ಲಿ ಯಾವನಾದರೊಬ್ಬನು ಭಾಗ್ಯವಂತನು ಹುಟ್ಟುತ್ತಾನೆ. ಅವನು ಶುಭಕರವಾದ ಪಂಚನದ ತೀರ್ಥದಲ್ಲಿ ನಮಗೆ ತರ್ಪಣವನ್ನು ಕೊಡುತ್ತಾನೆ; ಅದು ನಮ್ಮನ್ನು ನರಕಸಮುದ್ರದಿಂದ ದಾಟಿಸುತ್ತದೆ' ಎಂದು ಕಿರಿಚಿಕೊಳ್ಳುತ್ತಿರುತ್ತಾರೆ.

೪೭. ತೀರ್ಥರಾಜ (ಪ್ರಯಾಗ)ವೇ ಮೊದಲಾದ ತೀರ್ಥಗಳು ಕಾರ್ತಿಕ ಮಾಸವು ಬರಲಾಗಿ ಸ್ನಾನಾರ್ಥವಾಗಿ ಪಂಚಗಂಗಾ ತೀರ್ಥಕ್ಕೆ ಬರುತ್ತವೆ. ಇದರಲ್ಲಿ ಸಂಶಯವಿಲ್ಲವು.

೪೮. ಲಕ್ಷಪಾಪಗಳನ್ನು ಮಾಡಿದ್ದರೂ ಶುಭಕರವಾದ ಪಂಚನದಲ್ಲಿ ಸ್ನಾನಮಾಡಿ ಬಿಂದುಮಾಧವನನ್ನು ಅರ್ಚಿಸಿದರೆ ಆ ಪಾಪಗಳು ಆ ಕ್ಷಣವೆ ನಾಶವನ್ನೈದುತ್ತವೆ.

೪೯. ಯಾರು ಕಾರ್ತಿಕಮಾಸದಲ್ಲಿ ಶುಭಕರವಾದ ಪಂಚನದ ತೀರ್ಥದಲ್ಲಿ ಒಂದುಸಲ ಸ್ನಾನಮಾಡುತ್ತಾರೆಯೋ ಅವರಿಗೆ ಸರ್ವತೀರ್ಥಗಳ ಸ್ನಾನದಿಂದಲೂ ಉಂಟಾಗುವ ಫಲಕ್ಕಿಂತಲೂ ಕೋಟಿಪಾಲಿನಷ್ಟು ಫಲವುಂಟಾಗುತ್ತದೆ."

೫೦. ಬ್ರಹ್ಮನು ಹೇಳುತ್ತಾನೆ:— ಕಾರ್ತಿಕಮಾಸದಲ್ಲಿ ಕಾವೇರಿಯಲ್ಲಿ ಯಾವನು ಸ್ನಾನಮಾಡಲಿಚ್ಛಿಸುತ್ತಾನೆಯೋ ಅವನು ಅಷ್ಟರಿಂದಲೇ ಪಾಪ ವಿಮುಕ್ತನಾಗಿ ವಿಷ್ಣುಸಾಯುಜ್ಯವನ್ನು ಪಡೆಯುತ್ತಾನೆ.

ಕಾವೇರ್ಯಾಶ್ಚೈವ ಮಾಹಾತ್ಮ್ಯಂ ಕೋ ವದೇತ್ಪರಮುತ್ತಮಂ ।
ಅತ್ರ ತೇ ವರ್ಣಯಿಷ್ಯಾಮಿ ಇತಿಹಾಸಂ ಪುರಾತನಂ ॥ ೫೧ ॥
ಕಾವೇರ್ಯಾ ವಿಷಯೇ ಬ್ರಹ್ಮನ್ ಸಾವಧಾನಮನಾಃ ಶೃಣು ।
ಗೌತಮ್ಯಾ ಉತ್ತರೇ ತೀರೇ ವಿಷ್ಣುಪಾದಾಬ್ಜಸಂಭವಾ ॥ ೫೨ ॥
ಗಂಗಾ ತ್ರೈಲೋಕ್ಯಪಾಪಘ್ನೀ ವರ್ತತೇ ಲೋಕಪೂಜಿತಾ ।
ಸಾ ಗಂಗಾ ಚಿಂತಯಾಮಾಸ ಕದಾಚಿತ್ಪಾಪಶಂಕಿತಾ ॥ ೫೩ ॥
ಸರ್ವಲೋಕಾಃ ಸಮಾಗತ್ಯ ಮಯಿ ಪಾಪಂ ತ್ಯಜಂತಿ ಹಿ ।
ತತ್ಪಾಪಂ ತು ಕಥಂ ಗಚ್ಛೇದಿತಿ ಚಿಂತಾಪರಾ ತದಾ ॥ ೫೪ ॥
ಪ್ರಷ್ಟುಂ ಜಗಾಮ ಕೈಲಾಸಂ ಗಿರಿಜಾವಲ್ಲಭಂ ಭವಂ ।
ತತ್ರ ದೃಷ್ಟ್ವಾ ಮಹಾರುದ್ರಂ ಪ್ರೋವಾಚ ಹರಿಪಾದಜಾ ॥ ೫೫ ॥

ಗಂಗೋವಾಚ :—

ಮಹಾರುದ್ರ ನಮಸ್ತೇಽಸ್ತು ತ್ವಾಂ ಪ್ರಷ್ಟುಮಹಮಾಗತಾ ।
ಸರ್ವೇ ಲೋಕಾಃ ಸಮಾಗತ್ಯ ಮಯಿ ಪಾಪಂ ತ್ಯಜಂತಿ ಹಿ ॥ ೫೬ ॥

---

೫೧. ಬಹು ಶ್ರೇಷ್ಠವಾದ ಕಾವೇರಿಯ ಮಾಹಾತ್ಮ್ಯೆಯನ್ನು ಯಾರುತಾನೆ ಹೇಳಲು ಸಾಧ್ಯವಾದೀತು? ಈ ಸಂಬಂಧದಲ್ಲಿ ಪುರಾತನವಾದ ಒಂದು ಇತಿಹಾಸವನ್ನು ನಿನಗೆ ವರ್ಣಿಸುತ್ತೇನೆ ಕೇಳು.

೫೨–೫೩. ಎಲೈ ಬ್ರಾಹ್ಮಣನೇ! ಕಾವೇರಿಯ ವಿಷಯದಲ್ಲಿ ಹೇಳುವ ಈ ಇತಿಹಾಸವನ್ನು, ಸಾವಧಾನಮನಸ್ಸುಳ್ಳವನಾಗಿ ಕೇಳು. ಗೌತಮಿಯ ಉತ್ತರ ತೀರದಲ್ಲಿ ವಿಷ್ಣುವಿನ ಪಾದಕಮಲದಿಂದ ಹುಟ್ಟಿದ ಗಂಗೆಯು ಮೂರು ಲೋಕಗಳ ಪಾಪವನ್ನೂ ನಾಶಮಾಡುತ್ತ ಲೋಕಪೂಜಿತಳಾಗಿ ಪ್ರವಹಿಸುತ್ತಿರುವಳು. ಆ ಗಂಗೆಯು ಯಾವುದೋ ಒಂದು ಸಮಯದಲ್ಲಿ ಪಾಪಶಂಕೆಯುಂಟಾಗಿ ಈ ರೀತಿ ಚಿಂತಿಸಿದಳು.

೫೪. 'ಸರ್ವಲೋಕದವರೂ ಬಂದು ನನ್ನಲ್ಲಿ ತಮ್ಮ ಪಾಪವನ್ನು ಕಳೆದು ಬಿಡುವರಷ್ಟೆ. ನನ್ನಲ್ಲಿ ಅಡಗಿದ ಆ ಪಾಪವು ಕಳೆದುಹೋಗುವುದು ಹೇಗೆ?'

೫೫. ಹೀಗೆ ಚಿಂತಿಸುತ್ತಲೇ ಆಕೆಯು ಗಿರಿಜಾವಲ್ಲಭನಾದ ಶಿವನನ್ನು ಪ್ರಶ್ನಿಸುವುದಕ್ಕಾಗಿ ಕೈಲಾಸಕ್ಕೆ ಹೋದಳು. ಅಲ್ಲಿ ಮಹಾರುದ್ರನನ್ನು ಕಂಡು ಹರಿಪಾದೋದ್ಭವೆಯಾದ ಆ ಗಂಗಾದೇವಿಯು ಇಂತೆಂದು ನುಡಿದಳು.

೫೬. ಗಂಗೆಯು ಹೇಳುತ್ತಾಳೆ:—"ಎಲೈ ಮಹಾರುದ್ರನೇ! ನಿನಗೆ ನಮಸ್ಕಾರವು. ನಿನ್ನನ್ನು ಪ್ರಶ್ನೆಮಾಡುವುದಕ್ಕಾಗಿಯೇ ನಾನು ಬಂದಿದ್ದೇನೆ. ಸಮಸ್ತ ಜನರೂ ಬಂದು ನನ್ನಲ್ಲಿ ತಮ್ಮ ಪಾಪವನ್ನು ತೊರೆದುಬಿಡುವರಷ್ಟೆ.

ತತ್ಪಾಪಂ ತು ಮಯಾ ಸೋಢುಂ ನ ಶಕ್ಯಂ ಪಾರ್ವತೀಪತೇ ।
ಯೇನೋಪಾಯೇನ ತತ್ಪಾಪಂ ನಾಽಽಗಚ್ಛೇನ್ಮಮ ತದ್ವದ ॥ ೫೭ ॥
ರುದ್ರ ಉವಾಚ:—
ಏವಂ ಗಂಗಾವಚಃ ಶ್ರುತ್ವಾ ಪ್ರತ್ಯಾಹ ಪರಮೇಶ್ವರಃ ।
ಪಾಪನಿರ್ಹರಣಾಯಾದೌ ಪದ್ಮನಾಭಾಂಘ್ರಿಪಂಕಜಾತ್ ॥ ೫೮ ॥
ಪ್ರಾದುರ್ಭೂತಾಸಿ ತ್ವಂ ದೇವಿ ಕಿಮರ್ಥಂ ತಪ್ಯತೇ ತ್ವಯಾ ।
ಪಾಪಪ್ರಹಾರಾಽಽಧಿಪತ್ಯಂ ಕಲ್ಪಿತಂ ತವ ವಿಷ್ಣುನಾ ॥ ೫೯ ॥
ತಥಾಪಿ ಪಾಪನಿರ್ಹಾರೆ ಉಪಾಯಂ ತೇ ಬ್ರವೀಮ್ಯಹಂ ।
ಕವೇರತನಯಾ ದೇವಿ ಕಾವೇರೀ ಸರಿತಾಂ ವರಾ ॥ ೬೦ ॥
ಸರ್ವೋತ್ಕೃಷ್ಟಾ ಚ ಸರ್ವೇಷಾಂ ಹರೇರ್ಬಲವಶಾತ್ತು ಸಾ ।
ಸರ್ವಪಾಪಪ್ರಹರಣೇ ಸಾಮರ್ಥ್ಯಂ ತತ್ರ ವರ್ತತೇ ॥ ೬೧ ॥
ಕಾರ್ತಿಕೇ ಮಾಸಿ ಕಾವೇರ್ಯಾಂ ಯಃ ಸ್ನಾನಂ ಕುರುತೇ ನರಃ ।
ಸ ತು ಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ॥ ೬೨ ॥
ತಸ್ಮಾತ್ತಾಂ ಗಚ್ಛ ದೇವೀ ತ್ವಂ ತತಃ ಪಾಪಾದ್ವಿಮೋಕ್ಷ್ಯಸೇ ।
ಇತ್ಯುಕ್ತ್ವಾ ಸಾ ತದಾ ಗಚ್ಛತ್ಕಾವೇರೀಂ ಪಾಪಹಾರಿಣೀಂ ॥ ೬೩ ॥

---

೫೭. ಎಲೈ ಪಾರ್ವತೀಪತಿಯೆ! ಆ ಪಾಪವನ್ನು ಸಹಿಸುವುದಕ್ಕೆ ನನ್ನಿಂದ ಶಕ್ಯವಿಲ್ಲವು. ಯಾವ ಉಪಾಯದಿಂದ ಆ ಪಾಪವು ನನಗೆ ಬರುವುದಿಲ್ಲವೋ ಅದನ್ನು ತಿಳಿಸು.''

೫೮–೫೯. ಈ ಬಗೆಯಾದ ಗಂಗೆಯ ಮಾತುಗಳನ್ನು ಕೇಳಿ ಪರಮೇಶ್ವರನು ಪ್ರತಿಯಾಗಿ ಉತ್ತರ ಕೊಟ್ಟನು. ರುದ್ರನು ಹೇಳುತ್ತಾನೆ:— ''ದೇವೀ, ಪಾಪಹರಿಹಾರಕ್ಕಾಗಿಯೇ ಆದಿಯಲ್ಲಿ ಪದ್ಮನಾಭನ ಪಾದಪಂಕಜದಿಂದ ನೀನು ಹುಟ್ಟಿದವಳಾಗಿದ್ದೀಯೆ. ನೀನೇಕೆ ಸಂಕಟಪಡುತ್ತೀಯೆ? ವಿಷ್ಣುವು ಪಾಪ ಪ್ರಹಾರದಲ್ಲಿ ನಿನಗೇ ಆಧಿಪತ್ಯವನ್ನು ಕಲ್ಪಿಸಿಕೊಟ್ಟಿದ್ದಾನೆ.

೬೦. ಆದರೂ ಪಾಪಪರಿಹಾರದ ಉಪಾಯವನ್ನು ನಿನಗೆ ಹೇಳುತ್ತೇನೆ. ಕವೇರತನಯೆಯಾದ ಕಾವೇರಿಯು ನದಿಗಳಲ್ಲೆಲ್ಲ ಶ್ರೇಷ್ಠಳಾದವಳು.

೬೧. ಆ ಕಾವೇರಿಯು ಹರಿಯ ಬಲವಶದಿಂದ ಸರ್ವೋತ್ಕೃಷ್ಟಳಾಗಿರುವಳು. ಸರ್ವಪಾಪಗಳನ್ನೂ ಧ್ವಂಸಮಾಡುವ ಸಾಮರ್ಥ್ಯವು ಅವಳಲ್ಲಿದೆ.

೬೨. ಕಾರ್ತಿಕಮಾಸದಲ್ಲಿ ಯಾವನು ಕಾವೇರೀಸ್ನಾನವನ್ನು ಮಾಡುತ್ತಾನೆಯೊ ಅವನು ಪಾಪವಿಮುಕ್ತನಾಗಿ ವಿಷ್ಣುವಿನ ಶ್ರೇಷ್ಠಪದವನ್ನು ಪಡೆಯುತ್ತಾನೆ.

೬೩. ಆದುದರಿಂದ, ಎಲೈ ದೇವಿಯೇ! ನೀನು ಆ ಕಾವೇರಿಗೆ ಹೋಗಿ

ತಜ್ಜಲಸ್ಪರ್ಶಮಾತ್ರೇಣ ಕಾರ್ತಿಕೇ ವಿಷ್ಣುಪಾದಜಾ ।
ನಿರ್ಧೂತಪಾತಕಾ ಗಂಗಾ ಜಗಾಮ ಸ್ವನಿಕೇತನಮ್ ॥ ೬೪ ॥
ಕಾರ್ತಿಕೇ ಪ್ರತಿವರ್ಷಂ ತು ಗಂಗಾ ತ್ರೈಲೋಕ್ಯಪಾವನೀ ।
ಸ್ನಾತುಂ ಭಕ್ತ್ಯಾ ಸಮಾಯಾತಿ ಕಾವೇರೀಂ ಪಾಪಹಾರಿಣೀಮ್ ॥ ೬೫ ॥
ತಜ್ಜಲಸ್ಪರ್ಶಮಾತ್ರೇಣ ಕಾರ್ತಿಕೇ ವಿಷ್ಣುಪಾದಜಾ ।
ನಿರ್ಧೂತಪಾತಕಾ ಗಂಗಾ ಜಗಾಮ ಸ್ವನಿಕೇತನಮ್ ॥ ೬೬ ॥
ತಸ್ಮಾಚ್ಛಸ್ತಂ ತುಲಾಸ್ನಾನಂ ಕಾವೇರ್ಯಾಂ ಶಸ್ಯತೇ ಬುಧೈಃ ।
ಯಃ ಕಾವೇರ್ಯಾಂ ತುಲಾಸ್ನಾನಂ ಭಕ್ತ್ಯಾ ತು ಕುರುತೇ ಮುನೇ ॥೬೭॥
ವಿಮುಕ್ತದುರಿತಸ್ಸದ್ಯಃ ತತೋ ಯಾತಿ ಪರಾಂ ಗತಿಮ್ ।
ತಸ್ಮಾತ್ಸ್ನಾನಂ ತು ಕಾವೇರ್ಯಾಂ ಕಾರ್ತಿಕೇ ಮಾಸಿ ಶಸ್ಯತೇ ॥ ೬೮ ॥
ಇತಿಹಾಸಮಿಮಂ ಶ್ರುತ್ವಾ ಕಾರ್ತಿಕವ್ರತತತ್ಪರಃ ।
ಸ ಕಾವೇರೀಸ್ನಾನಫಲಂ ಪ್ರಾಪ್ನೋತಿ ಚ ಪರಾಂ ಗತಿಮ್ ॥ ೬೯ ॥
ರಾತ್ರಿಶೇಷೇ ಭವೇತ್ಸ್ನಾನಮುತ್ತಮಂ ವಿಷ್ಣುತುಷ್ಟಿಕೃತ್ ।
ಸೂರ್ಯೋದಯೇ ಮಧ್ಯಮಂ ಸ್ಯಾತ್ ಯಾವನ್ನಾಽಽಸ್ತಾತು ಕೃತ್ತಿಕಾ ॥

---

ಸೇರು. ಅದರಿಂದ ಪಾಪವಿಮೋಚನೆಯನ್ನು ಹೊಂದುತ್ತೀಯೆ.'' ಹೀಗೆಂದು ಹೇಳಲ್ಪಟ್ಟವಳಾಗಿ ಗಂಗೆಯು ಪಾಪಹಾರಿಣಿಯಾದ ಕಾವೇರೀ ನದಿಯನ್ನು ಹೋಗಿ ಸೇರಿದಳು.

೬೪. ಕಾರ್ತಿಕಮಾಸದಲ್ಲಿ ಆ ಕಾವೇರಿಯ ಜಲಸ್ಪರ್ಶಮಾತ್ರದಿಂದಲೇ ವಿಷ್ಣುಪಾದೋದ್ಭವೆಯಾದ ಗಂಗೆಯು ಪಾಪಗಳನ್ನೆಲ್ಲ ತೊಳೆದುಕೊಂಡವಳಾಗಿ ತನ್ನ ವಾಸಸ್ಥಾನಕ್ಕೆ ಹೋಗಿ ಸೇರಿದಳು.

೬೫. ಪ್ರತಿವರ್ಷವೂ ಕಾರ್ತಿಕಮಾಸದಲ್ಲಿ ಗಂಗೆಯು ತ್ರೈಲೋಕ್ಯಪಾವನಿಯೂ ಪಾಪಹಾರಿಣಿಯೂ ಆದ ಕಾವೇರಿಯಲ್ಲಿ ಸ್ನಾನಮಾಡುವುದಕ್ಕಾಗಿ ಭಕ್ತಿಯಿಂದ ಬರುತ್ತಾಳೆ.

೬೬–೬೮. ಆದುದರಿಂದ ಕಾವೇರಿಯಲ್ಲಿ ತುಲಾಸ್ನಾನವು ಪ್ರಶಸ್ತವಾದುದೆಂದು ಪಂಡಿತರು ಪ್ರಶಂಸೆಮಾಡುತ್ತಾರೆ. ಎಲೈ ಮುನಿಯೇ! ಯಾವನು ಕಾವೇರಿಯಲ್ಲಿ ಭಕ್ತಿಯಿಂದ ತುಲಾಸ್ನಾನವನ್ನು ಮಾಡುತ್ತಾನೆಯೊ ಅವನು ತಕ್ಷಣವೆ ಪಾಪವಿಮುಕ್ತನಾಗಿ ಬಳಿಕ ಪರಮಗತಿಯನ್ನು ಪಡೆಯುತ್ತಾನೆ. ಆದುದರಿಂದ ಕಾರ್ತಿಕಮಾಸದಲ್ಲಿ ಕಾವೇರಿಯ ಸ್ನಾನವು ಪ್ರಶಸ್ತವೆನಿಸಿರುವುದು.

೬೯. ಕಾರ್ತಿಕವ್ರತ ತತ್ಪರನಾದವನು ಈ ಇತಿಹಾಸವನ್ನುಕೇಳಿ ಕಾವೇರೀ ಸ್ನಾನಫಲವನ್ನೂ, ಪರಮಗತಿಯನ್ನೂ ಪಡೆಯುತ್ತಾನೆ.

೭೦–೭೧. ರಾತ್ರಿಯಿನ್ನೂ ಸ್ವಲ್ಪ ಉಳಿದಿರುವಾಗ ಬೆಳಗಿನ ಝಾಮದಲ್ಲಿ

ತಾವದೇವ ಭವೇತ್ಸ್ನಾನಮನ್ಯಥಾ ತನ್ನ ಕಾರ್ತಿಕಂ ।
ಸ್ನಾನಂ ಸ್ತ್ರೀಭಿರ್ವಿಧಾತವ್ಯಂ ಗೃಹೀತ್ವಾಜ್ಞಾಂ ಧವಸ್ಯ ಚ ॥ ೭೧ ॥
ಅಪೃಷ್ಟ್ವಾ ಯತ್ಕೃತಂ ಧರ್ಮ್ಯಂ ಭರ್ತಾರಂ ತತ್ಕ್ಷಯಂ ನ ಯೇತ್ ।
ಸ್ತ್ರೀಣಾಂ ನಾಸ್ತ್ಯಪರೋ ಧರ್ಮೋ ಭರ್ತಾರಂ ಪ್ರೋಜ್ಝ್ಯ ಕಶ್ಚನ॥ ೭೨ ॥
ಕುರ್ಯಾತ್ಸಹಸ್ರಪಾಪಾನಿ ಭರ್ತ್ರಾಽಽಜ್ಞಾಂ ಯಾ ಸಮಾಚರೇತ್ ।
ಸೈಷಾ ಧರ್ಮವತೀ ಲೋಕೇ ನ ಜಾಯೇತ ವ್ರತಾದಿನಾ ॥ ೭೩ ॥
ದರಿದ್ರಃ ಪತಿತೋ ಮೂರ್ಖೋ ದೀನೋಽಪಿ ಯದಿ ಚೇತ್ಪತಿಃ ।
ತಾದೃಶಃ ಶರಣಂ ಸ್ತ್ರೀಣಾಂ ತತ್ತ್ಯಾಗಾನ್ನಿರಯಂ ವ್ರಜೇತ್ ॥ ೭೪ ॥
ಕಲೌ ವತ್ಸ ಮನುಷ್ಯಾಣಾಂ ಶೈಥಿಲ್ಯಂ ಸ್ನಾನಕರ್ಮಣಿ ।
ತಥಾಪಿ ಕಥಯಿಷ್ಯಾಮಿ ಸ್ನಾನಂ ಕಾರ್ತಿಕಮಾಘಯೋಃ ॥ ೭೫ ॥
ಯಸ್ಯ ಹಸ್ತೌ ಚ ಪಾದೌ ಚ ವಾಙ್ಮನಶ್ಚ ಸುಸಂಯತಂ ।
ವಿದ್ಯಾತಪಶ್ಚ ಕೀರ್ತಿಶ್ಚ ಸ ತೀರ್ಥಫಲಭಾಙ್ನರಃ ॥ ೭೬ ॥

---

ಮಾಡುವ ಸ್ನಾನವು ಉತ್ತಮವೆನಿಸುವುದು, ಅಲ್ಲದೆ ವಿಷ್ಣುವಿಗೆ ಸಂತೋಷ ವನ್ನುಂಟುಮಾಡುವುದು. ಸೂರ್ಯೋದಯದಲ್ಲಿ ಮಾಡ ವ ಸ್ನಾನವು ಮಧ್ಯಮ ವಾಗುವುದು. ಕೃತ್ತಿಕೆಯು ಎಲ್ಲಿಯವರೆಗೆ ಅಸ್ತವಾಗಿರುವುದಿಲ್ಲವೊ ಅಲ್ಲಿಯ ವರೆಗೆ ಮಾತ್ರ ಕಾರ್ತಿಕಸ್ನಾನವನ್ನು ಮಾಡಬೇಕು. ಹಾಗಲ್ಲದೆ, ಬೇರೆ ರೀತಿ ಯಾದಲ್ಲಿ ಅದು ಕಾರ್ತಿಕಸ್ನಾನವಾಗುವುದಿಲ್ಲ. ಹೆಂಗಸರು ಗಂಡನ ಅಪ್ಪಣೆ ಯನ್ನು ಪಡೆದು ಸ್ನಾನಮಾಡತಕ್ಕದು.

೭೨. ಗಂಡನನ್ನು ಕೇಳದೆ ಯಾವ ಸ್ತ್ರೀಯು ಧರ್ಮಕಾರ್ಯವನ್ನು ಮಾಡು ವಳೊ ಅದು ಕ್ಷಯವಾಗಿಹೋಗುವುದು. ಸ್ತ್ರೀಯರಿಗೆ ಭರ್ತನನ್ನುಳಿದು ಬೇರೆ ಯಾವ ಧರ್ಮವೂ ಇರುವುದಿಲ್ಲವು.

೭೩. ಸಹಸ್ರಪಾಪಗಳನ್ನು ಮಾಡದವಳಾದರೂ ಯಾವ ಸ್ತ್ರೀಯು ಗಂಡನ ಆಜ್ಞೆಯಂತೆ ನಡೆಯುವಳೋ ಅವಳೇ ಲೋಕದಲ್ಲಿ ಧರ್ಮವತಿಯು. ವ್ರತಾದಿ ಗಳಿಂದ ಯಾವ ಸ್ತ್ರೀಯೂ ಧರ್ಮವತಿಯಾಗುವುದಿಲ್ಲ.

೭೪. ಪತಿಯು ದರಿದ್ರನಾಗಿರಲಿ, ಪತಿತನಾಗಿರಲಿ, ಮೂರ್ಖನಾಗಿರಲಿ, ದೀನನೇ ಆಗಿರಲಿ, ಸ್ತ್ರೀಗೆ ಅವನೇ ಗತಿಯು; ಅವನನ್ನು ತ್ಯಾಗಮಾಡುವುದ ರಿಂದ ನರಕವುಂಟಾಗುತ್ತದೆ.

೭೫. ವತ್ಸಾ! ಕಲಿಯುಗದಲ್ಲಿ ಮನುಷ್ಯರಿಗೆ ಸ್ನಾನಕರ್ಮದಲ್ಲಿ ಶೈಥಿಲ್ಯ ವುಂಟಾಗುತ್ತದೆ. ಆದರೂ ಕಾರ್ತಿಕ ಮತ್ತು ಮಾಘಮಾಸಗಳಲ್ಲಿ ಸ್ನಾನವನ್ನು ಹೇಳುತ್ತೇನೆ.

೭೬. ಯಾರಿಗೆ ಕೈಗಳೂ, ಕಾಲುಗಳೂ, ವಾಙ್ಮನಸ್ಸುಗಳೂ ಚೆನ್ನಾಗಿ

ಅಶ್ರದ್ಧಧಾನಃ ಪಾಪಾತ್ಮಾ ನಾಸ್ತಿಕಶ್ಛನ್ನಮಾನಸಃ ।
ಹೇತುವಾದೀ ಚ ಪಂಚೈತೇ ನ ತೀರ್ಥಫಲಭಾಗಿನಃ ॥ ೭೭ ॥
ಪ್ರಾತರುತ್ಥಾಯ ಯೋ ವಿಪ್ರಃ ತೀರ್ಥಸ್ನಾಯೀ ಸದಾ ಭವೇತ್ ।
ಸರ್ವಪಾಪವಿನಿರ್ಮುಕ್ತಃ ಪರಂ ಬ್ರಹ್ಮಾಽಧಿಗಚ್ಛತಿ ॥ ೭೮ ॥
ಸ್ನಾನಂ ಚತುರ್ವಿಧಂ ಪ್ರೋಕ್ತಂ ಸ್ನಾನವಿದ್ಭಿರ್ಮನೀಷಿಭಿಃ ।
ವಾಯವ್ಯಂ ವಾರುಣಂ ದಿವ್ಯಂ ಬ್ರಾಹ್ಮಂ ಚೇತಿ ತಥಾ ಸ್ಮೃತಂ ॥ ೭೯ ॥
ವಾಯವ್ಯಂ ಗೋರಜಃಸ್ನಾನಂ ವಾರುಣಂ ಸಾಗರಾದಿಷು ।
ಬ್ರಾಹ್ಮಂ ಬ್ರಾಹ್ಮಣಮಂತ್ರೋಕ್ತಂ ದಿವ್ಯಂ ಮೇಘಾಂಬುಭಾಸ್ಕರಂ॥೮೦॥
ಸ್ನಾನಾನಾಂ ಚೈವ ಸರ್ವೇಷಾಂ ವಿಶಿಷ್ಟಂ ತತ್ರ ವಾರುಣಂ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯೋ ಮಂತ್ರವತ್ಸ್ನಾನಮಾಚರೇತ್ ॥ ೮೧ ॥
ತೂಷ್ಣೀಮೇವ ಹಿ ಶೂದ್ರಸ್ಯ ಸ್ತ್ರೀಣಾಂ ಚೈವ ತಥಾ ಸ್ಮೃತಂ ।
ಬಾಲಾ ಚ ತರುಣೀ ವೃದ್ಧಾ ನರನಾರೀನಪುಂಸಕಾಃ ॥ ೮೨ ॥

---

ವಶದಲ್ಲಿರುವುವೊ, ಯಾರಿಗೆ ವಿದ್ಯೆ, ತಪಸ್ಸು, ಕೀರ್ತಿಗಳಿರುವುವೋ ಆ ಮನುಷ್ಯನೇ ತೀರ್ಥಫಲಕ್ಕೆ ಭಾಗಿಯಾಗುವನು.

೭೭. ಶ್ರದ್ಧೆಯಿಲ್ಲದವನು, ಪಾಪಾತ್ಮನಾದವನು, ನಾಸ್ತಿಕ, ಮನಸ್ಸು ಮುರಿದವನು, ಹೇತುವಾದಿ— ಈ ಐವರೂ ತೀರ್ಥಫಲಕ್ಕೆ ಭಾಗಿಗಳಾಗುವುದಿಲ್ಲ.

೭೮. ಯಾವ ವಿಪ್ರನು ಸದಾ ಪ್ರಾತಃಕಾಲದಲ್ಲಿ ಎದ್ದು ತೀರ್ಥಸ್ನಾನ ಮಾಡುತ್ತಿರುವನೋ ಅವನು ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ಪರಬ್ರಹ್ಮವನ್ನು ಸೇರುತ್ತಾನೆ.

೭೯. ಸ್ನಾನರಹಸ್ಯವನ್ನು ಬಲ್ಲ ಬುದ್ಧಿವಂತರಾದ ಮಾನವರಿಗೆ ಸ್ನಾನವು ನಾಲ್ಕು ಬಗೆಯೆಂದು ಹೇಳಲ್ಪಟ್ಟಿದೆ. ವಾಯುವ್ಯ, ವಾರುಣ, ದಿವ್ಯ ಮತ್ತು ಬ್ರಾಹ್ಮ—ಎಂಬಿವೇ ಆ ನಾಲ್ಕುಬಗೆಯ ಸ್ನಾನಗಳು.

೮೦. ಗೋಧೂಳೀಸ್ನಾನವು ವಾಯುವ್ಯಸ್ನಾನವೆನಿಸುವುದು. ಸಾಗರಾದಿಗಳಲ್ಲಿ ಮಾಡುವ ಸ್ನಾನವು ವಾರುಣಸ್ನಾನವು. ಬ್ರಾಹ್ಮಣಮಂತ್ರೋಕ್ತಸ್ನಾನವು ಬ್ರಾಹ್ಮಸ್ನಾನವಾಗುವುದು. ಸೂರ್ಯಾತಪದಿಂದುಂಟಾದ ಮೇಘದ ನೀರಿನಿಂದ ಮಾಡುವ ಸ್ನಾನವು ದಿವ್ಯಸ್ನಾನವೆನಿಸುವುದು.

೮೧. ಎಲ್ಲ ಬಗೆಯ ಸ್ನಾನಗಳಲ್ಲಿಯೂ ವಾರುಣಸ್ನಾನವು ಶ್ರೇಷ್ಠವಾದುದು. ಬ್ರಾಹ್ಮಣನೂ, ಕ್ಷತ್ರಿಯನೂ, ವೈಶ್ಯನೂ ಮಂತ್ರವತ್ತಾಗಿ ಸ್ನಾನಮಾಡಬೇಕು.

೮೨–೮೩. ಶೂದ್ರನು ಮೌನವಾಗಿಯೇ ಸ್ನಾನಮಾಡಬೇಕು. ಸ್ತ್ರೀಯರಿಗೂ ಹಾಗೆಯೆ ಹೇಳಲ್ಪಟ್ಟಿದೆ. ಬಾಲೆ, ತರುಣಿ, ವೃದ್ಧೆ, ನರನಾರೀ ನಪುಂಸಕರು,—

**ಪಾಪೈಃ ಸರ್ವೇ ಪ್ರಮುಚ್ಯಂತೇ ಸ್ನಾನಾತ್ಕಾರ್ತಿಕಮಾಘಯೋಃ ।**
**ಸ್ನಾತಾ ವೈ ಕಾರ್ತಿಕೇ ಲೋಕಾಃ ಪ್ರಾಪ್ನುವಂತೀಪ್ಸಿತಂ ಫಲಂ ॥ ೮೩ ॥**
**ಪುಷ್ಕರೇ ತೀರ್ಥವರ್ಯೇ ತು ನಂದಾಯಾಃ ಸಂಗಮೇ ಪುರಾ ।**
**ಪ್ರಭಂಜನಶ್ಚ ಮುಕ್ತೋಽಭೂತ್ತದೈವ ವ್ಯಾಘ್ರಜನ್ಮತಃ ॥ ೮೪ ॥**

---

ಎಲ್ಲರೂ ಕಾರ್ತಿಕ ಮಾಘಮಾಸಗಳಲ್ಲಿ ಸ್ನಾನಮಾಡುವುದರಿಂದ ಸರ್ವಪಾಪ ಗಳಿಂದಲೂ ಬಿಡುಗಡೆಹೊಂದುತ್ತಾರೆ. ಕಾರ್ತಿಕದಲ್ಲಿ ಸ್ನಾನಮಾಡಿ ಜನರು ತಾವು ಇಚ್ಛಿಸಿದ ಫಲವನ್ನು ಪಡೆಯುತ್ತಾರೆ.

೮೪. ಪೂರ್ವದಲ್ಲಿ ಪ್ರಭಂಜನನು ತೀರ್ಥಶ್ರೇಷ್ಠವಾದ ಪುಷ್ಕರದಲ್ಲಿ ನಂದೆಯ ಸಂಗಮದಲ್ಲಿ ಸ್ನಾನಮಾಡಿ ಆ ಕ್ಷಣವೆ ವ್ಯಾಘ್ರಜನ್ಮದಿಂದ ಬಿಡುಗಡೆ ಹೊಂದಿದನು.*

---

* **ಪ್ರಭಂಜನ ಮತ್ತು ನಂದೆಯರ ಕಥೆ.**—ಪೂರ್ವದಲ್ಲಿ ಪ್ರಭಂಜನನೆಂಬ ರಾಜ ನೋರ್ವನು ಬೇಟೆಯಾಡುತ್ತಿರುವಾಗ, ಪೊದೆಯೊಂದರಲ್ಲಿ ಮರಿಗೆ ಹಾಲನ್ನು ಕುಡಿಸು ತ್ತಿದ್ದ ಜಿಂಕೆಯನ್ನು ಹೊಡೆದನು. ಆಗ ಆ ಜಿಂಕೆಯು ಆ ದೊರೆಯನ್ನು ಕುರಿತು, "ಎಲೈ ದೊರೆಯೆ ! ಮರಿಗೆ ಹಾಲು ಕೊಡುತ್ತಿರುವ ನನ್ನನ್ನು ನೀನು ಹೊಡೆದು ಕೊಂದೆ. ಈ ಪಾಪದ ಫಲವಾಗಿ ನೀನು ಹುಲಿಯಾಗಿಹೋಗು" ಎಂದು ಶಪಿಸಿತು. ಈ ಶಾಪಕ್ಕೆ ಹೆದರಿ ದೊರೆಯು ಕೈಗಳನ್ನು ಮುಗಿದು ಆ ಜಿಂಕೆಯನ್ನು ಕುರಿತು, "ಎಲೆ ಮೃಗವೇ ! ನಾನು ಈ ಹುಲಿಯ ರೂಪವನ್ನು ತೊರೆದು ಮತ್ತೆ ಮನುಷ್ಯನಾಗುವುದಾವಾಗ?" ಎಂದು ಕೇಳಿದನು. ಜಿಂಕೆಯು, "ದೊರೆಯೆ ! ಕಾರ್ತಿಕಮಾಸದಲ್ಲಿ ಪುಷ್ಕರಕ್ಷೇತ್ರದಲ್ಲಿ ನಿನಗೂ ನಂದೆಗೂ ಸಂವಾದ ನಡೆಯುತ್ತದೆ. ಆಗ ನಿನಗೆ ವ್ಯಾಘ್ರಜನ್ಮವು ಕಳೆದು ಮನುಷ್ಯ ರೂಪವುಂಟಾಗುತ್ತದೆ" ಎಂದು ಹೇಳಿ ಸತ್ತಿತು.

ಪ್ರಭಂಜನ ರಾಜನಾದರೊ ನೂರು ವರ್ಷಗಳ ಕಾಲ ಹುಲಿಯ ರೂಪದಿಂದಲೇ ಕಾಡುಕಾಡೂ ಸುತ್ತುತ್ತಿದ್ದು, "ಅಯ್ಯೋ! ನನಗೆ ಬಂದಿರುವ ಈ ಹುಲಿಯ ರೂಪ ಯಾವಾಗ ಕಳೆಯುವುದೊ !" ಎಂದು ಚಿಂತಿಸುತ್ತಿದ್ದನು. ಒಂದು ಸಲ ಅವನು ಅಲ್ಲಿಯೇ ಒಂದೆಡೆ ಹುಲ್ಲು ಮೇಯುತ್ತಿದ್ದ ನಂದೆಯೆಂಬ ಆಕಳನ್ನು ಕಂಡು ಅದನ್ನು ತಿನ್ನಲು ಬಳಿಸಾರಿದನು. ಆಗ ನಂದೆಯು, ಕರುವಿಗೆ ಹಾಲು ಕೊಟ್ಟು ಮತ್ತೆ ಬರುವುದಾಗಿ ಸತ್ಯಪ್ರತಿಜ್ಞೆ ಮಾಡಿ ಅಂತೆಯೇ ಮಾಡಿಬಂದು ಆ ಹುಲಿರೂಪದ ಪ್ರಭಂಜನನಿಗೆ ಅನೇಕ ಧರ್ಮೋಪದೇಶಗಳನ್ನು ಮಾಡಿತು. ಒಡನೆಯೇ ಪ್ರಭಂಜನನಿಗೆ ಹುಲಿರೂಪ ಹೋಗಿ, ಮೊದಲಿನಂತೆ ದೊರೆಯ ರೂಪವು ಬಂದಿತು.

ಆಗ ಧರ್ಮರಾಜನಲ್ಲಿಗೆ ಬಂದು ಆ ನಂದೆಯನ್ನು ಕುರಿತು, "ಎಲೆ ನಂದೆ! ನೀನು ನಂದಾ ಎಂಬ ಸರಸ್ವತೀ ನದಿಯಾಗುವೆ. ನೀನು ಊರ್ಜದಲ್ಲಿ ಪುಷ್ಕರಕ್ಷೇತ್ರದಲ್ಲಿ ಒಂದು ತಿಂಗಳಕಾಲ ಸ್ನಾನ ಮಾಡು. ಅದರಿಂದ ನೀನು ಮುಕ್ತಿಯನ್ನು ಪಡೆಯುವೆ" ಎಂದು ಹೇಳಿ ಅಂತರ್ಧಾನವಾದನು. ಹಾಗೆಯೇ ಮಾಡಿ ನಂದೆಯು ಮೋಕ್ಷವನ್ನು ಪಡೆಯಿತು. ಪ್ರಭಂಜನರಾಜನೂ ಸಹ ಗುರುಗಳಾದ ವಸಿಷ್ಠರ ಉಪದೇಶದಂತೆ ಕಾರ್ತಿಕ ವ್ರತವನ್ನು ಮಾಡಿ ಮುಕ್ತಿಯನ್ನು ಪಡೆದನು.

ನಂದಾಯಾ ವಚನೇನೈವ ಕಾರ್ತಿಕೇ ಸಾ ಪರಂ ಯಯೌ ।
ಏವಂ ಸ್ನಾನವಿಧಿಃ ಪ್ರೋಕ್ತಃ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಕಾರ್ತಿಕಸ್ನಾನವಿಧಿ ನಿರೂಪಣಂ"ನಾಮ ಚತುರ್ಥೋಽಧ್ಯಾಯಃ

---

೮೫. ನಂದೆಯೂ ಧರ್ಮರಾಜನ ವಚನದಿಂದಲೇ ಕಾರ್ತಿಕದಲ್ಲಿ ಪರಮ ಪದವಿಯನ್ನು ಹೊಂದಿದಳು. ಹೀಗೆ ಸ್ನಾನವಿಧಿಯನ್ನು ಹೇಳಿದುದಾಯಿತು. ಮತ್ತೇನನ್ನು ಕೇಳಲಿಚ್ಛಿಸುತ್ತೀಯೆ?"

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಕಾರ್ತಿಕಸ್ನಾನವಿಧಿನಿರೂಪಣ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ನಿತ್ಯಕರ್ಮಕಥನಂ

ನಾರದ ಉವಾಚ :—

**ಕದಾ ಸ್ನಾನಂ ಪ್ರಕರ್ತವ್ಯಂ ಕಥಂ ಸ್ಥೇಯಂ ದಿನಾವಧಿ ।**
**ಆಹ್ನಿಕಂ ತತ್ಸಮಾಚಕ್ಷ್ವ ವಿಶೇಷೇಣ ಪಿತಾಮಹ ॥ ೧ ॥**

ಬ್ರಹ್ಮೋವಾಚ :—

**ರಾತ್ರ್ಯಾಂ ತುರ್ಯಾಂ ಸಶೇಷಾಯಾಂ ಉತ್ತಿಷ್ಠೇತ್ಸರ್ವದಾ ವ್ರತೀ ।**
**ವಿಷ್ಣುಂ ಸ್ತುತ್ವಾ ಬಹುಸ್ತೋತ್ರೈಃ ದಿನಕಾರ್ಯಂ ವಿಚಾರಯೇತ್ ॥ ೨ ॥**

---

## ಕನ್ನಡದ ಅನುವಾದ

### ನಿತ್ಯಕರ್ಮಕಥನ

೧. ನಾರದನು ಕೇಳುತ್ತಾನೆ:—"ಎಲೈ ಪಿತಾಮಹನೇ! ಕಾರ್ತಿಕದಲ್ಲಿ ಯಾವಾಗ ಸ್ನಾನವನ್ನು ಮಾಡಬೇಕು? ದಿನವೆಲ್ಲ ಹೇಗೆ ಇರಬೇಕು? ಆ ಆಹ್ನಿಕ ವಿಧಿಗಳನ್ನು ವಿಶೇಷವಾಗಿ ವಿವರಿಸಬೇಕು" ಎಂದನು.

೨. ಬ್ರಹ್ಮನು ಹೇಳುತ್ತಾನೆ:—"ನಾರದ! ಕಾರ್ತಿಕ ವ್ರತವನ್ನು ಧರಿಸಿದವನು ಯಾವಾಗಲೂ ರಾತ್ರಿಯಲ್ಲಿ ನಾಲ್ಕನೆಯ ಭಾಗವು ಉಳಿದಿರುವಾಗಲೇ ಏಳಬೇಕು. ಬಹು ಸ್ತೋತ್ರಗಳಿಂದ ವಿಷ್ಣುವನ್ನು ಸ್ತುತಿಸಿ ದಿನದಲ್ಲಿ ತಾನು ಮಾಡಬೇಕಾದ ಕಾರ್ಯವನ್ನು ವಿಚಾರಮಾಡಬೇಕು.*

---

* ಇಲ್ಲಿ ಸ್ತೋತ್ರವೆಂದರೆ ಪ್ರಾತಃಸ್ಮರಣ ಸ್ತೋತ್ರವೆಂದು ತಿಳಿಯಬೇಕು.

**ಸನತ್ಕುಮಾರ ಸಂಹಿತೆಯಲ್ಲಿ ಪ್ರಾತಃಸ್ಮರಣ ಸ್ತೋತ್ರ**

ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರೀ ಭಾನುಃ ಶಶೀ ಭೂಮಿಸುತೋ ಬುಧಶ್ಚ ।
ಗುರುಶ್ಚ ಶುಕ್ರಃ ಶನಿರಾಹುಕೇತವಃ ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೧ ॥
ಪೃಥ್ವೀ ಸಗಂಧಾ ಸರಸಾಸ್ತಥಾಽಪಃ ಸ್ಪರ್ಶೀ ಚ ವಾಯುರ್ಜ್ವಲಿತಂ ಚ ತೇಜಃ ।
ನಭಶ್ಚ ಶಬ್ದಂ ಮಹತಾ ಸಹೈವ ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೨ ॥
ಭೃಗುರ್ವಸಿಷ್ಠಃ ಕ್ರತುರಂಗಿರಾಶ್ಚ ಮನುಃ ಪುಲಸ್ತ್ಯಃ ಪುಲಹಶ್ಚ ಗೌತಮಃ ।
ರೈಭ್ಯೋ ಮರೀಚಶ್ಚ್ಯವನಶ್ಚ ದಕ್ಷಃ ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೩ ॥
ಸನತ್ಕುಮಾರಃ ಸನಕಃ ಸನಂದನಃ ಸನಾತನೋಽಪ್ಯಾಸುರಿಪಿಂಗಲೌ ಚ ।
ಸಪ್ತಸ್ವರಾಃ ಸಪ್ತರಸಾತಲಾನಿ ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೪ ॥
ಸಪ್ತಾರ್ಣವಾಃ ಸಪ್ತಕುಲಾಚಲಾಶ್ಚ ಸಪ್ತರ್ಷಯೋ ದ್ವೀಪವನಾನಿ ಸಪ್ತ ।
ಭೂರಾದಿ ಕೃತ್ವಾ ಭುವನಾನಿ ಸಪ್ತ ಕುರ್ವಂತು ಸರ್ವೇ ಮಮ ಸುಪ್ರಭಾತಂ ॥ ೫ ॥
ಇತ್ಥಂ ಪ್ರಭಾತೇ ಪರಮಂ ಪವಿತ್ರಂ ಪಠೇತ್ಸ್ಮರೇದ್ಯಃ ಶೃಣುಯಾಚ್ಚ ತದ್ವತ್ ।
ದುಃಸ್ವಪ್ನನಾಶಸ್ತ್ವಿಹ ಸುಪ್ರಭಾತಂ ಭವೇಚ್ಚ ನಿತ್ಯಂ ಭಗವತ್ಪ್ರಸಾದಾತ್ ॥ ೬ ॥

ಇತಿ ಪ್ರಾತಃಸ್ಮರಣಸ್ತೋತ್ರಂ

ಗ್ರಾಮನ್ನೈರ್ಋತ್ಯದಿಗ್ಭಾಗೇ ಮಲೋತ್ಸರ್ಗಂ ಯಥಾವಿಧಿ ।
ಬ್ರಹ್ಮಸೂತ್ರಂ ದಕ್ಷಕರ್ಣೇ ಸ್ಥಾಪ್ಯ ತತ್ರ ಉದಙ್ಮುಖಃ ॥ ೩ ॥
ಅಂತರ್ಧಾಯ ತೃಣಂ ಭೂಮೌ ಶಿರಃ ಪ್ರಾವೃತ್ಯ ವಾಸಸಾ ।
ವಕ್ತ್ರಂ ನಿಯಮ್ಯ ವಸ್ತ್ರೇಣಾಽಸಂಗಃ ಸೋದಕಭಾಜನಃ ॥ ೪ ॥
ಕುರ್ಯಾನ್ಮೂತ್ರಪುರೀಷಂ ತು ರಾತ್ರೌ ಚೇದ್ದಕ್ಷಿಣಾಮುಖಃ ।
ತತ ಉತ್ಥಾಯ ಚಾಽಽಗಚ್ಛೇತ್ ಸಮೀಪಂ ಕಲಶಸ್ಯ ಹಿ ॥ ೫ ॥
ಗಂಧಲೇಪಕ್ಷಯಕರಂ ಮೃತ್ತಿಕಾಶೌಚಮಾಚರೇತ್ ।
ಏಕಾ ಲಿಂಗೇ ಕರೇ ತಿಸ್ರ ಉಭಯೋರ್ಮೃದ್ದ್ವಯಂ ಸ್ಮೃತಂ ॥ ೬ ॥
ಮೂತ್ರಶೌಚೇ ತ್ವಿದಂ ಜ್ಞೇಯಂ ವಿಷ್ಠಾಶೌಚಮತಃ ಶೃಣು ।
ಪಂಚಾಪಾನೇಽಥವಾ ಸಪ್ತ ದಶ ವಾಮಕರೇ ತಥಾ ॥ ೭ ॥
ಉಭಯೋಸ್ಸಪ್ತ ದಾತವ್ಯಾಃ ಪಾದಯೋರ್ಮೃತ್ತಿಕಾತ್ರಯಂ ।
ಏತಚ್ಛೌಚಂ ಗೃಹಸ್ಥಸ್ಯ ದ್ವಿಗುಣಂ ಬ್ರಹ್ಮಚಾರಿಣಃ ॥ ೮ ॥
ವಾನಪ್ರಸ್ಥಸ್ಯ ತ್ರಿಗುಣಂ ಯತೀನಾಂ ಚ ಚತುರ್ಗುಣಂ ।
ಏತಚ್ಛೌಚಂ ದಿವಾ ಪ್ರೋಕ್ತಂ ರಾತ್ರಾವರ್ಧಂ ಸಮಾಚರೇತ್ ॥ ೯ ॥

---

೩–೫. ಗ್ರಾಮದ ನೈರ್ಋತ್ಯದಿಕ್ಕಿನಲ್ಲಿ ವಿಧಿಪ್ರಕಾರವಾಗಿ ಮಲವಿಸರ್ಜನೆ ಮಾಡಬೇಕು. ಬ್ರಹ್ಮಸೂತ್ರವನ್ನು ಬಲಗಿವಿಯಲ್ಲಿಟ್ಟು ಉತ್ತರಮುಖವಾಗಿ ಭೂಮಿಯಲ್ಲಿ ಹುಲ್ಲನ್ನು ನಡುವೆ ಇಟ್ಟು ತಲೆಗೆ ಬಟ್ಟೆಯಿಂದ ಮುಸುಕುಹಾಕಿಕೊಂಡು ಬಟ್ಟೆಯಿಂದ ಬಾಯಿಮುಚ್ಚಿಕೊಂಡು ಏಕಾಕಿಯಾಗಿ ನೀರಿನ ಪಾತ್ರೆಯನ್ನು ಹತ್ತಿರ ಇಟ್ಟುಕೊಂಡು ಮಲಮೂತ್ರವಿಸರ್ಜನೆಮಾಡಬೇಕು. ರಾತ್ರಿಯ ಹೊತ್ತಾದರೆ ದಕ್ಷಿಣಮುಖನಾಗಿ ಕೂರಬೇಕು. ಬಳಿಕ ಎದ್ದು ಕಲಶದ ಸಮೀಪಕ್ಕೆ ಹೋಗಬೇಕು.

೬. ವಾಸನೆಯನ್ನು ಹೋಗಲಾಡಿಸುವುದಕ್ಕಾಗಿ ಮೃತ್ತಿಕಾಶೌಚವನ್ನಾಚರಿಸಬೇಕು. ಲಿಂಗದಲ್ಲಿ ಒಂದು, ಕೈಯಲ್ಲಿ ಮೂರು, ಎರಡು ಕೈಗಳಲ್ಲಿಯೂ ಒಟ್ಟಾಗಿ ಎರಡು ಸಾರಿ ಹೀಗೆ ಮೃತ್ತಿಕಾಶೌಚಮಾಡಬೇಕು.

೭–೮. ಇದು ಮೂತ್ರಶೌಚಕ್ಕೆ ಹೇಳಿದ್ದೆಂದು ತಿಳಿಯಬೇಕು. ಮಲಶೌಚವನ್ನು ಮುಂದೆ ಆಲಿಸು. ಅಪಾನದಲ್ಲಿ ಐದು ಅಥವಾ ಏಳು, ಎಡಗೈಯಲ್ಲಿ ಏಳು, ಎರಡು ಕೈಗಳಲ್ಲಿಯೂ ಒಟ್ಟಾಗಿ ಏಳು—ಹೀಗೆ ಮೃತ್ತಿಕಾಶೌಚ ಮಾಡಿಕೊಳ್ಳಬೇಕು. ಕಾಲುಗಳೆರಡಕ್ಕೂ ಮೂರು ಮೃತ್ತಿಕೆಗಳನ್ನು ಕೊಡಬೇಕು. ಈ ಶೌಚವು ಗೃಹಸ್ಥನಿಗೆ ಮಾತ್ರ; ಬ್ರಹ್ಮಚಾರಿಗೆ ಇದರ ಎರಡರಷ್ಟು.

೯–೧೦. ವಾನಪ್ರಸ್ಥನಿಗೆ ಮೂರರಷ್ಟು. ಯತಿಗಳಿಗೆ ನಾಲ್ಕರಷ್ಟು. ಈ ಶೌಚವು ಹಗಲುಹೊತ್ತಿಗೆ ಹೇಳಿದ್ದು. ರಾತ್ರಿಯಲ್ಲಿ ಇದರಲ್ಲಿ ಅರ್ಧದಷ್ಟನ್ನು

ಮಾರ್ಗಸ್ಥಸ್ಯ ತದರ್ಧಂ ಸ್ಯಾತ್ ಸ್ತ್ರೀಶೂದ್ರಾಣಾಂ ತದರ್ಧಕಂ ।
ಶೌಚಕರ್ಮವಿಹೀನಸ್ಯ ಸಮಸ್ತಾ ನಿಷ್ಫಲಾಃಕ್ರಿಯಾಃ ॥ ೧೦ ॥
ದಂತಜಿಹ್ವಾವಿಶುದ್ಧಿಂ ಚ ತತಃ ಕುರ್ಯಾದತಂದ್ರಿತಃ ।
ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ॥ ೧೧ ॥
ಬ್ರಹ್ಮ ಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ।
ದಂತಕಾಷ್ಠಂ ತು ಗೃಹ್ಣೀಯಾತ್ ದ್ವಾದಶಾಂಗುಲಸಮ್ಮಿತಂ ॥ ೧೨ ॥
ಕ್ಷೀರವೃಕ್ಷಸ್ಯ ನ ಗ್ರಾಹ್ಯಂ ಕಾರ್ಪಾಸಸ್ಯ ತಥೈವ ಚ ।
ಕಂಟಕಸ್ಯ ಚ ವೃಕ್ಷಸ್ಯ ದಗ್ಧವೃಕ್ಷಸ್ಯ ಚೈವ ಹಿ ॥ ೧೩ ॥
ಸದ್ವಾಸನಂ ಮೃದುತರಂ ದಂತಧಾವನಮಾದಿತಃ ॥ ೧೪ ॥
ಉಪವಾಸೇ ನವಮ್ಯಾಂ ಚ ಷಷ್ಠ್ಯಾಂ ಶ್ರಾದ್ಧದಿನೇ ರವೌ ।
ಗ್ರಹಣೇ ಪ್ರತಿಪದ್ದರ್ಶೇ ನ ಕುರ್ಯಾದ್ದಂತಧಾವನಂ ।
ಕುರ್ಯಾದ್ದ್ವಾದಶಗಂಡೂಷಾನನುಕ್ತೇ ದಂತಧಾವನೇ ॥ ೧೫ ॥
ದಂತಾನ್ವಿಶೋಧ್ಯ ವಿಧಿವತ್ ಮುಖಂ ಸಮ್ಮಾರ್ಜ್ಯ ವಾರಿಣಾ ।
ಲಲಾಟೇ ಚೋರ್ಧ್ವಪುಂಡ್ರಂ ತು ಧೃತ್ವಾ ಚಾಚಮ್ಯ ವಾರಿಣಾ ॥ ೧೬ ॥

---

ನಡೆಸಬೇಕು. ಮಾರ್ಗಸ್ಥನಿಗೆ ಅದರ ಅರ್ಧದಷ್ಟಾಗುತ್ತದೆ. ಸ್ತ್ರೀಶೂದ್ರರಿಗೆ ಅದರ ಅರ್ಧದಷ್ಟು. ಮೃತ್ತಿಕಾಶೌಚವಿಲ್ಲದವನ ಸಮಸ್ತ ಕ್ರಿಯೆಗಳೂ ನಿಷ್ಫಲಗಳು.

೧೧–೧೨. ಬಳಿಕ ತಡಮಾಡದೆ ಹಲ್ಲು ಮತ್ತು ನಾಲಗೆಗಳ ಶುದ್ಧಿಯನ್ನೂ ಮಾಡಬೇಕು. 'ಎಲೈ ವನಸ್ಪತಿಯೇ ಆಯುಸ್ಸು, ಬಲ, ಯಶಸ್ಸು, ವರ್ಚಸ್ಸು, ಮಕ್ಕಳು, ಪಶುಗಳು, ಧನಗಳು, ಬ್ರಹ್ಮ, ಪ್ರಜ್ಞೆ, ಮೇಧಾಶಕ್ತಿ, ಇವನ್ನೆಲ್ಲ, ನೀನು ನನಗೆ ಕೊಡು' ಎಂದು ಹನ್ನೆರಡಂಗುಲದ ಅಳತೆಯುಳ್ಳ ಹಲ್ಲು (ಜ್ಜುವ) ಕಡ್ಡಿಯನ್ನು ತೆಗೆದುಕೊಳ್ಳಬೇಕು.

೧೩–೧೪. ಕ್ಷೀರವೃಕ್ಷದ (ಹಾಲುಬರುವ ಕುರುಡಿಗೆ ಮರದ) ಕಡ್ಡಿಯನ್ನು ತೆಗೆದುಕೊಳ್ಳಬಾರದು., ಹಾಗೆಯೆ ಹತ್ತಿಯ ಕಡ್ಡಿಯನ್ನು ತೆಗೆದುಕೊಳ್ಳಬಾರದು. ಕಂಟಕವೃಕ್ಷದ (ಮುಳ್ಳುಮರದ) ಮತ್ತು ಸುಟ್ಟಮರದ ಕಡ್ಡಿಯನ್ನು ಉಪಯೋಗಿಸಬಾರದು. ಒಳ್ಳೆಯ ವಾಸನೆಯುಳ್ಳದಾಗಿ, ಮೃದುತರವೂ ಆದ ಕಡ್ಡಿಯನ್ನು ದಂತಧಾವನಕ್ಕೆ ಉಪಯೋಗಿಸಬೇಕು.

೧೫. ಉಪವಾಸಕಾಲದಲ್ಲಿ, ನವಮಿಯಲ್ಲಿ, ಷಷ್ಠಿಯದಿನ, ಶ್ರಾದ್ಧದಿನದಲ್ಲಿ, ಸೂರ್ಯಗ್ರಹಣಕಾಲದಲ್ಲಿ, ಪಾಡ್ಯದಲ್ಲಿ, ಅಮಾವಾಸ್ಯೆಯಲ್ಲಿ ಈ ಕಾಲಗಳಲ್ಲಿ ದಂತಧಾವನ ಮಾಡಬಾರದು. ದಂತಧಾವನವನ್ನು ಹೇಳದಿರುವ ಕಡೆ ಹನ್ನೆರಡುಸಾರಿ ಬಾಯಿ ಮುಕ್ಕಳಿಸಬೇಕು.

೧೬–೧೮. ವಿಧಿವತ್ತಾಗಿ ಹಲ್ಲುಗಳನ್ನು ಶೋಧಿಸಿ ಮುಖವನ್ನು ನೀರಿನಿಂದ ತೊಳೆದು ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸಿ ಆಚಮನಮಾಡಿ ದೇವಾಲಯ

ದೇವಾಲಯೇ ನದೀತೀರೇ ರಾಜಮಾರ್ಗೇ ವಿಶೇಷತಃ ।
ದತ್ವಾ ಚಾಕಾಶದೀಪಂ ತು ತುಲಸೀಸನ್ನಿಧಾವಥ ॥ ೧೭ ॥
ಗೃಹೀತ್ವಾರ್ಚನಸಾಮಗ್ರೀಮಿಷ್ಟದೇವಗೃಹಂ ವ್ರಜೇತ್ ।
ತತೋ ಗಾಯೇತ ನೃತ್ಯೇತ ಪೂಜಾಂ ಕೃತ್ವಾ ತು ಬುದ್ಧಿಮಾನ್ ॥ ೧೮ ॥
ಪಠಿತ್ವಾ ವಿಷ್ಣುನಾಮಾನಿ ಕುರ್ಯಾನ್ನೀರಾಜನಂ ಹರೇಃ ।
ನಾಡೀದ್ವಯಾವಶಿಷ್ಟಾಯಾಂ ರಾತ್ರ್ಯಾಂ ಗಚ್ಛೇಜ್ಜಲಾಶಯಂ ॥ ೧೯ ॥
ಶಾಸ್ತ್ರೋಕ್ತವಿಧಿನಾ ಸ್ನಾನಂ ಕುರ್ಯಾದ್ವೈ ಕಾರ್ತಿಕವ್ರತೀ ।
ವಸ್ತ್ರನಿಷ್ಪೀಡನಂ ಕೃತ್ವಾ ಕುರ್ಯಾಚ್ಚ ತಿಲಕಂ ತಥಾ ॥ ೨೦ ॥
ತತಃ ಸಂಧ್ಯಾಮುಪಾಸೀತ ಸ್ವಸೂತ್ರೋಕ್ತೇನ ವರ್ತ್ಮನಾ ।
ತತಃ ಕಾರ್ಯೋ ಜಪೋ ದೇವ್ಯಾ ಯಾವದರ್ಕೋದಯೋ ಭವೇತ್ ॥
ಏತತ್ಪ್ರೋಕ್ತಂ ರಾತ್ರಿಶೇಷಕೃತ್ಯಂ ದೈನಮಥೋಚ್ಯತೇ ।
ಯಸ್ಮಿನ್ ಕೃತೇ ಕಾರ್ತಿಕೋಽಯಂ ಸಕಲಂ ಸಫಲೋ ಭವೇತ್ ॥ ೨೧ ॥
ವಿಷ್ಣೋಸ್ಸಹಸ್ರನಾಮಾಽದ್ಯಂ ಸಂಧ್ಯಾಂತೇ ಚ ಪಠೇತ್ತತಃ ।
ದೇವಾಲಯೇ ಸಮಾಗತ್ಯ ಪುನಃ ಪೂಜನಮಾರಭೇತ್ ॥ ೨೨ ॥

---

ನದೀತೀರ, ವಿಶೇಷವಾಗಿ ರಾಜಮಾರ್ಗ,—ಇವುಗಳಲ್ಲಿ ತುಲಸೀ ಸನ್ನಿಧಿಯಲ್ಲಿ ಆಕಾಶ ದೀಪವನ್ನಿಟ್ಟು, ಅರ್ಚನ ಸಾಮಗ್ರಿಯನ್ನು ತೆಗೆದುಕೊಂಡು ಇಷ್ಟ ದೇವತೆಯ ಗೃಹಕ್ಕೆ ಹೋಗಬೇಕು. ಬಳಿಕ, ಬುದ್ಧಿವಂತನಾದ ಮಾನವನು ಪೂಜೆಮಾಡಿ ಗಾನಮಾಡತಕ್ಕುದು, ನೃತ್ಯಮಾಡತಕ್ಕುದು.

೧೯–೨೧. ತರುವಾಯ ವಿಷ್ಣುನಾಮಗಳನ್ನು ಪಠಿಸಿ ಹರಿಗೆ ನೀರಾಜನ ಮಾಡಬೇಕು. ರಾತ್ರಿಯಲ್ಲಿ ಎರಡುಗಳಿಗೆ ಉಳಿದಿರುವಾಗಲೆ ಜಲಾಶಯಕ್ಕೆ ಹೋಗಬೇಕು. ಕಾರ್ತಿಕವ್ರತಿಯು ಅಲ್ಲಿ ಶಾಸ್ತ್ರೋಕ್ತವಿಧಿಯಿಂದ ಸ್ನಾನಮಾಡ ಬೇಕು. ಬಳಿಕ ಒದ್ದೆಬಟ್ಟೆಯನ್ನು ಹಿಂಡಿಕೊಂಡು ತಿಲಕವನ್ನು ಇಟ್ಟುಕೊಳ್ಳ ಬೇಕು. ಬಳಿಕ ತನ್ನ ಸೂತ್ರದಲ್ಲಿ ಹೇಳಿರುವ ರೀತಿಯಿಂದ ಸಂಧ್ಯೋಪಾಸನೆ ಮಾಡಬೇಕು. ಆಮೇಲೆ ಸೂರ್ಯೋದಯವಾಗುವವರೆಗೂ ಗಾಯತ್ರೀಜಪವನ್ನು ಮಾಡಬೇಕು.

೨೨. ಹೀಗೆ ಹೇಳಿರುವುದು ರಾತ್ರಿ ಶೇಷದ ಕೃತ್ಯ. ಇನ್ನು ದಿಸದಲ್ಲಿ ಮಾಡಬೇಕಾದುದನ್ನು ಹೇಳಲಾಗುತ್ತದೆ. ಆ ಕೃತ್ಯಗಳನ್ನು ಮಾಡುವುದರಿಂದಲೇ ಸಕಲ ಕಾರ್ತಿಕವ್ರತವೂ ಸಫಲವಾಗುತ್ತದೆ.

೨೩. ಸಂಧ್ಯೋಪಾಸನೆಯಾದ ಬಳಿಕ ವಿಷ್ಣುಸಹಸ್ರನಾಮ ಮೊದಲಾದು ವನ್ನು ಪಠಿಸಬೇಕು. ದೇವಾಲಯಕ್ಕೆ ಬಂದು ಮತ್ತೆ ಪೂಜೆಯನ್ನು ಆರಂಭಿಸ ಬೇಕು.

ನೃತ್ಯಗಾನಾದಿಕಾರ್ಯೇಷು ಪ್ರಹರಂ ದಿವಸಂ ನಯೇತ್ ।
ತತಃ ಪುರಾಣಶ್ರವಣಂ ಯಾಮಾರ್ಧಂ ಸಮ್ಯಗಾಚರೇತ್ ॥ ೨೪ ॥
ಪೌರಾಣಿಕಸ್ಯ ಪೂಜಾಂ ತು ತುಲಸೀಪೂಜನಂ ತಥಾ ।
ಕೃತ್ವಾ ಮಾಧ್ಯಾಹ್ನಿಕಂ ಕರ್ಮ ಭುಂಜೀತ ದ್ವಿದಲೋಜ್ಝಿತಂ ॥ ೨೫ ॥
ಬಲಿದಾನಂ ವೈಶ್ವದೇವಮತಿಥೀನಾಂ ಸಮರ್ಪಣಂ ।
ಕೃತ್ವಾ ಭುಂಕ್ತೇ ತು ಯೋ ಮರ್ತ್ಯಃ ಕೇವಲಂ ಚಾಽಮೃತಂ ಹಿ ತತ್ ॥
ಯಥಾಶಕ್ತಿ ದ್ವಿಜಾ ಭೋಜ್ಯಾಃ ಪ್ರತ್ಯಹಂ ವಾಽಥ ಪರ್ವಣಿ ।
ಹವಿಷ್ಯಭೋಜನಂ ಕುರ್ಯಾದಾಮಿಷಂ ಪರಿವರ್ಜಯೇತ್ ॥ ೨೭ ॥
ಭಕ್ಷಯೇತ್ತುಲಸೀಂ ವಕ್ತ್ರಶುದ್ಧ್ಯರ್ಥಂ ತೀರ್ಥವಾರಿಣಾ ।
ಸಂಸಾರವ್ಯವಹಾರೇಣ ದಿನಶೇಷಂ ಸಮಾಪಯೇತ್ ॥ ೨೮ ॥
ಸಾಯಂಕಾಲೇ ಪುನರ್ಗಚ್ಛೇತ್ ವಿಷ್ಣುದೇವಾಲಯಂ ಪ್ರತಿ ।
ಸಂಧ್ಯಾಂ ಕೃತ್ವಾ ಪ್ರಯುಂಜೀತ ತತ್ರ ದೀಪಾನ್ಯಥಾಬಲಂ ॥ ೨೯ ॥
ವಿಷ್ಣುಂ ಪ್ರಣಮ್ಯ ಹರಯೇ ಕೃತ್ವಾ ನೀರಾಜನಂ ಶುಭಂ ।
ಸ್ತೋತ್ರಪಾಠಾದಿಕಂ ಕುರ್ವನ್ನಾದ್ಯಯಾಮೇ ತು ಜಾಗರಂ ॥ ೩೦ ॥

---

೨೪. ನೃತ್ಯ ಗಾಯನಾದಿಕಾರ್ಯಗಳಲ್ಲಿ ದಿನದ ಒಂದು ಪ್ರಹರವನ್ನು ಕಳೆಯಬೇಕು. ಬಳಿಕ ಅರ್ಧಜಾವಕಾಲ ಪುರಾಣಶ್ರವಣವನ್ನು ಮಾಡಬೇಕು.

೨೫. ಪೌರಾಣಿಕನ ಪೂಜೆಯನ್ನೂ ತುಲಸೀಪೂಜೆಯನ್ನೂ ಮಾಡಿ ಮಾಧ್ಯಾಹ್ನಿಕ ಕರ್ಮವನ್ನು ನೆರವೇರಿಸಿ ದ್ವಿದಲವನ್ನುಳಿದು ಮಿಕ್ಕವನ್ನು ಭೋಜನಮಾಡಬೇಕು.

೨೬. ಯಾವ ಮನುಷ್ಯನು ಬಲಿದಾನ, ವೈಶ್ವದೇವ, ಅತಿಥಿಗಳಿಗೆ ಅನ್ನ ಸಮರ್ಪಣೆ, ಇವನ್ನು ಮಾಡಿ ಆಮೇಲೆ ಭೋಜನಮಾಡುವನೋ ಅವನು ಸೇವಿಸಿದ್ದು ಕೇವಲ ಅಮೃತವೇ ಆಗುವುದು.

೨೭–೨೮. ಪ್ರತಿದಿನವೂ ಅಥವಾ ಪರ್ವದಿನದಲ್ಲಿ ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಹವಿಷ್ಯಭೋಜನವನ್ನೇ ಮಾಡಬೇಕು. ಆಮಿಷವನ್ನು ವರ್ಜಿಸಬೇಕು. ಮುಖಶುದ್ಧಿಗಾಗಿ ತೀರ್ಥಜಲದೊಡನೆ ತುಲಸಿಯನ್ನು ಭಕ್ಷಿಸಬೇಕು. ದಿನದ ಉಳಿದ ಭಾಗವನ್ನು ಸಂಸಾರ ವ್ಯವಹಾರಗಳಲ್ಲಿ ಕಳೆಯಬೇಕು.

೨೯. ಸಾಯಂಕಾಲದಲ್ಲಿ ಮತ್ತೆ ವಿಷ್ಣುದೇವಾಲಯಕ್ಕೆ ಹೋಗಬೇಕು. ಸಂಧ್ಯಾವಂದನೆ ಮಾಡಿ ಅಲ್ಲಿ ಶಕ್ತಿಯಿದ್ದಷ್ಟು ದೀಪಗಳನ್ನು ಹೊತ್ತಿಸಬೇಕು.

೩೦. ವಿಷ್ಣುವನ್ನು ನಮಸ್ಕರಿಸಿ, ಹರಿಗೆ ಶುಭಕರವಾದ ನೀರಾಜನವನ್ನೆತ್ತಿ ಸ್ತೋತ್ರಪಾಠಾದಿಗಳನ್ನು ಮಾಡುತ್ತಾ ಮೊದಲನೆಯ ಯಾಮದಲ್ಲಿ ಜಾಗರಣೆ ಮಾಡಬೇಕು.

ಯಾಮೇ ತು ಪ್ರಥಮೇಽತೀತೇ ನಿದ್ರಾಂ ಕುರ್ಯಾದ್ವಿಚಕ್ಷಣಃ ।
ಬ್ರಹ್ಮಚರ್ಯವ್ರತಂ ಕುರ್ಯಾತ್ ಭಾರ್ಯಾಮಿಾಯಾದೃತೌ ತಥಾ॥ ೩೧॥
ತಯಾ ಕಾಮಯಮಾನೋ ವಾ ಭಾರ್ಯಾಂ ಗಚ್ಛೇನ್ನ ದೋಷಭಾಕ್ ।
ಏವಂ ಪ್ರತಿದಿನಂ ಕುರ್ಯಾದಾಮಾಸಂ ತು ಯಥಾವಿಧಿ ॥ ೩೨ ॥
ಏವಂ ತು ಕಾರ್ತಿಕೇ ಮಾಸಿ ಯಃ ಕುರ್ಯಾತ್ಪರಮಂ ವ್ರತಂ ।
ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಸ್ಸಲೋಕತಾಂ ॥ ೩೩ ॥
ರೋಗಾಪಹಂ ಪಾತಕನಾಶಕೃತ್ಪರಂ
ಸದ್ಬುದ್ಧಿದಂ ಪುತ್ರಧನಾದಿಸಾಧಕಂ ।
ಮುಕ್ತೇರ್ನಿದಾನಂ ನ ಹಿ ಕಾರ್ತಿಕವ್ರತಾತ್
ವಿಷ್ಣುಪ್ರಿಯಾದನ್ಯದಿಹಾಽಸ್ತಿ ಭೂತಲೇ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ನಿತ್ಯಕರ್ಮಕಥನಂ" ನಾಮ ಪಂಚಮೋಽಧ್ಯಾಯಃ

---

೩೧. ವಿಚಕ್ಷಣನಾದವನು ಮೊದಲನೆಯ ಯಾಮವು ಕಳೆದಮೇಲೆ ನಿದ್ದೆ ಮಾಡತಕ್ಕುದು. ಬ್ರಹ್ಮಚರ್ಯವ್ರತವನ್ನಾಚರಿಸಬೇಕು. ಋತುಕಾಲದಲ್ಲಿ ಭಾರ್ಯಾಸಂಗ ಮಾಡತಕ್ಕುದು.

೩೨. ಅಥವಾ ಅವಳಿಂದ ಕಾಮಿಸಲ್ಪಟ್ಟವನಾಗಿ ಅವಳ ಸಂಗ ಮಾಡಬಹುದು. ಅದರಿಂದ ದೋಷಭಾಗಿಯಾಗುವುದಿಲ್ಲ. ಮಾಸವುಗಿಯುವವರೆಗೂ ಪ್ರತಿದಿನವೂ ವಿಧಿಗನುಸಾರವಾಗಿ ಹೀಗೆಯೇ ಆಚರಿಸುತ್ತಿರಬೇಕು.

೩೩. ಹೀಗೆ ಕಾರ್ತಿಕಮಾಸದಲ್ಲಿ ಪರಮಶ್ರೇಷ್ಠವಾದ ಈ ವ್ರತವನ್ನು ಯಾವನು ಮಾಡುತ್ತಾನೆಯೋ ಅವನು ಸರ್ವಪಾಪಗಳಿಂದಲೂ ಬಿಡಲ್ಪಟ್ಟವನಾಗಿ ವಿಷ್ಣುವಿನ ಸಾಲೋಕ್ಯವನ್ನು ಪಡೆಯುತ್ತಾನೆ.

೩೪. ಈ ವ್ರತವು ರೋಗಪರಿಹಾರಕವಾದುದು. ಪಾಪನಾಶಕವಾದುದು; ಒಳ್ಳೆಯ ಬುದ್ಧಿಯನ್ನು ಕೊಡುವಂತಹುದು; ಸಂತಾನ, ಧನ, ಮುಂತಾದುವನ್ನು ಸಾಧಿಸಿಕೊಡತಕ್ಕುದು. ಈ ಭೂತಲದಲ್ಲಿ ವಿಷ್ಣುಪ್ರಿಯವಾದ ಈ ಕಾರ್ತಿಕ ವ್ರತಕ್ಕಿಂತ ಬೇರೆಯಾದ ಮುಕ್ತಿಕಾರಣವು ಮತ್ತೊಂದಿಲ್ಲ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ನಿತ್ಯಕರ್ಮಕಥನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಕಾರ್ತಿಕವ್ರತನಿರೂಪಣಂ

ಬ್ರಹ್ಮೋವಾಚ :—

**ಶೃಣು ನಾರದ ವಕ್ಷ್ಯಾಮಿ ಕಾರ್ತಿಕಸ್ಯ ವ್ರತಂ ಮಹತ್ ।**
**ಯಚ್ಛೃತ್ವಾ ಸರ್ವಪಾಪೇಭ್ಯೋ ಮುಕ್ತೋ ಮೋಕ್ಷಮವಾಪ್ಸ್ಯಸಿ ॥ ೧ ॥**
**ಕಾರ್ತಿಕೇ ಮಾಸಿ ಸಂಪ್ರಾಪ್ತೇ ನಿಷಿದ್ಧಾನಿ ಚ ವರ್ಜಯೇತ್ ।**
**ತೈಲಾಭ್ಯಂಗಂ ಪರಾನ್ನಂ ಚ ತಥಾ ವೈ ತೈಲಭೋಜನಂ ॥ ೨ ॥**
**ಫಲಾನಿ ಬಹುಬೀಜಾನಿ ಧಾನ್ಯಾನಿ ದ್ವಿದಲಾನ್ಯಪಿ ।**
**ವರ್ಜಯೇತ್ಕಾರ್ತಿಕೇ ಮಾಸಿ ನಾತ್ರ ಕಾರ್ಯಾ ವಿಚಾರಣಾ ॥ ೩ ॥**
**ಅಲಾಬುಂ ಗೃಂಜರಂ ಚೈವ ವೃಂತಾಕಂ ಬೃಹತೀಫಲಂ ।**
**ಅನ್ನಂ ಪರ್ಯುಷಿತಂ ವಾಪಿ ಭಿಸ್ಸಟಂ ಚ ಮಸೂರಿಕಂ ॥ ೪ ॥**
**ಪುನರ್ಭೋಜನಂ ಮಾಧ್ವಂ ಚ ಪರಾನ್ನಂ ಕಾಂಸ್ಯಭೋಜನಂ ।**
**ನಖಂ ಚರ್ಮ ಚ ಛತ್ರಾಕಂ ಕಾಂಜಿ ದುರ್ಗಂಧಮೇವ ಚ ॥ ೫ ॥**

---

### ಕನ್ನಡದ ಅನುವಾದ

#### ಕಾರ್ತಿಕವ್ರತ ನಿರೂಪಣ

೧. ಬ್ರಹ್ಮನು ಹೇಳುತ್ತಾನೆ:—"ನಾರದಾ! ಕೇಳು. ಮಹತ್ತಾದ ಕಾರ್ತಿಕ ವ್ರತವನ್ನು ಇದೀಗ ಹೇಳುತ್ತೇನೆ. ಇದನ್ನು ಕೇಳಿ ಸರ್ವಪಾಪಗಳಿಂದಲೂ ಮುಕ್ತನಾಗಿ ಮೋಕ್ಷವನ್ನು ಪಡೆಯುತ್ತಾನೆ.

೨. ಕಾರ್ತಿಕಮಾಸವು ಬರಲಾಗಿ ನಿಷಿದ್ಧಗಳನ್ನು ವರ್ಜಿಸಬೇಕು. ತೈಲಾಭ್ಯಂಗ, ಪರಾನ್ನ, ತೈಲಭೋಜನ ಇವನ್ನು ಬಿಡಬೇಕು.

೩. ಫಲಗಳಲ್ಲಿ ಬಹುಬೀಜವಿರುವುವನ್ನೂ, ಧಾನ್ಯಗಳಲ್ಲಿ ದ್ವಿದಳಗಳನ್ನೂ ಕಾರ್ತಿಕಮಾಸದಲ್ಲಿ ವರ್ಜಿಸಬೇಕು. ಈ ವಿಷಯದಲ್ಲಿ ವಿಚಾರಮಾಡಬೇಕಾದ್ದೇ ಇಲ್ಲ.

೪. ಹಾಲುಸೋರೆ, ಗೃಂಜರ (ಬೆಳ್ಳುಳ್ಳಿ), ಬದನೆಕಾಯಿ, ಬೃಹತೀಫಲ (ಗುಳ್ಳದಕಾಯಿ), ಕೆಟ್ಟುಹೋದ ಮತ್ತು ಸೀದುಹೋದ ಅನ್ನ, ಮಸೂರಿಕಾ (ಕೆಂಪು ಕಡಲೆ) ಇವನ್ನು ತೊರೆಯಬೇಕು.

೫–೭. ಮತ್ತೆ ಊಟಮಾಡುವುದು, ಮಧು, ಪರಾನ್ನ, ಕಂಚಿನ ಪಾತ್ರೆಯಲ್ಲಿ ಊಟಮಾಡುವುದು, ನಖ, ಚರ್ಮ, (ಮಸೂರಿಕೆ) ಛತ್ರಾಂಕ, (ಅಣಬೆ) ಗಂಜಿ, ದುರ್ಗಂಧವಸ್ತು, ಗಣಾನ್ನ (ಗುಂಪಿನೂಟ), ಗಣಿಕಾನ್ನ

ಗಣಾನ್ನಂ ಗಣಿಕಾನ್ನಂ ಚ ತಥಾ ವೈ ಗ್ರಾಮಯಾಜಿನಃ ।
ಶೂದ್ರಾನ್ನಂ ಶೂದ್ರಸಂಪರ್ಕಂ ಸೂತಕಾನ್ನಂ ತಥೈವ ಚ ॥ ೬ ॥
ಶ್ರಾದ್ಧಾನ್ನಮೃತುಶಾಂತ್ಯಾಶ್ಚ ಜಾತಕಂ ನಾಮಕಂ ತಥಾ ।
ಶ್ಲೇಷ್ಮಾತಕಫಲಂ ಚೈವ ವರ್ಜಯೇತ್ಕಾರ್ತಿಕವ್ರತೀ ॥ ೭ ॥
ನಿಷಿದ್ಧೇಷು ಚ ಪತ್ರೇಷು ಭೋಜನಂ ನೈವ ಕಾರಯೇತ್ ।
ಮಧುಸಾಲಾತಕದಲೀಜಂಬೂಪ್ಲಕ್ಷಮಕೂಟಿಕಾಃ ।
ಏತತ್ಪತ್ರೇಷು ಭೋಕ್ತವ್ಯಂ ಪುಷ್ಕರೇ ನ ಕದಾಚನ ॥ ೮ ॥
ಕಾರ್ತಿಕೇ ಮಾಸಿ ಸಂಪ್ರಾಪ್ತೇ ಯಃ ಕುರ್ಯಾದ್ವನಭೋಜನಂ ।
ಸ ಯಾತಿ ಪರಮಂ ಲೋಕಂ ವಿಷ್ಣೋರ್ದೇವಸ್ಯ ಚಕ್ರಿಣಃ ॥ ೯ ॥
ಪ್ರಾತಃಸ್ನಾನಂ ತು ಕರ್ತವ್ಯಂ ತಥೈವ ಹರಿಪೂಜನಂ ।
ಕಥಾಯಾಃ ಶ್ರವಣಂ ಚೈವ ಕಾರ್ತಿಕೇ ಶಸ್ಯತೇ ಮುನೇ ॥ ೧೦ ॥
ಗೋಪೀಚಂದನದಾನಂ ತು ಗೋದಾನಂ ಶ್ರೋತ್ರಿಯಾಯ ಚ ।
ಕರ್ತವ್ಯಂ ಕಾರ್ತಿಕೇ ಮಾಸಿ ತೇನ ಮೋಕ್ಷಮವಾಪ್ನುಯಾತ್ ॥ ೧೧ ॥
ಕದಲೀಫಲದಾನಂ ತು ದಾನಂ ಧಾತ್ರೀಫಲಸ್ಯ ಚ ।
ವಸ್ತ್ರದಾನಂ ತಥಾ ಕುರ್ಯಾತ್ ಶೀತಾರ್ತಾಯ ದ್ವಿಜನ್ಮನೇ ॥ ೧೨ ॥

---

(ಸೂಳೆಯಿಕ್ಕಿದ ಅನ್ನ), ಗ್ರಾಮಯಾಜಿಯ ಅನ್ನ, ಶೂದ್ರಾನ್ನ, ಶೂದ್ರ ಸಂಪರ್ಕ, ಸೂತಕಾನ್ನ, ಶ್ರಾದ್ಧಾನ್ನ, ಋತುಶಾಂತಿಯ ಅನ್ನ, ಜಾತಕರ್ಮದ ಅನ್ನ, ನಾಮಕರಣದ ಅನ್ನ, ಶ್ಲೇಷ್ಮಾತಕಫಲ(ಚಳ್ಳೆಕಾಯಿ) ಇವನ್ನು ಕಾರ್ತಿಕ ವ್ರತವನ್ನು ಧರಿಸಿದವನು ವರ್ಜಿಸಬೇಕು.

೮. ನಿಷಿದ್ಧವಾದ ಎಲೆಗಳಲ್ಲಿ ಭೋಜನ ಮಾಡಲೇಬಾರದು. ಹಿಮುತ್ತುಗ, ಬಾಳೆ, ನೇರಳೆ, ಪ್ಲಕ್ಷ, ಮಕೂಟಕ, ಈ ಪತ್ರಗಳಲ್ಲಿಯೂ ಪುಷ್ಕರಪತ್ರದಲ್ಲಿಯೂ ಎಂದೆಂದಿಗೂ ಭೋಜನ ಮಾಡಲೇಬಾರದು.

೯–೧೦. ಕಾರ್ತಿಕಮಾಸವು ಬಂದಾಗ ಯಾವನು ವನಭೋಜನ ಮಾಡುತ್ತಾನೆಯೋ ಅವನು ಚಕ್ರಧಾರಿಯಾದ ವಿಷ್ಣುವಿನ ಬಹು ಶ್ರೇಷ್ಠವಾದ ವೈಕುಂಠ ಲೋಕಕ್ಕೆ ಹೋಗುತ್ತಾನೆ. ಕಾರ್ತಿಕದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕು. ಹರಿಪೂಜೆಯನ್ನು ಮಾಡಬೇಕು. ಕಥಾಶ್ರವಣವನ್ನು ಮಾಡಬೇಕು. ಎಲೈ ಮುನಿಯೇ! ಇವಿಷ್ಟೂ ಪ್ರಶಸ್ತವಾದುವೆಂದು ಹೇಳಲ್ಪಟ್ಟಿವೆ.

೧೧. ಕಾರ್ತಿಕಮಾಸದಲ್ಲಿ ಶ್ರೋತ್ರಿಯರಿಗೆ ಗೋಪೀಚಂದನದಾನ, ಗೋದಾನಗಳನ್ನು ಮಾಡಬೇಕು. ಅದರಿಂದ ಮೋಕ್ಷವನ್ನು ಪಡೆಯಬಹುದು.

೧೨. ಕದಲೀಫಲದಾನ, ಧಾತ್ರೀ (ನೆಲ್ಲಿ) ಫಲದಾನ, ಶೀತದಿಂದ ಆರ್ತನಾದ ಬ್ರಾಹ್ಮಣನಿಗೆ ವಸ್ತ್ರದಾನ ಇವನ್ನು ಮಾಡಬೇಕು.

ಶಾಕಾದಿದಾನಂ ಕುರ್ವೀತ ಚಾನ್ನದಾನಂ ವಿಶೇಷತಃ ।
ಶಾಲಿಗ್ರಾಮಸ್ಯ ದಾನಂ ಚ ಕರ್ತವ್ಯಂ ತು ದ್ವಿಜನ್ಮನೇ ॥ ೧೩ ॥
ಪೌರಾಣಿಕಾಯ ಯೋ ದದ್ಯಾದಾಮಾನ್ನಂ ಘೃತಪಾಯಸಂ ।
ಸ ಚೈಶ್ವರ್ಯಮವಾಪ್ನೋತಿ ಶತಬ್ರಾಹ್ಮಣಭೋಜನಾತ್ ॥ ೧೪ ॥
ಕಮಲೈಃ ಪೂಜಯೇದ್ಯಸ್ತು ಕಾರ್ತಿಕೇ ಕಮಲಾಪ್ರಿಯಂ ।
ಸ ತು ಪುಣ್ಯಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೫ ॥
ಕಾರ್ತಿಕೇ ತುಲಸೀಪತ್ರಂ ಯೋ ಭಕ್ತ್ಯಾ ವಿಷ್ಣವೇಽರ್ಪಯೇತ್ ।
ಸಂಸಾರಾಚ್ಚ ವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ॥ ೧೬ ॥
ಕಾರ್ತಿಕೇ ಕೇತಕೀಪುಷ್ಪೈಃ ಅರ್ಚಯೇದ್ಗರುಡಧ್ವಜಂ ।
ಪೂಜಿತೋ ಜನ್ಮಸಾಹಸ್ರಂ ನಾಽತ್ರ ಕಾರ್ಯಾ ವಿಚಾರಣಾ ॥ ೧೭ ॥
ಶಂಖದಾನಂ ತು ಯಃ ಕುರ್ಯಾತ್ ತಥಾ ಚಕ್ರಾಂಕಿತಸ್ಯ ಚ ।
ತಸ್ಯ ಪಾಪಾನಿ ನಶ್ಯಂತಿ ದಾನಮಾತ್ರಾನ್ನ ಸಂಶಯಃ ॥ ೧೮ ॥

---

೧೩. ಶಾಕಾದಿ ದಾನವನ್ನು ಮಾಡಬೇಕು. ವಿಶೇಷವಾಗಿ ಅನ್ನದಾನ ಮಾಡಬೇಕು. ಬ್ರಾಹ್ಮಣರಿಗೆ ಸಾಲಿಗ್ರಾಮ ದಾನವನ್ನು ಮಾಡಬೇಕು.

೧೪. ಯಾವನು ಪೌರಾಣಿಕನಿಗೆ (ಆಮಾನ್ನ) ಅಕ್ಕಿ ಬೇಳೆ ಮುಂತಾದುವನ್ನೂ, ತುಪ್ಪ ಪಾಯಸಗಳನ್ನೂ ಕೊಡುತ್ತಾನೆಯೋ ಅವನು ನೂರು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸುವುದರಿಂದ ಉಂಟಾಗುವಷ್ಟು ಐಶ್ವರ್ಯವನ್ನು ಪಡೆಯುತ್ತಾನೆ.

೧೫. ಯಾವನು ಕಾರ್ತಿಕದಲ್ಲಿ ಕಮಲಾಪ್ರಿಯನನ್ನು ಕಮಲಗಳಿಂದ ಪೂಜಿಸುತ್ತಾನೆಯೋ ಅವನು ಪುಣ್ಯವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೧೬. ಕಾರ್ತಿಕಮಾಸದಲ್ಲಿ ಯಾವನು ತುಲಸೀ ಪತ್ರವನ್ನು ಭಕ್ತಿಯಿಂದ ವಿಷ್ಣುವಿಗೆ ಅರ್ಪಿಸುತ್ತಾನೆಯೋ ಅವನು ಸಂಸಾರದಿಂದ ಬಿಡುಗಡೆಹೊಂದಿ ವಿಷ್ಣುವಿನ ಪರಮಪದವಿಯನ್ನು ಸೇರುತ್ತಾನೆ.

೧೭. ಕಾರ್ತಿಕದಲ್ಲಿ ಕೇದಗೆ ಹೂಗಳಿಂದ ಗರುಡಧ್ವಜನನ್ನು ಪೂಜಿಸಬೇಕು. ಹಾಗೆ ಪೂಜಿಸಿದರೆ ಒಂದುಸಹಸ್ರ ಜನ್ಮಗಳಲ್ಲಿ ಪೂಜಿಸಿದ ಫಲವು ದೊರೆಯುತ್ತದೆ. ಈ ವಿಷಯದಲ್ಲಿ ವಿಚಾರಮಾಡತಕ್ಕುದಲ್ಲ.

೧೮. ಯಾವನು ಶಂಖದಾನವನ್ನು ಮಾಡುತ್ತಾನೋ, ಯಾವನು ಗೋಮತೀ ಚಕ್ರವನ್ನು ದಾನಮಾಡುತ್ತಾನೊ, ಅವನ ಪಾಪಗಳು ಹಾಗೆ ದಾನ ಮಾಡಿದ ಮಾತ್ರದಿಂದಲೆ ನಾಶವಾಗಿಹೋಗುತ್ತವೆ. ಇದರಲ್ಲಿ ಸಂಶಯವಿಲ್ಲ.

ಗೀತಾಪಾಠಂ ತು ಯಃ ಕುರ್ಯಾತ್ ಕಾರ್ತಿಕೇ ವಿಷ್ಣುವಲ್ಲಭೇ ।
ತಸ್ಯ ಪುಣ್ಯಫಲಂ ವಕ್ತುಂ ನಾಲಂ ವರ್ಷಶತೈರಪಿ ॥ ೧೯ ॥
ಶ್ರೀಮದ್ಭಾಗವತಸ್ಯಾಪಿ ಶ್ರವಣಂ ಯಃ ಸಮಾಚರೇತ್ ।
ಸರ್ವಪಾಪವಿನಿರ್ಮುಕ್ತಃ ಪರಂ ನಿರ್ವಾಣಮೃಚ್ಛತಿ ॥ ೨೦ ॥
ಏಕಾದಶ್ಯಾಂ ನಿರಾಹಾರಂ ಉಪವಾಸಂ ಕರೋತಿ ಯಃ ।
ಪೂರ್ವಜನ್ಮಕೃತಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೨೧ ॥
ಶಾಲಿಗ್ರಾಮಸ್ಯ ನೈವೇದ್ಯಾತ್ ಕೋಟಿಯಜ್ಞಫಲಂ ಲಭೇತ್ ।
ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ೨೨ ॥
ಪೂಜಾಕಾಲೇ ತು ದೇವಸ್ಯ ಘಂಟಾನಾದಂ ಕರೋತಿ ಯಃ ।
ಹರೇಸ್ತೃಪ್ತಿಂ ಪರಾಂ ಯಾತಿ ಮನುಜೋ ನಾತ್ರ ಸಂಶಯಃ ॥ ೨೩ ॥
ಪರಾನ್ನಂ ವರ್ಜಯೇದ್ಯಸ್ತು ಕಾರ್ತಿಕೇ ವಿಷ್ಣುತುಷ್ಟಯೇ ।
ದಾಮೋದರಸ್ಯ ಪ್ರೀತಿಂ ಸ ಸಮ್ಯಕ್ಪ್ರಾಪ್ನೋತಿ ಮಾನವಃ ॥ ೨೪ ॥

---

೧೯. ವಿಷ್ಣುವಿಗೆ ಪ್ರಿಯವಾದ ಕಾರ್ತಿಕಮಾಸದಲ್ಲಿ ಭಗವದ್ಗೀತಾಪಾಠವನ್ನು ಯಾವನು ಮಾಡುತ್ತಾನೊ ಅವನಿಗೆ ದೊರೆಯುವ ಪುಣ್ಯಫಲವನ್ನು ಇಷ್ಟೆಂದು ಹೇಳಲು ನೂರುವರ್ಷವೂ ಸಾಲದು.

೨೦. ಶ್ರೀಮದ್ಭಾಗವತದ ಶ್ರವಣವನ್ನು ಯಾವನು ಮಾಡುತ್ತಾನೆಯೋ ಅವನು ಸರ್ವ ಪಾಪಗಳಿಂದಲೂ ಮುಕ್ತನಾಗಿ ಶ್ರೇಷ್ಠವಾದ ಮೋಕ್ಷವನ್ನು ಹೊಂದುತ್ತಾನೆ.

೨೧. ಏಕಾದಶಿಯಲ್ಲಿ ಯಾವನು ನಿರಾಹಾರವಾಗಿ ಉಪವಾಸಮಾಡುತ್ತಾನೆಯೋ ಅವನು ಪೂರ್ವ ಜನ್ಮದಲ್ಲಿ ಮಾಡಿದ ಪಾಪದಿಂದ ಬಿಡುಗಡೆ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲವು.

೨೨. ಸಾಲಿಗ್ರಾಮಕ್ಕೆ ನೈವೇದ್ಯಮಾಡುವುದರಿಂದ ಕೋಟಿಯಜ್ಞಗಳನ್ನು ಮಾಡಿದ ಫಲವುಂಟಾಗುತ್ತದೆ. ಬೇರೆ ದೇವರ ನೈವೇದ್ಯವನ್ನು ಊಟಮಾಡಿದರೆ ಚಾಂದ್ರಾಯಣವನ್ನು ನಡೆಸಬೇಕು.

೨೩. ದೇವರ ಪೂಜೆಯ ಕಾಲದಲ್ಲಿ ಯಾವನು ಘಂಟಾನಾದಮಾಡುತ್ತಾನೆಯೋ ಆ ಮನುಷ್ಯನು ಶ್ರೀಹರಿಗೆ ಪರಮ ತೃಪ್ತಿಯನ್ನು ಉಂಟುಮಾಡುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೨೪. ಕಾರ್ತಿಕದಲ್ಲಿ ವಿಷ್ಣುವಿನ ತೃಪ್ತ್ಯರ್ಥವಾಗಿ ಯಾವನು ಪರಾನ್ನವನ್ನು ವರ್ಜಿಸುತ್ತಾನೆಯೋ ಆ ಮಾನವನು ದಾಮೋದರನ ಉತ್ತಮ ಪ್ರೀತಿಗೆ ಪಾತ್ರನಾಗುತ್ತಾನೆ.

ಅಧ್ವಗಂ ತು ಪರಿಶ್ರಾಂತಂ ಕಾಲೇ ಚ ಗೃಹಮಾಗತಂ ।
ಯೋऽತಿಥಿಂ ಪೂಜಯೇದ್ಭಕ್ತ್ಯಾ ಜನ್ಮಸಾಹಸ್ರನಾಶನಂ ॥ ೨೫ ॥
ನಿಂದಾಂ ಕುರ್ವಂತಿ ಯೇ ಮೂಢಾ ವೈಷ್ಣವಾನಾಂ ಮಹಾತ್ಮನಾಂ ।
ಪತಂತಿ ಪಿತೃಭಿಸ್ಸಾರ್ಧಂ ಮಹಾರೌರವಸಂಜ್ಞಕೇ ॥ ೨೬ ॥
ದೃಷ್ಟ್ವಾ ಭಾಗವತಾನ್ ವಿಪ್ರಾನ್ ಸಂಮುಖೋ ನ ಚ ಯಾತಿ ಹಿ ।
ನ ಗೃಹ್ಣಾತಿ ಹರಿಸ್ತಸ್ಯ ಪೂಜಾಂ ದ್ವಾದಶವಾರ್ಷಿಕೀಂ ॥ ೨೭ ॥
ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ಚ ।
ತತೋ ನಾಪೈತಿ ಯಃ ಸೋऽಪಿ ಹರೇಃ ಪ್ರಿಯತಮೋ ನ ಹಿ ॥ ೨೮ ॥
ಪ್ರದಕ್ಷಿಣಾಂ ತು ಯಃ ಕುರ್ಯಾತ್ಕಾರ್ತಿಕೇ ಕೇಶವಸ್ಯ ಹಿ ।
ಪದೇಪದೇऽಶ್ವಮೇಧಸ್ಯ ಫಲಮಾಪ್ನೋತ್ಯಸಂಶಯಂ ॥ ೨೯ ॥
ದಂಡಪ್ರಣಾಮಂ ಯಃ ಕುರ್ಯಾತ್ ಕಾರ್ತಿಕೇ ಕೇಶವಾಗ್ರತಃ ।
ರಾಜಸೂಯಾಶ್ವಮೇಧಾನಾಂ ಫಲಮಾಪ್ನೋತ್ಯಸಂಶಯಃ ॥ ೩೦ ॥

---

೨೫. ದಾರಿ ನಡೆದು ಬಳಲಿ ಮನೆಗೆ ಬಂದ ಅತಿಥಿಯನ್ನು ಯಾವನು ಭಕ್ತಿಯಿಂದ ಪೂಜಿಸುತ್ತಾನೆಯೋ ಅವನ ಜನ್ಮ ಸಹಸ್ರಗಳು ನಾಶವಾಗುತ್ತವೆ.

೨೬. ಯಾವ ಮೂಢರು ಮಹಾತ್ಮರಾದ ವೈಷ್ಣವರ ನಿಂದೆಮಾಡುತ್ತಾರೆಯೋ ಅವರು ಪಿತೃಗಳಿಂದೊಡಗೂಡಿದವರಾಗಿ ಮಹಾರೌರವ ನರಕದಲ್ಲಿ ಬೀಳುತ್ತಾರೆ.

೨೭. ಭಾಗವತರಾದ ವಿಪ್ರರನ್ನು ಕಂಡು ಯಾವನು ಎದುರುಹೋಗುವುದಿಲ್ಲವೊ, ಅವನು ಹನ್ನೆರಡು ವರ್ಷಗಳ ಕಾಲ ಮಾಡುವ ಪೂಜೆಯನ್ನೂ ಹರಿಯು ಪರಿಗ್ರಹಿಸುವುದಿಲ್ಲ.

೨೮. ಭಗವಂತನ ಮತ್ತು ಭಗವದ್ಭಕ್ತರಾದ ಜನಗಳ ನಿಂದೆಯನ್ನು ಕೇಳಿ ಆ ಬಳಿಯಿಂದ ಯಾವನು ಬೇರೆ ಕಡೆ ಹೋಗುವುದಿಲ್ಲವೋ ಅವನು ಕೂಡ ಹರಿಗೆ ಪ್ರಿಯನಲ್ಲವು.

೨೯. ಕಾರ್ತಿಕಮಾಸದಲ್ಲಿ ಕೇಶವನಿಗೆ ಯಾವನು ಪ್ರದಕ್ಷಿಣೆಮಾಡುತ್ತಾನೆಯೋ ಅವನು ಹೆಜ್ಜೆಹೆಜ್ಜೆಗೂ ಅಶ್ವಮೇಧ ಫಲವನ್ನು ಪಡೆಯುತ್ತಾನೆಯೆಂಬುದರಲ್ಲಿ ಸಂಶಯವಿಲ್ಲ.

೩೦. ಕಾರ್ತಿಕದಲ್ಲಿ ಕೇಶವನ ಎದುರಿಗೆ ಯಾವನು ದಂಡಪ್ರಮಾಣ ಮಾಡುವನೋ ಅವನು ರಾಜಸೂಯ ಮತ್ತು ಅಶ್ವಮೇಧಗಳ ಫಲವನ್ನು ಪಡೆಯುತ್ತಾನೆ. ಸಂಶಯವಿಲ್ಲ.

ಕುಟುಂಬಭೋಜನಂ ಚೈವ ಕಾರ್ತಿಕೇ ಭಕ್ತಿಸಂಯುತಃ ।
ಕಾರಯೇದ್ವಿಪ್ರಶಾರ್ದೂಲ ಚಾಸ್ಯ ಪುಣ್ಯಮನಂತಕಂ ॥ ೩೧ ॥
ಪರಸ್ತ್ರೀಸಂಗಮಂ ಯಸ್ತು ಕಾರ್ತಿಕೇ ಕುರುತೇ ನರಃ ।
ತಸ್ಯ ಪಾಪಸ್ಯ ವಿಶ್ರಾಂತಿಃ ಯಾವದ್ವಕ್ತುಂ ನ ಶಕ್ಯತೇ ॥ ೩೨ ॥
ತುಲಸೀಮೃತ್ತಿಕಾಪುಂಡ್ರಂ ಲಲಾಟೇ ಯಸ್ಯ ದೃಶ್ಯತೇ ।
ಯಮಸ್ತಂ ನೇಕ್ಷಿತುಂ ಶಕ್ತಃ ಕಿಮು ದೂತಾ ಭಯಂಕರಾಃ ॥ ೩೩ ॥
ಶಾಕಂ ವಾ ಲವಣಂ ವಾಪಿ ಯತ್ಕಿಂಚಿದ್ವಾ ಭವಿಷ್ಯತಿ ।
ತದ್ದೇಯಂ ಕಾರ್ತಿಕೇ ಮಾಸಿ ಪ್ರೀತ್ಯರ್ಥಂ ಶಾರ್ಙ್ಗಧನ್ವನಃ ॥ ೩೪ ॥
ಇತ್ಯಾದ್ಯಾ ಬಹವೋ ಧರ್ಮಾಃ ಕಾರ್ತಿಕೇ ವಿಷ್ಣುವಲ್ಲಭಾಃ ।
ಯಥಾಶಕ್ತ್ಯಾ ಪ್ರಕುರ್ವೀತ ಧರ್ಮಂ ದೇವಸ್ಯ ತುಷ್ಟಿದಂ ॥ ೩೫ ॥
ಹರಿಸಂತುಷ್ಟಯೇ ಕಾರ್ಯಃ ತ್ಯಾಗೋ ವಾ ಸ್ವೇಷ್ಟವಸ್ತುನಃ ।
ಮಾಸಾಂತೇ ದ್ವಿಜವರ್ಯಾಯ ದದ್ಯಾತ್ತದ್ವ್ರತಪೂರ್ತಯೇ ॥ ೩೬ ॥

---

೩೧. ಎಲೈ ಮುನಿಶ್ರೇಷ್ಠನೇ! ಯಾವಾತನು ಕಾರ್ತಿಕಮಾಸದಲ್ಲಿ ಭಕ್ತಿಯಿಂದ ಕುಟುಂಬಭೋಜನ ಮಾಡಿಸುತ್ತಾನೋ ಅವನಿಗೆ ಅನಂತಪುಣ್ಯ ವುಂಟಾಗುತ್ತದೆ.

೩೨. ಕಾರ್ತಿಕಮಾಸದಲ್ಲಿ ಯಾವ ಮನುಷ್ಯನು ಪರಸ್ತ್ರೀಸಂಗವನ್ನು ಮಾಡುತ್ತಾನೆಯೋ ಅವನ ಪಾಪಕ್ಕೆ ಯಾವಾಗ ವಿಶ್ರಾಂತಿಯೆಂಬುದನ್ನು ಹೇಳುವುದಕ್ಕೆ ಶಕ್ಯವಿಲ್ಲವು.

೩೩. ಯಾರ ಹಣೆಯಮೇಲೆ ತುಲಸೀಮೃತ್ತಿಕೆಯ ಪುಂಡ್ರವು ಗೋಚರಿಸುವುದೋ ಅವನನ್ನು ನೋಡಲು ಯಮನು ಶಕ್ತನಲ್ಲವು. ಭಯಂಕರರಾದ ಅವನ ದೂತರ ವಿಷಯವನ್ನು ಹೇಳುವುದೇನು?

೩೪. ಕಾರ್ತಿಕಮಾಸದಲ್ಲಿ ಶಾಕವಾಗಲಿ ಲವಣವಾಗಲಿ ಅಲ್ಪಸ್ವಲ್ಪವಾದರೂ ದೊರೆತಲ್ಲಿ ಅದನ್ನು ಶಾರ್ಙ್ಗಧನ್ವಿಯಾದ ವಿಷ್ಣುವಿನ ಪ್ರೀತ್ಯರ್ಥವಾಗಿ ದಾನಮಾಡತಕ್ಕದ್ದು.

೩೫. ಇವೇ ಮೊದಲಾದ ಬಹಳ ಧರ್ಮಗಳು ಕಾರ್ತಿಕಮಾಸದಲ್ಲಿ ವಿಷ್ಣುವಿಗೆ ಮೆಚ್ಚಾದುವು. ಆ ದೇವನಿಗೆ ತೃಪ್ತಿಯುಂಟುಮಾಡುವ ಧರ್ಮವನ್ನು ಶಕ್ತಿಯಿದ್ದಷ್ಟು ನಡಸಬೇಕು.

೩೬. ಹರಿಯ ಸಂತುಷ್ಟಿಗಾಗಿ ತನಗೆ ಬಹು ಇಷ್ಟವಾದ ವಸ್ತುವಿನ ತ್ಯಾಗವನ್ನಾದರೂ ಮಾಡಬೇಕು. ಮಾಸದ ಕೊನೆಯಲ್ಲಿ ವ್ರತಪೂರ್ತಿಗಾಗಿ ದ್ವಿಜಶ್ರೇಷ್ಠನಿಗೆ ದಾನ ಕೊಡತಕ್ಕದ್ದು.

ಸರ್ವವ್ರತಾನಿ ಚೈಕತ್ರ ಸತ್ಯವ್ರತಮಥೈಕತಃ ।
ತಸ್ಮಾತ್ಸರ್ವಪ್ರಯತ್ನೇನ ಸತ್ಯಂ ಭಾಷೇತ ಸರ್ವದಾ ॥ ೩೭ ॥
ಅನ್ಯಧರ್ಮೇಷ್ವಧಿಕೃತಿಃ ಕುಲಜಾತಿವಿಭಾಗತಃ ।
ಅಧಿಕಾರೀ ಕಾರ್ತಿಕೇ ತು ಸರ್ವ ಏವ ಜನೋ ಭವೇತ್ ॥ ೩೮ ॥
ಗೋಗ್ರಾಸಃ ಕಾರ್ತಿಕೇ ಮಾಸಿ ವಿಶೇಷಾದ್ಯೈಸ್ತು ದೀಯತೇ ।
ತೇಷಾಂ ಪುಣ್ಯಫಲಂ ವಕ್ತುಂ ನ ಶಕ್ನೋತಿ ಪಿತಾಮಹಃ ॥ ೩೯ ॥
ವಿಷ್ಣುದೇವಾಲಯಂ ಪ್ರಾತಃ ಸಂಮಾರ್ಜಯತಿ ಕಾರ್ತಿಕೇ ।
ತಸ್ಯ ವೈಕುಂಠಭವನೇ ಜಾಯತೇ ಸುದೃಢಂ ಗೃಹಂ ॥ ೪೦ ॥
ದದ್ಯಾತ್ಕಾರ್ತಿಕಮಾಸೇ ತು ಧರ್ಮಕಾಷ್ಠಾನಿ ಭೂರಿಶಃ ।
ನ ತತ್ಪುಣ್ಯಸ್ಯ ನಾಶೋಽಸ್ತಿ ಕಲ್ಪಕೋಟಿಶತೈರಪಿ ॥ ೪೧ ॥
ಸುಧಾದಿ ಲೇಪಯೇದ್ಯಸ್ತು ಕಾರ್ತಿಕೇ ವಿಷ್ಣುಮಂದಿರೇ ।
ಚಿತ್ರಾದಿಕಂ ಲಿಖೇದ್ವಾಪಿ ಮೋದತೇ ವಿಷ್ಣುಸನ್ನಿಧೌ ॥ ೪೨ ॥
ದೇವಾಲಯೇ ವಾ ತೀರ್ಥೇ ವಾ ಕೃತೋ ದುಷ್ಟೈರ್ನೃಪೈಃ ಕರಃ ।
ತಂ ಮೋಚಯಂತಿ ಯೇ ಲೋಕಾಃ ತೇಷಾಂ ಧರ್ಮಸ್ಸನಾತನಃ ॥ ೪೩ ॥

---

೩೭. ಸರ್ವ ವ್ರತಗಳೂ ಒಂದು ಕಡೆ; ಸತ್ಯವ್ರತವೇ ಒಂದು ಕಡೆ. ಆದ್ದರಿಂದ ಸರ್ವಪ್ರಯತ್ನದಿಂದಲೂ ಸದಾ ಸತ್ಯವನ್ನೇ ಆಡಬೇಕು.

೩೮–೩೯. ಬೇರೆ ಧರ್ಮಗಳಲ್ಲಿ ಅಧಿಕಾರವು ಕುಲ ಜಾತಿ ವಿಭಾಗಗಳಿಂದ ನಿರ್ಣಯವಾಗುತ್ತದೆ. ಕಾರ್ತಿಕದಲ್ಲಾದರೋ ಸರ್ವಜನರೂ ಅಧಿಕಾರಿಗಳೇ ಆಗುತ್ತಾರೆ. ಕಾರ್ತಿಕಮಾಸದಲ್ಲಿ ಯಾರು ವಿಶೇಷವಾಗಿ ಗೋಗ್ರಾಸವನ್ನು ಕೊಡುತ್ತಾರೆಯೋ ಅವರ ಪುಣ್ಯಫಲವನ್ನು ವಿವರಿಸಲು ಪಿತಾಮಹನೂ ಶಕ್ತನಲ್ಲವು.

೪೦–೪೧. ಯಾವನು ಕಾರ್ತಿಕಮಾಸದಲ್ಲಿ ಪ್ರಾತಃಕಾಲದಲ್ಲಿ ವಿಷ್ಣು ದೇವಾಲಯದ ಕಸವನ್ನು ಗುಡಿಸುತ್ತಾನೆಯೋ ಅವನಿಗೆ ವೈಕುಂಠಭವನದಲ್ಲಿ ಬಹು ದೃಢವಾದ ಗೃಹವು ನಿರ್ಮಾಣವಾಗುತ್ತದೆ. ಕಾರ್ತಿಕಮಾಸದಲ್ಲಿ ಧರ್ಮಾರ್ಥವಾಗಿ ಸೌದೆಯುನ್ನು ಯಥೇಚ್ಛವಾಗಿ ಕೊಡತಕ್ಕದ್ದು. ಆ ಪುಣ್ಯಕ್ಕೆ ನೂರಾರು ಕಲ್ಪಕೋಟಿಗಳಲ್ಲಿ ನಾಶವೆಂಬುದಿರುವುದಿಲ್ಲ.

೪೨–೪೩. ಯಾವನು ಕಾರ್ತಿಕದಲ್ಲಿ ವಿಷ್ಣುಮಂದಿರದಲ್ಲಿ ಸುಣ್ಣ ಮೊದಲಾದವನ್ನು ಲೇಪಿಸುತ್ತಾನೊ ಅಥವಾ ಚಿತ್ರಾದಿಗಳನ್ನು ಬರೆಯುತ್ತಾನೆಯೋ ಅವನು ವಿಷ್ಣುಸನ್ನಿಧಿಯಲ್ಲಿ ಆನಂದಪಡುತ್ತಾನೆ. ದೇವಾಲಯದಲ್ಲಾಗಲಿ ತೀರ್ಥದಲ್ಲಾಗಲಿ ದುಷ್ಟರಾಜರು ಕರ (ಸುಂಕ)ಗಳನ್ನು ವಿಧಿಸಿದ್ದಪಕ್ಷದಲ್ಲಿ ಅದನ್ನು ಯಾರು ಬಿಡಿಸುತ್ತಾರೋ ಅವರಿಗೆ ಸನಾತನವಾದ ಧರ್ಮವು ದೊರೆಯುತ್ತದೆ.

ಕಾರ್ತಿಕೇ ಮಾಸಿ ಯೋ ವಿಪ್ರೋ ಗಭಸ್ತೀಶ್ವರಸನ್ನಿಧೌ ।
ಶತರುದ್ರೀಜಪಂ ಕುರ್ಯಾತ್ ಮಂತ್ರಸಿದ್ಧಿಃ ಪ್ರಜಾಯತೇ ॥ ೪೪ ॥
ವಾರಾಣಸ್ಯಾಂ ತು ಯೈಃ ಸ್ಥಿತ್ವಾ ತ್ರಿವರ್ಷಂ ಕಾರ್ತಿಕವ್ರತಂ ।
ಸೋಪಾಂಗ ಸಾಂಗ ಯೈರ್ಮರ್ತ್ಯೈಃ ಕೃತಂ ಭಕ್ತ್ಯೈಕತತ್ಪರೈಃ ॥ ೪೫ ॥
ಇಹ ಲೋಕೇ ಫಲಂ ತೇಷಾಂ ಪ್ರತ್ಯಕ್ಷಂ ಜಾಯತೇ ಕಿಲ ।
ಸಂಪತ್ತ್ಯಾ ಚೈವ ಸಂತತ್ಯಾ ಯಶೋಭಿರ್ಧರ್ಮಬುದ್ಧಿಭಿಃ ॥ ೪೬ ॥
ಪಲಾಂಡುಂ ಶೃಂಗಂ ಮಾಂಸಂ ಚ ಶಯ್ಯಾಂ ಸೌವೀರಕಂ ತಥಾ ।
ರಾಜಿಕೋನ್ಮಾದಿಕಂ ಚಾಪಿ ಚಿಪಿಟಾನ್ನಂ ಚ ವರ್ಜಯೇತ್ ॥ ೪೭ ॥
ಧಾತ್ರೀಫಲಂ ಭಾನುವಾರೇ ಪರದೇಶಾಗಮಂ ತಥಾ ।
ತೀರ್ಥಂ ವಿನಾ ಸದೈವೇಹ ವರ್ಜಯೇತ್ಕಾರ್ತಿಕವ್ರತೀ ॥ ೪೮ ॥
ದೇವವೇದದ್ವಿಜಾತೀನಾಂ ಗುರುಗೋವ್ರತಿನಾಂ ತಥಾ ।
ಸ್ತ್ರೀರಾಜಮಹತಾಂ ನಿಂದಾಂ ವರ್ಜಯೇತ್ಕಾರ್ತಿಕವ್ರತೀ ॥ ೪೯ ॥
ನರಕಸ್ಯ ಚತುರ್ದಶ್ಯಾಂ ತೈಲಾಭ್ಯಂಗಂ ಚ ಕಾರಯೇತ್ ।
ಅನ್ಯತ್ರ ಕಾರ್ತಿಕೇ ಮಾಸಿ ತೈಲಸ್ನಾನಂ ವಿವರ್ಜಯೇತ್ ।
ನಾಲಿಕಾಂ ಮೂಲಕಾಂ ಚೈವ ಕೂಷ್ಮಾಂಡಂ ಚ ಕಪಿತ್ಥಕಂ ॥ ೫೦ ॥

---

೪೪–೪೬. ಕಾರ್ತಿಕಮಾಸದಲ್ಲಿ ಯಾವ ಬ್ರಾಹ್ಮಣನು ಗಭಸ್ತೀಶ್ವರನ ಸನ್ನಿಧಿಯಲ್ಲಿ ಶತರುದ್ರೀಯ ಜಪವನ್ನು ಮಾಡುತ್ತಾನೆಯೋ ಅವನಿಗೆ ಮಂತ್ರಸಿದ್ಧಿಯುಂಟಾಗುತ್ತದೆ. ವಾರಾಣಸಿಯಲ್ಲಿ (ಕಾಶಿಯಲ್ಲಿ) ನಿಂತು ಯಾರು ಮೂರು ವರ್ಷಕಾಲ ಭಕ್ತ್ಯೈಕತತ್ಪರರಾಗಿ ಕಾರ್ತಿಕವ್ರತವನ್ನು ಸಾಂಗೋಪಾಂಗವಾಗಿ ನೆರವೇರಿಸುತ್ತಾರೆಯೋ ಆ ಮರ್ತ್ಯರಿಗೆ ಈ ಲೋಕದಲ್ಲೇ ಸಂಪತ್ತೂ, ಸಂತತಿ, ಯಶಸ್ಸು, ಧರ್ಮಬುದ್ಧಿಗಳ ರೂಪದಲ್ಲಿ ಪ್ರತ್ಯಕ್ಷ ಫಲವುಂಟಾಗುತ್ತದೆ.

೪೭. ನೀರುಳ್ಳಿ, ಶೃಂಗ (ಜೀವಕವೆಂಬ ವನಸ್ಪತಿ ವಿಶೇಷ), ಮಾಂಸ, ಶಯ್ಯೆ, ಸೌವೀರಕ (ಎಳಚೇಹಣ್ಣು), ಉನ್ಮಾದಕಾರಕವಸ್ತು, ಚಿಪಿಟಾನ್ನ, ಅವಲಕ್ಕಿ ಇವನ್ನು ವರ್ಜಿಸತಕ್ಕದ್ದು.

೪೮. ಕಾರ್ತಿಕವ್ರತಿಯು, ಭಾನುವಾರ ನೆಲ್ಲಿಕಾಯಿಯನ್ನೂ, ತೀರ್ಥವೊಂದು ಹೊರತಾಗಿ ಪರದೇಶಗಮನವನ್ನೂ ಸದಾಕಾಲವೂ ವರ್ಜಿಸತಕ್ಕದ್ದು.

೪೯. ದೇವ, ವೇದ, ದ್ವಿಜರು, ಗುರು, ಗೋವು, ವ್ರತಿಗಳು, ಸ್ತ್ರೀಯರು, ರಾಜಾಧಿಕಾರಿಗಳು—ಇವರ ನಿಂದೆಯನ್ನು ಕಾರ್ತಿಕವ್ರತಿಯು ತೊರೆಯಬೇಕು.

೫೦–೫೧. ನರಕಚತುರ್ದಶಿಯ ದಿನ ತೈಲಾಭ್ಯಂಗಮಾಡಿಕೊಳ್ಳಬೇಕು. ಅದು ಹೊರತು ಬೇರೆ ದಿನದಲ್ಲಿ ಕಾರ್ತಿಕಮಾಸದಲ್ಲಿ ತೈಲಸ್ನಾನವನ್ನು ಬಿಟ್ಟುಬಿಡಬೇಕು. ನಾಲಿಕ (ದಂಟು), ಮೂಲಿಕ (ಗೆಡ್ಡೆ, ಗೆಣಸು), ಕುಂಬಳ, ಕಪಿತ್ಥಕ

ರಜಸ್ವಲಾಂತ್ಯಜಮ್ಲೇಚ್ಛಾಪತಿತಾಽವ್ರತಿಕೈಸ್ತಥಾ ।
ದ್ವಿಜದ್ವಿಡ್ವೇದಬಾಹ್ಯೈಶ್ಚ ನ ವದೇತ್ಸರ್ವದಾ ವ್ರತೀ ॥ ೫೧ ॥
ಏಭಿರ್ದೃಷ್ಟಂ ಚ ಕಾಕೈಶ್ಚ ಸೂತಿಕಾನ್ನಂ ಚ ಯದ್ಭವೇತ್ ।
ದ್ವಿಃಪಾಚಿತಂ ಚ ದಗ್ಧಾನ್ನಂ ನೈವಾದ್ಯಾತ್ ವೈಷ್ಣವವ್ರತೀ ॥ ೫೨ ॥
ಕ್ರಮಾತ್ಕೂಷ್ಮಾಂಡಬೃಹತೀತರುಣೀಮೂಲಕಂ ತಥಾ ।
ಶ್ರೀಫಲಂ ಚ ಕಲಿಂಗಂ ಚ ಫಲಂ ಧಾತ್ರೀಭವಂ ತಥಾ ॥ ೫೩ ॥
ನಾರಿಕೇಲಫಲಾಂಬುಂ ಚ ಪಟೋಲಂ ಬೃಹತೀಫಲಂ ।
ಚರ್ಮವೃಂತಾಕಚವಲೀಶಾಕಂ ತುಲಸಿಜಂ ತಥಾ ॥ ೫೪ ॥
ಶಾಕಾನ್ಯೇತಾನಿ ವರ್ಜ್ಯಾನಿ ಕ್ರಮಾತ್ಪ್ರತಿಪದಾದಿಷು ।
ಏವಮೇವ ಹಿ ಮಾಘೇಽಪಿ ಕುರ್ಯಾಚ್ಚ ನಿಯಮಾನ್ ವ್ರತೀ ॥ ೫೫ ॥
ಕಾರ್ತಿಕವ್ರತಿನಃ ಪುಣ್ಯಂ ಯಥೋಕ್ತವ್ರತಕಾರಿಣಃ ।
ನ ಸಮರ್ಥೋ ಭವೇದ್ವಕ್ತುಂ ಬ್ರಹ್ಮಾಪೀಹ ಚತುರ್ಮುಖಃ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಕಾರ್ತಿಕವ್ರತನಿರೂಪಣಂ" ನಾಮ ಷಷ್ಠೋಽಧ್ಯಾಯಃ

---

(ಬೇಲದಹಣ್ಣು)— ಇವನ್ನೂ ವರ್ಜಿಸಬೇಕು. ವ್ರತವನ್ನು ಹಿಡಿದವನು ಯಾವಾಗಲೂ ರಜಸ್ವಲೆಯರು, ಅಂತ್ಯಜರು, ಮ್ಲೇಚ್ಛರು, ಪತಿತರು, ವ್ರತಿಗಳಲ್ಲದವರು, ಬ್ರಹ್ಮದ್ವೇಷಿಗಳು, ವೇದಬಾಹ್ಯರು, ಇವರೊಡನೆ ಯಾವಾಗಲೂ ಮಾತನಾಡಬಾರದು.

೫೨–೫೬. ಇವರಿಂದ ನೋಡಲ್ಪಟ್ಟ ಮತ್ತು ಕಾಗೆಗಳ ಕಣ್ಣಿಗೆ ಬಿದ್ದ ಅನ್ನವನ್ನೂ, ಸೂತಿಕಾನ್ನವನ್ನೂ, ಎರಡು ಸಲ ಬೆಂದದನ್ನೂ, ಸೀದ ಅನ್ನವನ್ನೂ ವೈಷ್ಣವವ್ರತಿಯು ತಿನ್ನಬಾರದು. ಕುಂಬಳ, ಬೃಹತೀ, ತರುಣೀಮೂಲಕ, ಶ್ರೀಫಲ, ಕಲಿಂಗಫಲ, ಧಾತ್ರೀಭವ, ತೆಂಗು, ಹಾಲ·ಸೋರೆ (ಅಲಾಬು), ಪಟೋಲ (ಪಡವಲ), ಬೃಹತೀಫಲ, ಚರ್ಮ, ಬದನೆ, ಚವಲೀಶಾಕ, ತುಲಸೀಶಾಕ—ಈ ಶಾಕಗಳನ್ನು ಅನುಕ್ರಮವಾಗಿ ಪಾಡ್ಯಮಿಯು ಮೊದಲುಗೊಂಡು ಪ್ರತಿದಿನವೂ ಆಯಾ ಶಾಕವನ್ನು ಆಯಾ ದಿನದಲ್ಲಿ ವರ್ಜಿಸಬೇಕು. ವ್ರತ ನಡೆಸುವವನು ಮಾಘಮಾಸದಲ್ಲಿಯೂ ಹೀಗೆಯೇ ನಿಯಮಗಳನ್ನು ಮಾಡಿಕೊಳ್ಳತಕ್ಕದ್ದು. ಯಥೋಕ್ತವಾಗಿ ವ್ರತವನ್ನು ನಡಸಿದ ಕಾರ್ತಿಕ ವ್ರತಿಯ ಪುಣ್ಯವನ್ನು ವರ್ಣಿಸುವುದಕ್ಕೆ ಚತುರ್ಮುಖಗಳುಳ್ಳ ಬ್ರಹ್ಮನೂ ಸಮರ್ಥನಲ್ಲವು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಕಾರ್ತಿಕವ್ರತನಿರೂಪಣ"ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ದೀಪದಾನಮಾಹಾತ್ಮ್ಯವರ್ಣನಂ

ನಾರದ ಉವಾಚ :—

ಭಗವನ್ ಕೃತಕೃತ್ಯೋಽಸ್ಮಿ ತವಪಾದಸಮಾಶ್ರಯಾತ್ ।
ಶ್ರೋತವ್ಯಂ ನೇಹ ಭೂಯೋ ಮೇ ವಿದ್ಯತೇ ದೇವಸತ್ತಮ ॥ ೧ ॥
ತಥಾಪಿ ಭಗವನ್ ಕಿಂಚಿತ್ ಪ್ರಷ್ಟವ್ಯಂ ಮೇ ಹೃದಿ ಸ್ಥಿತಂ ।
ತ್ವದ್ವಾಕ್ಯಾಮೃತಪೀತಸ್ಯ ನ ಮೇ ತೃಪ್ತಿರ್ಹಿ ಜಾಯತೇ ॥ ೨ ॥
ದೀಪದಾನಸ್ಯ ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ತೇ ಪ್ರಭೋ ।
ಯೇನ ಚಾಪಿ ಪುರಾ ದತ್ತಃ ತದ್ವದಸ್ವ ಚತುರ್ಮುಖ ॥ ೩ ॥

ಬ್ರಹ್ಮೋವಾಚ :—

ಪ್ರಾತಸ್ಸ್ನಾತ್ವಾ ಶುಚಿರ್ಭೂತ್ವಾ ದೀಪಂ ದದ್ಯಾತ್ಪ್ರಯತ್ನತಃ ।
ತೇನ ಪಾಪಾನಿ ನಶ್ಯೇಯುಃ ತಮಾಂಸೀವ ಭಗೋದಯೇ ॥ ೪ ॥

---

## ಕನ್ನಡದ ಅನುವಾದ

### ದೀಪದಾನಮಾಹಾತ್ಮ್ಯವರ್ಣನ

೧. ನಾರದನು ಕೇಳುತ್ತಾನೆ:—"ಭಗವನ್! ನಿನ್ನ ಪಾದಗಳನ್ನಾಶ್ರಯಿಸಿದ್ದರಿಂದ ನಾನು ಕೃತಕೃತ್ಯನಾಗಿದ್ದೇನೆ. ಎಲೈ ದೇವಶ್ರೇಷ್ಠನೇ! ನಾನು ಕೇಳಬೇಕಾದುದಿನ್ನೇನೂ ಇಲ್ಲವು.

೨. ಎಲೈ ಭಗವಂತನೇ! ಆದರೂ ಕೇಳಬೇಕಾದ ಸ್ವಲ್ಪ ವಿಷಯವು ಮನಸ್ಸಿನಲ್ಲಿದೆ. ನಿನ್ನ ವಾಕ್ಯಾಮೃತವನ್ನು ಕುಡಿದು ನನಗೆ ತೃಪ್ತಿಯಂತೂ ಆಗಿಲ್ಲ.

೩. ಪ್ರಭುವೇ! ದೀಪದಾನದಮಾಹಾತ್ಮ್ಯೆಯನ್ನು ನಿನ್ನಿಂದ ಕೇಳಲಿಚ್ಛಿಸುತ್ತೇನೆ. ಹಿಂದೆ ಈ ದಾನವನ್ನು ಯಾರು ಮಾಡಿದರು? ಎಲೈ ಚತುರ್ಮುಖನೇ, ಅದನ್ನು ನನಗೆ ಹೇಳು."

೪. ಬ್ರಹ್ಮನು ಹೇಳುತ್ತಾನೆ:—"ಕಾರ್ತಿಕವ್ರತಿಯು ಬೆಳಗ್ಗೆ ಸ್ನಾನಮಾಡಿ ಶುಚಿರ್ಭೂತನಾಗಿ ಪ್ರಯತ್ನಪೂರ್ವಕವಾಗಿ ದೀಪವನ್ನು ದಾನ ಕೊಡಬೇಕು. ಅದರಿಂದ ಸೂರ್ಯೋದಯದಲ್ಲಿ ಕತ್ತಲೆಯು ನಾಶವಾಗುವಂತೆ ಪಾಪಗಳು ನಾಶಹೊಂದುವುವು.

ಆಜನ್ಮ ಯತ್ಕೃತಂ ಪಾಪಂ ಸ್ತ್ರಿಯಾ ವಾ ಪುರುಷೇಣ ಚ ।
ತತ್ಸರ್ವಂ ನಾಶಮಾಯಾತಿ ಕಾರ್ತಿಕೇ ದೀಪದಾನತಃ ॥ ೫ ॥
ಅತ್ರ ತೇ ವರ್ಣಯಿಷ್ಯಾಮಿ ಇತಿಹಾಸಂ ಪುರಾತನಂ ।
ಶ್ರವಣಾತ್ಸರ್ವಪಾಪಘ್ನಂ ದೀಪದಾನಫಲಪ್ರದಂ ॥ ೬ ॥
ಪುರಾ ದ್ರವಿಡದೇಶೇಷು ಬ್ರಾಹ್ಮಣೋ ಬುದ್ಧನಾಮಕಃ ।
ತಸ್ಯ ಭಾರ್ಯಾಽಭವದ್ದುಷ್ಟಾ ಅನಾಚಾರರತಾ ಮುನೇ ॥ ೭ ॥
ತಸ್ಯಾಸ್ಸಂಸರ್ಗದೋಷೇಣ ಕ್ಷೀಣಾಯುರ್ಮೃತಿಮಾಪ್ತವಾನ್ ।
ಪತೌ ಮೃತೇ ತು ಸಾ ಪತ್ನೀ ಅನಾಚಾರೇ ವಿಶೇಷತಃ ॥ ೮ ॥
ರತಾಭೂನ್ನ ಹಿ ತಸ್ಯಾಸ್ತು ಲಜ್ಜಾ ಲೋಕಾಪವಾದತಃ ।
ಸುತಬಂಧುವಿಹೀನಾ ಸಾ ಸದಾ ಭಿಕ್ಷಾನ್ನಭೋಜನಾ ॥ ೯ ॥
ನ ಸಂಸ್ಕಾರಾನ್ನಮಲ್ಪಂ ವಾ ಭುಕ್ತ್ವಾ ಪರ್ಯುಷಿತಾಶಿನೀ ।
ಪರಪಾಕರತಾ ನಿತ್ಯಂ ತೀರ್ಥಯಾತ್ರಾದಿವರ್ಜಿತಾ ॥ ೧೦ ॥

---

೫. ಕಾರ್ತಿಕಮಾಸದಲ್ಲಿ ದೀಪದಾನ ಮಾಡುವುದರಿಂದ ಹೆಂಗಸಾಗಲಿ ಗಂಡಸಾಗಲಿ ಹುಟ್ಟಿದಂದಿನಿಂದಲೂ ಮಾಡಿರುವ ಪಾಪವೆಷ್ಟಿದೆಯೋ ಅಷ್ಟೆಲ್ಲವೂ ನಾಶವಾಗುತ್ತದೆ.

೬. ಈ ವಿಷಯದಲ್ಲಿ ನಿನಗೆ ಪುರಾತನವಾದ ಇತಿಹಾಸವೊಂದನ್ನು ವರ್ಣಿಸುತ್ತೇನೆ. ಈ ಇತಿಹಾಸವನ್ನು ಶ್ರವಣಮಾಡುವುದರಿಂದ ಸರ್ವಪಾಪಗಳೂ ಧ್ವಂಸವಾಗುವುವು. ದೀಪದಾನದ ಸಂಪೂರ್ಣ ಫಲವನ್ನು ಕೊಡುವಂತಹುದು.

೭. ಪೂರ್ವದಲ್ಲಿ ದ್ರವಿಡದೇಶದಲ್ಲಿ ಬುದ್ಧನೆಂಬ ಹೆಸರುಳ್ಳ ಒಬ್ಬ ಬ್ರಾಹ್ಮಣನಿದ್ದನು. ಎಲೈ ಮುನಿಯೇ! ಅವನ ಹೆಂಡತಿಯು ದುಷ್ಟಳೂ ಅನಾಚಾರತತ್ಪರಳೂ ಆಗಿದ್ದಳು.

೮-೯. ಅವಳ ಸಹವಾಸದೋಷದಿಂದ ಆ ಬ್ರಾಹ್ಮಣನು ಆಯುಸ್ಸು ಕ್ಷೀಣಿಸಿ ಮೃತನಾದನು. ಪತಿಯು ಮೃತನಾದರೂ ಆ ಹೆಂಡತಿಯು ಅನಾಚಾರದಲ್ಲೇ ವಿಶೇಷವಾಗಿ ತೊಡಗಿದಳು. ಅವಳಿಗೆ ಲೋಕಾಪವಾದದಿಂದಲೂ ಲಜ್ಜೆಯಿರಲಿಲ್ಲ. ಮಕ್ಕಳೂ ಬಂಧುಗಳೂ ಇಲ್ಲದೆ ಸದಾ ಭಿಕ್ಷಾನ್ನವನ್ನು ಭೋಜನ ಮಾಡುತ್ತಿದ್ದಳು.

೧೦. ಸುಸಂಸ್ಕೃತವಾದ ಅನ್ನವನ್ನು ಸ್ವಲ್ಪವೂ ತಿನ್ನಲಿಲ್ಲ. ಕೆಟ್ಟುಹೋದ ಹಳಸನ್ನವನ್ನೇ ತಿನ್ನುತ್ತಿದ್ದಳು. ನಿತ್ಯವೂ ಹೆರರು ಮಾಡಿದ ಅಡಿಗೆಯಲ್ಲಿಯೇ ನಿರತಳಾಗಿದ್ದಳು. ತೀರ್ಥಯಾತ್ರಾದಿಗಳನ್ನು ವರ್ಜಿಸಿದಳು.

ಕಥಾಯಾಃ ಶ್ರವಣಂ ಚೈವ ನ ಶ್ರುತಂ ತು ತಯಾ ದ್ವಿಜ ।
ಏಕದಾ ಬ್ರಾಹ್ಮಣಃ ಕಶ್ಚಿತ್ ತೀರ್ಥಯಾತ್ರಾಪರಾಯಣಃ ॥ ೧೧ ॥
ತಸ್ಯಾ ಗೃಹಂ ಸಮಾಗಚ್ಛತ್ ವಿದ್ವಾನ್ ವೈ ಕುತ್ಸನಾಮಕಃ ।
ಅನಾಚಾರರತಾಂ ತಾಂ ತು ದೃಷ್ಟ್ವಾ ಬ್ರಹ್ಮರ್ಷಿಸತ್ತಮಃ ।
ಕೋಪೇನ ರಕ್ತಚಕ್ಷುಸ್ಸನ್ ತಾಮುವಾಚಾ ಸತೀಂ ಸ್ತ್ರಿಯಂ ॥ ೧೨ ॥

ಕುತ್ಸ ಉವಾಚ :—

ವಕ್ಷ್ಯಾಮಿ ಸಾಂಪ್ರತಂ ಮೂಢೇ ಮದ್ವಾಕ್ಯಮವಧಾರಯ ॥ ೧೩ ॥
ದುಃಖಹೇತುಮಿಮಂ ದೇಹಂ ಪೂಯಶೋಣಿತಪೂರಿತಂ ।
ಪಂಚಭೂತಾತ್ಮಕಂ ಚೈವ ಕಿಂ ಚ ಪುಷ್ಣಾಸಿ ದೂತಿಕೇ ॥ ೧೪ ॥
ಜಲಬುದ್ಬುದವದ್ದೇಹೋ ನಾಶಮಾಯಾತಿ ನಿಶ್ಚಿತಂ ।
ಅನಿತ್ಯಂ ದೇಹಮಾಶ್ರಿತ್ಯ ನಿತ್ಯತ್ವಂ ಮನ್ಯಸೇ ಹೃದಿ ॥ ೧೫ ॥
ತಸ್ಮಾದಂತಃಸ್ಥಿತಂ ಮೋಹಂ ತ್ಯಜ ಮೂಢೇ ವಿಚಾರತಃ ।
ಸ್ಮರ ಸರ್ವೋತ್ತಮಂ ದೇವಂ ಕುರು ಶ್ರವಣಮಾದರಾತ್ ॥ ೧೬ ॥
ಕಾರ್ತಿಕೇ ಮಾಸಿ ಸಂಪ್ರಾಪ್ತೇ ಸ್ನಾನದಾನಾದಿಕಂ ಕುರು ।
ದಾಮೋದರಸ್ಯ ಪ್ರೀತ್ಯರ್ಥಂ ದೀಪದಾನಂ ತಥಾ ಕುರು ॥ ೧೭ ॥

---

೧೧–೧೨. ಅಯ್ಯಾ ದ್ವಿಜನೆ! ಕಥಾಶ್ರವಣವನ್ನೂ ಅವಳು ಮಾಡುತ್ತಿರಲಿಲ್ಲ. ಒಂದು ಸಲ ವಿದ್ವಾಂಸನಾದ ಕುತ್ಸನೆಂಬ ಒಬ್ಬಾನೊಬ್ಬ ಬ್ರಾಹ್ಮಣನು ತೀರ್ಥ ಯಾತ್ರಾಪರಾಯಣನಾಗಿ ಆಕೆಯ ಮನೆಗೆ ಬಂದನು. ಬ್ರಹ್ಮರ್ಷಿಶ್ರೇಷ್ಠನಾದ ಆತನು ಅನಾಚಾರದಲ್ಲಿಯೇ ಆಸಕ್ತಳಾಗಿದ್ದ ಅವಳನ್ನು ಕಂಡು ಕೋಪದಿಂದ ಕೆಂಗಣ್ಣುಗಳುಳ್ಳವನಾಗಿ ಅಸತಿಯಾದ ಆ ಹೆಂಗಸನ್ನು ಕುರಿತು ಹೀಗೆಂದನು.

೧೩. ಕುತ್ಸನು ಹೇಳುತ್ತಾನೆ:—"ಎಲೆ ಮೂಢೇ, ಈಗ ನಾನೊಂದು ಮಾತು ಹೇಳುತ್ತೇನೆ. ನನ್ನ ಮಾತನ್ನು ಕೇಳು.

೧೪–೧೫. ಈ ದೇಹವು ದುಃಖಕ್ಕೆ ಕಾರಣವಾದುದು. ಕೀವುರಕ್ತಗಳಿಂದ ತುಂಬಿದುದು ; ಪಂಚಭೂತಾತ್ಮಕವಾದದ್ದು. ಎಲೆ ದೂತಿ ! ಏತಕ್ಕಾಗಿ ಇದನ್ನು ಪೋಷಿಸುವೆ? ನೀರಮೇಲಿನ ಗುಳ್ಳೆಯಂತೆ ಈ ದೇಹವು ನಾಶವಾಗುವುದು ನಿಶ್ಚಯ. ಅನಿತ್ಯವಾದ ಈ ದೇಹವನ್ನಾಶ್ರಯಿಸಿ ಇದನ್ನು ನಿತ್ಯವೆಂದು ನೀನು ಭಾವಿಸಿರುವೆ.

೧೬. ಆದುದರಿಂದಲೈ ಮೂಢೇ! ವಿಚಾರಮಾಡಿ ಒಳಗೆ ನೆಲಸಿರುವ ಮೋಹವನ್ನು ತ್ಯಜಿಸು. ಸರ್ವೋತ್ತಮನಾದ ದೇವನನ್ನು ಸ್ಮರಿಸು. ಆದರದಿಂದ ಅವನ (ಗುಣವನ್ನು) ಶ್ರವಣಮಾಡು.

೧೭. ಕಾರ್ತಿಕಮಾಸವು ಬಂದಾಗ ಸ್ನಾನದಾನಾದಿಗಳನ್ನು ಮಾಡು. ಹಾಗೆಯೇ ದಾಮೋದರನ ಪ್ರೀತ್ಯರ್ಥವಾಗಿ ದೀಪದಾನವನ್ನು ಮಾಡು.

ಲಕ್ಷವರ್ತ್ಯಾದಿಕಂ ಚೈವ ಲಕ್ಷಪದ್ಮಾದಿಕಂ ತಥಾ ।
ಪ್ರದಕ್ಷಿಣಾಂ ತು ದೇವಸ್ಯ ನಮಸ್ಕಾರಂ ತಥೈವ ಚ ॥ ೧೮ ॥
ಧಾರಣಂ ಪಾರಣಂ ಚೈವ ಕುರು ಭಕ್ತ್ಯಾ ಹಿ ಕಾರ್ತಿಕೇ ।
ವಿಧವಾನಾಂ ವ್ರತಮಿದಂ ಸಧವಾನಾಂ ತಥೈವ ಚ ॥ ೧೯ ॥
ಸರ್ವಪಾಪಪ್ರಶಮನಂ ಸರ್ವೋಪದ್ರವನಾಶನಂ ।
ತತ್ರಾಪಿ ಕಾರ್ತಿಕೇ ಮಾಸಿ ದೀಯತಾಂ ದೀಪ ಉತ್ತಮಃ ॥ ೨೦ ॥
ದೀಪೋ ಹರೇಃ ಪ್ರಿಯಕರಃ ಕಾರ್ತಿಕೇ ಮಾಸಿ ನಿಶ್ಚಿತಂ ।
ಮಹಾಪಾತಕಕೃದ್ವಾಪಿ ದೀಪದಾನಾತ್ಪ್ರಮುಚ್ಯತೇ ॥ ೨೧ ॥
ಪುರಾ ಕಶ್ಚಿದ್ದ್ವಿಜವರೋ ನಾಮ್ನಾ ಹರಿಕರೋ ಹ್ಯಭೂತ್ ।
ಅಧರ್ಮವಿಷಯಾಸಕ್ತಃ ಶಶ್ವದ್ವೇಶ್ಯಾರತೋ ದ್ವಿಜಃ ॥ ೨೨ ॥
ಪಿತೃವಿತ್ತಕ್ಷಯಕರೋ ವಂಶಚ್ಛೇದೇ ಕುಠಾರಕಃ ।
ಕದಾಚಿತ್ತೇನ ವಿಧವೇ ದ್ಯೂತೇ ಪಿತೃಧನಂ ಮಹತ್ ॥ ೨೩ ॥
ಹಾರಿತಂ ದುಷ್ಟಸಂಸರ್ಗಾತ್ ತತೋ ದುಃಖೀ ಸ ಚಾಽಭವತ್ ।
ಕದಾಚಿತ್ಸಾಧುಸಂಸರ್ಗಾತ್ ತೀರ್ಥಯಾತ್ರಾಪ್ರಸಂಗತಃ ॥ ೨೪ ॥

---

೧೮–೧೯. ಲಕ್ಷವರ್ತಿ ಮೊದಲಾದುವನ್ನೂ ಲಕ್ಷಪದ್ಮ ಮೊದಲಾದುವನ್ನೂ ದೇವನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಧಾರಣೆಯನ್ನು ಪಾರಣೆಯನ್ನು ಭಕ್ತಿಯಿಂದ ಮಾಡು. ವಿಧವೆಯರಿಗೆ ಇದು ವ್ರತ. ಸಧವೆಯರಿಗೂ ಇದೇ.

೨೦. ಈ ವ್ರತವು ಸರ್ವಪಾಪಗಳನ್ನು ತಗ್ಗಿಸುವಂತಹುದು; ಸರ್ವೋಪದ್ರವಗಳನ್ನೂ ನಾಶಮಾಡತಕ್ಕದ್ದು. ಅದರಲ್ಲಿಯೂ ಕಾರ್ತಿಕಮಾಸದಲ್ಲಿ ಉತ್ತಮವಾದ ದೀಪದಾನವನ್ನು ಮಾಡಬೇಕು.

೨೧. ಕಾರ್ತಿಕಮಾಸದಲ್ಲಿ ದೀಪವು ಶ್ರೀಹರಿಗೆ ಪ್ರಿಯಕರವಾದುದು. ಇದು ನಿಶ್ಚಯವು. ಮಹಾಪಾತಕ ಮಾಡಿದವನು ದೀಪದಾನ ಮಾಡಿ ಆ ಪಾಪದಿಂದ ಬಿಡುಗಡೆ ಹೊಂದುತ್ತಾನೆ.

೨೨. ಪೂರ್ವದಲ್ಲಿ ಹರಿಕರನೆಂಬ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು. ಆ ಬ್ರಾಹ್ಮಣನು ಯಾವಾಗಲೂ ಅಧರ್ಮವಿಷಯಾಸಕ್ತನಾಗಿಯೂ ವೇಶ್ಯಾರತನಾಗಿಯೂ ಇದ್ದನು.

೨೩–೨೬. ತಂದೆ ತಾತಂದಿರು ಸಂಪಾದಿಸಿದ ಸಂಪತ್ತನ್ನು ನಾಶಮಾಡುವವನೂ, ವಂಶಚ್ಛೇದಮಾಡುವ ಕೊಡಲಿಯೂ ಆಗಿಬಿಟ್ಟನು. ಎಲೆ ವಿಧವೆಯೆ! ಒಂದಾನೊಂದು ದಿನ ಅವನು ದುಷ್ಟರ ಸಹವಾಸದಿಂದ ಜೂಜಿನಲ್ಲಿ ತನಗಿದ್ದ ಮಹತ್ತಾದ ಪಿತೃಧನವನ್ನು ಕಳೆದುಕೊಂಡನು. ಅದರಿಂದ ಅವನು ಬಹಳ ದುಃಖಿಯಾದನು. ಹೀಗಿರಲಾಗಿ ಯಾವಾಗಲೋ ಒಂದು ಸಲ ಸಾಧುಗಳ

ಅಯೋಧ್ಯಾಮಾಗತೋ ವತ್ಸೇ ಮಹಾಪಾಪಕರೋ ದ್ವಿಜಃ ।
ಕಾರ್ತಿಕೇ ಮಾಸಿ ಸಂಪ್ರಾಪ್ತಃ ಶ್ರೀಮದ್ದ್ವಿಜಗೃಹೇ ಸದಾ ॥ ೨೫ ॥
ದ್ಯೂತವ್ಯಾಜೇನ ತೇನಾಶು ದೀಪೋ ದತ್ತೋ ಹರೇಃ ಪುರಃ ।
ತತಃ ಕಾಲಾಂತರೇ ವಿಪ್ರೋ ಮೃತೋ ಮೋಕ್ಷಮವಾಪ್ತವಾನ್ ॥ ೨೬ ॥
ಮಹಾಪಾತಕಕೃದ್ವಾಪಿ ಗತವಾನಭಯಂ ಹರಿಂ ।
ತಸ್ಮಾತ್ತ್ವಂ ಕಾರ್ತಿಕೇ ಮಾಸಿ ದೀಪದಾನಂ ತಥಾ ಕುರು ॥ ೨೭ ॥
ತಥಾನ್ಯಾನ್ಯಪಿ ದಾನಾನಿ ಕುರು ಭಕ್ತಿಸಮನ್ವಿತಾ ।
ಇತ್ಯಾದಿಶ್ಯಾಥ ತಾಂ ಕುತ್ಸೋ ಜಗಾಮಾನ್ಯಗೃಹಂ ದ್ವಿಜಃ ॥ ೨೮ ॥
ಸಾಪಿ ಕುತ್ಸವಚಃ ಶ್ರುತ್ವಾ ಪಶ್ಚಾತ್ತಾಪೇನ ಸಂಯುತಾ ।
ವ್ರತಂ ತು ಕಾರ್ತಿಕೇ ಮಾಸಿ ಕರಿಷ್ಯಾಮೀತಿ ನಿಶ್ಚಿತಾ ॥ ೨೯ ॥
ಪತಂಗೋದಯವೇಲಾಯಾಂ ಕಾರ್ತಿಕೇ ಸ್ನಾನಮಂಭಸಿ ।
ದೀಪದಾನಂ ವ್ರತಂ ಚೈವ ಮಾಸಮೇಕಂ ಚಕಾರ ಸಾ ॥ ೩೦ ॥
ತತಃ ಕಾಲಾಂತರೇ ಚೈವ ಗತಾಯುರ್ಮೃತಿಮಾಗತಾ ।
ದೀಪದಾನಸ್ಯ ಮಾಹಾತ್ಮ್ಯಾತ್ ಮಹಾಪಾಪಕೃದಪ್ಯಸೌ ॥ ೩೧ ॥

---

ಸಂಸರ್ಗದಿಂದ ತೀರ್ಥಯಾತ್ರೆಯ ಸಂದರ್ಭದಲ್ಲಿ ಮಹಾಪಾಪಕಾರಿಯಾದ ಆ ಬ್ರಾಹ್ಮಣನು ಅಯೋಧ್ಯೆಗೆ ಬಂದನು. ಆಗ ಕಾರ್ತಿಕಮಾಸವು ಬಂದಿತು. ಶ್ರೀಮಂತನಾದೋರ್ವ ದ್ವಿಜನ ಮನೆಯಲ್ಲಿ ಸದಾ ದ್ಯೂತವು ನಡೆಯುತ್ತಿದ್ದಿತು. ದ್ಯೂತದ ನೆಪದಿಂದ ಹರಿಯ ಮುಂದೆ ಅವನು ದೀಪವಿಡುತ್ತಿದ್ದನು. ಬಳಿಕ ಕಾಲಾಂತರದಲ್ಲಿ ಆ ಬ್ರಾಹ್ಮಣನು ಮೃತನಾಗಿ ಮೋಕ್ಷವನ್ನು ಪಡೆದನು.

೨೭. ಮಹಾಪಾತಕವನ್ನು ಮಾಡಿದವನಾದರೂ ಅವನು ಹರಿಯನ್ನು ಭಜಿಸಿ ಅಭಯವನ್ನು ಪಡೆದನು. ಆದ್ದರಿಂದ ನೀನು ಕಾರ್ತಿಕಮಾಸದಲ್ಲಿ ಹಾಗೆಯೇ ದೀಪದಾನವನ್ನು ಮಾಡು.

೨೮. ಅದರಂತೆಯೇ ಭಕ್ತಿಯುಳ್ಳವಳಾಗಿ ಬೇರೆ ದಾನಗಳನ್ನು ಮಾಡು.'' ಹೀಗೆಂದು ಅವಳಿಗೆ ಆದೇಶ ಮಾಡಿ ಆ ಕುತ್ಸನು ಬೇರೆ ಮನೆಗೆ ಹೋದನು.

೨೯. ಅವಳು ಕೂಡ ಕುತ್ಸನ ವಚನವನ್ನು ಕೇಳಿ ಪಶ್ಚಾತ್ತಾಪದಿಂದ ಕೂಡಿದವಳಾದಳು. ಕಾರ್ತಿಕಮಾಸದಲ್ಲಿ ವ್ರತವನ್ನು ಮಾಡುತ್ತೇನೆ ಎಂದು ನಿಶ್ಚಯಿಸಿಕೊಂಡಳು.

೩೦. ಕಾರ್ತಿಕಮಾಸದ ಸೂರ್ಯೋದಯದ ಸಮಯದಲ್ಲಿ ಪ್ರಾತಃ ಸ್ನಾನವನ್ನೂ, ದೀಪದಾನ ವ್ರತವನ್ನೂ ಒಂದುತಿಂಗಳವರೆಗೆ ನಡಸಿದಳು.

೩೧–೩೨. ಬಳಿಕ ಕಾಲಾಂತರದಲ್ಲಿ ಆಯಸ್ಸು ಮುಗಿದು ಮೃತಳಾದಳು. ಅವಳು ಮಹಾಪಾಪವನ್ನು ಮಾಡಿದವಳಾದರೂ ದೀಪದಾನದ ಮಾಹಾತ್ಮ್ಯ

**ಸ್ವರ್ಗಮಾರ್ಗಂ ಗತಾ ಸಾ ಸ್ತ್ರೀ ಕಾಲೇ ಮೋಕ್ಷಮವಾಪ ಹ ।**
**ತಸ್ಮಾನ್ನಾರದ ಮಾಹಾತ್ಮ್ಯಂ ದೀಪದಾನಸ್ಯ ಕೋ ವದೇತ್ ॥ ೩೨ ॥**
**ಕಾರ್ತಿಕೇ ದೀಪದಾನಂ ತು ಮಹಾಪುಣ್ಯಫಲಪ್ರದಂ ।**
**ಕಾರ್ತಿಕವ್ರತನಿಷ್ಠೋಽಯೋ ದೀಪದಾನಾದಿಕೃನ್ನರಃ ॥ ೩೩ ॥**
**ದೀಪದಾನಸ್ಯೇತಿಹಾಸಂ ಶೃಣ್ವನ್ಮೋಕ್ಷಮಾಪ್ನುಯಾತ್ ॥ ೩೪ ॥**
**ದೀಪದಾನಸ್ಯ ಮಾಹಾತ್ಮ್ಯಂ ವಕ್ತುಂ ಕೇನೇಹ ಶಕ್ಯತೇ ।**
**ಪರದೀಪಪ್ರಬೋಧಸ್ಯ ಮಾಹಾತ್ಮ್ಯಂ ಶೃಣು ನಾರದ ॥ ೩೫ ॥**
**ಸ್ವಸ್ಯಾಪಿ ಶಕ್ತಿರಾಹಿತ್ಯೇ ಪರಸ್ಯಾಪಿ ಪ್ರಬೋಧನಂ ।**
**ಯಃ ಕುರ್ಯಾಲ್ಲಭತೇ ಸೋಽಪಿ ನಾತ್ರ ಕಾರ್ಯಾ ವಿಚಾರಣಾ ॥ ೩೬ ॥**
**ದೀಪಾರ್ಥಂ ವರ್ತಿಕಾಂ ತೈಲಂ ಪಾತ್ರಂ ವಾ ಯೋ ದದಾತಿ ಹಿ ।**
**ಸಹಾಯಂ ವಾಥ ಕುರುತೇ ದದತಾಂ ದೀಪಮುತ್ತಮಂ ॥ ೩೭ ॥**
**ಸ ತು ಮೋಕ್ಷಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।**
**ಕಾರ್ತಿಕೇ ದೀಪದಾನಸ್ಯ ಮಾಹಾತ್ಮ್ಯಂ ಕೋಽನುವರ್ಣಯೇತ್ ॥ ೩೮ ॥**

---

ಯಿಂದ ಆ ಹೆಂಗಸು ಸ್ವರ್ಗಮಾರ್ಗವನ್ನು ಸೇರಿದಳು. ಕಾಲಕ್ರಮದಲ್ಲಿ ಮೋಕ್ಷವನ್ನೂ ಪಡೆದಳು. ನಾರದನೆ! ಆದುದರಿಂದಲೇ ದೀಪದಾನದ ಮಾಹಾತ್ಮ್ಯೆಯನ್ನು ಯಾರುತಾನೆ ವರ್ಣಿಸಿ ಹೀಗೆಂದು ಹೇಳಲಾದೀತು.

೩೩–೩೪. ಕಾರ್ತಿಕದಲ್ಲಿ ದೀಪದಾನವು ಮಹಾಪುಣ್ಯಫಲಪ್ರದವಾದದ್ದು. ಕಾರ್ತಿಕವ್ರತನಿಷ್ಠನಾದ ಯಾವ ನರನು ದೀಪದಾನ ಮಾಡುತ್ತಾನೆಯೋ, ದೀಪದಾನದ ಇತಿಹಾಸವನ್ನು ಕೇಳುತ್ತಾನೆಯೋ ಅವನು ಮೋಕ್ಷವನ್ನು ಪಡೆಯುತ್ತಾನೆ.

೩೫. ದೀಪದಾನದ ಮಾಹಾತ್ಮ್ಯೆಯನ್ನು ವರ್ಣಿಸಿ ಹೇಳಲು ಯಾರಿಂದ ತಾನೆ ಶಕ್ಯವಾದೀತು? ನಾರದಾ! ಬೇರೊಬ್ಬರು ಹೊತ್ತಿಸಿದ ದೀಪವನ್ನು ಬೆಳಗಿಸುವುದರ ಮಾಹಾತ್ಮ್ಯವನ್ನು ಕೇಳು.

೩೬. ಯಾವನು ತನಗೆ ಶಕ್ತಿಯಿಲ್ಲದಿರುವಾಗ ಪರರಿಟ್ಟ ದೀಪವನ್ನು ಬೆಳಗಿಸುವನೊ ಅವನು ಪುಣ್ಯವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದಿಲ್ಲ.

೩೭–೩೮. ದೀಪಕ್ಕಾಗಿ ಬತ್ತಿಯನ್ನೋ, ಎಣ್ಣೆಯನ್ನೋ, ಪಾತ್ರೆಯನ್ನೊ ಯಾವನು ಕೊಡುತ್ತಾನೆಯೋ ಅಥವಾ ಉತ್ತಮ ದೀಪವನ್ನು ಕೊಡುವವರಿಗೆ ಸಹಾಯಮಾಡುತ್ತಾನೋ ಅವನು ಮೋಕ್ಷವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲವು. ಕಾರ್ತಿಕದಲ್ಲಿ ದೀಪದಾನದ ಮಾಹಾತ್ಮ್ಯೆಯನ್ನು ಯಾರುತಾನೆ ವರ್ಣಿಸಲಾದೀತು?

ಸ್ವಸ್ಯಾಽಪಿ ಶಕ್ತಿರಾಹಿತ್ಯೇ ಪರದೀಪಂ ಪ್ರಬೋಧಯೇತ್ ।
ಸೋಽಪಿ ತತ್ಫಲಮಾಪ್ನೋತಿ ನಾಽತ್ರ ಕಾರ್ಯಾ ವಿಚಾರಣಾ ॥ ೩೯ ॥
ವೇಶ್ಯಾ ಚೇಂದುಮತೀನಾಮ ತಸ್ಯಾ ಗೇಹೇಽಥ ಮೂಷಿಕಾ ।
ಪರದೀಪಪ್ರಬೋಧೇನ ಮೋಕ್ಷಂ ಪ್ರಾಪ ಸುದುರ್ಲಭಂ ॥ ೪೦ ॥
ತಸ್ಮಾತ್ಸರ್ವಪ್ರಯತ್ನೇನ ಪರದೀಪಂ ಪ್ರಬೋಧಯೇತ್ ।
ತೇನ ಮೋಕ್ಷಮವಾಪ್ನೋತಿ ಮೂಷಿಕಾವನ್ನ ಸಂಶಯಃ ॥ ೪೧ ॥
ಪರದೀಪಪ್ರಬೋಧಸ್ಯ ಫಲಮೀದೃಗ್ವಿಧಂ ಮುನೇ ।
ಸಾಕ್ಷಾದ್ದೀಪಪ್ರದಾನಸ್ಯ ಮಾಹಾತ್ಮ್ಯಂ ಕೇನ ವರ್ಣ್ಯತೇ ॥ ೪೨ ॥

---

೩೯. ತಾನಾಗಿಯೇ ದೀಪ ಹಚ್ಚಿಡಲು ಶಕ್ತಿಯಿಲ್ಲದೆ ಇದ್ದರೆ ಪರರು ಹೊತ್ತಿಸಿದ ದೀಪವನ್ನು ಪ್ರಬೋಧಗೊಳಿಸಬೇಕು. ಅಂತಹವನು ಕೂಡ ಆ ಫಲವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲವು.

೪೦. ಹಿಂದೆ ಇಂದುಮತಿಯೆಂಬ ವೇಶ್ಯೆಯೊಬ್ಬಳಿದ್ದಳು. ಅವಳ ಮನೆಯಲ್ಲಿ ಒಂದು ಹೆಣ್ಣಿಲಿಯು ಅವಳು ಹೊತ್ತಿಸಿಟ್ಟಿದ್ದ ದೀಪವನ್ನು ಮೀಟಿ ಕಾಂತಿಗೊಳಿಸಿದ್ದರಿಂದ ಬಹು ದುರ್ಲಭವಾದ ಮೋಕ್ಷವನ್ನು ಪಡೆಯಿತು.*

೪೧. ಆದ್ದರಿಂದ ಸರ್ವ ಪ್ರಯತ್ನಗಳಿಂದಲೂ ಪರರಿಟ್ಟ ದೀಪವನ್ನು ಉಜ್ಜ್ವಲಗೊಳಿಸಬೇಕು. ಆ ಹೆಣ್ಣಿಲಿಯ ಹಾಗೆಯೇ ಮೋಕ್ಷವನ್ನು ಪಡೆಯಬಹುದು.

೪೨. ಮುನಿಯೇ! ಪರದೀಪಪ್ರಬೋಧನದ ಫಲವು ಈ ವಿಧವಾದುದು. ಸಾಕ್ಷಾತ್ತಾದ ದೀಪವನ್ನೇ ದಾನಮಾಡುವುದರ ಮಾಹಾತ್ಮ್ಯೆಯನ್ನು ಯಾರು ವರ್ಣಿಸಲಾದೀತು?''

---

* **ಸಾರೋದ್ಧಾರದಲ್ಲಿ ಮೂಷಕದ(ಇಲಿಯ)ಕಥೆ:—** ಪೂರ್ವದಲ್ಲಿ ಒಂದಾನೊಂದು ಊರಿನಲ್ಲಿ ಇಂದುಮತಿಯೆಂಬ ವೇಶ್ಯೆಯೊಬ್ಬಳಿದ್ದಳು. ಅವಳು ಬಹಳ ಚಲುವೆ. ಊರಿನವರಿಗೆಲ್ಲ ಅವಳು ಬಹಳ ಅಚ್ಚುಮೆಚ್ಚಿನವಳಾಗಿದ್ದಳು. ಒಂದು ದಿನ ಅವಳು ಚೆನ್ನಾಗಿ ಸಿಂಗರಿಸಿಕೊಂಡು ಮನೆಯ ಹೊರಬಾಗಿಲಿಗೆ ಬಂದು ಒಂದು ಪ್ರಹರ ಕಾಲ ವಿಟರನ್ನು ನಿರೀಕ್ಷಿಸುತ್ತ ನಿಂತಿದ್ದಳು. ಅಂದು ಧನಿಕನಾದ ವಿಟನಾರೂ ಬರಲಿಲ್ಲ. ಆಗ ಅವಳಿಗೆ ಬಹಳ ಚಿಂತೆಯಾಯಿತು. ಒಳಕ್ಕೆ ಬಂದು ದೇವರ ಮುಂದೆ ದೀಪವನ್ನಿಟ್ಟು ಮಲಗಿದಳು. ಇದೇ ಸಮಯದಲ್ಲಿಯೇ ಒಂದು ಇಲಿಯು ಅಲ್ಲಿಗೆ ಬಂದು ಆ ಹಣತೆಯಲ್ಲಿದ್ದ ಎಣ್ಣೆಯನ್ನು ಕುಡಿದು ತೃಪ್ತಿಹೊಂದಿತು. ಆ ಇಲಿ ಎಣ್ಣೆ ಕುಡಿಯುವಾಗ ಆಕಸ್ಮಾತ್ತಾಗಿ ದೀಪವನ್ನು ಬೆಳಗಿಸಿದಂತಾಯಿತು. ಅಂತೆಯೇ ಎಂತೋ ದೇವರಿಗೆ ಪ್ರದಕ್ಷಿಣೆ ಮಾಡಿದ್ದೂ ಆಯಿತು. ಈ ಪುಣ್ಯದಿಂದ ಅದು ಮನುಷ್ಯಜನ್ಮವನ್ನು ಪಡೆದು ಮಕ್ಕಳು ಮೊಮ್ಮಕ್ಕಳನ್ನೂ ಪಡೆದು ಸುಖವಾಗಿ ಬಾಳಿ ಕಡೆಗೆ ಮೋಕ್ಷವನ್ನು ಪಡೆಯಿತು.

ಶ್ರೀ ನಾರದ ಉವಾಚ :—

**ಕಾರ್ತಿಕೇ ದೀಪದಾನಸ್ಯ ಮಾಹಾತ್ಮ್ಯಂ ಚ ಮಯಾ ಶ್ರುತಂ ।**
**ಇದಾನೀಂ ಶ್ರೋತುಮಿಚ್ಛಾಮಿ ವ್ಯೋಮದೀಪಸ್ಯ ವೈಭವಂ ॥ ೪೩ ॥**

ಬ್ರಹ್ಮೋವಾಚ :—

**ಆಕಾಶದೀಪಮಾಹಾತ್ಮ್ಯಂ ಶೃಣು ಪುತ್ರ ಸಮಾಹಿತಃ ।**
**ಯಸ್ಯ ಶ್ರವಣಮಾತ್ರೇಣ ದೀಪದಾನೇ ಮತಿರ್ಭವೇತ್ ॥ ೪೪ ॥**
**ಸಂಪ್ರಾಪ್ತೇ ಕಾರ್ತಿಕೇ ಮಾಸಿ ಪ್ರಾತಸ್ಸ್ನಾನೇ ಪರಾಯಣಃ ।**
**ಆಕಾಶದೀಪಂ ಯೋ ದದ್ಯಾತ್ ತಸ್ಯ ಪುಣ್ಯಂ ವದಾಮ್ಯಹಂ ॥ ೪೫ ॥**
**ಸರ್ವಲೋಕಾಧಿಪೋ ಭೂತ್ವಾ ಸರ್ವಸಂಪತ್ಸಮನ್ವಿತಃ ।**
**ಇಹ ಲೋಕೇ ಸುಖಂ ಭುಕ್ತ್ವಾ ಚಾಂತೇ ಮೋಕ್ಷಮವಾಪ್ನುಯಾತ್ ॥**
**ಸ್ನಾನದಾನಕ್ರಿಯಾಪೂರ್ವಂ ಹರಿಮಂದಿರಮಸ್ತಕೇ ।**
**ಆಕಾಶದೀಪೋ ದಾತವ್ಯೋ ಮಾಸಮೇಕಂ ತು ಕಾರ್ತಿಕೇ ।**
**ಕಾರ್ತಿಕೇ ಶುದ್ಧಪೂರ್ಣಾಯಾಂ ವಿಧಿನೋತ್ಸರ್ಜಯೇಚ್ಚ ತಂ ॥ ೪೭ ॥**

---

೪೩. ನಾರದನು ಹೇಳುತ್ತಾನೆ:— "ಕಾರ್ತಿಕದಲ್ಲಿ ದೀಪದಾನದ ಮಾಹಾತ್ಮ್ಯೆಯನ್ನು ಕೇಳಲಾಯಿತು. ಪರರಿಟ್ಟ ದೀಪವನ್ನು ಪ್ರಬೋಧಗೊಳಿಸುವುದರ ಮಾಹಾತ್ಮ್ಯೆಯನ್ನೂ ಕೇಳಿ ತಿಳಿದೆನು. ಈಗ ಆಕಾಶದೀಪದ ವೈಭವವನ್ನು ಕೇಳಬಯಸುತ್ತೇನೆ."

೪೪. ಬ್ರಹ್ಮನು ಹೇಳುತ್ತಾನೆ:—"ವತ್ಸ! ಮನಸ್ಸನ್ನು ಒಮ್ಮುಖವಾಗಿಟ್ಟುಕೊಂಡು ಆಕಾಶದೀಪದ ಮಾಹಾತ್ಮ್ಯೆಯನ್ನು ಆಲಿಸು. ಇದನ್ನು ಕೇಳಿದ ಮಾತ್ರದಿಂದಲೇ ದೀಪದಾನದಲ್ಲಿ ಬುದ್ಧಿಯುಂಟಾಗುತ್ತದೆ.

೪೫. ಕಾರ್ತಿಕಮಾಸವು ಬರಲಾಗಿ ಯಾವನು ಪ್ರಾತಃಸ್ನಾನಪರಾಯಣನಾಗಿ ಆಕಾಶದೀಪವನ್ನಿಡುತ್ತಾನೆಯೋ ಅವನ ಪುಣ್ಯವನ್ನು ನಾನು ತಿಳಿಸುತ್ತೇನೆ.

೪೬. ಅವನು ಸರ್ವಲೋಕಾಧಿಪತಿಯಾಗಿ ಸರ್ವಸಂಪತ್ತುಗಳಿಂದಲೂ ಕೂಡಿದವನಾಗಿ ಇಹಲೋಕದಲ್ಲಿ ಸುಖವನ್ನನುಭವಿಸಿ ಕೊನೆಯಲ್ಲಿ ಮೋಕ್ಷವನ್ನು ಪಡೆಯುತ್ತಾನೆ.

೪೭. ಕಾರ್ತಿಕಮಾಸದಲ್ಲಿ ಒಂದು ತಿಂಗಳೂ ಸ್ನಾನ, ದಾನ, ಮೊದಲಾದ ಕ್ರಿಯೆಗಳನ್ನು ನೆರವೇರಿಸುತ್ತ ಹರಿಮಂದಿರದ ಮೇಲುಗಡೆ ಆಕಾಶದೀಪವನ್ನಿಡಬೇಕು. ಕಾರ್ತಿಕ ಶುದ್ಧ ಪೂರ್ಣಿಮೆಯಲ್ಲಿ ಅದನ್ನು ವಿಧಿಪ್ರಕಾರವಾಗಿ ವಿಸರ್ಜನೆ ಮಾಡಬೇಕು.

ಯಃ ಕರೋತಿ ವಿಧಾನೇನ ಕಾರ್ತಿಕೇ ವ್ಯೋಮ್ನಿ ದೀಪಕಂ ।
ನ ತಸ್ಯ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೪೮ ॥
ಅತ್ರ ತೇ ವರ್ಣಯಿಷ್ಯಾಮಿ ಇತಿಹಾಸಂ ಪುರಾತನಂ ।
ಯಸ್ಯ ಶ್ರವಣಮಾತ್ರೇಣ ವ್ಯೋಮದೀಪಫಲಂ ಲಭೇತ್ ॥ ೪೯ ॥
ಪುರಾ ತು ನಿಷ್ಠುರೋ ನಾಮ ಲುಬ್ಧಕೋ ಲೋಕಕಂಟಕಃ ।
ಯಮುನಾತೀರವಾಸೀ ಚ ಕಾಲಮೃತ್ಯುರಿವಾಪರಃ ॥ ೫೦ ॥
ವನೇ ಚರನ್ ಮೃಗಾನ್ಸರ್ವಾನ್ ಹತ್ವಾ ವೃತ್ತಿಮಕಲ್ಪಯತ್ ।
ಪಥಿಕಾನ್ ಬಾಧತೇ ನಿತ್ಯಂ ಚೋರವೃತ್ತ್ಯಾ ಧನುರ್ಧರಃ ॥ ೫೧ ॥
ಕಂಚಿದ್ಗ್ರಾಮಂ ಜಗಾಮಾಶು ಚೌರ್ಯಾರ್ಥಂ ಕಾರ್ತಿಕೇ ಮುನೇ ।
ತಸ್ಮಿನ್ ವಿದರ್ಭನಗರೇ ರಾಜಾ ಸುಕೃತಿನಾಮಕಃ ॥ ೫೨ ॥
ಚಂದ್ರಶರ್ಮಾಖ್ಯವಿಪ್ರಸ್ಯ ವಚನಾತ್ಕಾರ್ತಿಕೇ ಸುಧೀಃ ।
ಚಕಾರ ವ್ಯೋಮದೀಪಂ ತು ಹರಿಮಂದಿರಮಸ್ತಕೇ ॥ ೫೩ ॥
ದೀಪಂ ದತ್ವಾ ಮಹಾಭಕ್ತ್ಯಾ ಅಶೃಣೋಚ್ಚ ಕಥಾಂ ನಿಶಿ ।
ಏತಸ್ಮಿನ್ನೇವ ಕಾಲೇ ತು ಚೌರ್ಯಾರ್ಥಂ ಸಮುಪಾಗತಃ ॥ ೫೪ ॥

---

೪೮. ಯಾವನು ಕಾರ್ತಿಕಮಾಸದಲ್ಲಿ ವಿಧಿವಿಧಾನದಿಂದ ಆಕಾಶದೀಪವನ್ನು ರಚಿಸುತ್ತಾನೆಯೊ ಅವನಿಗೆ ಕಲ್ಪಕೋಟಿಗಳು ನೂರಾರು ಸಾರಿ ಮರಳಿದರೂ ಪುನರಾವೃತ್ತಿಯಿಲ್ಲ.

೪೯–೫೧. ಈ ಸಂಬಂಧದಲ್ಲಿ ಪುರಾತನವಾದ ಒಂದು ಇತಿಹಾಸವನ್ನು ವರ್ಣಿಸುತ್ತೇನೆ. ಈ ಇತಿಹಾಸಶ್ರವಣದ ಮಾತ್ರದಿಂದಲೇ ಆಕಾಶದೀಪವನ್ನಿಟ್ಟ ಫಲವುಂಟಾಗುವುದು. ಹಿಂದಿನ ಕಾಲದಲ್ಲಿ ನಿಷ್ಠುರನೆಂಬ ಲೋಕಕಂಟಕನಾದ ಒಬ್ಬ ಬೇಡನಿದ್ದನು. ಅವನು ಯಮುನಾನದಿಯ ತೀರದಲ್ಲಿ ವಾಸಿಸುತ್ತ ಇನ್ನೊಬ್ಬ ಕಾಲಮೃತ್ಯುವೋ ಎಂಬಂತಿದ್ದನು. ಅವನು ವನಗಳಲ್ಲಿ ಸಂಚರಿಸುತ್ತ ಸರ್ವ ಮೃಗಗಳನ್ನೂ ಕೊಂದು ಜೀವನೋಪಾಯವನ್ನು ನಡಸುತ್ತಿದ್ದನು. ಕೈಯಲ್ಲಿ ಧನುಸ್ಸು ಹಿಡಿದು ಚೋರವೃತ್ತಿಯಿಂದ ದಿನವೂ ದಾರಿಗರನ್ನು ಬಾಧಿಸುತ್ತಿದ್ದನು.

೫೨–೫೩. ಎಲೈ ಮುನಿಯೇ! ಅವನು ಕಾರ್ತಿಕಮಾಸದಲ್ಲಿ ಚೌರ್ಯಕ್ಕಾಗಿ ಬೇಗ ಬೇಗ ಒಂದಾನೊಂದು ಗ್ರಾಮಕ್ಕೆ ಹೋದನು. ಅದು ವಿದರ್ಭರಾಜನದು. ಅಲ್ಲಿ ಬುದ್ಧಿವಂತನಾದ ಸುಕೃತಿಯೆಂಬ ರಾಜನು ಚಂದ್ರಶರ್ಮನೆಂಬ ಬ್ರಾಹ್ಮಣನ ಮಾತಿನಂತೆ ಕಾರ್ತಿಕದಲ್ಲಿ ಹರಿಮಂದಿರದ ಶಿಖರದಲ್ಲಿ ಆಕಾಶದೀಪವನ್ನು ಇಡಿಸಿದನು.

೫೪. ರಾತ್ರಿ ದೀಪವನ್ನಿಡಿಸಿ ಮಹಾ ಭಕ್ತಿಯಿಂದ ಕಥೆಯನ್ನು ಕೇಳಿದನು. ಅದೇ ಸಮಯದಲ್ಲಿಯೇ ಆ ಬೇಡನು ಕದಿಯಲೋಸುಗ ಅಲ್ಲಿಗೆ ಬಂದನು.

ರಾಜ್ಞಾ ದತ್ತಂ ವ್ಯೋಮದೀಪಂ ಪಶ್ಯಂಕ್ಷಣಮತಿಷ್ಠತ ।
ತದಾನೀಂ ದೈವಯೋಗೇನ ಗೃಧ್ರೋ ಜವಸಮನ್ವಿತಃ ॥ ೫೫ ॥
ಶೀಘ್ರಮಾಗತ್ಯ ಜಗ್ರಾಹ ತೈಲಪಾತ್ರಂ ಸದೀಪಕಂ ।
ಸ್ವಮುಖೇನೈವ ಸಂಗೃಹ್ಯ ವೃಕ್ಷಾಗ್ರಂ ಚ ಸಮಾಶ್ರಯತ್ ॥ ೫೬ ॥
ತತ್ರ ಪೀತ್ವಾ ತು ತೈಲಂ ಚ ದೀಪಂ ಸ್ಥಾಪ್ಯ ಸ ಪಕ್ಷಿರಾಟ್ ।
ವೃಕ್ಷಾಗ್ರಂ ತು ಸಮಾಸ್ಥಾಯ ಕ್ಷಣಮಾತ್ರಮತಿಷ್ಠತ ॥ ೫೭ ॥
ತದಾನೀಂ ದೈವಯೋಗೇನ ಗ್ರಹೀತುಂ ಪಕ್ಷಿಸತ್ತಮಂ ।
ಮಾರ್ಜಾರೋಽಪ್ಯಾರುಹದ್ವೃಕ್ಷಂ ಪಕ್ಷಿಣಾಧಿಷ್ಠಿತಂ ತು ತಂ ॥ ೫೮ ॥
ತದಗ್ರೇ ಮುಖದೀಪಂ ಚ ಪಶ್ಯಂಕ್ಷಣಮತಿಷ್ಠತ ।
ಆಕಾಶದೀಪಮಾಹಾತ್ಮ್ಯಂ ಕಥಿತಂ ಚಂದ್ರಶರ್ಮಣಾ ॥ ೫೯ ॥
ರಾಜ್ಞೇ ಸುಕೃತಿನಾಮ್ನೇ ಚ ತೌ ವೈ ಶುಶ್ರುವತುಃ ಕ್ಷಣಂ ।
ಖಗಮಾರ್ಜಾರಕೌ ತತ್ರ ಸ್ವಸ್ವಚಾಂಚಲ್ಯದೋಷತಃ ॥ ೬೦ ॥
ಮಾರ್ಜಾರೋ ಜಗೃಹೇ ತತ್ರ ಶಾಖಾಂತರಗತಂ ಖಗಂ ।
ದೈವೇನ ಚೋದಿತೌ ವೃಕ್ಷಾತ್ ಶಿಲಾಯಾಂ ಪತಿತೌ ತದಾ ॥ ೬೧ ॥
ಭಗ್ನಗಾತ್ರೌ ಮೃತೌ ತತ್ರ ಪಕ್ಷಿಮಾರ್ಜಾರಕೌ ಭುವಿ ।
ದಿವ್ಯದೇಹಸಮಾಯುಕ್ತೌ ಯಾನಾರೂಢೌ ದಿವಂಗತೌ ॥ ೬೨ ॥

---

೫೫–೫೬. ಬಂದು ರಾಜನು ಇಡಿಸಿದ್ದ ದೀಪವನ್ನು ನೋಡುತ್ತ ಒಂದು ಕ್ಷಣಕಾಲ ನಿಂತುಕೊಂಡನು. ಆಗ ದೈವಯೋಗದಿಂದ ಬಹು ವೇಗಶಾಲಿಯಾದ ಒಂದು ಹದ್ದು ಬೇಗಬೇಗ ಬಂದು ದೀಪಸಮೇತವಾಗಿ ಎಣ್ಣೆಯ ಪಾತ್ರೆಯನ್ನು ಎತ್ತಿಕೊಂಡಿತು. ತನ್ನ ಕೊಕ್ಕಿನಿಂದಲೇ ಅದನ್ನು ಎತ್ತಿ ಹಿಡಿದುಕೊಂಡು ಮರದ ಮೇಲೆ ಹೋಗಿ ಕೂತಿತು.

೫೭. ಅಲ್ಲಿ ಆ ಪಕ್ಷಿರಾಜನು ಎಣ್ಣೆಯನ್ನು ಕುಡಿದು ದೀಪವನ್ನಿಟ್ಟು ಮರದ ತುದಿಯನ್ನಾಶ್ರಯಿಸಿ ಕ್ಷಣಮಾತ್ರ ಕುಳಿತುಕೊಂಡಿತು.

೫೮. ಆಗ ದೈವಯೋಗದಿಂದ ಒಂದು ಬೆಕ್ಕು ಆ ಪಕ್ಷಿಯನ್ನು ಹಿಡಿದುಕೊಳ್ಳಬೇಕೆಂದು ಆ ಹಕ್ಕಿಯು ಕೂತಿದ್ದ ಮರವನ್ನು ಹತ್ತಿತು.

೫೯–೬೨. ವೃಕ್ಷಾಗ್ರದಲ್ಲಿ ಮುಖದೀಪವನ್ನು ಕಂಡು ಕ್ಷಣಕಾಲ ನಿಂತುಕೊಂಡಿತು. ಆಗ ಚಂದ್ರಶರ್ಮನು ಸುಕೃತಿರಾಜನಿಗೆ ಆಕಾಶದೀಪಮಾಹಾತ್ಮ್ಯೆಯನ್ನು ಹೇಳುತ್ತಿದ್ದನು. ಆ ಹದ್ದು ಬೆಕ್ಕುಗಳೆರಡೂ ಕ್ಷಣಕಾಲ ಆ ಮಾಹಾತ್ಮ್ಯೆಯನ್ನು ಕೇಳಿದವು. ಬಳಿಕ ಹಕ್ಕಿ ಬೆಕ್ಕುಗಳು ತಮ್ಮ ತಮ್ಮ ಚಾಂಚಲ್ಯದೋಷದಿಂದ ಕೂಡಿದುವಾದವು; ಬೆಕ್ಕು ಕೊಂಬೆಯ ಮರೆಯಲ್ಲಿದ್ದ ಹಕ್ಕಿಯನ್ನು ಹಿಡಿದುಕೊಂಡಿತು. ಆಗ ದೈವದಿಂದ ಪ್ರೇರಿಸಲ್ಪಟ್ಟ ಅವೆರಡೂ ಮರದಿಂದುರುಳಿ

ತತ್ಸರ್ವಂ ಲುಬ್ಧಕೋ ದೃಷ್ಟ್ವಾ ಚೌರ್ಯಾರ್ಥಂ ಸಮುಪಾಗತಃ ।
ನಿವೃತ್ತೋ ದುಷ್ಟ ಭಾವೇನ ಕಥಯಂತಂ ಕಥಾಂ ಮುನಿಂ ॥ ೬೩ ॥
ಚಂದ್ರಶರ್ಮಾಣಮಾಭಾಷ್ಯ ಇದಂ ವಚನಮಬ್ರವೀತ್ ।
ಚಂದ್ರಶರ್ಮನ್ ಮಯಾ ದೃಷ್ಟಂ ಚೌರ್ಯಾರ್ಥಂ ಹ್ಯಾಗತೇನ ಚ॥ ೬೪॥
ರಾಜ್ಞಾ ಸುಕೃತಿನಾ ದತ್ತಂ ವ್ಯೋಮದೀಪಂ ಮನೋಹರಂ ।
ತದಾನೀಂ ದೈವಯೋಗೇನ ಖಗಃ ಪಾತ್ರಂ ಪ್ರಗೃಹ್ಯ ಚ ॥ ೬೫ ॥
ತೈಲಂ ಪೀತ್ವಾ ತು ತತ್ಪಾತ್ರಂ ಸದೀಪಂ ತು ಮನೋಹರಂ ।
ವೃಕ್ಷಾಗ್ರೇ ಸ್ಥಾಪಯಿತ್ವಾ ಚ ತತ್ರ ಕ್ಷಣಮತಿಷ್ಠತ ॥ ೬೬ ॥
ಮಾರ್ಜಾರೋಽಪ್ಯಾಗತಸ್ತತ್ರ ಗ್ರಹೀತುಂ ಪಕ್ಷಿಪುಂಗವಂ ।
ದೈವೇನ ಪ್ರೇರಿತೌ ತೌ ಚ ಉಭೇ ಶಾಖೇ ಸಮಾಶ್ರಿತೌ ॥ ೬೭ ॥
ತ್ವನ್ಮುಖಾತ್ಕಥ್ಯಮಾನಾಂ ಹಿ ಕಥಾಂ ಶುಶ್ರುವತುಃ ಕ್ಷಣಂ ।
ಪಶ್ಚಾಚ್ಚಾಂಚಲ್ಯದೋಷೇಣ ಮಾರ್ಜಾರೋ ಹ್ಯಗ್ರಹೀತ್ಖಗಂ ॥ ೬೮ ॥
ತೌ ವೃಕ್ಷಾತ್ಪತಿತೌ ಮೃತ್ಯುಂ ಪ್ರಾಪ್ತೌ ಚ ಕ್ಷಣಮಾತ್ರತಃ ।
ಉಭೌ ತೌ ದಿವ್ಯರೂಪೌ ಚ ಯಾನಾರೂಢೌ ದಿವಂಗತೌ ॥ ೬೯ ॥

---

ಕೆಳಗೆ ಕಲ್ಲಿನ ಮೇಲೆ ಬಿದ್ದು ಮೈ ಜಜ್ಜಿ ಸತ್ತುಹೋದುವು. ಭೂಮಿಯಲ್ಲಿ ಹೀಗೆ ಸತ್ತು ದಿವ್ಯದೇಹವನ್ನು ಧರಿಸಿ ಯಾನಾರೋಹಣಮಾಡಿಕೊಂಡು ಸ್ವರ್ಗಕ್ಕೆ ಹೋದುವು.

೬೩–೬೬. ಅದೆಲ್ಲವನ್ನೂ ಕಂಡು ಕದಿಯುವುದಕ್ಕೆಂದು ಬಂದಿದ್ದ ಬೇಡನಿಗೆ ದುಷ್ಟಭಾವವೆಲ್ಲವೂ ನಿವಾರಣೆಯಾಗಿಹೋಯಿತು. ಕಥೆಯನ್ನು ಹೇಳುತ್ತಿದ್ದ ಚಂದ್ರಶರ್ಮನೆಂಬ ಮುನಿಯನ್ನು ಮಾತನಾಡಿಸಿ ಈ ಮಾತನ್ನು ಹೇಳಿದನು. 'ಎಲೈ ಚಂದ್ರಶರ್ಮನೇ! ಚೌರ್ಯಕ್ಕಾಗಿ ಬಂದ ನಾನು ಸುಕೃತಿರಾಜನಿಟ್ಟ ಮನೋಹರವಾದ ಆಕಾಶದೀಪವನ್ನು ನೋಡಿದೆನು. ಆಗ ದೈವಯೋಗದಿಂದ ಪಕ್ಷಿಯೊಂದು ಪಾತ್ರೆಯನ್ನು ತೆಗೆದುಕೊಂಡು ಎಣ್ಣೆಯನ್ನು ಕುಡಿದ ದೀಪ ಸಮೇತವಾದ ಆ ಪಾತ್ರೆಯನ್ನು ವೃಕ್ಷಾಗ್ರದಲ್ಲಿಟ್ಟು ಅಲ್ಲಿ ಒಂದು ಕ್ಷಣ ಕುಳಿತು ಕೊಂಡಿತು.

೬೭. ಆ ಪಕ್ಷಿಯನ್ನು ಹಿಡಿದುಕೊಳ್ಳಬೇಕೆಂದು ಒಂದು ಬೆಕ್ಕು ಅಲ್ಲಿಗೆ ಬಂದಿತು. ದೈವದಿಂದ ಪ್ರೇರಿಸಲ್ಪಟ್ಟ ಅವೆರಡೂ ಎರಡು ಕೊಂಬೆಗಳನ್ನಾಶ್ರಯಿಸಿ ಕುಳಿತವು.

೬೮. ಅವೆರಡೂ ನೀವು ಹೇಳುತ್ತಿದ್ದ ಕಥೆಯನ್ನು ಕ್ಷಣಕಾಲ ಕೇಳಿದುವು. ಬಳಿಕ ಚಾಂಚಲ್ಯದೋಷದಿಂದ ಬೆಕ್ಕು ಹಕ್ಕಿಯನ್ನು ಹಿಡಿದುಕೊಂಡಿತು.

೬೯. ಅವೆರಡೂ ಮರದಿಂದ ಬಿದ್ದು ಅಲ್ಲಿಯೇ ಮೃತಿಯನ್ನೈದಿದುವು.

ತದಾಶ್ಚರ್ಯಮಹಂ ದೃಷ್ಟ್ವಾ ತ್ವಾಂ ಪ್ರಷ್ಟುಂ ಸಮುಪಾಗತಃ ।
ತೌ ಕೌ ಪುರಾ ಚ ಮಾರ್ಜಾರಖಗೌ ತದ್ವದ ಭೋ ದ್ವಿಜ ॥ ೭೦ ॥
ತಿರ್ಯಗ್ಯೋನಿಸಮಾಪನ್ನೌ ಮುಕ್ತೌ ಕೇನ ಚ ಕರ್ಮಣಾ ।
ಇತಿ ಲುಬ್ಧವಚಃ ಶ್ರುತ್ವಾ ಚಂದ್ರಶರ್ಮಾಽಬ್ರವೀತ್ತದಾ ॥ ೭೧ ॥
ಶೃಣು ಲುಬ್ಧ ಪ್ರವಕ್ಷ್ಯಾಮಿ ತಯೋರ್ವೃತ್ತಾಂತಮಂಜಸಾ ।
ಮಾರ್ಜಾರೋಽಪಿ ಪುರಾ ಪಾಪೀ ತಥಾ ಶ್ರೀವತ್ಸಗೋತ್ರಜಃ ॥ ೭೨ ॥
ದೇವಶರ್ಮಾ ಇತಿ ಪ್ರೋಕ್ತೋ ದೇವದ್ರವ್ಯಾಪಹಾರಕಃ ।
ಅಹೋಬಲನೃಸಿಂಹಸ್ಯ ಪೂಜಾಕರ್ತೃತ್ವಮಾಪ ಸಃ ॥ ೭೩ ॥
ತಸ್ಮಿನ್ ದೇವಾಲಯೇ ಪ್ರಾಪ್ತಂ ತೈಲಂ ದ್ರವ್ಯಾದಿಕಂ ತಥಾ ।
ಅಪಹೃತ್ಯ ಚ ತೇನೈವ ಕುಟುಂಬಂ ಪೋಷಯತ್ಯಸೌ ॥ ೭೪ ॥
ಆಯುರ್ನೀತ್ವೈವಮೇವಾಽಸೌ ತತಃ ಪಂಚತ್ವಮಾಗತಃ ।
ತಸ್ಮಾತ್ಪಾಪಾತ್ಕಾಲಸೂತ್ರಂ ಮಹಾರೌರವರೌರವಂ ॥ ೭೫ ॥
ನಿರುಚ್ಛ್ವಾಸಂ ತಥಾ ಪ್ರಾಪ್ಯ ಅಸಿಪತ್ರವನಂ ಕ್ರಮಾತ್ ।
ವಿದ್ಯಮಾನೋ ಮಹಾಕಾಯೈರ್ಯಮದೂತೈರ್ಭಯಂಕರೈಃ ॥ ೭೬ ॥

---

ಕ್ಷಣಮಾತ್ರದಲ್ಲಿ ಅವೆರಡೂ ದಿವ್ಯರೂಪಿಗಳಾಗಿ ಯಾನಾರೋಹಣಮಾಡಿಕೊಂಡು ಸ್ವರ್ಗಕ್ಕೆ ಹೋದವು.

೭೦–೭೧. ಆ ಆಶ್ಚರ್ಯವನ್ನು ನೋಡಿ ನಿಮ್ಮನ್ನು ಪ್ರಶ್ನೆಮಾಡಲು ನಾನು ಬಂದಿದ್ದೇನೆ. ಹಿಂದೆ ಆ ಬೆಕ್ಕು ಹಕ್ಕಿಗಳೆರಡೂ ಯಾರಾಗಿದ್ದುವು? ಎಲೈ ದ್ವಿಜನೇ! ಅದನ್ನು ತಿಳಿಸು. ತಿರ್ಯಗ್ಜನ್ಮವನ್ನು ಪಡೆದಿದ್ದು ಅವು ಯಾವ ಕರ್ಮದಿಂದ ಬಿಡುಗಡೆ ಹೊಂದಿದುವು?'–ಇಂತೆಂದ ಆ ಬೇಡನ ಮಾತುಗಳನ್ನು ಕೇಳಿ ಚಂದ್ರಶರ್ಮನು ಹೀಗೆ ಉತ್ತರಕೊಟ್ಟನು.

೭೨–೭೩. ಅಯ್ಯಾ ಬೇಡನೆ! ಕೇಳು. ಅವೆರಡರ ವೃತ್ತಾಂತವನ್ನು ಶೀಘ್ರದಲ್ಲಿಯೇ ಹೇಳುತ್ತೇನೆ. ಬೆಕ್ಕು ಹಿಂದೆ ಒಬ್ಬ ಪಾಪಿಯಾಗಿದ್ದಿತು. ಶ್ರೀವತ್ಸ ಗೋತ್ರದಲ್ಲಿ ಹುಟ್ಟಿ ದೇವಶರ್ಮನೆಂದು ಹೆಸರುಪಡೆದ ಆ ಪಾಪಿಯು ದೇವ ದ್ರವ್ಯವನ್ನು ಅಪಹರಿಸುತ್ತಿದ್ದನು. ಅವನು ಅಹೋಬಲನೃಸಿಂಹನ ಪೂಜಾ ಕರ್ತೃತ್ವವನ್ನು ಪಡೆದುಕೊಂಡನು.

೭೪. ಆ ದೇವಾಲಯದಲ್ಲಿ ದೊರೆತ ತೈಲವನ್ನೂ, ದ್ರವ್ಯ ಮೊದಲಾದ್ದನ್ನೂ ಅಪಹರಿಸಿ ಅದರಿಂದಲೇ ಅವನು ಕುಟುಂಬವನ್ನು ಪೋಷಿಸುತ್ತಿದ್ದನು.

೭೫–೭೬. ಇದೇ ರೀತಿಯಲ್ಲಿಯೇ ಆಯುಸ್ಸನ್ನೆಲ್ಲ ಕಳೆದು ಕಡೆಗೆ ಪಂಚತ್ವವನ್ನೈದಿದನು. ಆ ಪಾಪದಿಂದ ಅವನು ಕ್ರಮವಾಗಿ ಕಾಲಸೂತ್ರ, ಮಹಾರೌರವ, ರೌರವ, ನಿರುಚ್ಛ್ವಾಸ ಮತ್ತು ಅಸಿಪತ್ರವನ ಎಂಬೀ ನರಕ

ಅನುಭೂಯ ಚ ತಾನ್ ಸರ್ವಾನ್ ಬ್ರಹ್ಮರಾಕ್ಷಸತಾಂ ಗತಃ ।
ತತಸ್ತು ಶ್ವಾನಯೋನೌ ಚ ಚಂಡಾಲೋಽಭೂತ್ಕುಕರ್ಮತಃ ॥ ೭೭ ॥
ಏವಂ ಜನ್ಮ ಶತಂ ಪ್ರಾಪ್ಯ ಭೂಮೌ ಮಾರ್ಜಾರತಾಂ ಗತಃ ।
ಆಕಾಶದೀಪಮಾಹಾತ್ಮ್ಯಂ ಶ್ರುತ್ವೇದಾನೀಂ ತು ದೈವತಃ ।
ನಿರ್ಮುಕ್ತಾಖಿಲಪಾಪಸ್ತು ಅಗಮದ್ಧರಿಮಂದಿರಂ ॥ ೭೮ ॥
ಗೃಧ್ರೋಽಯಂ ತು ಪುರಾ ವಿಪ್ರೋ ಮಿಥಿಲೇ ವೇದಪಾರಗಃ ।
ಶರ್ಯಾತಿರಿತಿ ವಿಖ್ಯಾತೋ ನಾಮ್ನಾ ಲೋಕೇ ಮಹಾಪ್ರಭುಃ ॥ ೭೯ ॥
ದಾಸೀಸಂಗಂ ಚಕಾರಾಸೌ ವೇಶ್ಯಾಸಂಗಂ ತಥೈವ ಚ ।
ತೇನ ದೋಷೇಣ ಮಹತಾ ಪಂಚತ್ವಮಗಮತ್ತದಾ ॥ ೮೦ ॥
ಕುಂಭೀಪಾಕೇ ಮಹಾಘೋರೇ ಸ್ಥಿತ್ವಾ ಯುಗಚತುಷ್ಟಯಂ ।
ಕರ್ಮಶೇಷೇಣ ಭೂಮೌ ಚ ಗೃಧ್ರತ್ವಮಗಮತ್ತದಾ ॥ ೮೧ ॥
ದೈವೇನ ಚೋದಿತೋ ಗೃಧ್ರಃ ತೈಲಪಾನಾರ್ಥಮಾಗತಃ ॥ ೮೨ ॥
ದತ್ವಾ ಚಾಕಾಶದೀಪಂ ಚ ಶ್ರುತ್ವಾ ಚೈವ ಹರೇಃ ಕಥಾಂ ।
ವಿಧ್ವಸ್ತಾಖಿಲಪಾಪಸ್ತು ಜಗಾಮ ಹರಿಮಂದಿರಂ ॥ ೮೩ ॥

---

ಗಳನ್ನು ಸೇರಿದನು. ಮಹಾಕಾಯರೂ ಭಯಂಕರರೂ ಆದ ಯಮದೂತರಿಂದ ಭೇದಿಸಲ್ಪಟ್ಟನು.

೭೭. ಎಲ್ಲವನ್ನೂ ಅನುಭವಿಸಿ ತರುವಾಯ ಬ್ರಹ್ಮರಾಕ್ಷಸತ್ವವನ್ನು ಪಡೆದನು. ಆಮೇಲೆ ನಾಯಿಯಾಗಿ ಹುಟ್ಟಿದನು. ಬಳಿಕ ಕುಕರ್ಮದ ಫಲವಾಗಿ ಚಂಡಾಲನಾದನು.

೭೮. ಹೀಗೆ ನೂರಾರು ಜನ್ಮಗಳನ್ನೆತ್ತಿ ಭೂಮಿಯಲ್ಲಿ ಬೆಕ್ಕಾಗಿ ಹುಟ್ಟಿದನು. ದೈವಯೋಗದಿಂದ ಈಗ ಆಕಾಶದೀಪದ ಮಾಹಾತ್ಮ್ಯೆಯನ್ನಾಲಿಸಿ ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದಿದವನಾಗಿ ಹರಿಮಂದಿರಕ್ಕೆ ಹೋಗಿ ಸೇರಿದನು.

೭೯. ಈ ಹದ್ದಾದರೋ ಪೂರ್ವದಲ್ಲಿ ಮಿಥಿಲೆಯಲ್ಲಿ ವೇದಪಾರಂಗತನಾದ ಶರ್ಯಾತಿಯೆಂಬ ವಿಪ್ರನಾಗಿದ್ದಿತು. ಆ ಶರ್ಯಾತಿಯು ಲೋಕದಲ್ಲಿ ಬಹು ವಿಖ್ಯಾತನಾಗಿಯೂ ಮಹಾ ಪ್ರಭುವಾಗಿಯೂ ಇದ್ದನು.

೮೦–೮೧. ಅವನು ದಾಸೀಸಂಗವನ್ನು ಮಾಡಿದನು; ವೇಶ್ಯಾಸಂಗವನ್ನೂ ಮಾಡಿದನು. ಆ ಮಹತ್ತಾದ ದೋಷದಿಂದ ಆಗ ಅವನು ಪಂಚತ್ವವನ್ನೈದಿದನು. ಮಹಾ ಘೋರವಾದ ಕುಂಭೀಪಾಕ ನರಕದಲ್ಲಿ ನಾಲ್ಕು ಯುಗಗಳ ವರೆಗೆ ಇದ್ದು ಕರ್ಮಶೇಷದಿಂದ ಈ ಭೂಮಿಯಲ್ಲಿ ಹದ್ದಾಗಿ ಹುಟ್ಟಿದನು.

೮೨–೮೩. ದೈವದಿಂದ ಪ್ರಚೋದಿತವಾಗಿ ಆ ಹದ್ದು ತೈಲಪಾನಕ್ಕಾಗಿ

ಇತ್യೇತತ್ಸರ್ವಮಾಖ್ಯಾತಂ ಲುಬ್ಧ ಗಚ್ಛ ಯಥಾಸುಖಂ ।
ವ್ಯಾಧೋಽಪ್ಯಸ್ಯ ವಚಃ ಶ್ರುತ್ವಾ ಗತ್ವಾ ಚೈವ ಸ್ವಮಂದಿರಂ ॥ ೮೪ ॥
ವ್ರತಂ ಚಾಕಾಶದೀಪಸ್ಯ ಚಕಾರ ವಿಧಿವನ್ಮುನೇ ।
ಆಯುಃಶೇಷಂ ತದಾ ನೀತ್ವಾ ಜಗಾಮ ಹರಿಮಂದಿರಂ ॥ ೮೫ ॥
ಸುನಂದೋಽಪಿ ಮಹಾರಾಜ ಆಶ್ಚರ್ಯಂ ಸಮುಪಾಗತಃ ।
ಚಕಾರ ವಿಧಿನಾ ಮಾಸಂ ಚಂದ್ರಶರ್ಮೋಕ್ತಮಾರ್ಗತಃ ॥ ೮೬ ॥
ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ಕಾರ್ತಿಕೇ ಮಾಸಿ ವೈ ನೃಪಃ ।
ಕೋಮಲೈಸ್ತುಲಸೀಪತ್ರೈಃ ಸಮಭ್ಯರ್ಚ್ಯ ಜನಾರ್ದನಂ ॥ ೮೭ ॥
ರಾತ್ರೌ ದದ್ಯಾದ್ವ್ಯೋಮದೀಪಂ ಮಂತ್ರೇಣಾನೇನ ವೈ ನೃಪಃ ॥ ೮೮ ॥
ದಾಮೋದರಾಯ ವಿಶ್ವಾಯ ವಿಶ್ವರೂಪಧರಾಯ ಚ ।
ನಮಸ್ಕೃತ್ವಾ ಪ್ರದಾಸ್ಯಾಮಿ ವ್ಯೋಮದೀಪಂ ಹರಿಪ್ರಿಯಂ ।
ನಿರ್ವಿಘ್ನಂ ಕುರು ದೇವೇಶ ಯಾವನ್ಮಾಸಃ ಸಮಾಪ್ಯತೇ ॥ ೮೯ ॥

---

ಬಂದು, ಆಕಾಶದೀಪವನ್ನಿಟ್ಟು ಹರಿಯ ಕಥೆಯನ್ನೂ ಕೇಳಿ ಸಮಸ್ತಪಾಪಗಳನ್ನು ಧ್ವಂಸಮಾಡಿಕೊಂಡು ಹರಿಯ ಮಂದಿರಕ್ಕೆ ಹೊರಟುಹೋಯಿತು.

೮೪–೮೫. ಈ ಎಲ್ಲವನ್ನೂ ಹೇಳಿದ್ದೇನೆ. ಎಲೈ ಬೇಡನೇ! ನೀನು ಯಥಾಸುಖವಾಗಿ ಹೋಗಿಬಾ.' ಇಂತೆಂದು ನುಡಿದ ಆ ಬ್ರಾಹ್ಮಣನ ಮಾತುಗಳನ್ನಾಲಿಸಿ ಬೇಡನು ತನ್ನ ಮನೆಗೆ ಹೋಗಿ ಆಕಾಶದೀಪದ ವ್ರತವನ್ನು ವಿಧಿವತ್ತಾಗಿ ಮಾಡಿದನು. ಎಲೈ ಮುನಿಯೇ! ಆವನು ಉಳಿದಿದ್ದ ಆಯಸ್ಸನ್ನು ಕಳೆದು ಕಡೆಗೆ ಹರಿಮಂದಿರವನ್ನೈದಿದನು.

೮೬. (ಸುಕೃತಿ) ಸುನಂದಮಹಾರಾಜನೂ ಕೂಡ ಆಶ್ಚರ್ಯಪಟ್ಟು ಚಂದ್ರಶರ್ಮನು ಹೇಳಿದ ಪ್ರಕಾರವಾಗಿಯೇ ವಿಧಿಪೂರ್ವಕವಾಗಿ ಒಂದು ಮಾಸಕಾಲ ವ್ರತವನ್ನು ಮಾಡಿದನು.

೮೭–೮೯. ಆ ರಾಜನು ಕಾರ್ತಿಕಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿ, ಶುಚಿಯಾಗಿ ಕೋಮಲವಾದ ತುಲಸೀಪತ್ರಗಳಿಂದ ಜನಾರ್ದನನನ್ನು ಚೆನ್ನಾಗಿ ಅರ್ಚಿಸಿ, ರಾತ್ರಿಹೊತ್ತು ಈ ಮುಂದೆ ಹೇಳುವ ಮಂತ್ರವನ್ನು ಪಠಿಸುತ್ತ ಆಕಾಶದೀಪವನ್ನು ಕೊಡುತ್ತಿದ್ದನು. "ದಾಮೋದರನೂ, ವಿಶ್ವನೂ, ವಿಶ್ವರೂಪಧರನೂ ಆದ ಭಗವಂತನಿಗೆ ನಮಸ್ಕಾರಮಾಡಿ ಹರಿಪ್ರಿಯವಾದ ಆಕಾಶದೀಪವನ್ನು ಸಮರ್ಪಿಸುತ್ತೇನೆ. ದೇವೇಶಾ! ಮಾಸ ಮುಗಿಯುವವರೆಗೂ ಈ ವ್ರತವನ್ನು ನಿರ್ವಿಘ್ನವಾಗಿಸು.

ವ್ರತೇನಾನೇನ ದೇವೇಶ ತ್ವಯಿ ಭಕ್ತಿಃ ಪ್ರವರ್ಧತಾಂ ।
ಇತಿ ಮಂತ್ರೇಣ ರಾಜಾಽಸೌ ದೀಪದಾನಂ ಚಕಾರ ಹ ॥ ೯೦ ॥
ಬ್ರಾಹ್ಮೇ ಮುಹೂರ್ತೇ ಚ ಪುನಃ ವ್ಯೋಮದೀಪಂ ದದಾತಿ ಹಿ ।
ವಿಷ್ಣೋಃ ಪೂಜಾ ಕೃತಾ ಪ್ರಾತಃ ಪ್ರಾತಃಸ್ನಾನಂ ಚಕಾರ ಹ ॥ ೯೧ ॥
ಉತ್ಸರ್ಗಸ್ಯ ವಿಧಿಂ ಕೃತ್ವಾ ವ್ಯೋಮ್ನಿ ದೀಪಂ ಸಮಾಪ್ಯ ಚ ।
ಬ್ರಾಹ್ಮಣಾನ್ ಭೋಜಯಿತ್ವಾ ಚ ವ್ರತಂ ವಿಷ್ಣೋಸ್ಸಮರ್ಪಯತ್ ॥
ತೇನ ಪುಣ್ಯಪ್ರಭಾವೇನ ಸ ರಾಜಾ ಮುನಿಸತ್ತಮ ।
ಶರದಾಂ ಶತಸಾಹಸ್ರಂ ಇಹ ಭೋಗಾನ್ಮನೋಹರಾನ್ ॥ ೯೩ ॥
ಸುಪುತ್ರಪೌತ್ರಸ್ವಜನೈಃ ಬುಭುಜೇ ಸಹ ಭಾರ್ಯಯಾ ।
ತತಶ್ಚಾಂತೇ ದ್ವಿಜವರ ವಿಮಾನಂ ಸುಮನೋಹರಂ ॥ ೯೪ ॥
ಸ್ತ್ರೀಭಿಸ್ಸಹ ಸಮಾರುಹ್ಯ ಮೋಕ್ಷಮಾರ್ಗಂ ಗತೋ ಮುನೇ ।
ಚತುರ್ಭುಜಃ ಪೀತವಾಸಾಃ ಶಂಖಚಕ್ರಗದಾಧರಃ ॥ ೯೫ ॥
ವಿಷ್ಣುಲೋಕೇ ವಿಷ್ಣುರಿವ ಪ್ರೋಚ್ಯಮಾನಸ್ಸದಾಽಮರೈಃ ।
ಕ್ರೀಡಯಾಮಾಸ ರಾಜಾಽಸೌ ಯಥಾಕಾಮಂ ಮಹಾಮನಾಃ ॥ ೯೬ ॥

---

೯೦. ಈ ವ್ರತದಿಂದ ನಿನ್ನಲ್ಲಿ ಭಕ್ತಿಯು ವೃದ್ಧಿಯಾಗಲಿ" ಇಂತೆಂಬ ಈ ಮಂತ್ರದಿಂದ ಆ ರಾಜನು ದೀಪದಾನ ಮಾಡುತ್ತಿದ್ದನು.

೯೧. ಬ್ರಾಹ್ಮಮುಹೂರ್ತದಲ್ಲಿ ಮತ್ತೊಮ್ಮೆ ಆಕಾಶದೀಪವನ್ನು ಕೊಡುತ್ತಿದ್ದನು. ಪ್ರಾತಃಸ್ನಾನ ಮಾಡುತ್ತಿದ್ದನು. ಪ್ರಾತಃಕಾಲದಲ್ಲಿ ವಿಷ್ಣುವಿನ ಪೂಜೆ ಮಾಡುತ್ತಿದ್ದನು.

೯೨. ಉದ್ಯಾಪನ ವಿಧಿಯನ್ನು ನೆರವೇರಿಸಿ, ಆಕಾಶದೀಪವನ್ನು ಸಮಾಪ್ತಿಗೊಳಿಸಿ, ಬ್ರಾಹ್ಮಣರಿಗೆ ಭೋಜನಮಾಡಿಸಿ, ವ್ರತವನ್ನು ವಿಷ್ಣುವಿಗೆ ಸಮರ್ಪಿಸಿದನು.

೯೩-೯೬. ಎಲೈ ಮುನಿಶ್ರೇಷ್ಠನೇ! ಆ ಪುಣ್ಯಪ್ರಭಾವದಿಂದ ಆ ರಾಜನು ಶತಸಹಸ್ರವರ್ಷಗಳವರೆಗೆ ಇಲ್ಲಿ ಸುಪುತ್ರಪೌತ್ರಸ್ವಜನರೊಡನೆ, ಭಾರ್ಯೆಯ ಸಂಗಡ ಮನೋಹರಗಳಾದ ಭೋಗಗಳನ್ನು ಅನುಭವಿಸಿದನು. ಬ್ರಾಹ್ಮಣ ಶ್ರೇಷ್ಠಾ! ಬಳಿಕ ಕೊನೆಯಲ್ಲಿ ಅವನು ಬಹು ಮನೋಹರವಾದ ವಿಮಾನವನ್ನು ತನ್ನ ಸ್ತ್ರೀಯರೊಡನೆ ಆರೋಹಿಸಿ ಮೋಕ್ಷಮಾರ್ಗವನ್ನನುಸರಿಸಿ ಹೋದನು. ಎಲೈ ಮುನಿಯೇ! ಆ ರಾಜನು, ಚತುರ್ಭುಜಗಳುಳ್ಳವನೂ, ಪೀತಾಂಬರ ಧಾರಿಯೂ, ಶಂಖ ಚಕ್ರ ಗದೆಗಳನ್ನು ಧರಿಸಿದವನೂ ಆಗಿ ವಿಷ್ಣುಲೋಕದಲ್ಲಿ ಬೇರೊಬ್ಬ ವಿಷ್ಣುವೋ ಎಂಬಂತೆ ಸದಾ ಕಾಲದಲ್ಲಿಯೂ ಅಮರರಿಂದ ಉಗ್ಗಡಿಸಲ್ಪಡುತ್ತಾ ತನ್ನಿಷ್ಟಬಂದಂತೆ ಕ್ರೀಡಿಸುತ್ತಿದ್ದನು.

ತಸ್ಮಾತ್ತು ಕಾರ್ತಿಕೇ ಮಾಸಿ ಮಾನುಷ್ಯಂ ಪ್ರಾಪ್ಯ ದುರ್ಲಭಂ ।
ಆಕಾಶದೀಪೋ ದಾತವ್ಯೋ ವಿಧಾನೇನ ಹರೇಃ ಪ್ರಿಯಃ ॥ ೯೭ ॥
ದಾಸ್ಯಂತಿ ಯೇ ಕಾರ್ತಿಕಮಾಸಿ ಮರ್ತ್ಯಾ
ವ್ಯೋಮಪ್ರದೀಪಂ ಹರಿತುಷ್ಟಯೇಽತ್ರ ।
ಪಶ್ಯಂತಿ ತೇ ನೈವ ಕದಾಽಪಿ ದೇವಂ
ಯಮಂ ಮಹಾಕ್ರೂರಮುಖಂ ಮುನೀಂದ್ರ ॥ ೯೮ ॥
ಅಥಾನ್ಯಚ್ಚ ಪ್ರವಕ್ಷ್ಯಾಮಿ ವ್ಯೋಮದೀಪಸ್ಯ ವೈಭವಂ ।
ವಾಲಖಿಲ್ಯೈಃ ಪುರಾ ಪ್ರೋಕ್ತಂ ತಚ್ಛೃಣುಷ್ವ ದ್ವಿಜೋತ್ತಮ ॥ ೯೯ ॥

ವಾಲಖಿಲ್ಯಾ ಊಚುಃ:—

ಕೃಷ್ಣಾದಿಮಾಸಕ್ರಮತಃ ಕಾರ್ತಿಕಸ್ಯಾದಿಮಾಸತಃ ।
ಆಕಾಶದೀಪದಾನಂ ತು ಕುರ್ವಂತು ಋಷಿಸತ್ತಮಾಃ ॥ ೧೦೦ ॥
ತುಲಾಯಾಂ ತಿಲತೈಲೇನ ಸಾಯಂಸಂಧ್ಯಾಸಮಾಗಮೇ ।
ಆಕಾಶದೀಪಂ ಯೋ ದದ್ಯಾತ್ ಮಾಸಮೇಕಂ ನಿರಂತರಂ ॥ ೧೦೧ ॥
ಸಶ್ರೀಕಾಯ ಶ್ರೀಪತಯೇ ಶ್ರಿಯಾ ನ ಸ ವಿಯುಜ್ಯತೇ ।
ಆಕಾಶದೀಪವಂಶಸ್ತು ವಿಂಶದ್ಧಸ್ತೋತ್ತಮೋ ಭವೇತ್ ॥ ೧೦೨ ॥

---

೯೭. ಆದ್ದರಿಂದ ಬಹು ದುರ್ಲಭವಾದ ಮನುಷ್ಯಜನ್ಮವನ್ನು ಪಡೆದು ಕಾರ್ತಿಕಮಾಸದಲ್ಲಿ ಹರಿಗೆ ಪ್ರಿಯವಾದ ಆಕಾಶದೀಪವನ್ನು ವಿಧಿಪ್ರಕಾರವಾಗಿ ಅರ್ಪಿಸಬೇಕು.

೯೮. ಎಲೈ ಮುನೀಂದ್ರನೇ! ಯಾವ ಮನುಷ್ಯರು ಹರಿಯ ತೃಪ್ತಿಗಾಗಿ ಕಾರ್ತಿಕಮಾಸದಲ್ಲಿ ಆಕಾಶದೀಪವನ್ನು ಅರ್ಪಿಸುತ್ತಾರೊ ಅವರು ಮಹಾ ಕ್ರೂರ ಮುಖವುಳ್ಳವನಾದ ಯಮದೇವನನ್ನು ಎಂದೆಂದಿಗೂ ಕಾಣುವುದೇ ಇಲ್ಲವು.

೯೯. ಈಗ ಆಕಾಶದೀಪದ ಮಹಿಮೆಯನ್ನು ವಿವರಿಸುವ ಮತ್ತೊಂದು ಕಥೆಯನ್ನು ಹೇಳುತ್ತೇನೆ. ಅದು ಹಿಂದೆ ವಾಲಖಿಲ್ಯರಿಂದ ಹೇಳಲ್ಪಟ್ಟದ್ದು. ದ್ವಿಜೋತ್ತಮಾ! ಅದನ್ನು ಲಾಲಿಸು.

೧೦೦. ವಾಲಖಿಲ್ಯರಿಂತೆಂದರು :—"ಎಲೈ ಋಷಿಶ್ರೇಷ್ಠರೇ! ಕೃಷ್ಣಮಾಸ ಮೊದಲಾಗಿ ಕಾರ್ತಿಕಮಾಸ ಪೂರ್ತಿಯಾಗಿ ಆಕಾಶದೀಪದಾನವನ್ನು ಮಾಡ ತಕ್ಕದ್ದು.

೧೦೧–೧೦೨. ತುಲಾಮಾಸದಲ್ಲಿ ಸಾಯಂಸಂಧ್ಯಾಕಾಲ ಬರುತ್ತಿರಲಾಗಿ ಎಳ್ಳೆಣ್ಣೆಯಿಂದ ಆಕಾಶದೀಪವನ್ನು ಯಾವನು ನಿರಂತರವಾಗಿ ಒಂದು ತಿಂಗಳ

ಮಧ್ಯಮೋ ನವಹಸ್ತಸ್ಸ್ಯಾತ್ ಕನಿಷ್ಠಃ ಪಂಚಹಸ್ತಕಃ ।
ಯಥಾ ದೂರಸ್ಥಿತೈರ್ಲೋಕೈರ್ದೃಶ್ಯತೇ ತತ್ತಥಾಽಚರೇತ್ ॥ ೧೦೩ ॥
ತಥಾಭ್ರಾದಿಕರಂಡೇಷು ದೀಪದಾನಂ ವಿಶಿಷ್ಯತೇ ।
ವಂಶಸ್ಯ ನವಮಾಂಶೇನ ಲಂಬಾ ಕಾರ್ಯಾ ಪತಾಕಿಕಾ ॥ ೧೦೪ ॥
ಮಯೂರಪಿಚ್ಛಮುಷ್ಟಿಂ ವಾ ಕಲಶಂ ಚೋಪರಿ ನ್ಯಸೇತ್ ।
ವಿಷ್ಣುಪ್ರೀತಿಕರೋ ದೀಪಃ ಪಿತ್ರೂದ್ಧಾರಸ್ಯ ಕಾರಕಃ ॥ ೧೦೫ ॥
ಏಕಾದಶ್ಯಾಸ್ತುಲಾರ್ಕಾದ್ವಾ ದೀಪದಾನಮತೋಽಪಿವಾ ।
ದಾಮೋದರಾಯ ನಭಸಿ ತುಲಾಯಾಂ ಲೋಲಯಾ ಸಹ ॥ ೧೦೬ ॥
ಪ್ರದೀಪಂ ತೇ ಪ್ರಯಚ್ಛಾಮಿ ನಮೋಽನಂತಾಯ ವೇಧಸೇ ।
ಆಕಾಶದೀಪಸದೃಶಂ ಪಿತುರುದ್ಧಾರಕಂ ನ ಹಿ ॥ ೧೦೭ ॥

---

ವರೆಗೂ ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನ ಪ್ರೀತ್ಯರ್ಥವಾಗಿ ಅರ್ಪಿಸುತ್ತಾನೆಯೋ ಅವನು ಸಿರಿಯಿಂದ ಅಗಲುವುದಿಲ್ಲ. ಆಕಾಶದೀಪಕ್ಕೆ ಉಪಯೋಗಿಸುವ ಗಳುವು (ಬೊಂಬು) ಇಪ್ಪತ್ತು ಹಸ್ತ ಉದ್ದವಾಗಿರುವುದು ಉತ್ತಮ.

೧೦೩. ಒಂಭತ್ತು ಹಸ್ತ ಉದ್ದದ್ದು ಮಧ್ಯಮ; ಐದು ಹಸ್ತದ್ದು ಕನಿಷ್ಠವಾದುದು. ಹೇಗಿದ್ದರೆ ದೂರದಲ್ಲಿರುವ ಜನರಿಗೆ ಕಾಣಿಸುತ್ತದೆಯೊ ಹಾಗೆ ಅದನ್ನು ನಿಲ್ಲಿಸಬೇಕು.

೧೦೪. ಕಾಗೆಬಂಗಾರ (ಅಭ್ರಕ) ಮೊದಲಾದವುಗಳಿಂದ ಮಾಡಿದ ಪೆಟ್ಟಿಗೆಗಳಲ್ಲಿ ದೀಪವಿಡುವುದು ವಿಶೇಷ. ಬೊಂಬಿನ ಒಂಭತ್ತನೆಯ ಒಂದು ಭಾಗದಷ್ಟು ಉದ್ದವಾಗಿ ಪತಾಕೆಯನ್ನು ಮಾಡಬೇಕು.

೧೦೫. ಒಂದು ಹಿಡಿ ನವಿಲುಗರಿಯನ್ನಾಗಲಿ ಕಲಶವನ್ನಾಗಲಿ ಮೇಲ್ಭಾಗದಲ್ಲಿಡಬೇಕು. ದೀಪವು ವಿಷ್ಣುಪ್ರೀತಿಕರವಾದುದು; ಪಿತೃಗಳನ್ನು ಉದ್ಧಾರ ಮಾಡತಕ್ಕದ್ದು.

೧೦೬. ಏಕಾದಶಿಯಿಂದಲೋ, ತುಲೆಯಲ್ಲಿ ಸೂರ್ಯನು ಸೇರಿದಂದಿನಿಂದಲೋ ಲಕ್ಷ್ಮೀಸಮೇತನಾದ ದಾಮೋದರನಿಗಾಗಿ ಆಕಾಶದಲ್ಲಿ ದೀಪವನ್ನು ಸಮರ್ಪಿಸಬೇಕು.

೧೦೭. "ಈ ಪ್ರದೀಪವನ್ನು ನಿನಗೆ ಸಮರ್ಪಿಸುತ್ತೇನೆ. ಎಲೈ ಅನಂತನೇ! ಪರಬ್ರಹ್ಮಸ್ವರೂಪನಾದ ನಿನಗೆ ನಮಸ್ಕಾರವು. ಆಕಾಶದೀಪದಂತೆ ಪಿತೃಗಳನ್ನು ಉದ್ಧರಿಸುವಂತಹುದು ಬೇರಾವುದೂ ಇಲ್ಲವೇ ಇಲ್ಲವು.

**ಹೇಲಿಕಸ್ಯ ಚ ದ್ವೌ ಪುತ್ರೌ ತತ್ರೈಕಸ್ತು ಪಿಶಾಚಕಃ ।**
**ವ್ಯೋಮದೀಪಪುಣ್ಯದಾನಾತ್ ಮೋಕ್ಷಂ ಪ್ರಾಪ ಸುದುರ್ಲಭಂ ॥೧೦೮॥**
**ನಮಃ ಪಿತೃಭ್ಯಃ ಪ್ರೇತೇಭ್ಯೋ ನಮೋ ಧರ್ಮಾಯ ವಿಷ್ಣವೇ ।**
**ನಮೋ ಯಮಾಯ ರುದ್ರಾಯ ಕಾಂತಾರಪತಯೇ ನಮಃ ॥ ೧೦೯ ॥**

---

೧೦೮. ಹೇಲಿಕನಿಗೆ ಇಬ್ಬರು ಮಕ್ಕಳು. ಅವರಲ್ಲೊಬ್ಬನು ಪಿಶಾಚಿಯಾಗಿದ್ದು ಆಕಾಶದೀಪದ ಪುಣ್ಯದಾನದಿಂದ ಬಹು ದುರ್ಲಭವಾದ ಮೋಕ್ಷವನ್ನು ಪಡೆದನು.*

೧೦೯. ಪ್ರೇತರೂಪವನ್ನು ಧರಿಸಿರುವ ಪಿತೃಗಳಿಗೆ ನಮಸ್ಕಾರವು. ಧರ್ಮರಾಜನಿಗೆ ನಮಸ್ಕಾರವು. ವಿಷ್ಣುವಿಗೆ ನಮಸ್ಕಾರವು. ಯಮನಿಗೆ ನಮಸ್ಕಾರವು. ರುದ್ರನಿಗೆ ನಮಸ್ಕಾರವು. ಕಾಂತಾರಪತಿಗೆ ನಮಸ್ಕಾರ.

---

* **ಸನತ್ಕುಮಾರ ಸಂಹಿತೆಯ ಕಥೆ:—** ಹಿಂದೆ ವಿಂಧ್ಯಾದ್ರಿಯಲ್ಲಿ ಹೇಲಿಕನೆಂಬ ಬ್ರಾಹ್ಮಣನೋರ್ವನಿದ್ದನು. ಅವನಿಗೆ ಚಿತ್ರಭಾನು, ಮನೋಜವ ಎಂಬ ಇಬ್ಬರು ಮಕ್ಕಳಿದ್ದರು. ಅವರಿಬ್ಬರೂ ಧರ್ಮಿಷ್ಠರೇ ಆದರೂ ದುರದೃಷ್ಟದಿಂದ ಜೂಜು ಸೂಳುಗಾರಿಕೆಗಳಲ್ಲಿ ತೊಡಗಿದ್ದರು. ಆ ವ್ಯಸನದಿಂದ ಅವರೀರ್ವರ ಪಿತ್ರಾರ್ಜಿತ ದ್ರವ್ಯವೆಲ್ಲವೂ ಮುಗಿದುಹೋಗಲು ಅವರು ಕಳ್ಳತನಕ್ಕೆ ಮೊದಲುಮಾಡಿದರು.

ಚಿತ್ರಭಾನು, ಮನೋಜವರು ಹೀಗೆ ಕಳ್ಳತನದಲ್ಲಿ ತೊಡಗಿರುವುದು ಆ ಊರಿನವರಿಗೆಲ್ಲ ತಿಳಿದುಹೋಗಲು ಅವರು ಆ ಊರನ್ನೇ ಬಿಟ್ಟು ಭಯಂಕರವಾದ ಕಾಡನ್ನು ಸೇರಿದರು. ಅಲ್ಲಿ ಒಬ್ಬ ನನಾನೀ ಎಂಬ ಭಿಲ್ಲರ ಹುಡುಗಿಯು ಇವರಿಬ್ಬರೂ ಬ್ರಾಹ್ಮಣಕುಮಾರರೆಂದರಿತು ತನ್ನ ಮನೆಯಲ್ಲಿರಿಸಿಕೊಂಡಳು. ಅವರಲ್ಲಿನ ಮೋಹದಿಂದ ತನ್ನ ತಂದೆಯ ಆಸ್ತಿಯನ್ನೆಲ್ಲ ಅವರಿಗೆ ಕೊಟ್ಟಳು.

ನನಾನಿಯು ಒಂದು ಸಲ ತನ್ನ ತಂದೆಗೋಸ್ಕರ ದೀಪದಾನವನ್ನು ಮಾಡಿದಳು. ಅದನ್ನು ಆ ಬ್ರಾಹ್ಮಣಪುತ್ರರಿಗೇ ಕೊಟ್ಟಳು. ಇನ್ನೊಂದ ಸಲ ಅವಳು ತಂದೆಯ ಶ್ರಾದ್ಧವನ್ನು ಮಾಡಿ ಅವರಿಬ್ಬರಿಗೂ ಭೋಜನ ಮಾಡಿಸಿದಳು. ಆ ಶ್ರಾದ್ಧದಲ್ಲಿ ಮನೋಜವನು ಅತಿಯಾಗಿ ತಿಂದುದರಿಂದ ಅಜೀರ್ಣರೋಗದಿಂದ ಮಡಿದನು. ಯಮದೂತರು ಅವನನ್ನು ತಾಮಿಸ್ರವೆಂಬ ನರಕದಲ್ಲಿ ಹಾಕಿದರು. ಆದರೆ ನನಾನಿಯು ಮಾಡಿದ್ದ ದೀಪದಾನದ ಮಾಹಾತ್ಮ್ಯದಿಂದ ಅವನು ನರಕದಿಂದ ಬಿಡುಗಡೆ ಹೊಂದಿ ಆ ಬಳಿಕ ಪಿಶಾಚವಾದನು.

ಮನೋಜವನು ಹೀಗೆ ಪಿಶಾಚವಾಗಿ ಆ ಕಾಡಿನಲ್ಲಿಯೇ ವಾಸಮಾಡುತ್ತ ನನಾನಿಯ ದೇಹವನ್ನೇ ಹಿಡಿದನು. ಆಗ ನನಾನಿಯು ವಸ್ತ್ರಾಲಂಕಾರಗಳನ್ನು ತೊರೆದು ಬೆತ್ತಲೆಯಾಗಿ ತಿರುಗತೊಡಗಿದಳು. ಎರಡನೆಯವನಾದ ಚಿತ್ರಭಾನುವಾದರೋ ಅವಳ ಆ ದುರವಸ್ಥೆಯನ್ನು ಕಂಡು ಮರುಗಿ ಅವಳನ್ನು ಕಾಶಿಗೆ ಕರೆದೊಯ್ದು ಅಲ್ಲಿ ಆಕಾಶ ದೀಪದಾನವನ್ನು ಮಾಡಿದನು. ಆಗ ಅವಳ ಮೈಮೇಲಿದ್ದ ಮನೋಜವ (ಪಿಶಾಚಕ್ಕೆ) ನಿಗೆ ಮುಕ್ತಿಯುಂಟಾಯಿತು. ಪುನಃ ಮಾನವ ಜನ್ಮವೇ ಬಂದಿತು. ಆಗ ಅವನು ನನಾನಿಯ ಮಗನಾದನು. ಮೂವರೂ ಕಾಶಿಯಲ್ಲಿಯೇ ವಾಸವಾಗಿದ್ದು ಕಡೆಗೆ ಮೋಕ್ಷವನ್ನು ಪಡೆದರು.

ಮಂತ್ರೇಣಾನೇನ ಯೇ ಮರ್ತ್ಯಾಃ ಪಿತೃಭ್ಯಃ ಖೇ ತು ದೀಪಕಂ ।
ಪ್ರಯಚ್ಛಂತಿ ಗತಾ ಯೇ ಸ್ಯುಃ ನರಕೇ ಯಾಂತಿ ತೇಽಪಿ ವೈ ।
ಉತ್ತಮಾಂ ಗತಿಮಿತ್ಥಂ ತೇ ದೀಪದಾನಂ ಮಯೇರಿತಂ ॥ ೧೧೦ ॥
ಲಕ್ಷ್ಮೀಸಂತತಿಸಿದ್ಧ್ಯರ್ಥಂ ಆರೋಗ್ಯಾಯ ಪ್ರದೀಪಯೇತ್ ॥ ೧೧೧ ॥
ಕಾರ್ತಿಕೇ ಕೃಷ್ಣಪಕ್ಷೇ ತು ದ್ವಾದಶ್ಯಾದಿಷು ಪಂಚಸು ।
ತಿಥಿಷೂಕ್ತಃ ಪೂರ್ವರಾತ್ರೇ ನೃಣಾಂ ನೀರಾಜನಾ ವಿಧಿಃ ॥ ೧೧೨ ॥
ಬ್ರಹ್ಮವಿಷ್ಣುಶಿವಾದೀನಾಂ ಭವನೇಷು ವಿಶೇಷತಃ ।
ಕೂಟಾಗಾರೇಷು ಚೈತ್ಯೇಷು ಸಭಾಸು ಚ ನದೀಷು ಚ ॥ ೧೧೩ ॥
ಪ್ರಾಕಾರೋದ್ಯಾನವಾಪೀಷು ಪ್ರತೋಲೀನಿಷ್ಕುಟೇಷು ಚ ।
ಮಂದುರಾಸು ವಿವಿಕ್ತಾಸು ಹಸ್ತಿಶಾಲಾಸು ಚೈವ ಹಿ ॥ ೧೧೪ ॥
ಪ್ರದೋಷಸಮಯೇ ದೀಪಾನ್ ದದ್ಯಾದೇವಂ ಮನೋಹರಾನ್ ।
ಕೃತಂ ಯೈಃ ಕಾರ್ತಿಕೇ ಮಾಸಿ ದೀಪದಾನಂ ವಿಧಾನತಃ ॥ ೧೧೫ ॥
ದೃಶ್ಯಂತೇ ಯೇ ರತ್ನಭಾಜಃ ತೇ ತ ಏವ ಪ್ರಕೀರ್ತಿತಾಃ ।
ದೀಪದಾನಾಸಮರ್ಥಶ್ಚೇತ್ ಪರದೀಪಂ ತು ರಕ್ಷಯೇತ್ ॥ ೧೧೬ ॥

---

೧೧೦. ಈ ಮಂತ್ರದಿಂದ ಯಾವ ಮರ್ತ್ಯರು ಪಿತೃಗಳಿಗಾಗಿ ಆಕಾಶದಲ್ಲಿ ದೀಪವನ್ನು ನೀಡುವರೋ ಅವರು (ಆ ಪಿತೃಗಳು) ನರಕಕ್ಕೆ ಸೇರಿದವರಾದರೂ ಉತ್ತಮ ಗತಿಯನ್ನು ಪಡೆಯುತ್ತಾರೆ. ಇಂತು ದೀಪದಾನದ ವಿಚಾರವನ್ನು ತಿಳಿಸಿದ್ದೇನೆ.

೧೧೧. ಸಂಪತ್ತು, ಸಂತತಿಗಳು ಸಿದ್ಧಿಸುವುದಕ್ಕಾಗಿಯೂ ಆರೋಗ್ಯಕ್ಕಾಗಿಯೂ ದೀಪವನ್ನು ಇಡಬೇಕು.

೧೧೨. ಕಾರ್ತಿಕದ ಕೃಷ್ಣಪಕ್ಷದಲ್ಲಿ ದ್ವಾದಶಿ ಮೊದಲಾದ ಐದು ತಿಥಿಗಳಲ್ಲಿ ಪೂರ್ವರಾತ್ರಿಯಲ್ಲಿ ಮನುಷ್ಯರಿಗೆ ನಿರಾಜನವಿಧಿಯು ಉಕ್ತವಾಗಿದೆ.

೧೧೩-೧೧೬. ವಿಶೇಷವಾಗಿ ಬ್ರಹ್ಮ, ವಿಷ್ಣು, ಶಿವ, ಮೊದಲಾದವರ ದೇವಸ್ಥಾನಗಳಲ್ಲಿ, ಕೂಟಗಾರ(ಧಾನ್ಯದ ಮನೆ)ಗಳಲ್ಲಿ, ಚೈತ್ಯಗಳಲ್ಲಿ, ಸಭೆಗಳಲ್ಲಿ, ನದಿಗಳಲ್ಲಿ, ಪ್ರಾಕಾರ ಉದ್ಯಾನ ಕೊಳಗಳಲ್ಲಿ, ಬೀದಿಗಳಲ್ಲಿ, ಮನೆದೋಟಗಳಲ್ಲಿ, ಪ್ರತ್ಯೇಕವಾಗಿರುವ ಅಶ್ವಶಾಲೆಗಳಲ್ಲಿ ಮತ್ತು ಹಸ್ತಿಶಾಲೆಗಳಲ್ಲಿ—ಈ ಸ್ಥಳಗಳಲ್ಲಿ ಪ್ರದೋಷಕಾಲದಲ್ಲಿ ಮನೋಹರವಾದ ದೀಪಗಳನ್ನು ಸಮರ್ಪಿಸಬೇಕು. ಕಾರ್ತಿಕಮಾಸದಲ್ಲಿ ಯಾರು ದೀಪದಾನವನ್ನು ವಿಧಿಪ್ರಕಾರವಾಗಿ ಮಾಡುವರೋ ಅವರೇ ರತ್ನ (ಐಶ್ವರ್ಯ) ಭಾಗಿಗಳೆನ್ನಿಸಿಕೊಳ್ಳುವವರು. ದೀಪದಾನಕ್ಕೆ ಅಸಮರ್ಥರಾದರೆ ಪರದೀಪವನ್ನಾದರೂ ರಕ್ಷಿಸಬೇಕು.

**ಯೋ ವೇದಾಭ್ಯಾಸಿನೇ ದದ್ಯಾತ್ ದೀಪಾರ್ಥಂ ತೈಲಮಾದರಾತ್ ।**
**ಕೋ ವಾ ತಸ್ಯ ಫಲಂ ವಕ್ತುಂ ಭುವಿ ತಿಷ್ಠತಿ ಮಾನವಃ ॥ ೧೧೭ ॥**
**ದೀಪಾನ್ ದದ್ಯಾದ್ಬಹುವಿಧಾನ್ ಕಾರ್ತಿಕೇ ವಿಷ್ಣುಸನ್ನಿಧೌ ।**
**ಕಾರ್ತಿಕೇ ಮಾಸಿ ಸಂಪ್ರಾಪ್ತೇ ಗಗನೇ ಸ್ವಚ್ಛತಾರಕೇ ॥ ೧೧೮ ॥**
**ರಾತ್ರೌ ಲಕ್ಷ್ಮೀಸ್ಸಮಾಯಾತಿ ದ್ರಷ್ಟುಂ ಭುವನಕೌತುಕಂ ।**
**ಯತ್ರ ಯತ್ರ ಚ ದೀಪಾನ್ ಸಾ ಪಶ್ಯತ್ಯಬ್ಧಿಸಮುದ್ಭವಾ ॥ ೧೧೯ ॥**
**ತತ್ರ ತತ್ರ ರತಿಂ ಕುರ್ಯಾನ್ನಾನ್ಧಕಾರೇ ಕದಾಚನ ।**
**ತಸ್ಮಾದ್ದೀಪಃ ಸ್ಥಾಪನೀಯಃ ಕಾರ್ತಿಕೇ ಮಾಸೀ ವೈ ಸದಾ ॥ ೧೨೦ ॥**
**ಲಕ್ಷ್ಮೀರೂಪಾರ್ಥಿನಾಂ ಪ್ರೋಕ್ತಂ ದೀಪದಾನಂ ವಿಶೇಷತಃ ।**
**ದೇವಾಲಯೇ ನದೀತೀರೇ ರಾಜಮಾರ್ಗೇ ವಿಶೇಷತಃ ॥ ೧೨೧ ॥**
**ನಿದ್ರಾಸ್ಥಲೇ ದೀಪದಾತಾ ತಸ್ಯ ಶ್ರೀಸ್ಸರ್ವತೋಮುಖೀ ।**
**ದುರ್ಬಲಸ್ಯಾಲಯಂ ವೀಕ್ಷ್ಯ ದೀಪಶೂನ್ಯಂ ತು ಯೋ ದದೇತ್ ॥೧೨೨॥**
**ವಿಪ್ರಸ್ಯ ವಾನ್ಯವರ್ಣಸ್ಯ ವಿಷ್ಣುಲೋಕೇ ಮಹೀಯತೇ ।**
**ಕೀಟಕಂಟಕಸಂಕೀರ್ಣೇ ದುರ್ಗಮೇ ವಿಷಮಸ್ಥಲೇ ॥ ೧೨೩ ॥**

---

೧೧೭. ಯಾವನು ವೇದಾಭ್ಯಾಸಿಯಾದವನಿಗೆ ದೀಪಕ್ಕಾಗಿ ಆದರದಿಂದ ಎಣ್ಣೆಯನ್ನು ಕೊಡುತ್ತಾನೆಯೋ ಅವನ ಪುಣ್ಯವನ್ನು ಇಷ್ಟೆಂದು ಹೇಳುವ ಮಾನವನು ಯಾವನುತಾನೇ ಭೂಮಿಯಲ್ಲಿದ್ದಾನೆ?

೧೧೮–೧೨೦. ಕಾರ್ತಿಕದಲ್ಲಿ ವಿಷ್ಣು ಸನ್ನಿಧಿಯಲ್ಲಿ ಬಹು ವಿಧವಾದ ದೀಪಗಳನ್ನು ನೀಡಬೇಕು. ಕಾರ್ತಿಕಮಾಸವು ಬಂದು ಆಕಾಶವು ಸ್ವಚ್ಛವಾಗಿ ನಕ್ಷತ್ರಗಳಿಂದ ತುಂಬಿದುದಾಗಿರುವಾಗ ರಾತ್ರಿಯ ಹೊತ್ತು ಭೂಲೋಕದ ಕೌತುಕವನ್ನು ನೋಡುವುದಕ್ಕಾಗಿ ಲಕ್ಷ್ಮಿಯು ಬರುತ್ತಾಳೆ. ಅಬ್ಧಿಸಮುದ್ಭವೆ ಯಾದ ಆ ಲಕ್ಷ್ಮಿಯು ಎಲ್ಲೆಲ್ಲಿ ದೀಪಗಳನ್ನು ಕಾಣುತ್ತಾಳೆಯೋ ಅಲ್ಲೆಲ್ಲಾ ಪ್ರೀತಿಯಿಡುತ್ತಾಳೆ. ಅಂಧಕಾರವಿರುವೆಡೆಗಳಲ್ಲಿ ಎಂದಿಗೂ ಮನಸ್ಸಿಡುವುದಿಲ್ಲ. ಆದುದರಿಂದ ಕಾರ್ತಿಕಮಾಸದಲ್ಲಿ ಸದಾ ದೀಪವನ್ನಿಟ್ಟಿರಬೇಕು.

೧೨೧. ಲಕ್ಷ್ಮೀಸಾನ್ನಿಧ್ಯವನ್ನು ಬಯಸುವವರಿಗೆ ದೀಪದಾನವನ್ನು ವಿಶೇಷ ವಾಗಿ ಹೇಳಿದೆ. ದೇವಾಲಯದಲ್ಲಿ, ನದೀತೀರದಲ್ಲಿ, ಮತ್ತು ವಿಶೇಷವಾಗಿ ರಾಜಮಾರ್ಗದಲ್ಲಿ ದೀಪಗಳನ್ನಿಡಬೇಕು.

೧೨೨–೧೨೮. ನಿದ್ರಾಸ್ಥಲದಲ್ಲಿ ಯಾವನು ದೀಪದಾನಮಾಡುವನೋ ಅವನಿಗೆ ಸಂಪತ್ತು ಸರ್ವತೋಮುಖವಾಗುತ್ತದೆ. ದುರ್ಬಲನಾಗಿರುವವನ ಮನೆಯಲ್ಲಿ ದೀಪವಿಲ್ಲದಿರುವುದನ್ನು ಕಂಡು ಮನೆಯಾತನು ಬ್ರಾಹ್ಮಣನೇ ಆಗಲಿ ಅನ್ಯವರ್ಣದವನೇ ಆಗಲಿ ಅವನಿಗೆ ಯಾವನು ದೀಪವನ್ನು ಕೊಡುತ್ತಾನೋ

ಕುರ್ಯಾದ್ಯೋ ದೀಪದಾನಾನಿ ನರಕಂ ಸ ನ ಗಚ್ಛತಿ ।
ದದ್ಯಾದ್ರಾತ್ರೌ ಪಂಚನದೇ ದೀಪಂ ಯೋ ವಿಧಿಪೂರ್ವಕಂ ॥ ೧೨೪ ॥
ತಸ್ಯ ವಂಶೇ ಪ್ರಜಾಯಂತೇ ಬಾಲಕಾಃ ಕುಲದೀಪಕಾಃ ।
ಪಿತೃಪಕ್ಷೇऽನ್ನದಾನೇನ ಜ್ಯೇಷ್ಠಾಷಾಢೇ ಚ ವಾರಿಣಾ ॥ ೧೨೫ ॥
ಕಾರ್ತಿಕೇ ತತ್ಫಲಂ ತೇಷಾಂ ಪರದೀಪಪ್ರಬೋಧನಾತ್ ।
ಬೋಧನಾತ್ಪರದೀಪಸ್ಯ ವೈಷ್ಣವಾನಾಂ ಚ ಸೇವನಾತ್ ॥ ೧೨೬ ॥
ಕಾರ್ತಿಕೇ ಫಲಮಾಪ್ನೋತಿ ರಾಜಸೂಯಾಶ್ವಮೇಧಯೋಃ ।
ಪುರಾ ಹರಿಕರೋ ನಾಮ ದ್ವಿಜಃ ಪಾಪರತಸ್ಸದಾ ॥ ೧೨೭ ॥
ಕೃತಂ ದ್ಯೂತಪ್ರಸಂಗೇನ ದೀಪದಾನಂ ಹಿ ಕಾರ್ತಿಕೇ ।
ತೇನ ಪುಣ್ಯಪ್ರಭಾವೇನ ಸ್ವರ್ಗಂ ಪ್ರಾಪ ದ್ವಿಜೋತ್ತಮಃ ॥ ೧೨೮ ॥
ಆಕಾಶದೀಪದಾನೇನ ಪುರಾ ವೈ ಧರ್ಮನಂದನಃ ।
ವಿಮಾನವರಮಾರುಹ್ಯ ವಿಷ್ಣುಲೋಕಂ ಯಯೌ ನೃಪಃ ॥ ೧೨೯ ॥
ಯಃ ಕುರ್ಯಾತ್ಕಾರ್ತಿಕೇ ವಿಷ್ಣೋಃ ಪುರಃ ಕರ್ಪೂರದೀಪಕಂ ।
ಪ್ರಬೋಧಿನ್ಯಾಂ ವಿಶೇಷೇಣ ತಸ್ಯ ಪುಣ್ಯಂ ವದಾಮ್ಯಹಂ ॥ ೧೩೦ ॥

---

ಅವನು ವಿಷ್ಣುಲೋಕದಲ್ಲಿ ದೊಡ್ಡಸ್ತಿಕೆಯನ್ನು ಪಡೆಯುತ್ತಾನೆ. ಕೀಟಗಳಿಂದಲೂ ಮುಳ್ಳುಗಳಿಂದಲೂ ತುಂಬಿ ದುರ್ಗಮವಾಗಿಯೂ ವಿಷಮವಾಗಿಯೂ ಇರುವ ಸ್ಥಳದಲ್ಲಿ ಯಾವನು ದೀಪವನ್ನಿಡುವನೋ ಅವನು ನರಕಕ್ಕೆ ಹೋಗುವುದಿಲ್ಲ. ಯಾವನು ರಾತ್ರಿಯಲ್ಲಿ ಪಂಚನದಕ್ಷೇತ್ರದಲ್ಲಿ ವಿಧಿಪೂರ್ವಕವಾಗಿ ದಾನವನ್ನು ಕೊಡುವನೋ ಅವನ ವಂಶದಲ್ಲಿ ಕುಲದೀಪಕರಾದ ಬಾಲಕರು ಹುಟ್ಟುತ್ತಾರೆ. ಪಿತೃಪಕ್ಷದಲ್ಲಿ ಅನ್ನದಾನದಿಂದಲೂ, ಜ್ಯೇಷ್ಠಾಷಾಢಗಳಲ್ಲಿ ನೀರಿನಿಂದಲೂ (ಯಾವ ಫಲವುಂಟೋ) ಆ ಫಲವು ಕಾರ್ತಿಕದಲ್ಲಿ ಪರರಿಟ್ಟ ದೀಪಗಳನ್ನು ಉಜ್ಜ್ವಲಗೊಳಿಸುವುದರಿಂದಲೂ, ವೈಷ್ಣವರ ಸೇವೆಯನ್ನು ಮಾಡುವುದರಿಂದಲೂ ರಾಜಸೂಯ ಅಶ್ವಮೇಧಗಳೆರಡರ ಫಲವೂ ದೊರೆಯುತ್ತವೆ. ಪೂರ್ವದಲ್ಲಿ ಹರಿಕರನೆಂಬ ದ್ವಿಜನು ಯಾವಾಗಲೂ ಪಾಪದಲ್ಲೇ ಆಸಕ್ತನಾಗಿದ್ದನು. ಅವನು ಜೂಜಿನ ನೆವದಲ್ಲಿ ಕಾರ್ತಿಕಮಾಸದಲ್ಲಿ ದೀಪವನ್ನಿಟ್ಟನು. ಆ ಪುಣ್ಯದ ಪ್ರಭಾವದಿಂದ ಆ ದ್ವಿಜನು ಸ್ವರ್ಗವನ್ನು ಪಡೆದನು.

೧೨೯. ಪೂರ್ವದಲ್ಲಿ ಧರ್ಮನಂದನನೆಂಬ ವಿದರ್ಭರಾಜನು ಆಕಾಶದೀಪವನ್ನಿಟ್ಟುದರ ಫಲವಾಗಿ ಶ್ರೇಷ್ಠವಾದ ವಿಮಾನವನ್ನು ಹತ್ತಿ ವಿಷ್ಣುಲೋಕಕ್ಕೆ ಹೋದನು.

೧೩೦. ಕಾರ್ತಿಕದಲ್ಲಿ ಯಾವನು ವಿಷ್ಣುವಿನೆದುರಿಗೆ ಕರ್ಪೂರದೀಪವನ್ನಿಟ್ಟು ಆ ದೀಪವು ವಿಶೇಷವಾಗಿ ಬೆಳಗಲು ಅವನ ಪುಣ್ಯವನ್ನು ವಿವರಿಸುವೆನು.

ಕುಲೇ ತಸ್ಯ ಪ್ರಸೂತಾ ಯೇ ಪುರುಷಾಸ್ತೇ ಹರಿಪ್ರಿಯಾಃ ।
ಕ್ರೀಡಿತ್ವಾ ಸುಚಿರಂ ಕಾಲಂ ಅಂತ್ಯೇ ಮುಕ್ತಿಂ ವ್ರಜಂತಿ ಚ ॥ ೧೩೧ ॥
ದೀಪಕೋ ಜ್ವಲತೇ ಯಸ್ಯ ದಿವಾರಾತ್ರೌ ಹರೇರ್ಗೃಹೇ ।
ಏಕಾದಶ್ಯಾಂ ವಿಶೇಷೇಣ ಸ ಯಾತಿ ಹರಿಮಂದಿರಂ ॥ ೧೩೨ ॥
ಲುಬ್ಧಕೋಽಪಿ ಚತುರ್ದಶ್ಯಾಂ ದೀಪಂ ದತ್ವಾ ಶಿವಾಲಯೇ ।
ಭಕ್ತ್ಯಾ ವಿನಾ ಪರೇ ಲಿಂಗೇ ಶಿವಲೋಕಂ ಜಗಾಮ ಸಃ ॥ ೧೩೩ ॥
ಗೋಪಃ ಕಶ್ಚಿದಮಾವಾಸ್ಯಂ ದೀಪಂ ಪ್ರಜ್ವಾಲ್ಯ ಶಾಙ್ರ್ಗಿಣಃ ।
ಮುಹುರ್ಜಯ ಜಯೇತ್ಯುಕ್ತ್ವಾ ಸ ಚ ರಾಜೇಶ್ವರೋಽಭವತ್॥ ೧೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ದೀಪದಾನಮಾಹಾತ್ಮ್ಯವರ್ಣನಂ"ನಾಮ ಸಪ್ತಮೋಽಧ್ಯಾಯಃ

---

೧೩೧. ಅವನ ಕುಲದಲ್ಲಿ ಯಾವ ಪುರುಷರು ಹುಟ್ಟುವರೋ ಅವರೆಲ್ಲರೂ ಹರಿಪ್ರಿಯರಾಗುವರು. ಅವರು ಬಹುಕಾಲದವರೆಗೂ ಆನಂದದಿಂದ ವಿಹರಿಸುತ್ತಿದ್ದು ಕಡೆಯಲ್ಲಿ ಮುಕ್ತಿಯನ್ನು ಪಡೆಯುತ್ತಾರೆ.

೧೩೨. ಹರಿಗೃಹದಲ್ಲಿ ಹಗಲಿರುಳೂ ಯಾವನ ದೀಪವು ಪ್ರಜ್ವಲಿಸುತ್ತಿರುವುದೋ, ಅವನು ಹರಿಮಂದಿರವನ್ನೇ ಹೋಗಿ ಸೇರುತ್ತಾನೆ.

೧೩೩. ಶ್ರೇಷ್ಠವಾದ ಶಿವಲಿಂಗದಲ್ಲಿ ಭಕ್ತಿಯಿಲ್ಲದೆಯೇ ಒಬ್ಬ ಬೇಡನೂ ಕೂಡ ಚತುರ್ದಶಿಯ ದಿನ ಶಿವಾಲಯದಲ್ಲಿ ದೀಪವನ್ನಿಟ್ಟು ಶಿವಲೋಕವನ್ನು ಹೋಗಿ ಸೇರಿದನು.

೧೩೪. ಯಾವನೋ ಒಬ್ಬ ದನಕಾಯುವವನು ಶಾಙ್ರ್ಗಪಾಣಿಯ ಮುಂದೆ ಅಮಾವಾಸ್ಯೆಯ ದಿನ ದೀಪವನ್ನು ಪ್ರಜ್ವಲಗೊಳಿಸಿ 'ಜಯ ಜಯ' ಎಂದು ಮತ್ತೆ ಮತ್ತೆ ಘೋಷಿಸಿ ಅದೇ ಪುಣ್ಯದಿಂದಲೆ ರಾಜೇಶ್ವರನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ದೀಪದಾನಮಾಹಾತ್ಮ್ಯವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

## ತುಲಸೀಮಾಹಾತ್ಮ್ಯವರ್ಣನಂ

ನಾರದ ಉವಾಚ :—

ಭೂಯಃ ಕಥಯ ತೃಪ್ತಿರ್ಹಿ ನಾಸ್ತಿ ಮೇ ಕಮಲಾಸನ ।
ತ್ವದ್ವಾಗಮೃತಪಾನೇನ ತೃಷಾ ಭೂಯಃ ಪ್ರವರ್ಧತೇ ॥ ೧ ॥

ಬ್ರಹ್ಮೋವಾಚ :—

ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ಕಾರ್ತಿಕೇ ವಿಷ್ಣುತತ್ಪರಃ ।
ದೇವಂ ದಾಮೋದರಂ ಪೂಜ್ಯ ಕೋಮಲೈಸ್ತುಲಸೀದಲೈಃ ।
ಸ ತು ಮೋಕ್ಷಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೨ ॥
ಭಕ್ತ್ಯಾ ವಿರಹಿತೋ ಯಸ್ತು ಸುವರ್ಣಾದಿಭಿರರ್ಚಯೇತ್ ।
ತಸ್ಯ ಪೂಜಾಂ ನ ಗೃಹ್ಣಾತಿ ನಾತ್ರ ಕಾರ್ಯಾ ವಿಚಾರಣಾ ॥ ೩ ॥
ಸರ್ವೇಷಾಮಪಿ ವರ್ಣಾನಾಂ ಭಕ್ತಿರೇಷಾ ಪರಾ ಸ್ಮೃತಾ ।
ಭಕ್ತ್ಯಾ ವಿರಹಿತಂ ಕರ್ಮ ನ ವಿಷ್ಣೋಃ ಪ್ರಿಯಕಾರಣಂ ॥ ೪ ॥

---

## ಕನ್ನಡದ ಅನುವಾದ

### ತುಲಸೀಮಾಹಾತ್ಮ್ಯವರ್ಣನ

೧. ನಾರದನು ಕೇಳುತ್ತಾನೆ:—“ಕಮಲಾಸನಾ! ನಿನ್ನ ವಾಗಮೃತ ಪಾನದಿಂದ ನನಗೆ ಇನ್ನೂ ತೃಪ್ತಿಯಾಗಿರುವುದಿಲ್ಲ. ಮತ್ತೆ ಮತ್ತೆ ತೃಷ್ಣೆಯೆ ಹೆಚ್ಚುತ್ತಿದೆ. ಈ ವೃತ್ತಾಂತವನ್ನು ಮತ್ತೂ ಹೇಳಬೇಕು.”

೨. ಬ್ರಹ್ಮನು ಹೇಳುತ್ತಾನೆ:—“ಕಾರ್ತಿಕಮಾಸದಲ್ಲಿ ಬೆಳಗ್ಗೆ ಸ್ನಾನಮಾಡಿ ಶುಚಿರ್ಭೂತನಾಗಿ ವಿಷ್ಣುತತ್ಪರನಾಗಿ ಕೋಮಲವಾದ ತುಲಸೀದಳಗಳಿಂದ ದೇವದೇವನಾದ ದಾಮೋದರನನ್ನು ಪೂಜಿಸುವವನು ಮೋಕ್ಷವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲವು.

೩. ಯಾವನು ಭಕ್ತಿಯಿಲ್ಲದವನಾಗಿ ಸುವರ್ಣಾದಿಗಳಿಂದ ಪೂಜಿಸುವನೋ ಅವನ ಆ ಪೂಜೆಯನ್ನು ಭಗವಂತನು ಸ್ವೀಕರಿಸುವುದಿಲ್ಲವು. ಇದರಲ್ಲಿ ವಿಚಾರಿಸಬೇಕಾದುದೂ ಇಲ್ಲವು.

೪. ಎಲ್ಲ ವರ್ಣದವರಿಗೂ ಈ ಭಕ್ತಿಯೇ ಸರ್ವಶ್ರೇಷ್ಠವಾದುದೆಂದು ಹೇಳಲ್ಪಟ್ಟಿದೆ. ಭಕ್ತಿವಿರಹಿತವಾದ ಕರ್ಮವು ವಿಷ್ಣುವಿಗೆ ಪ್ರಿಯಕಾರಣವಲ್ಲ.

ಭಕ್ತ್ಯಾ ಸಂಪೂಜಿತೋ ನಿತ್ಯಂ ತುಲಸ್ಯಾಸ್ತು ದಲಾರ್ಧತಃ ।
ಸ್ವಯಂ ಪ್ರತ್ಯಕ್ಷಮಾಯಾತಿ ಭಗವಾನ್ ಹರಿರೀಶ್ವರಃ ॥ ೫ ॥
ವಿಷ್ಣುದಾಸಃ ಪುರಾ ಭಕ್ತ್ಯಾ ತುಲಸೀಪೂಜನೇನ ಚ ।
ವಿಷ್ಣುಲೋಕಂ ಗತಶ್ಶೀಘ್ರಂ ಚೋಲೋ ಗೌಣತ್ವಮಾಗತಃ ॥ ೬ ॥
ತುಲಸ್ಯಾಃ ಶೃಣು ಮಾಹಾತ್ಮ್ಯಂ ಪಾಪಘ್ನಂ ಪುಣ್ಯವರ್ಧನಂ ।
ಯತ್ಪುರಾ ವಿಷ್ಣುನಾ ಪ್ರೋಕ್ತಂ ರಮಾಯೈ ತದ್ವದಾಮ್ಯಹಂ ॥ ೭ ॥
ಸಂಪ್ರಾಪ್ತೇ ಕಾರ್ತಿಕೇ ಮಾಸಿ ತುಲಸ್ಯಾ ಪೂಜನಂ ಹರೇಃ ।
ಯೇ ಕುರ್ವಂತಿ ನರಾ ಭಕ್ತ್ಯಾ ತೇ ಯಾಂತಿ ಪರಮಂ ಪದಂ ॥ ೮ ॥
ತಸ್ಮಾತ್ಸರ್ವಪ್ರಯತ್ನೇನ ತುಲಸ್ಯಾಃ ಕೋಮಲೈರ್ದಲೈಃ ।
ಪೂಜನೀಯೋ ಮಹಾಭಕ್ತ್ಯಾ ಸರ್ವಕ್ಲೇಶವಿನಾಶನಃ ॥ ೯ ॥
ರೋಪಿತಾ ತುಲಸೀ ಯಾವತ್ ಕುರುತೇ ಮೂಲವಿಸ್ತರಂ ।
ತಾವದ್ಯುಗಸಹಸ್ರಾಣಿ ಬ್ರಹ್ಮಲೋಕೇ ಮಹೀಯತೇ ॥ ೧೦ ॥

---

೫. ನಿತ್ಯವೂ ತುಲಸಿಯ ಅರ್ಧದಲದಿಂದಲೇ ಆದರೂ ಭಕ್ತಿಯಿಂದ ಪೂಜಿಸಲ್ಪಟ್ಟವನಾದರೆ, ಸರ್ವೇಶ್ವರನಾದ ಭಗವಾನ್ ಶ್ರೀಹರಿಯು ತಾನೇ ಪ್ರತ್ಯಕ್ಷವಾಗಿ ಬರುತ್ತಾನೆ.

೬. ಪೂರ್ವದಲ್ಲಿ ವಿಷ್ಣುದಾಸನು ಭಕ್ತಿಯಿಂದ ತುಲಸೀಪೂಜೆಯನ್ನು ಮಾಡಿದ್ದರಿಂದ ಶೀಘ್ರವಾಗಿ ವಿಷ್ಣುಲೋಕಕ್ಕೆ ಹೋದನು. ಚೋಳರಾಜನು ಗೌಣತ್ವವನ್ನು ಪಡೆದನು.

೭. ತುಲಸಿಯ ಮಾಹಾತ್ಮ್ಯೆಯನ್ನು ಆಲಿಸು. ಇದು ಪಾಪವನ್ನು ಪರಿಹರಿಸುವಂತಹುದು; ಪುಣ್ಯವನ್ನು ವೃದ್ಧಿಪಡಿಸತಕ್ಕುದು. ಹಿಂದೆ ವಿಷ್ಣುವಿನಿಂದ ರಮಾದೇವಿಗೆ ಯಾವುದು ಹೇಳಲ್ಪಟ್ಟಿತೋ ಅದನ್ನು ಈಗ ನಾನು ಹೇಳುತ್ತೇನೆ.

೮. ಕಾರ್ತಿಕಮಾಸವು ಬರಲಾಗಿ ಯಾವ ನರನು ಹರಿಗೆ ತುಲಸಿಯ ಪೂಜೆಯನ್ನು ಭಕ್ತಿಯಿಂದ ಮಾಡುತ್ತಾನೆಯೋ ಅವನು ಪರಮಪದಕ್ಕೆ ಹೋಗುತ್ತಾನೆ.

೯. ಆದುದರಿಂದ ಸರ್ವಪ್ರಯತ್ನಗಳಿಂದಲೂ ಸರ್ವಕ್ಲೇಶವಿನಾಶಕನಾದ ಹರಿಯನ್ನು ಮಹಾ ಭಕ್ತಿಯಿಂದ ಕೂಡಿ ತುಲಸಿಯ ಕೋಮಲದಲಗಳಿಂದ ಪೂಜಿಸಬೇಕು.

೧೦. ನೆಟ್ಟ ತುಲಸಿಯು ಎಷ್ಟು ದೂರದವರೆಗೆ ಮೂಲವು ವಿಸ್ತಾರವನ್ನು ಮಾಡುವುದೋ ಅಷ್ಟು ಯುಗಸಹಸ್ರಗಳಕಾಲ (ಅದನ್ನು ನೆಟ್ಟವನು) ಬ್ರಹ್ಮಲೋಕದಲ್ಲಿ ಮಹೋನ್ನತನಾಗುತ್ತಾನೆ.

ತುಲಸೀಪತ್ರಸಂಯುಕ್ತಜಲೇ ಸ್ನಾನಂ ಚರೇದ್ಯದಿ ।
ಸರ್ವಪಾಪವಿನಿರ್ಮುಕ್ತೋ ಮೋದತೇ ವಿಷ್ಣುಮಂದಿರೇ ॥ ೧೧ ॥
ಬೃಂದಾವನಂ ಚ ಕುರುತೇ ರೋಪಣಾರ್ಥಂ ಮಹಾಮುನೇ ।
ತಾವತ್ಯೈವ ವಿಮುಕ್ತಾಽಘೋ ಬ್ರಹ್ಮಭೂಯಾಯ ಕಲ್ಪತೇ ॥ ೧೨ ॥
ತುಲಸೀಕಾನನಂ ಬ್ರಹ್ಮನ್ ಗೃಹೇ ಯಸ್ಯಾವತಿಷ್ಠತೇ ।
ತದ್ಗೃಹಂ ತೀರ್ಥಭೂತಂ ತು ನಯಾಂತಿ ಯಮಕಿಂಕರಾಃ ॥ ೧೩ ॥
ಸರ್ವಪಾಪಹರಂ ಪುಣ್ಯಂ ಕಾಮದಂ ತುಲಸೀವನಂ ।
ರೋಪಯಂತಿ ನರಾಃ ಶ್ರೇಷ್ಠಾಸ್ತೇ ನ ಪಶ್ಯಂತಿ ಭಾಸ್ಕರಿಂ ॥ ೧೪ ॥
ತುಲಸೀಕಾಷ್ಠಸಂಯುಕ್ತಂ ಗಂಧಂ ಯೋ ಧಾರಯೇನ್ನರಃ ।
ತದ್ದೇಹಂ ನ ಸ್ಪೃಶೇತ್ಪಾಪಂ ಕ್ರಿಯಮಾಣಂ ತಥೈವ ಚ ॥ ೧೫ ॥
ತುಲಸೀವಿಪಿನಚ್ಛಾಯಾ ಯತ್ರ ಚೈವ ಭವೇದ್ದ್ವಿಜ ।
ತತ್ರ ಶ್ರಾದ್ಧಂ ಪ್ರಕರ್ತವ್ಯಂ ಪಿತೄಣಾಂ ತೃಪ್ತಿಹೇತವೇ ॥ ೧೬ ॥
ಯನ್ಮುಖೇ ತುಲಸೀಪತ್ರಂ ಕರ್ಣೇ ಶಿರಸಿ ದೃಶ್ಯತೇ ।
ಯಮಸ್ತಂ ನೇಕ್ಷಿತುಂ ಶಕ್ತಃ ಕಿಮು ದೂತಾ ಭಯಂಕರಾಃ ॥ ೧೭ ॥

---

೧೧. ತುಲಸೀಪತ್ರದಿಂದ ಕೂಡಿದ ನೀರಿನಲ್ಲಿ ಸ್ನಾನಮಾಡಿದಲ್ಲಿ ಸರ್ವಪಾಪವಿಮುಕ್ತನಾಗಿ ವಿಷ್ಣುಮಂದಿರದಲ್ಲಿ ಆನಂದವನ್ನು ಹೊಂದುತ್ತಾನೆ.

೧೨. ಎಲೈ ಮಹಾಮುನಿಯೇ! ಯಾವನು ತುಲಸಿಯನ್ನು ನೆಡುವುದಕ್ಕಾಗಿ ವೃಂದಾವನವನ್ನು ಕಟ್ಟುತ್ತಾನೋ ಅವನು ಅಷ್ಟರಿಂದಲೇ ಪಾಪಗಳಿಂದ ಬಿಡುಗಡೆಹೊಂದಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಲು ಸಮರ್ಥನಾಗುತ್ತಾನೆ.

೧೩. ಅಯ್ಯಾ ಬ್ರಾಹ್ಮಣಾ! ಯಾರ ಮನೆಯಲ್ಲಿ ತುಲಸೀವನವಿರುವುದೋ ಅವನ ಮನೆಯೇ ತೀರ್ಥವಾಗುವುದು. ಯಮಕಿಂಕರರು ಅಲ್ಲಿಗೆ ಹೋಗುವುದಿಲ್ಲ.

೧೪. ಸರ್ವಪಾಪಪರಿಹಾರಕವೂ, ಪುಣ್ಯಕರವೂ ಇಷ್ಟಾರ್ಥವನ್ನು ಕೊಡತಕ್ಕುದೂ ಆದ ತಲಸೀವನವನ್ನು ನೆಡುವ ನರರು ಶ್ರೇಷ್ಠರು. ಅವರು ಭಾಸ್ಕರಪುತ್ರನಾದ ಕಾಲ (ಯಮ)ನನ್ನು ಕಾಣುವುದಿಲ್ಲ.

೧೫. ತುಲಸಿಯ ಕಾಷ್ಠದಿಂದ ತೆಗೆದ ಗಂಧವನ್ನು ಯಾವ ನರನು ಧರಿಸುವನೋ ಅವನ ದೇಹವನ್ನು ಮುಂದೆ ಮಾಡುವ ಪಾಪವು ಸಹ ಸೋಕುವುದಿಲ್ಲ.

೧೬. ಎಲೈ ದ್ವಿಜನೇ! ಎಲ್ಲಿ ತುಲಸೀವನದ ನೆರಳಿರುವುದೋ ಅಲ್ಲಿ ಪಿತೃಗಳ ತೃಪ್ತಿಗಾಗಿ ಶ್ರಾದ್ಧಮಾಡತಕ್ಕುದು.

೧೭. ಯಾರ ಮುಖದಲ್ಲಿಯೂ, ಕಿವಿಯಲ್ಲಿಯೂ, ತಲೆಯಲ್ಲಿಯೂ ತುಲಸೀಪತ್ರವು ಕಾಣುತ್ತದೆಯೋ ಅವನನ್ನು ಯಮನು ನೋಡಲು ಸಹ ಶಕ್ತನಲ್ಲವು. ಇನ್ನು ಭಯಂಕರರಾದ ಯಮದೂತರ ವಿಷಯವನ್ನು ಹೇಳುವುದೇನು?

ತುಲಸ್ಯಾ ಮಹಿಮಾಂ ಯಸ್ತು ಶೃಣುಯಾನ್ನಿತ್ಯಮಾದೃತಃ ।
ಸರ್ವಪಾಪವಿಮುಕ್ತಾತ್ಮಾ ಬ್ರಹ್ಮಲೋಕಂ ಸ ಗಚ್ಛತಿ ॥ ೧೮ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ತುಲಸ್ಯಾ ವಿಷಯಂ ಬ್ರಹ್ಮನ್ ಶ್ರವಣಾತ್ಪಾಪನಾಶನಂ ॥ ೧೯ ॥
ಪುರಾ ಕಾಶ್ಮೀರದೇಶೇ ತು ಬ್ರಾಹ್ಮಣೌ ಸಂಬಭೂವತುಃ ।
ಹರಿಮೇಧಃಸುಮೇಧಾಖ್ಯೌ ವಿಷ್ಣುಭಕ್ತಿಪರಾಯಣೌ ॥ ೨೦ ॥
ಸರ್ವಭೂತದಯಾಯುಕ್ತೌ ಸರ್ವತತ್ತ್ವಾರ್ಥವೇದಿನೌ ।
ಕದಾಚಿತ್ತೌ ದ್ವಿಜವರೌ ತೀರ್ಥಯಾತ್ರಾಪರಾಯಣೌ ॥ ೨೧ ॥
ಗಚ್ಛಂತಾವೇಕತೋ ವಿಪ್ರೌ ಕಾಂತಾರೇ ಶ್ರಮವಿಹ್ವಲೌ ।
ತುಲಸೀಕಾನನಂ ತತ್ರ ದದರ್ಶತುರರಿಂದಮೌ ॥ ೨೨ ॥
ತಯೋಃ ಸುಮೇಧಾಸ್ತದ್ದೃಷ್ಟ್ವಾ ತುಲಸೀಕಾನನಂ ಮಹತ್ ।
ಪ್ರದಕ್ಷಿಣೀಕೃತ್ಯ ತದಾ ವವಂದೇ ಭಕ್ತಿಸಂಯುತಃ ॥ ೨೩ ॥
ದೃಷ್ಟ್ವಾ ತದ್ಧರಿಮೇಧಾಸ್ತು ಉವಾಚ ಪರಯಾ ಮುದಾ ।
ಜ್ಞಾತುಂ ತುಲಸ್ಯಾ ಮಹಾತ್ಮ್ಯಂ ತತ್ಫಲಂ ಚ ಪುನಃ ಪುನಃ ॥ ೨೪ ॥

---

೧೮. ಯಾವನು ತುಲಸಿಯ ಮಹಿಮೆಯನ್ನು ನಿಯಮಪೂರ್ವಕವಾಗಿ ಕೇಳುತ್ತಾನೆಯೋ ಅವನು ಸರ್ವಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಬ್ರಹ್ಮಲೋಕವನ್ನು ಸೇರುತ್ತಾನೆ.

೧೯. ಅಯ್ಯಾ ಬ್ರಾಹ್ಮಣನೇ! ಈ ಸಂದರ್ಭದಲ್ಲಿ ತುಲಸಿಯ ವಿಷಯವಾಗಿ ಪುರಾತನವಾದ ಈ ಇತಿಹಾಸವನ್ನು ಉದಾಹರಿಸುತ್ತಾರೆ. ಇದು ಶ್ರವಣಮಾತ್ರದಿಂದಲೇ ಪಾಪನಾಶಕವಾದುದು.

೨೦. ಪೂರ್ವದಲ್ಲಿ ಕಾಶ್ಮೀರದೇಶದಲ್ಲಿ ವಿಷ್ಣುಭಕ್ತಿಪರಾಯಣರಾದ ಹರಿಮೇಧ, ಸುಮೇಧ ಎಂಬ ಇಬ್ಬರು ಬ್ರಾಹ್ಮಣರಿದ್ದರು.

೨೧–೨೨. ಅವರು ಸರ್ವಭೂತಗಳಲ್ಲಿಯೂ ದಯೆಯುಳ್ಳವರಾಗಿದ್ದರು; ಸರ್ವತತ್ತ್ವಗಳನ್ನೂ ಬಲ್ಲವರಾಗಿದ್ದರು. ಒಂದಾನೊಂದು ಸಮಯದಲ್ಲಿ ಆ ದ್ವಿಜವರ್ಯರು ತೀರ್ಥಯಾತ್ರಾಪರಾಯಣರಾಗಿ ಹೋಗುತ್ತಿದ್ದರು. ಆಗ ಒಂದು ಕಡೆ ಆ ವಿಪ್ರರಿಬ್ಬರೂ ಕಾಡಿನಲ್ಲಿ ಶ್ರಮವಿಹ್ವಲರಾಗಿ ತುಲಸಿಯ ವನವನ್ನು ಕಂಡರು.

೨೩. ಅವರಿಬ್ಬರಲ್ಲಿ ಸುಮೇಧನು ಮಹತ್ವಯುಕ್ತವಾದ ಆ ತುಲಸೀವನವನ್ನು ಕಂಡು ಭಕ್ತಿಯಿಂದ ಪ್ರದಕ್ಷಿಣೆಮಾಡಿ ನಮಸ್ಕರಿಸಿದನು.

೨೪. ಅದನ್ನು ಕಂಡು ಹರಿಮೇಧನು ಬಹು ಸಂತೋಷಗೊಂಡು ತುಲಸಿಯ ಮಾಹಾತ್ಮ್ಯೆಯನ್ನೂ ಅದರ ಫಲವನ್ನೂ ತಿಳಿದುಕೊಳ್ಳಬೇಕೆಂದು ಸುಮೇಧನನ್ನು ಪುನಃ ಪುನಃ ಕೇಳಿಕೊಂಡನು.

ಹರಿಮೇಧಾ ಉವಾಚ :—

ಕಿಮರ್ಥಂ ವಿಪ್ರ ದೇವೇಷು ತೀರ್ಥೇಷು ಚ ವ್ರತೇಷು ಚ ।
ಸ್ಥಿತೇಷು ವಿಪ್ರಮುಖ್ಯೇಷು ಪ್ರಣಾಮಂ ಕೃತವಾನಸಿ ॥ ೨೫ ॥

ಸುಮೇಧಾ ಉವಾಚ :—

ಶೃಣು ವಿಪ್ರ ಮಹಾಭಾಗ ಸಾಧು ವಾಕ್ಯಮುದೀರಿತಂ ।
ಆತಪೋ ಬಾಧತೇ ಹ್ಯಾವಾಂ ಗತ್ವೈತದ್ವಟಸನ್ನಿಧೌ ॥ ೨೬ ॥
ತಸ್ಯ ಚ್ಛಾಯಾಂ ಸಮಾಶ್ರಿತ್ಯ ವಕ್ಷ್ಯಾಮಿ ತೇ ಯಥಾರ್ಥತಃ ।
ಏವಮುಕ್ತ್ವಾ ಸುಮೇಧಾಸ್ತು ಹರಿಮೇಧೇನ ಸಂಯುತಃ ॥ ೨೭ ॥
ವಟಂ ಜಗಾಮ ಧರ್ಮಜ್ಞೋ ಮಹತ್ಕೋಟರಸಂಯುತಂ ।
ತತ್ರ ವಿಶ್ರಾಮ್ಯ ವಿಪ್ರೋಽಸೌ ಹರಿಮೇಧಮುವಾಚ ಹ ॥ ೨೮ ॥
ಶ್ರೂಯತಾಂ ವಿಪ್ರಶಾರ್ದೂಲ ತುಲಸ್ಯಾಸ್ತೂತ್ತಮಾಂ ಕಥಾಂ ।
ಪರಮೇಶಪ್ರಸಾದೇನ ಸಂಜಾತಾಯಾ ಪಯೋನಿಧೌ ॥ ೨೯ ॥
ಪುರಾ ದುರ್ವಾಸಸಃ ಶಾಪಾತ್ ಗತೈಶ್ವರ್ಯೇ ಪುರಂದರೇ ।
ಮಮಂಥುಃ ಕ್ಷೀರಜಲಧಿಂ ಬ್ರಹ್ಮಾದ್ಯಾಃ ಸಸುರಾಽಸುರಾಃ ॥ ೩೦ ॥

---

೨೫. ಹರಿಮೇಧನು ಕೇಳುತ್ತಾನೆ:—"ಎಲೈ ವಿಪ್ರನೇ! ದೇವತೆಗಳೂ ತೀರ್ಥಗಳೂ ವ್ರತಗಳೂ ವಿಪ್ರಶ್ರೇಷ್ಠರೂ ಇರುತ್ತಿರಲಾಗಿ ಏತಕ್ಕಾಗಿ ನೀನು ಈ ತುಲಸೀವನವನ್ನು ಪ್ರಣಾಮಮಾಡಿದೆ?"

೨೬–೨೮. ಸುಮೇಧನು ಹೇಳುತ್ತಾನೆ:—"ಕೇಳು, ವಿಪ್ರಾ ಕೇಳು; ಎಲೈ ಮಹಾಭಾಗನೇ! ಒಳ್ಳೆಯ ಮಾತನ್ನು ಆಡಿದ್ದೀಯೆ. ಬಿಸಿಲು ನಮ್ಮಿಬ್ಬರನ್ನೂ ಬಾಧಿಸುತ್ತಿದೆ. ಈ ವಟವೃಕ್ಷದ ಬಳಿ ಹೋಗಿ ಅದರ ನೆರಳನ್ನಾಶ್ರಯಿಸಿ ಅಲ್ಲಿ ನಿನಗೆ ಇದ್ದ ಸಂಗತಿಯನ್ನು ತಿಳಿಸುತ್ತೇನೆ." ಹೀಗೆಂದು ನುಡಿದು ಧರ್ಮಜ್ಞನಾದ ಸುಮೇಧನು ಹರಿಮೇಧನೊಡಗೂಡಿ ದೊಡ್ಡ ದೊಡ್ಡ ಪೊಟರೆಗಳಿಂದ ಕೂಡಿದ ಆ ವಟವೃಕ್ಷದ ಬಳಿ ಹೋದನು. ಅಲ್ಲಿ ವಿಶ್ರಮಿಸಿಕೊಂಡು ಆ ವಿಪ್ರನು ಹರಿಮೇಧನನ್ನು ಕುರಿತು ಹೇಳತೊಡಗಿದನು.

೨೯. "ಎಲೈ ವಿಪ್ರಶ್ರೇಷ್ಠನೇ! ತುಲಸಿಯ ಉತ್ತಮವಾದ ಕಥೆಯನ್ನು ಲಾಲಿಸು. ತುಲಸಿಯು ಪರಮೇಶ್ವರನ ಪ್ರಸಾದದಿಂದ (ಕ್ಷೀರ)ಸಮುದ್ರದಲ್ಲಿ ಜನಿಸಿತು.

೩೦. ಪೂರ್ವದಲ್ಲಿ ದುರ್ವಾಸನ ಶಾಪದಿಂದ ಇಂದ್ರನು ಐಶ್ವರ್ಯಹೀನನಾಗಲು ಬ್ರಹ್ಮಾದಿಗಳು ಸುರಾಸುರರಿಂದೊಡಗೂಡಿ ಕ್ಷೀರಸಮುದ್ರವನ್ನು ಕಡೆದರು.

ಐರಾವತಃ ಕಲ್ಪತರುಶ್ಚಂದ್ರಮಾಃ ಕಮಲಾ ತಥಾ ।
ಉಚ್ಚೈಃಶ್ರವಾಃ ಕೌಸ್ತುಭಶ್ಚ ತಥಾ ಧನ್ವಂತರಿರ್ಹರಿಃ ॥ ೩೧ ॥
ಹರಿತಕ್ಯಾದಯಶ್ಚಾಪಿ ದಿವ್ಯಾ ಓಷಧಯಸ್ತಥಾ ।
ಅಜಾಯಂತ ದ್ವಿಜಶ್ರೇಷ್ಠ ಲೋಕಶ್ರೇಯೋವಿಧಾಯಕಾಃ ॥ ೩೨ ॥
ತತಃ ಪೀಯೂಷಕಲಶಮಜರಾಮರದಾಯಕಂ ।
ಕರಾಭ್ಯಾಂ ಕಲಶಂ ವಿಷ್ಣುರ್ಧಾರಿಯನ್ಸುತಲಂ ಪರಂ ।
ಅವೇಕ್ಷ್ಯ ಮನಸಾ ಸದ್ಯಃ ಪರಾಂ ನಿರ್ವೃತಿಮಾಪ ಹ ॥ ೩೩ ॥
ತಸ್ಮಿನ್ ಪೀಯೂಷಕಲಶ ಆನಂದಾಸ್ರೋದಬಂದವಃ ।
ವ್ಯಪತಂಸ್ತುಲಸೀ ಸದ್ಯಃ ಸಮುಜಾಯತ ಮಂಡಲಾ ॥ ೩೪ ॥
ಸರ್ವಲಕ್ಷಣಸಂಪನ್ನಾ ಸರ್ವಾಭರಣಭೂಷಿತಾ ॥ ೩೫ ॥
ತತ್ರೋತ್ಪನ್ನಾಂ ತಥಾ ಲಕ್ಷ್ಮೀಂ ತುಲಸೀಂ ಚ ದದುರ್ಹರೇಃ ।
ದೇವಾ ಬ್ರಹ್ಮಾದಯಸ್ತೇ ಹಿ ಜಗೃಹೇ ಭಗವಾನ್ಹರಿಃ ॥ ೩೬ ॥
ತತೋಽತೀವಪ್ರಿಯಕರಾ ತುಲಸೀ ಜಗತಾಂ ಪತೇಃ ॥ ೩೭ ॥
ಸಾ ತು ದೇವಗಣೈಃ ಸರ್ವೈಃ ವಿಷ್ಣುವತ್ಪೂಜ್ಯತೇ ಪ್ರಿಯಾ ।
ನಾರಾಯಣೋ ಜಗತ್ತ್ರಾತಾ ತುಲಸೀ ತಸ್ಯ ವಲ್ಲಭಾ ॥ ೩೮ ॥

---

೩೧–೩೨. ಐರಾವತ, ಕಲ್ಪವೃಕ್ಷ, ಚಂದ್ರ, ಲಕ್ಷ್ಮಿ, ಉಚ್ಚೈಃಶ್ರವಸ್ಸು, ಕೌಸ್ತುಭ, ಧನ್ವಂತರಿ, ಹರಿ, ಹರೀತಕೀ ಮೊದಲಾದ ದಿವ್ಯೌಷಧಿಗಳು, ಮೊದಲಾದ ಲೋಕಕ್ಕೆ ಶ್ರೇಯಸ್ಸಾಧಕಗಳಾದ ವಸ್ತುಗಳೆಲ್ಲವೂ ಅಲ್ಲಿ ಹುಟ್ಟಿದವು.

೩೩. ಬಳಿಕ ಅಜರಾಮರತ್ವವನ್ನು ಕೊಡುವ ಅಮೃತಕಲಶವು ಹುಟ್ಟಿತು. ವಿಷ್ಣುವು ಒಳ್ಳೆಯ ತಲವುಳ್ಳ ಶ್ರೇಷ್ಠವಾದ ಆ ಕಲಶವನ್ನು ಕೈಗಳಲ್ಲಿ ಹಿಡಿದು ನೋಡಿ ಮನಸ್ಸಿನಲ್ಲಿ ತಕ್ಷಣವೇ ಬಹು ಸಂತುಷ್ಟಿಯನ್ನು ಹೊಂದಿದನು.

೩೪–೩೫. ಆ ಅಮೃತಕಲಶದಲ್ಲಿ ಮಹಾವಿಷ್ಣುವಿನ ಆನಂದಾಶ್ರುಬಿಂದುಗಳು ಬಿದ್ದವು. ತಕ್ಷಣವೇ ಸರ್ವಲಕ್ಷಣಸಂಪನ್ನಳೂ, ಸರ್ವಾಭರಣಭೂಷಿತಳೂ ಮಂಡಲಾಕೃತಿಯೂ ಆದ ತುಲಸಿಯು ಜನಿಸಿದಳು.

೩೬–೩೭. ಬ್ರಹ್ಮಾದಿ ದೇವತೆಗಳು ಅಲ್ಲಿ ಹುಟ್ಟಿದ ಲಕ್ಷ್ಮಿಯನ್ನೂ ತುಲಸಿಯನ್ನೂ ಹರಿಗೆ ಕೊಟ್ಟರು. ಭಗವಂತನಾದ ಶ್ರೀಹರಿಯು ಅವರೀರ್ವರನ್ನೂ ಪರಿಗ್ರಹಿಸಿದನು. ಆದುದರಿಂದ ತುಲಸಿಯು ಜಗತ್ಪತಿಯಾದ ಶ್ರೀಹರಿಗೆ ಬಹು ಪ್ರಿಯಳಾಗಿರುವಳು.

೩೮. ಆ ತುಲಸಿಯು ಸರ್ವದೇವಗಣಗಳಿಂದಲೂ ವಿಷ್ಣುವಿನಂತೆಯೇ ಪೂಜಿಸಲ್ಪಡುತ್ತಾಳೆ. ನಾರಾಯಣನು ಜಗದ್ರಕ್ಷಕನು. ತುಲಸಿಯು ಆತನಿಗೆ ವಲ್ಲಭೆಯು.

ತಸ್ಮಾತ್ತಸ್ಯಾ ನಮಸ್ಕಾರೋ ಮಯಾ ವಿಪ್ರ ಕೃತಸ್ತತಃ ।
ಇತ್ಯೇವಂ ವದತಸ್ತಸ್ಯ ಸುಮೇಧಸ್ಯ ಮಹಾತ್ಮನಃ ॥ ೩೯ ॥
ಆರಾದದೃಶ್ಯತ ಮಹದ್ವಿಮಾನಂ ಸೂರ್ಯವರ್ಚಸಂ ।
ತದಾನೀಂ ವಟವೃಕ್ಷಸ್ತು ಪಪಾತ ಪುರತೋ ಮುನೇಃ ॥ ೪೦ ॥
ತತ್ರೈವ ತಸ್ಮಾದ್ವೃಕ್ಷಾಚ್ಚ ಪುರುಷೌ ದ್ವೌ ವಿನಿರ್ಗತೌ ।
ದ್ಯೋತಯಂತೌ ದಿಶಃ ಸರ್ವಾಃ ತೇಜಸಾ ಸೂರ್ಯಸನ್ನಿಭೌ ॥ ೪೧ ॥
ಪ್ರಮಣಾಂ ಚಕ್ರತುಸ್ತೌ ಹಿ ಹರಿಮೇಧಸುಮೇಧಯೋಃ ।
ಹರಿಮೇಧಸುಮೇಧೌ ತೌ ತೌ ದೃಷ್ಟ್ವಾ ಭಯವಿಹ್ವಲೌ ॥ ೪೨ ॥
ಊಚತುರ್ವಿಸ್ಮಯಾವಿಷ್ಟೌ ತಾವುಭೌ ದೇವಸನ್ನಿಭೌ ॥ ೪೩ ॥

ಹರಿಮೇಧ ಸುಮೇಧಸಾ ವೂಚತುಃ :—

ಯುವಾಂ ಕೌ ದೇವಸಂಕಾಶೌ ಭವಂತೌ ಸರ್ವಮಂಗಲೌ ।
ಮಂದಾರಮಾಲಾಂ ತರುಣಾಂ ಧಾರಯಂತೌ ತಥಾಽಮಲೌ ।
ನಮಸ್ಕಾರ್ಯೌ ತಥಾವಾಭ್ಯಾಂ ಪೂಜ್ಯೌ ಚ ಸುರರೂಪಿಣೌ ॥ ೪೪ ॥
ಇತ್ಯುಕ್ತೌ ಬ್ರಾಹ್ಮಣಾಭ್ಯಾಂ ತಾವೂಚತುರ್ವೃಕ್ಷನಿರ್ಗತೌ ।
ಯುವಾಮೇವ ಪಿತಾ ಮಾತಾ ಆವಯೋಶ್ಚ ತಥಾ ಗುರುಃ ॥ ೪೫ ॥

---

೩೯–೪೦. ಎಲೈ ವಿಪ್ರನೇ! ಆದುದರಿಂದ ನಾನು ತುಲಸಿಗೆ ನಮಸ್ಕಾರ ಮಾಡಿದೆನು.'' ಈ ರೀತಿಯಾಗಿ ಹೇಳಿದ ಮಹಾತ್ಮನಾದ ಆ ಸುಮೇಧನ ಸಮೀಪದಲ್ಲಿ ಸೂರ್ಯನಂತೆ ಕಾಂತಿಯುಳ್ಳ ವಿಮಾನವೊಂದು ಕಾಣಿಸಿಕೊಂಡಿತು. ಎಲೈ ಮುನಿಯೇ! ಆಗ, ಆ ವಟವೃಕ್ಷವು ಅವರ ಎದುರಿಗೇ ಬಿದ್ದುಬಿಟ್ಟಿತು.

೪೧. ಹಾಗೆಯೇ ಆ ವೃಕ್ಷದಿಂದ ಇಬ್ಬರು ಪುರುಷರು ಹೊರಬಂದರು. ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನರಾಗಿ ಅವರು ತಮ್ಮ ಕಾಂತಿಯಿಂದ ಸಮಸ್ತ ದಿಕ್ಕುಗಳನ್ನೂ ಬೆಳಗುತ್ತಿದ್ದರು.

೪೨–೪೩. ಅವರಿಬ್ಬರೂ ಹರಿಮೇಧ ಸುಮೇಧರಿಗೆ ಪ್ರಣಾಮಮಾಡಿದರು. ಹರಿಮೇಧ ಸುಮೇಧರಿಬ್ಬರೂ ಅವರನ್ನು ಕಂಡು ಭಯವಿಹ್ವಲರಾಗಿ, ವಿಸ್ಮಯಾವಿಷ್ಟರಾಗಿ ದೇವಸಮಾನರಾದ ಅವರನ್ನು ಕುರಿತು ಹೀಗೆ ನುಡಿದರು.

೪೪. ಹರಿಮೇಧ ಸಮೇಧರಿಂತೆಂದರು :—'' ಅಯ್ಯಾ! ದೇವತೆಗಳಂತೆ ಬೆಳಗುತ್ತಿರುವ ನೀವು ಯಾರು? ಎಳೆಯದಾದ ಮಂದಾರಮಾಲೆಯನ್ನು ಧರಿಸಿದ್ದೀರಿ; ಆದ್ದರಿಂದ ನೀವು ಅಮರರೇ ಸರಿ. ಸುರರೂಪಿಗಳಾದ ನೀವು ನಮಗೆ ಪೂಜ್ಯರು; ನೀವು ನಮಸ್ಕರಿಸಲರ್ಹರಾದವರು.''

೪೫–೪೬. ಹೀಗೆ ಬ್ರಾಹ್ಮಣರಿಂದ ಸಂಬೋಧಿಸಲ್ಪಟ್ಟವರಾಗಿ ಆ ಮರದಿಂದ ಹೊರಬಂದವರು ಇಂತು ನುಡಿದರು:—'' ನೀವೇ ನಮಗೆ ತಾಯಿತಂದೆಗಳು;

**ಬಂಧ್ವಾದಯಸ್ತಥಾ ಚೈವ ಯೂಯಮೇವ ನ ಸಂಶಯಃ ।**
**ಅಹಂ ತು ದೇವಲೋಕಸ್ಥ ಅಸ್ತೀಕೋ ನಾಮ ನಾಮತಃ ॥ ೪೬ ॥**

**ಜ್ಯೇಷ್ಠ ಉವಾಚ :—**

**ಅಪ್ಸರೋಗಣಸಂವೀತಃ ಕದಾಚಿನ್ನಂದನಂ ವನಂ ।**
**ಕ್ರೀಡಾರ್ಥಮಗಮಂ ಚಾದ್ರೌ ವಿಷಯಾಸಕ್ತಚೇತನಃ ॥ ೪೭ ॥**
**ರೇಭಿರೇ ದೇವವನಿತಾ ಯಥಾ ಕಾಮಂ ಮಯಾ ಸಹ ।**
**ಮುಕ್ತಾಮಲ್ಲಿಕಮಾಲ್ಯಾನಿ ನಿಪೇತುಸ್ತಾನಿ ಯೋಷಿತಾಂ ॥ ೪೮ ॥**
**ತಪತೋ ರೋಮಶಸ್ಯೈವ ತದ್ದೃಷ್ಟ್ವಾ ಕುಪಿತೋ ಮುನಿಃ ।**
**ಯೋಷಿತಾಂ ನಾಽಪರಾಧೋಽಯಂ ಯಾಸಾಂ ವೈ ಪರತಂತ್ರತಾ ॥ ೪೯ ॥**
**ಅಯಮೇವ ದುರಾಚಾರಃ ಶಾಪಾರ್ಹ ಇತಿಚಾಽಬ್ರವೀತ್ ।**
**ತ್ವಂ ಬ್ರಹ್ಮರಾಕ್ಷಸೋ ಭೂತ್ವಾ ವಟವೃಕ್ಷೇ ಚರೇತಿ ಮಾಂ ॥ ೫೦ ॥**
**ಪ್ರಸಾದಿತೋ ಮಯಾ ಸೋಽಥ ವಿಶಾಪಮಪಿ ದತ್ತವಾನ್ ।**
**ತುಲಸೀಪತ್ರಮಾಹಾತ್ಮ್ಯಂ ವಿಷ್ಣೋರ್ನಾಮ ತಥಾ ದ್ವಿಜಾತ್ ॥ ೫೧ ॥**
**ಯದಾ ಶೃಣೋಷಿ ಸದ್ಯಸ್ತ್ವಂ ವಿಮುಕ್ತಿಂ ಯಾಸ್ಯಸೇ ಪರಾಂ ।**
**ಇತಿ ಶಪ್ತಸ್ತು ಮುನಿನಾ ಚಿರಕಾಲಸುದುಃಖಿತಃ ॥ ೫೨ ॥**

---

ನೀವೇ ಗುರುಗಳು. ನಮಗೆ ಬಂಧು ಮೊದಲಾದವರೂ ನೀವೇ. ಇದರಲ್ಲಿ ಸಂಶಯವಿಲ್ಲವು." ಆಗ ಅವರಲ್ಲಿ ಹಿರಿಯನಿಂತೆಂದನು :—"ನಾನು ದೇವಲೋಕದಲ್ಲಿ ಅಸ್ತೀಕನೆಂಬುವನು.

೪೭. ನಾನೊಮ್ಮೆ ಅಪ್ಸರೆಯರ ಗುಂಪಿನಿಂದ ಸುತ್ತುವರಿಯಲ್ಪಟ್ಟು ವಿಷಯಾಸಕ್ತಚೇತನನಾಗಿ ನಂದನವನಕ್ಕೆ ಕ್ರೀಡಾರ್ಥವಾಗಿ ಹೋದೆನು.

೪೮–೫೦. ನನ್ನೊಡನಿದ್ದ ದೇವವನಿತೆಯರನ್ನು ಇಷ್ಟಬಂದಂತೆಲ್ಲ ಆಲಿಂಗಿಸಿಕೊಂಡೆನು. ಆ ಹೆಂಗಸರ ಮುತ್ತಿನ ಸರಗಳೂ ಮಲ್ಲಿಗೆ ಮೊದಲಾದ ಮಾಲೆಗಳೂ ಅಲ್ಲಿ ತಪಸ್ಸುಮಾಡುತ್ತಿದ್ದ ರೋಮಶಋಷಿಯ ಮೇಲೆ ಬಿದ್ದವು. ಅದನ್ನು ಕಂಡು ಮುನಿಯು ಕೋಪಗೊಂಡನು. ಕುಪಿತನಾಗಿ 'ಈ ಅಪರಾಧವು ಹೆಂಗಸರದಲ್ಲವು. ಅವರು ಪರತಂತ್ರರಷ್ಟೆ. ಈ ದುರಾಚಾರಿಯೇ ಶಾಪಕ್ಕೆ ಅರ್ಹನಾದವನು'—ಎಂದುಕೊಂಡು, ನನ್ನನ್ನು ಕುರಿತು, 'ನೀನು ಬ್ರಹ್ಮರಾಕ್ಷಸನಾಗಿ ವಟವೃಕ್ಷದಲ್ಲಿರು' ಎಂದು ನುಡಿದನು.

೫೧–೫೨. ನಾನು ಮನ್ನಿಸಬೇಕೆಂದು ಬೇಡಿಕೊಳ್ಳಲು 'ತುಲಸೀಪತ್ರಮಾಹಾತ್ಮ್ಯೆಯನ್ನೂ, ವಿಷ್ಣುನಾಮವನ್ನೂ ದ್ವಿಜನಿಂದ ಯಾವಾಗ ನೀನು ಕೇಳುತ್ತೀಯೋ ಆಗಲೆ ಶಾಪದಿಂದ ಬಿಡುಗಡೆ ಹೊಂದುತ್ತೀಯೆ' ಎಂದು ವಿಶಾಪವನ್ನೂ ಕೊಟ್ಟನು. ಮುನಿಯಿಂದ ಈ ರೀತಿ ಶಾಪವನ್ನು ಹೊಂದಿ ಬಹು

ವಸಾಮ್ಯತ್ರ ವಟೇ ದೈವಾತ್ ಭವದ್ದರ್ಶನತೋ ಧ್ರುವಂ ।
ಮುಕ್ತಿರ್ಜಾತಾ ವಿಪ್ರಶಾಪಾತ್ ದ್ವಿತೀಯಸ್ಯ ಕಥಾಂ ಶೃಣು ॥ ೫೩ ॥
ಅಯಂ ಮುನಿವರಃ ಪೂರ್ವಂ ಗುರುಶುಶ್ರೂಷಣೇ ರತಃ ।
ಗುರೋರಾಜ್ಞಾಮನಾದೃತ್ಯ ಬ್ರಹ್ಮರಾಕ್ಷಸತಾಂ ಗತಃ ॥ ೫೪ ॥
ಯುಷ್ಮತ್ಪ್ರಸಾದಾದಧುನಾ ಬ್ರಹ್ಮಶಾಪಾದ್ವಿಮೋಚಿತಃ ।
ತೀರ್ಥಯಾತ್ರಾಫಲಂ ಚೈವ ಯುವಾಭ್ಯಾಮಿಹ ಸಾಧಿತಂ ॥ ೫೫ ॥
ಉತ್ತರೋತ್ತರಪುಣ್ಯಾನಿ ವರ್ಧಂತೇ ಚ ದಿನೇ ದಿನೇ ।
ಇತ್ಯುಕ್ತ್ವಾ ತೌ ಮುನಿವರೌ ಪ್ರಣಮ್ಯ ಚ ಪುನಃ ಪುನಃ ॥ ೫೬ ॥
ತಾವನುಜ್ಞಾಪ್ಯ ತೌ ಧಾಮ ಜಗ್ಮತುಃ ಪರಯಾ ಮುದಾ ।
ತತಸ್ತೌ ತೀರ್ಥಯಾತ್ರಾರ್ಥಂ ಪರಮೌ ಮುನಿಪುಂಗವೌ ॥ ೫೭ ॥
ಶಂಸಂತೌ ತುಲಸೀಂ ಪುಣ್ಯಾಂ ಜಗ್ಮತುರ್ಮುನಿಪುಂಗವ ।
ಏವಂ ನಾರದ ಮಾಹಾತ್ಮ್ಯಂ ತುಲಸ್ಯಾಃ ಕೋಽನು ವರ್ಣಯೇತ್ ॥ ೫೮ ॥
ತಸ್ಮಾನ್ನಾರದ ಮಾಸೇಽಸ್ಮಿನ್ ಕಾರ್ತಿಕೇ ಹರಿತುಷ್ಟಿದೇ ।
ಕರ್ತವ್ಯಾ ತುಲಸೀಪೂಜಾ ನಾತ್ರ ಕಾರ್ಯಾ ವಿಚಾರಣಾ ॥ ೫೯ ॥

---

ದುಃಖಿತನಾಗಿ ಚಿರಕಾಲ ಈ ವಟವೃಕ್ಷದಲ್ಲಿ ವಾಸಿಸುತ್ತಿದ್ದೆನು. ದೈವಯೋಗದಿಂದ ನಿನ್ನ ದರ್ಶನವಾಗಿ ಆ ವಿಪ್ರಶಾಪದಿಂದ ಶಾಶ್ವತವಾದ ಮುಕ್ತಿಯುಂಟಾಯಿತು. ಇನ್ನು ಎರಡನೆಯವನ ಕಥೆಯನ್ನು ಲಾಲಿಸಿರಿ.

೫೪. ಈತನು ಪೂರ್ವದಲ್ಲಿ ಒಬ್ಬ ಮುನಿಶ್ರೇಷ್ಠನು; ಗುರುಶುಶ್ರೂಷೆಯಲ್ಲಿ ನಿರತನಾಗಿದ್ದನು. ಆಗ ಗುರುವಿನ ಆಜ್ಞೆಯನ್ನು ಕಡೆಗಣಿಸಿ ಬ್ರಹ್ಮರಾಕ್ಷಸತ್ವವನ್ನು ಹೊಂದಿದನು.

೫೫. ನಿಮ್ಮ ಪ್ರಸಾದದಿಂದ ಈಗ ಬ್ರಹ್ಮಶಾಪದಿಂದ ಬಿಡುಗಡೆಹೊಂದಿದನು. ನೀವು ಕೂಡ ಈಗ ತೀರ್ಥಯಾತ್ರೆಯ ಫಲವನ್ನು ಸಾಧಿಸಿಕೊಂಡಿರಿ.

೫೬–೫೯. ನಿಮಗೆ ದಿನೇ ದಿನೇ ಉತ್ತರೋತ್ತರವಾಗಿ ಪುಣ್ಯಗಳು ವೃದ್ಧಿಹೊಂದುತ್ತವೆ.'' ಹೀಗೆಂದು ನುಡಿದು ಆ ಮುನಿವರರಿಗೆ ಪುನಃ ಪುನಃ ಪ್ರಣಾಮ ಮಾಡುತ್ತಾ ಅವರಿಬ್ಬರನ್ನೂ ಅನುಮತಿಗೊಳಿಸಿ ಬಹು ಸಂತೋಷದಿಂದ ತಮ್ಮ ದಿವ್ಯಧಾಮಕ್ಕೆ ಹೊರಟುಹೋದರು. ಬಳಿಕ ಶ್ರೇಷ್ಠರಾದ ಆ ಮುನಿಪುಂಗವರಿಬ್ಬರೂ ಪುಣ್ಯಕರವಾದ ತುಲಸಿಯನ್ನು ಪ್ರಶಂಸೆಮಾಡುತ್ತಾ ತೀರ್ಥಯಾತ್ರೆಗಾಗಿ ಹೊರಟುಹೋದರು. ನಾರದಾ! ತುಲಸಿಯ ಮಾಹಾತ್ಮ್ಯವಿಂತಹುದು. ಇದನ್ನು ಯಾವನು ತಾನೇ ವರ್ಣಿಸಿಯಾನು? ಆದ್ದರಿಂದ ಹರಿಗೆ ಸಂತೋಷವನ್ನುಂಟುಮಾಡುವ ಈ ಕಾರ್ತಿಕಮಾಸದಲ್ಲಿ ತುಲಸೀಪೂಜೆಯನ್ನು ಮಾಡತಕ್ಕುದು. ಈ ವಿಷಯದಲ್ಲಿ ವಿಚಾರ ಮಾಡಬೇಕಾಗಿಲ್ಲವು.

**ಏವಮಂಗ ವ್ರತಾನ್ಯೇವ ಪ್ರೋಕ್ತಾನಿ ಮುನಿಸತ್ತಮ ।**
**ಉಪಾಂಗಾನಿ ಪ್ರವಕ್ಷ್ಯಾಮಿ ವಾಲಖಿಲ್ಯೋದಿತಾನಿ ಚ ॥ ೬೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ತುಲಸೀಮಾಹಾತ್ಮ್ಯ ವರ್ಣನಂ" ನಾಮಾಷ್ಟಮೋಽಧ್ಯಾಯಃ**

---

೬೦. ಎಲೈ ಮುನಿಶ್ರೇಷ್ಠನೇ! ಹೀಗೆ ನಿನಗೆ ಕಾರ್ತಿಕಮಾಸದ ಅಂಗ ವ್ರತಗಳನ್ನು ತಿಳಿಯಹೇಳಿದೆನು. ಇನ್ನುಮುಂದೆ ವಾಲಖಿಲ್ಯರಿಂದ ಹೇಳಲ್ಪಟ್ಟ ಉಪಾಂಗವ್ರತಗಳನ್ನು ಹೇಳುತ್ತೇನೆ; ಕೇಳು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ತುಲಸೀಮಾಹಾತ್ಮ್ಯವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

**ವತ್ಸದ್ವಾದಶೀ ಯಮತ್ರಯೋದಶೀ ನರಕಚತುರ್ದಶೀ ದೀಪಾವಲೀ ಕೃತ್ಯವರ್ಣನಂ**

ವಾಲಖಿಲ್ಯಾ ಊಚುಃ:—

ಕೃಷ್ಣಃ ಪ್ರೋವಾಚ ಧರ್ಮಾಯ ದ್ವಾದಶೀಂ ವತ್ಸಸಂಹಿತಾಂ ।
ಗೋಧೂಲಿಕಾಲಸಂಯುಕ್ತಾ ದ್ವಾದಶೀ ವತ್ಸಪೂಜನೇ ॥ ೧ ॥
ವತ್ಸಪೂಜಾ ವಟೇ ಚೈವ ಕರ್ತವ್ಯಾ ಪ್ರಥಮೇಽಹನಿ ।
ಸವತ್ಸಾಂ ತುಲ್ಯವರ್ಣಾಂ ಚ ಶಾಲಿನೀಂ ಗಾಂ ಪಯಸ್ವಿನೀಂ ।
ಚಂದನಾದಿಭಿರಾಲಿಪ್ಯ ಪುಷ್ಪಮಾಲಾಭಿರರ್ಚಯೇತ್ ॥ ೨ ॥
ತದ್ದಿನೇ ತೈಲಪಕ್ವಂ ಚ ಸ್ಥಾಲೀಪಕ್ವಂ ಯುಧಿಷ್ಠಿರ ।
ಗೋಕ್ಷೀರಂ ಗೋಘೃತಂ ಚೈವ ದಧಿ ಕ್ಷೀರಂ ಚ ವರ್ಜಯೇತ್ ॥ ೩ ॥
ದಿನಾಂತೇ ಸೂರ್ಯಬಿಂಬಾರ್ಧಾತ್ ಉಭಯತ್ರ ಘಟೀದಲಂ ।
ತತೋ ನೀರಾಜನಂ ಕಾರ್ಯಂ ನಿರೀಕ್ಷೇಚ್ಚ ಶುಭಾಽಶುಭಂ ॥ ೪ ॥
ನಾನಾದೀಪಾನ್ಪ್ರಕಲ್ಪ್ಯಾದೌ ಸ್ವರ್ಣಪಾತ್ರಾದಿಸಂಸ್ಥಿತಾನ್ ।
ನೀರಾಜಯೇದ್ದೀಪಪೂರ್ವಂ ನಿರೀಕ್ಷೇತ ಶುಭಾಽಶುಭಂ ॥ ೫ ॥

---

### ಕನ್ನಡದ ಅನುವಾದ

**ವತ್ಸದ್ವಾದಶಿ, ಯಮತ್ರಯೋದಶಿ, ನರಕಚತುರ್ದಶಿ ದೀಪಾವಲೀ ಕೃತ್ಯವರ್ಣನ**

೧. ವಾಲಖಿಲ್ಯರು ಹೇಳುತ್ತಾರೆ:—"ಶ್ರೀಕೃಷ್ಣನು ಧರ್ಮ(ರಾಜ)ನಿಗೆ ವತ್ಸವೆಂಬ ಹೆಸರನ್ನು ಪಡೆದ ದ್ವಾದಶಿಯ ವಿಚಾರವನ್ನು ತಿಳಿಸಿದನು. ಗೋಧೂಲಿಯ ಕಾಲದಿಂದ ಕೂಡಿದ ದ್ವಾದಶಿಯು ವತ್ಸಪೂಜೆಗೆ ತಕ್ಕದ್ದು.

೨. ವತ್ಸಪೂಜೆಯನ್ನು ವಟವೃಕ್ಷದ ಕೆಳಗೆ ಮಾಡತಕ್ಕದು. ಮೊದಲನೆಯ ದಿನ ಕರುವುಳ್ಳದ್ದೂ, ಕರುವಿಗೆ ಸಮಾನವಾದ ವರ್ಣವುಳ್ಳದ್ದೂ, ಹಾಲು ಕರೆಯುತ್ತಿರುವುದೂ ಆದ ಶಾಲಿನೀ ಜಾತಿಯ ಗೋವನ್ನು ಚಂದನಾದಿಗಳಿಂದ ಚೆನ್ನಾಗಿ ಲೇಪಿಸಿ ಹೂಮಾಲೆಗಳಿಂದ ಅರ್ಚಿಸಬೇಕು.

೩-೪. ಎಲೈ ಯುಧಿಷ್ಠಿರನೇ! ಆ ದಿನ ಎಣ್ಣೆಯಲ್ಲಿ ಬೇಯಿಸಿದ್ದನ್ನೂ ಸ್ಥಾಲಿಯಲ್ಲಿ ಬೇಯಿಸಿದ್ದನ್ನೂ ಹಸುವಿನ ತುಪ್ಪವನ್ನೂ, ಹಾಲು ಮೊಸರುಗಳನ್ನೂ ವರ್ಜಿಸಬೇಕು. ದಿನದ ಕೊನೆಯಲ್ಲಿ ಸೂರ್ಯಬಿಂಬದ ಅರ್ಧಭಾಗದ ಎರಡು ಕಡೆಗಳಲ್ಲೂ ಬಳಿಕ ನೀರಾಜನವನ್ನೆತ್ತಬೇಕು; ಮತ್ತು ಶುಭಾಶುಭಗಳನ್ನು ನೋಡಬೇಕು.

೫. ಆದಿಯಲ್ಲಿ ಚಿನ್ನದ ಪಾತ್ರೆ ಮೊದಲಾದವುಗಳಲ್ಲಿ ನಾನಾ ಬಗೆಯ

ಲಾಪಯಿತ್ವಾ ಸರ್ವದೀಪಾನ್ ಉತ್ತರಾಭಿಮುಖಾನ್ನ್ಯಸೇತ್ ।
ಮುಖ್ಯಾ ದೀಪಾ ನವ ಪ್ರೋಕ್ತಾ ಅನ್ಯಾನಪಿ ಚ ಕಲ್ಪಯೇತ್ ॥ ೬ ॥
ಜ್ವಾಲಾ ಚೇದ್ದಕ್ಷಿಣಾ ಸಂಸ್ಥಾ ಸತೇಜಸ್ಕಾ ಶಿಖಾನ್ವಿತಾ ।
ಸ್ಥಿರಾ ಚೇತ್ಸೌಖ್ಯದಾ ಪ್ರೋಕ್ತಾ ವಿಪರೀತಾ ತು ದುಃಖದಾ ॥ ೭ ॥
ಕಾರ್ತಿಕೇ ಕೃಷ್ಣಪಕ್ಷೇ ತು ದ್ವಾದಶ್ಯಾದಿಷು ಪಂಚಸು ।
ತಿಥಿಷೂಕ್ತಃ ಪೂರ್ವರಾತ್ರೇ ನೃಣಾಂ ನೀರಾಜನಾವಿಧಿಃ ॥ ೮ ॥
ಪಕ್ಷಂ ಸಂಸೂಚಯತ್ಯಾದಿಃ ದ್ವಿತೀಯೋ ಮಾಸಮೇವ ಚ ।
ತೃತೀಯೋ ಋತುಮೇವೇಹ ಚತುರ್ಥಸ್ತ್ವಯನಂ ತಥಾ ।
ವರ್ಷಂ ತು ಪಂಚಮೋ ದೀಪಃ ಶುಭಾಶುಭಂ ವಿನಿರ್ಣಯೇತ್ ॥ ೯ ॥
ಸೂರ್ಯಾಂಶಸಂಭವಾ ದೀಪಾ ಅಂಧಕಾರವಿನಾಶಕಾಃ ।
ತ್ರಿಕಾಲೇ ಮಾಂ ದೀಪಯಂತು ದಿಶಂತು ಚ ಶುಭಾಽಶುಭಂ ॥ ೧೦ ॥
ಅಭಿಮಂತ್ರ್ಯ ಚ ಮಂತ್ರೇಣ ತತೋ ನೀರಾಜಯೇತ್ಕ್ರಮಾತ್ ॥ ೧೧ ॥

---

ದೀಪಗಳನ್ನು ಕಲ್ಪಿಸಿ ದೀಪಪೂರ್ವಕವಾಗಿ ನೀರಾಜನಮಾಡಬೇಕು. ಬಳಿಕ ಶುಭಾಶುಭಗಳನ್ನು ನೋಡಬೇಕು.

೬. ಎಲ್ಲ ದೀಪಗಳನ್ನೂ ಹೊತ್ತಿಸಿ ಉತ್ತರಾಭಿಮುಖವಾಗಿ ಇಡಬೇಕು. ಮುಖ್ಯದೀಪಗಳು ಒಂಬತ್ತೆಂದು ಹೇಳಿದೆ. ಉಳಿದವನ್ನು ಕಲ್ಪಿಸಬೇಕು.

೭. ದೀಪದ ಉರಿಯು ತೇಜಸ್ಸುಳ್ಳುದೂ ಶಿಖೆಯಿಂದ ಕೂಡಿದ್ದೂ ಸ್ಥಿರವೂ ಆಗಿದ್ದರೆ ಸುಖವನ್ನುಂಟುಮಾಡುತ್ತದೆ. ಇದಕ್ಕೆ ವಿಪರೀತವಾದರೆ ದುಃಖವನ್ನುಂಟುಮಾಡುತ್ತದೆ.

೮. ಕಾರ್ತಿಕ ಕೃಷ್ಣಪಕ್ಷದಲ್ಲಿ ದ್ವಾದಶೀ ಮೊದಲಾದ ಐದು ತಿಥಿಗಳಲ್ಲಿ ನೀರಾಜನ ವಿಧಿಯು ಉಕ್ತವಾಗಿದೆ.

೯. ಮೊದಲನೆಯದು ಪಕ್ಷವನ್ನು ಸೂಚಿಸುತ್ತದೆ. ಎರಡನೆಯದು ಮಾಸವನ್ನು ಸೂಚಿಸುತ್ತದೆ. ಮೂರನೆಯದು ಋತುವನ್ನೂ, ನಾಲ್ಕನೆಯದು ಅಯನವನ್ನೂ, ಐದನೆಯ ದೀಪವು ವರ್ಷವನ್ನೂ ಸೂಚಿಸುತ್ತವೆ. ಈ ದೀಪಗಳಿಂದ ಶುಭಾಶುಭಗಳನ್ನು ನಿರ್ಣಯಿಸಬೇಕು.

೧೦. "ದೀಪಗಳು ಸೂರ್ಯಾಂಶದಿಂದ ಸಂಭವಿಸಿದುವೂ, ಅಂಧಕಾರವನ್ನು ನಿವಾರಣೆಮಾಡುವುವೂ ಆದುವು. ಈ ದೀಪಗಳು ತ್ರಿಕಾಲದಲ್ಲಿಯೂ ನನ್ನನ್ನು ದೀಪಿಸುತ್ತಿರಲಿ. ಶುಭಾಶುಭಗಳನ್ನೂ ತೋರಿಸಲಿ."

೧೧-೧೨. ಎಂಬ ಈ ಮಂತ್ರದಿಂದ ಅಭಿಮಂತ್ರಿಸಿ ಬಳಿಕ ಕ್ರಮವಾಗಿ ನೀರಾಜನಮಾಡಬೇಕು. ಮೊದಲು ದೇವತೆಗಳಿಗೆ, ಬಳಿಕ ಬ್ರಾಹ್ಮಣರಿಗೆ,

ಆದೌ ದೇವಾಂಸ್ತತೋ ವಿಪ್ರಾನ್ ಹಸ್ತಿನಶ್ಚ ತುರಂಗಮಾನ್ ।
ಜ್ಯೇಷ್ಠಾಂಚ್ಛ್ರೇಷ್ಠಾನ್ ಜಘನ್ಯಾಂಶ್ಚ ಮಾತೃಮುಖ್ಯಾಶ್ಚ ಯೋಷಿತಃ ॥
ತತೋ ನೀರಾಜಿತಾನ್ದೀಪಾನ್ ಸ್ವಸ್ವಸ್ಥಾನೇಷು ವಿನ್ಯಸೇತ್ ।
ರೂಕ್ಷೈರ್ಲಕ್ಷ್ಮೀವಿನಾಶಃ ಸ್ಯಾತ್ ಶ್ವೇತೈರನ್ನಕ್ಷಯೋ ಭವೇತ್ ।
ಅತಿರಕ್ತೇಷು ಯುದ್ಧಾನಿ ಮೃತ್ಯುಃ ಕೃಷ್ಣಶಿಖೇಷು ಚ ॥ ೧೩ ॥
ಏಕಾಂಗೀನಾಮ ಗೋಪಾಲಾ ತಯೈತಚ್ಚ ವ್ರತಂ ಕೃತಂ ।
ಧನಧಾನ್ಯಸಮಾಯುಕ್ತಾ ಜಾತಾ ವರ್ಷತ್ರಯೇಣ ಸಾ ॥ ೧೪ ॥

---

ಆಮೇಲೆ ಆನೆಗಳು, ಕುದುರೆಗಳು, ಜ್ಯೇಷ್ಠರು, ಶ್ರೇಷ್ಠರು, ಕನಿಷ್ಠರು, ತಾಯಿ ಮೊದಲಾದ ಹೆಂಗಸರು—ಇವರೆಲ್ಲರಿಗೂ ಕ್ರಮವಾಗಿ ನೀರಾಜನಮಾಡಬೇಕು.

೧೩. ಬಳಿಕ ನೀರಾಜನಮಾಡಿದ ದೀಪಗಳನ್ನು ಅದರದರ ಸ್ಥಾನದಲ್ಲಿ ಇಡಬೇಕು. ರೂಕ್ಷ (ಕಠಿನ)ವಾದ ಕುಡಿಯುಳ್ಳ ದೀಪಗಳಿಂದ ಲಕ್ಷ್ಮೀವಿನಾಶ ವುಂಟಾಗುತ್ತದೆ. ಬಿಳಿಯ ಕುಡಿಗಳಿಂದ ಅನ್ನಕ್ಷಯವಾಗುತ್ತದೆ. ಅತಿರಕ್ತ ವರ್ಣದವುಗಳಿಂದ ಯುದ್ಧಗಳು ತಲೆದೋರುತ್ತವೆ. ಕಪ್ಪುಕುಡಿಯವುಗಳಿಂದ ಮೃತ್ಯುವುಂಟಾಗುತ್ತದೆ.

೧೪. ಏಕಾಂಗಿಯೆಂಬ ಗೋಪಾಲಿಕೆಯೊಬ್ಬಳಿದ್ದಳು. ಅವಳು ಈ ದೀಪ ದಾನ ವ್ರತವನ್ನು ಮಾಡಿದಳು. ಅವಳು ಮೂರು ವರ್ಷಗಳಲ್ಲಿ ಧನಧಾನ್ಯ ಸಮೃದ್ಧಿಯುಳ್ಳವಳಾದಳು.*

---

* **ಸನತ್ಕುಮಾರ ಸಂಹಿತೆಯಲ್ಲಿ ಏಕಾಂಗಿಯ ಕಥೆ.**—ಹಿಂದೆ ಹೃಷೀಕೇಶನೆಂಬ ಒಬ್ಬ ಗೊಲ್ಲನಿದ್ದನು. ಅವನು ಎಂಟುಸಾವಿರ ಹಸುಗಳನ್ನು ಮೇಯಿಸುತ್ತ ಜೀವನವನ್ನು ಸಾಗಿಸುತ್ತಿದ್ದನು. ಅವನಿಗೆ ಏಕಾಂಗಿಯೆಂಬ ಒಬ್ಬಳೇ ಒಬ್ಬಳು ಮಗಳು ಹುಟ್ಟಿದಳು. ಗಂಡುಮಕ್ಕಳಿಲ್ಲದಿದ್ದುದರಿಂದ ಹೃಷೀಕೇಶನು ಅದಕ್ಕಾಗಿಯೇ ಬಹಳ ದಾನಧರ್ಮ ಗಳನ್ನು ಮಾಡಿದನು. ಆದರಿಂದ ಅವನಿಗೆ ಒಬ್ಬ ಮಗನು ಜನಿಸಿದನು.

ಹೃಷೀಕೇಶನಿಗೆ ಧರ್ಮಕಾರ್ಯಗಳಲ್ಲೆಲ್ಲ ದುಂದುಭಿಯೆಂಬ ಒಬ್ಬ ಒಕ್ಕಣ್ಣಿನ ಹಾರವನು ಪುರೋಹಿತನಾಗಿದ್ದನು. ಅವನು ಹೃಷೀಕೇಶನಿಗೆ ಗಂಡುಮಗುವಾದುದಕ್ಕೆ ದುಗ್ಧಿಪಟ್ಟುಕೊಂಡು, "ಅಯ್ಯಾ ಹೃಷೀಕೇಶ! ಈ ಮಗು ಮೂಲಾನಕ್ಷತ್ರದಲ್ಲಿ ಹುಟ್ಟಿದೆ. ಇದರಿಂದ ತಂದೆ ತಾಯಿಗಳಿಬ್ಬರಿಗೂ ಹೇಷ್ಟ" ಎಂದು ಸುಳ್ಳುಹೇಳಿದನು. ಹೃಷೀಕೇಶನು ಹೌದೆಂದು ನಂಬಿ, ತನ್ನ ಮಗಳಾದ ಏಕಾಂಗಿಯನ್ನು ಕರೆದು, "ಮಗು! ಇದಕ್ಕೆ ಜೇನು ಮತ್ತು ತುಪ್ಪವನ್ನು ತಿನ್ನಿಸಿ ಗಂಗೆಯಲ್ಲಿ ಹಾಕಿ ಬಾ. ಹಾಗೆ ಮಾಡಿದರೆ ನಮಗೆ ಶ್ರೇಯಸ್ಸಾಗುತ್ತದೆ" ಎಂದು ಹೇಳಿದನು.

ಏಕಾಂಗಿಯು ಹಾಗೆಯೇ ಆಗಲೆಂದು ನುಡಿದು ಆ ಮಗುವನ್ನೆತ್ತಿಕೊಂಡುಹೋಗಿ ಅದನ್ನು ಗಂಗೆಯಲ್ಲಿ ಹಾಕಲು ಮನಸ್ಸು ಬಾರದೆ, ಅದನ್ನು ಒಂದು ಗಿಡದ ಪೊಟರೆ ಯಲ್ಲಿಟ್ಟಳು. ಅದಕ್ಕೆ ಪ್ರತಿದಿನವೂ ಹಾಲೆರೆದು ಬರುತ್ತಿದ್ದಳು. ಹೀಗೆ ಒಂದು ವರ್ಷ ಕಳೆಯಿತು. ಮಗು ಮುದ್ದುಮುದ್ದಾಗಿ ಮಾತನಾಡತೊಡಗಿತು. ಏಕಾಂಗಿಗೂ ಆನಂದವಾಯಿತು.

**ತಸ್ಮಾದ್ಗೋಪೂಜನಂ ಕಾರ್ಯಂ ದ್ವಾದಶ್ಯಾಂ ಕಾರ್ತಿಕಸ್ಯ ತು ।**
**ಏತದ್ಗೋವ್ರತಮಾಹಾತ್ಮ್ಯಂ ಶ್ರುತ್ವಾ ಕುರ್ವಂತಿ ಯೇ ನರಾಃ ॥ ೧೫ ॥**
**ತೇ ಗೋವ್ರತಪ್ರಭಾವೇನ ನ ಗೋಭಿರ್ವಿಚ್ಯುತಾ ಭುವಿ ।**
**ಗೋಽಪರಾಧಃ ಕೃತೋ ಯಃ ಸ್ಯಾತ್ ಸ ವ್ರತಾದ್ವಿಲಯಂ ವ್ರಜೇತ್ ॥**

---

೧೫–೧೬. ಆದುದರಿಂದ ಕಾರ್ತಿಕಮಾಸದ ದ್ವಾದಶಿಯ ದಿನ ಗೋಪೂಜೆಯನ್ನು ಮಾಡಬೇಕು. ಈ ಗೋವ್ರತ ಮಾಹಾತ್ಮ್ಯವನ್ನು ಕೇಳಿ ಯಾವ ನರರು

---

ಅವಳೂ ಯೌವನಕ್ಕೆ ಬಂದಳು. ಒಳ್ಳೆಯ ರೂಪವತಿಯಾದ ಅವಳನ್ನು ಆ ಒಕ್ಕಣ್ಣ ದುಂದುಭಿ ಒಂದು ದಿನ ನೋಡಿ ಅವಳನ್ನು ಕಾಮಿಸಿದನು. ಏಕಾಂಗಿಯು ಅವನನ್ನು ಛೀಗುಟ್ಟಿ ಕಳುಹಿಸಿದಳು.

ದುಂದುಭಿಯು ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು ಹೃಷೀಕೇಶನ ಬಳಿಗೆ ಹೋಗಿ, "ಹೃಷೀಕೇಶ! ನಿನ್ನ ಮಗಳು ಯುವನರ ಸಂಗ ಮಾಡಿದ್ದಾಳೆ. ಕಳ್ಳತನದಲ್ಲಿ ಮಗುವನ್ನು ಹೆತ್ತು ಗಿಡದ ಪೊಟರೆಯಲ್ಲಿಟ್ಟು ಸಾಕುತ್ತಿದ್ದಾಳೆ. ನೀನು ಅವಳನ್ನು ದಂಡಿಸದೆ ಇದ್ದೀಯೆ!" ಎಂದನು. ಹೃಷೀಕೇಶನು ಅವನ ಮಾತನ್ನು ಅಗಲೂ ನಂಬಿದನು. "ಏನು ಮಾಡಬೇಕು; ಹೇಳು" ಎಂದನು. "ಬಸವನ ಬಾಲಕ್ಕೆ ಇವಳನ್ನೂ ಮಗುವನ್ನೂ ಕಟ್ಟಿ ಕಾಡಿಗೋಡಿಸು" ಎಂದು ದುಂದುಭಿಯು ಹೇಳಿದನು. ಹೃಷೀಕೇಶನು ನಿರ್ದಯನಾಗಿ ಹಾಗೆಯೇ ಮಾಡಿದನು.

ಅದೃಷ್ಟವಶದಿಂದ ಆ ಎತ್ತು ಏಕಾಂಗಿಯನ್ನೂ, ಮಗುವನ್ನೂ ಎಳೆದುಕೊಂಡು ಹರಿದ್ವಾರಕ್ಕೆ ಬಂದಿತು. ಹೇಗೆಹೇಗೆಯೋ ಏಕಾಂಗಿಯು ಕಟ್ಟುಗಳನ್ನು ಬಿಡಿಸಿಕೊಂಡು ಅಲ್ಲಿಯೇ ಒಂದು ಕಡೆ ಹಟ್ಟಿಯನ್ನು ಕಟ್ಟಿ ಹುಲ್ಲುಮಾರಿ ಆ ಎತ್ತನ್ನೂ ಮಗುವನ್ನೂ ಸಾಕುತ್ತ ವಾಸಮಾಡತೊಡಗಿದಳು.

ಕೆಲವು ಕಾಲ ಕಳೆಯಿತು. ಕಾರ್ತಿಕಮಾಸ ಬಂದಿತು. ದೇಶದೇಶದಿಂದಲೂ ಕಾರ್ತಿಕಸ್ನಾನಕ್ಕಾಗಿ ಯಾತ್ರಿಕರು ಬಂದರು. ಏಕಾಂಗಿಯು ಗೊಲ್ಲತಿಯೆಂದು ತಿಳಿದು ಅವಳ ಬಳಿ ದಾನಕ್ಕಾಗಿ ಹಸುಗಳನ್ನು ಬಿಡತೊಡಗಿದರು. ಅವಳು ಆ ಹಸುಗಳನ್ನು ಮೇಯಿಸಿ ಸುಖಜೀವನ ಮಾಡತೊಡಗಿದಳು. ಹೀಗೆ ಮೂರು ವರ್ಷಗಳು ಕಳೆದುವು. ಹೀಗೆ ಅವಳು ಮೂರು ಕಾರ್ತಿಕಗಳಲ್ಲಿಯೂ ಭಕ್ತಿಯಿಂದ ಗೋಸಂರಕ್ಷಣ ವ್ರತವನ್ನು ಮಾಡಿದಳು. ದ್ವಾದಶೀ ದಿನಗಳಲ್ಲಿ ವಿಶೇಷವಾಗಿ ಗೋಪೂಜೆಯನ್ನೂ ಅವಳು ಶ್ರದ್ಧೆಯಿಂದ ಮಾಡಿದಂತಾಯಿತು.

ಆಮೇಲೆ ಹೃಷೀಕೇಶನು ಪತ್ನೀಸಮೇತನಾಗಿ ಕಾರ್ತಿಕಸ್ನಾನಕ್ಕಾಗಿ ಹರಿದ್ವಾರಕ್ಕೆ ಬಂದು ಅಲ್ಲಿ ಏಕಾಂಗಿಯನ್ನೂ, ಮಗನನ್ನೂ ಕಂಡು ಆಶ್ಚರ್ಯಪಟ್ಟರು. ಏಕಾಂಗಿಯು ನಡೆದ ಸಂಗತಿಯನ್ನೆಲ್ಲ ತಂದೆಗೆ ಇದ್ದುದು ಇದ್ದಂತೆಯೇ ತಿಳಿಸಿದಳು. ಅವಳು "ಅಪ್ಪ! ನಾನು ನಿರಪರಾಧಿನಿ. ಕಾರ್ತಿಕವೈಭವದಿಂದ ಈಮಟ್ಟಿಗೆ ಬಂದಿದ್ದೇನೆ, ಇದೋ ನಿನ್ನ ಮಗ. ಒಪ್ಪಿಸಿಕೊ. ಇನ್ನುಮೇಲೆ ಎಂದಿಗೂ ಒಕ್ಕಣ್ಣರನ್ನು ಯಾರೂ ನಂಬದಿರಲಿ" ಎಂದು ಶಪಿಸಿದಳು. ಹೃಷೀಕೇಶನು ಅವಳ ನಿಷ್ಠೆಗೆ ಮೆಚ್ಚಿ, ಅಲ್ಲಿಯೇ ಒಬ್ಬ ಗೊಲ್ಲರ ಯುವಕನಿಗೆ ಅವಳನ್ನು ಕೊಟ್ಟು ಮದುವೆ ಮಾಡಿದನು. ತರುವಾಯ ಅವಳು ಗಂಡನೊಡನೆ ಹೊರಟುಹೋದಳು.

ವಾಲಖಿಲ್ಯಾ ಊಚುಃ :—
ಕೃಷ್ಣಪಕ್ಷೇ ಚತುರ್ದಶ್ಯಾಂ ಮಾಸಿ ಚಾಽಽಶ್ವಯುಜೇ ತಥಾ ।
ದೀಪೋತ್ಸವಸಮೀಪೇ ತು ವ್ರತಮೇತತ್ಸಮಾಚರೇತ್ ॥ ೧೭ ॥
ಪ್ರಾತಃ ಸ್ನಾತ್ವಾ ತ್ರಯೋದಶ್ಯಾಂ ಕೃತ್ವಾ ವೈ ದಂತಧಾವನಂ ।
ತ್ರಿರಾತ್ರನಿಯಮಂ ಕೃತ್ವಾ ಗೋವಿಂದೇ ಭಕ್ತಿತತ್ಪರಃ ॥ ೧೮ ॥
ಕಾರ್ಯ ಏತದ್ವ್ರತಸ್ಯಾಂತೇ ತಥಾ ಗೋವರ್ಧನೋತ್ಸವಃ ।
ತ್ರಿಮುಹೂರ್ತಾಧಿಕಾ ಗ್ರಾಹ್ಯಾ ಪರವೇಧೋ ನ ದೋಷಭಾಕ್ ॥ ೧೯ ॥
ಆಶ್ವಿನಸ್ಯಾಽಸಿತೇ ಪಕ್ಷೇ ತ್ರಯೋದಶ್ಯಾ ನಿಶಾಮುಖೇ ।
ಯಮದೀಪಂ ಬಲಿಂ ದದ್ಯಾತ್ ಅಪಮೃತ್ಯುರ್ವಿನಶ್ಯತಿ ॥ ೨೦ ॥
ಪುರಾ ಹೇಮನಕಸ್ಯೈವ ಬಾಲಕಶ್ಚಾಽಪಮೃತ್ಯುತಃ ।
ಮುಕ್ತೋಽಭೂದಾಶ್ವಿನೇ ಕೃಷ್ಣ ತ್ರಯೋದಶ್ಯಾಂ ದಯಾವಶಾತ್ ॥ ೨೧ ॥

---

ವ್ರತವನ್ನು ಮಾಡುತ್ತಾರೆಯೊ ಅವರು ಗೋವ್ರತಪ್ರಭಾವದಿಂದ ಭೂಲೋಕದಲ್ಲಿ ಗೋವುಗಳಿಂದಗಲಿದವರಾಗುವುದೇ ಇಲ್ಲವು. ಗೋವುಗಳ ವಿಷಯದಲ್ಲಿ ಯಾವುದಾದರೂ ಅಪರಾಧವನ್ನು ಮಾಡಿದ್ದರೆ ಅದು ವ್ರತಮಹಿಮೆಯಿಂದ ನಾಶವಾಗಿಹೋಗುತ್ತದೆ.

೧೭. ವಾಲಖಿಲ್ಯರು ಹೇಳುತ್ತಾರೆ:—'ಕೃಷ್ಣಪಕ್ಷದ ಚತುರ್ದಶಿಯಲ್ಲಿ, ಹಾಗೆಯೇ ಆಶ್ವಯುಜಮಾಸದಲ್ಲಿ, ದೀಪೋತ್ಸವದ ಸಮೀಪದಲ್ಲಿ ಈ ವ್ರತವನ್ನು ಆಚರಿಸತಕ್ಕದ್ದು.

೧೮. ತ್ರಯೋದಶಿಯ ದಿನ ಬೆಳಗ್ಗೆ ಹಲ್ಲುಜ್ಜಿಕೊಂಡು ಪ್ರಾತಃಸ್ನಾನಮಾಡಿ, ತ್ರಿರಾತ್ರನಿಯಮವನ್ನು ಮಾಡಿಕೊಂಡು ಗೋವಿಂದನಲ್ಲಿ ಭಕ್ತಿತತ್ಪರನಾಗಿ ವ್ರತವನ್ನು ಮಾಡಬೇಕು.

೧೯. ಈ ವ್ರತಾಂತ್ಯದಲ್ಲಿ ಗೋವರ್ಧನೋತ್ಸವವನ್ನು ಮಾಡಬೇಕು. ತ್ರಯೋದಶಿಯು ಮೂರು ಮುಹೂರ್ತಕ್ಕೆ ಅಧಿಕವುಳ್ಳದ್ದೆಂದು ಗ್ರಹಿಸಬೇಕು. ಪರವೇಧವು ದೋಷಾರ್ಹವಾಗುವುದಿಲ್ಲ.

೨೦. ಆಶ್ವಿಯುಜಮಾಸದ ಕೃಷ್ಣಪಕ್ಷದ ತ್ರಯೋದಶಿಯಲ್ಲಿ ರಾತ್ರಿ ಪ್ರಾರಂಭವಾಗುತ್ತಿರುವಾಗ ಯಮದೀಪವನ್ನೂ ಬಲಿಯನ್ನೂ ಕೊಡಬೇಕು. ಇದರಿಂದ ಅಪಮೃತ್ಯುವು ನಾಶವಾಗುತ್ತದೆ.

೨೧. ಪೂರ್ವದಲ್ಲಿ ಹೇಮನಕನ ಪುತ್ರನು ಆಶ್ವಿಯುಜಮಾಸದಲ್ಲಿ ಕೃಷ್ಣಪಕ್ಷದ ತ್ರಯೋದಶೀ ದಿನವ ಯಮದೀಪ ಪ್ರಭಾವದಿಂದ ಅಪಮೃತ್ಯುವಿನಿಂದ ಮುಕ್ತನಾದನು.

ದೂತಾ ಊಚುಃ:—

ಯಥಾ ನ ಜೀವಿತಾಧ್ಭ್ರಶ್ಯೇದೀದೃಶೇ ತು ಮಹೋತ್ಸವೇ ।
ತಥೋಪಾಯಂ ಬ್ರೂಹಿ ಯಮ ಕೃಪಾಂ ಕೃತ್ವಾಽಸ್ಮದಗ್ರತಃ ॥ ೨೨ ॥

ಯಮ ಉವಾಚ:—

ಆಶ್ವಿನಸ್ಯಾಸಿತೇ ಪಕ್ಷೇ ತ್ರಯೋದಶ್ಯಾಂ ನಿಶಾಮುಖೇ ।
ಪ್ರತಿವರ್ಷಂ ತು ಯೋ ದದ್ಯಾತ್ ಗೃಹದ್ವಾರೇ ಸ ದೀಪಕಂ ॥ ೨೩ ॥
ಮಂತ್ರೇಣಾನೇನ ಭೋ ದೂತಾಃ ಸಮಾನೇಯಃ ಸ ನೋತ್ಸವೇ ।
ಪ್ರಾಪ್ತೇಽಪಮೃತ್ಯಾವಪಿ ಚ ಶಾಸನಂ ಕ್ರಿಯತಾಂ ಮಮ ॥ ೨೪ ॥
ಮೃತ್ಯುನಾ ಪಾಶದಂಡಾಭ್ಯಾಂ ಕಾಲೇ ನ ಚ ಮಯಾ ಸಹ ।
ತ್ರಯೋದಶ್ಯಾಂ ದೀಪದಾನಾತ್ ಸೂರ್ಯಜಃ ಪ್ರೀಯತಾಮಿತಿ ॥ ೨೫ ॥
ಮಂತ್ರೇಣಾಽನೇನ ಯೋ ದೀಪಂ ದ್ವಾರದೇಶೇ ಪ್ರಯಚ್ಛತಿ ।
ಉತ್ಸವೇ ಚಾಽಪಮೃತ್ಯೋಶ್ಚ ಭಯಂ ತಸ್ಯ ನ ಜಾಯತೇ ॥ ೨೬ ॥

ವಾಲಖಿಲ್ಯಾ ಊಚುಃ:—

ಪೂರ್ವವಿದ್ಧಚತುರ್ದಶ್ಯಾಂ ಆಶ್ವಿನಸ್ಯ ಸಿತೇತರೇ ।
ಪಕ್ಷೇ ಪ್ರತ್ಯೂಷಸಮಯೇ ಸ್ನಾನಂ ಕುರ್ಯಾತ್ಪ್ರಯತ್ನತಃ ॥ ೨೭ ॥

---

೨೨. ಯಮದೂತರು ಕೇಳುತ್ತಾರೆ:—"ಎಲೈ ಯಮನೇ, ಇಂತಹ ಮಹೋತ್ಸವದಲ್ಲಿ ಪ್ರಾಣವನ್ನು ಕಳೆದುಕೊಳ್ಳದಿರುವುದಕ್ಕೆ ಉಪಾಯವನ್ನು ಕೃಪೆ ಮಾಡಿ ನಮಗೆ ಹೇಳಬೇಕು" ಎಂದು ತಮ್ಮ ಪ್ರಭುವಾದ ಯಮನನ್ನು ಬೆಸಗೊಂಡರು.

೨೩–೨೪. ಯಮನು ಹೇಳುತ್ತಾನೆ:—"ಎಲೈ ದೂತರೇ! ಆಶ್ವಿನದ ಕೃಷ್ಣ ಪಕ್ಷದ ತ್ರಯೋದಶಿಯಲ್ಲಿ ರಾತ್ರಿಯಾಗುತ್ತಿರುವಾಗ ಪ್ರತಿವರ್ಷವೂ ಮನೆಯ ಬಾಗಿಲಿನಲ್ಲಿ ಯಾವನು ಈ ಮಂತ್ರದಿಂದ ಒಳ್ಳೆಯ ದೀಪವನ್ನಿಡುತ್ತಾನೋ ಅವನಿಗೆ ಈ ಉತ್ಸವಕಾಲದಲ್ಲಿ ಅಪಮೃತ್ಯುವೇ ಬಂದಿದ್ದರೂ ಅವನನ್ನು ಇಲ್ಲಿ ಕರೆತರಲಾಗದು. ಈ ನನ್ನ ಅಪ್ಪಣೆಯನ್ನು ನೆರವೇರಿಸಿರಿ.

೨೫. 'ಮೃತ್ಯುವಿನಿಂದಲೂ, ಪಾಶದಂಡಗಳಿಂದಲೂ, ಕಾಲನಿಂದಲೂ ಕೂಡಿದ ಸೂರ್ಯಪುತ್ರನಾದ ಯಮನು ತ್ರಯೋದಶಿಯಲ್ಲಿ ನಾನು ಮಾಡುವ ಈ ದೀಪದಾನದಿಂದ ಪ್ರೀತನಾಗಲಿ.'

೨೬. ಎಂಬ ಈ ಮಂತ್ರವನ್ನುಚ್ಚರಿಸುತ್ತ ಯಾವನು ಉತ್ಸವದಲ್ಲಿ ಮನೆಯ ಬಾಗಿಲಲ್ಲಿ ದೀಪವನ್ನಿಡುತ್ತಾನೋ ಅವನಿಗೆ ಅಪಮೃತ್ಯುವಿನಿಂದಲೂ ಭಯ ವುಂಟಾಗುವುದಿಲ್ಲ.

೨೭. ವಾಲಖಿಲ್ಯರು ಹೇಳುತ್ತಾರೆ:—"ಆಶ್ವಿನಮಾಸದ ಕೃಷ್ಣಪಕ್ಷದಲ್ಲಿ

**ಅರುಣೋದಯತೋಽನ್ಯತ್ರ ರಿಕ್ತಾಯಾಂ ಸ್ನಾತಿ ಯೋ ನರಃ ।**
**ತಸ್ಯಾಬ್ದಿಕಭವೋ ಧರ್ಮೋ ನಶ್ಯತ್ಯೇವ ನ ಸಂಶಯಃ ॥ ೨೮ ॥**
**ತಥಾ ಕೃಷ್ಣ ಚತುರ್ದಶ್ಯಾಂ ಆಶ್ವಿನೇಽರ್ಕೋದಯೇ ಸುರಾಃ ।**
**ಯಾಮಿನ್ಯಾ ಪಶ್ಚಿಮೇ ಯಾಮೇ ತೈಲಾಭ್ಯಂಗೋ ವಿಶಿಷ್ಯತೇ ॥ ೨೯ ॥**
**ಯದಾ ಚತುರ್ದಶೀ ನ ಸ್ಯಾತ್ ದ್ವಿದಿನೇ ಚೇದ್ವಿಧೂದಯೇ ।**
**ದಿನದ್ವಯೇ ಭವೇಚ್ಚಾಽಪಿ ತದಾ ಪೂರ್ವೈವ ಗೃಹ್ಯತೇ ॥ ೩೦ ॥**
**ಬಲಾತ್ಕಾರದ್ಧಠಾದ್ವಾಽಪಿ ಶಿಷ್ಟತ್ವಾನ್ನ ಕರೋತಿ ಚೇತ್ ।**
**ತೈಲಾಭ್ಯಂಗಂ ಚತುರ್ದಶ್ಯಾಂ ರೌರವಂ ನರಕಂ ವ್ರಜೇತ್ ॥ ೩೧ ॥**
**ತೈಲೇ ಲಕ್ಷ್ಮೀರ್ಜಲೇ ಗಂಗಾ ದೀಪಾವಲ್ಯಾಶ್ಚತುರ್ದಶೀಂ ।**
**ಪ್ರಾತಃಸ್ನಾನಂ ಹಿ ಯಃ ಕುರ್ಯಾತ್ ಯಮಲೋಕಂ ನ ಪಶ್ಯತಿ ॥ ೩೨ ॥**
**ಅಪಾಮಾರ್ಗಮಥೋ ತುಂಬೀಂ ಪ್ರಪುನ್ನಾಡಮಥಾಽಪರಂ ।**
**ಭ್ರಾಮಯೇತ್ಸ್ನಾನಮಧ್ಯೇ ತು ನರಕಸ್ಯ ಕ್ಷಯಾಯ ವೈ ॥ ೩೩ ॥**

---

ಹಿಂದಿನ ದಿನ ಪ್ರಾರಂಭವಾಗಿರುವ ಚತುರ್ದಶಿಯಲ್ಲಿ ಪ್ರಾತಃಕಾಲದಲ್ಲಿ ಪ್ರಯತ್ನ ಪೂರ್ವಕವಾಗಿ ಸ್ನಾನಮಾಡಬೇಕು.

೨೮. ಅರುಣೋದಯಕ್ಕೆ ಮುಂಚಿತವಾಗಲ್ಲದೆ ಯಾವ ನರನು ಶುಕ್ಲಪಕ್ಷದ ನಾಲ್ಕು, ಒಂಬತ್ತು ಮತ್ತು ಹದಿನಾಲ್ಕನೆಯ ದಿನಗಳಲ್ಲಿ ಸ್ನಾನಮಾಡುತ್ತಾನೋ ಅವನಿಗೆ ಒಂದು ವರ್ಷದವರೆಗೆ ಉಂಟಾಗಿರುವ ಧರ್ಮವು ನಾಶವಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

೨೯. ಹಾಗೆಯೇ ಆಶ್ವಿನದಲ್ಲಿ ಕೃಷ್ಣ ಚತುರ್ದಶಿಯಲ್ಲಿ ಸೂರ್ಯೋದಯ ಕಾಲದಲ್ಲಿ ರಾತ್ರಿಯ ಕಡೆಯ ಯಾಮದಲ್ಲಿ ತೈಲಾಭ್ಯಂಗಮಾಡುವುದು ವಿಶೇಷ ವಾದದ್ದು.

೩೦. ಯಾವಾಗ ಚತುರ್ದಶಿಯು ಎರಡು ದಿನಗಳಲ್ಲಿಯೂ ಚಂದ್ರೋದಯ ದಲ್ಲಿ ಇರುವುದಿಲ್ಲವೋ, ಅಥವಾ ಎರಡು ದಿನಗಳಲ್ಲಿಯೂ ಇರುವುದೋ ಆಗ ಮೊದಲನೆಯದನ್ನೇ ಗ್ರಹಿಸಬೇಕು.

೩೧. ಬಲಾತ್ಕಾರದಿಂದಾಗಲಿ, ಹಠದಿಂದಾಗಲಿ, ಶಿಷ್ಟತ್ವದಿಂದಾಗಲಿ ಚತುರ್ದಶಿಯ ದಿನ ತೈಲಾಭ್ಯಂಗವನ್ನು ಮಾಡದಿದ್ದಪಕ್ಷದಲ್ಲಿ ಮಾನವನು ರೌರವನರಕಕ್ಕೆ ಹೋಗುತ್ತಾನೆ.

೩೨. ದೀಪಾವಲಿಯ ಚತುರ್ದಶಿಯ ದಿನ ತೈಲದಲ್ಲಿ ಲಕ್ಷ್ಮಿಯೂ, ಜಲದಲ್ಲಿ ಗಂಗೆಯೂ ನೆಲಸಿರುವರು. ಅಂದು ಪ್ರಾತಃಸ್ನಾನವನ್ನು ಯಾವನು ಮಾಡುವನೋ ಅವನು ಯಮಲೋಕವನ್ನು ಕಾಣುವುದಿಲ್ಲವು.

೩೩–೩೪. ಒಮ್ಮೊಮ್ಮೆ ಮೂರು ಸಲದಂತೆ ಮೂರುಸಾರಿ ಮಂತ್ರವನ್ನು

ವಾರತ್ರಯಂ ತ್ರಿವಾರಂ ಚ ಪಠಿತ್ವಾ ಮಂತ್ರಮುತ್ತಮಂ ॥ ೩೪ ॥
ಸೀತಾಲೋಕಸಮಾಯುಕ್ತ ಸಕಂಟಕದಲಾನ್ವಿತ ।
ಹರ ಪಾಪಮಪಾಮಾರ್ಗ ಭ್ರಾಮ್ಯಮಾಣಃ ಪುನಃ ಪುನಃ ।
ಅಪಾಮಾರ್ಗಂ ಪ್ರಪುನ್ನಾಡಂ ಭ್ರಾಮಯೇಚ್ಛಿರಸೋಪರಿ ॥ ೩೫ ॥
ಸ್ನಾತ್ವಾರ್ದ್ರವಾಸಸಾ ದದ್ಯಾತ್ ದೀಪಕಂ ಮೃತ್ಯುಪುತ್ರಯೋಃ ।
ಶುನಕೌ ಶ್ಯಾಮಶಬಲೌ ಭ್ರಾತರೌ ಯಮಸೇವಕೌ ।
ತುಷ್ಟೌ ಸ್ಯಾತಾಂ ಚತುರ್ದಶ್ಯಾಂ ದೀಪದಾನೇನ ಮೃತ್ಯುಜೌ ॥ ೩೬ ॥
ಇಷ್ಟಬಂಧುಜನೈಃ ಸಾರ್ಧಂ ಏತತ್ಸ್ನಾನಂ ಸಮಾಚರೇತ್ ।
ಸ್ನಾನಾಂಗತರ್ಪಣಂ ಕೃತ್ವಾ ಯಮಂ ಸಂತರ್ಪಯೇತ್ತತಃ ॥ ೩೭ ॥
ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।
ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥ ೩೮ ॥
ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮಃ ॥ ೩೯ ॥

---

ಪಠಿಸುತ್ತಾ ಸ್ನಾನ ಜಲಮಧ್ಯದಲ್ಲಿ ನರಕದ ಕ್ಷಯಕ್ಕಾಗಿ ಉತ್ತರಣೆ, ತುಂಬಿ (ಸೋರೆ), ಪ್ರಪುನ್ನಾಡ ಗಿಡ ಇವನ್ನು ತಿರುಗಿಸಬೇಕು.

೩೫. "ನೇಗಿಲು ಗೆರೆಯ ಮಣ್ಣು ಹೆಂಟೆಯಿಂದ ಕೂಡಿ, ಮುಳ್ಳು ಸೇರಿದ ದಳಗಳುಳ್ಳ ಎಲೆ ಅಪಾಮಾರ್ಗವೇ (ಉತ್ತರಣೆಯೇ)! ಮತ್ತೆ ಮತ್ತೆ ಸುತ್ತಿ ಸಲ್ಪಡುತ್ತಿರುವ ನೀನು ನನ್ನ ಪಾಪವನ್ನು ಪರಿಹರಿಸು" ಎಂಬ ಈ ಮಂತ್ರವನ್ನು ಪಠಿಸುತ್ತ ಉತ್ತರಣೆಯನ್ನೂ ಪ್ರಪುನ್ನಾಡಶಾಖೆಯನ್ನೂ ತಲೆಯಮೇಲೆ ಸುತ್ತಿಸ ಬೇಕು.

೩೬. ಸ್ನಾನಮಾಡಿ ಒದ್ದೆಬಟ್ಟೆಯನ್ನುಟ್ಟುಕೊಂಡೇ ಮೃತ್ಯುಪುತ್ರರಾದ ಶ್ವಾನಗಳಿಗೆ, "ಶ್ಯಾಮವರ್ಣ ಮತ್ತು ಚಿತ್ರವರ್ಣವುಳ್ಳವೂ, ಅಣ್ಣತಮ್ಮಂದಿರೂ, ಯಮನ ಸೇವಕರೂ, ಯಮಪುತ್ರರೂ ಆದ ಶ್ವಾನಗಳೆರಡೂ ಚತುರ್ದಶೀ ದೀಪ ದಾನದಿಂದ ಸಂತುಷ್ಟರಾಗಲಿ'— ಎಂಬ ಮಂತ್ರವನ್ನುಚ್ಚರಿಸುತ್ತಾ ದೀಪವನ್ನು ಕೊಡಬೇಕು.

೩೭. ಇಷ್ಟಬಂಧು ಜನಗಳೊಡನೆ ಈ ಸ್ನಾನವನ್ನಾಚರಿಸಬೇಕು. ಸ್ನಾನಾಂಗ ತರ್ಪಣವನ್ನು ಮಾಡಿ ಅನಂತರ ಯಮನಿಗೆ ತರ್ಪಣವನ್ನು ಕೊಡಬೇಕು.

೩೮–೪೦. "ಯಮನಿಗೆ ನಮಸ್ಕಾರವು. ಧರ್ಮರಾಜನಿಗೆ ನಮಸ್ಕಾರವು. ಮೃತ್ಯುವಿಗೆ ನಮಸ್ಕಾರವು. ಅಂತಕನಿಗೆ ನಮಸ್ಕಾರವು. ವೈವಸ್ವತನಿಗೆ ನಮ ಸ್ಕಾರವು. ಕಾಲನಿಗೆ ನಮಸ್ಕಾರವು. ಸರ್ವಭೂತಕ್ಷಯಕಾರಿಗೆ ನಮಸ್ಕಾರವು. ಔದುಂಬರನಿಗೆ ನಮಸ್ಕಾರವು. ದಧ್ನನಿಗೆ ನಮಸ್ಕಾರವು. ನೀಲನಿಗೆ

ಚತುರ್ದಶೈತೇ ಮಂತ್ರಾಃ ಸ್ಯುಃ ಪ್ರತ್ಯೇಕಂ ಚ ನಮೋಽನ್ವಿತಾಃ ।
ಏಕೈಕೇನ ತಿಲೈರ್ಮಿಶ್ರಾನ್ ದದ್ಯಾತ್ತ್ರೀನುದಕಾಂಜಲೀನ್ ॥ ೪೦ ॥
ಯಜ್ಞೋಪವೀತಿನಾ ಕಾರ್ಯಂ ಪ್ರಾಚೀನಾವೀತಿನಾಽಥ ವಾ ।
ದೇವತ್ವಂ ಚ ಪಿತೃತ್ವಂ ಚ ಯಮಸ್ಯಾಽಸ್ತಿ ದ್ವಿರೂಪತಾ ॥ ೪೧ ॥
ಜೀವತ್ಪಿತಾಪಿ ಕುರ್ವೀತ ತರ್ಪಣಂ ಯಮಭೀಷ್ಮಯೋಃ ।
ನರಕಾಯ ಪ್ರದಾತವ್ಯೋ ದೀಪಃ ಸಂಪೂಜ್ಯ ದೇವತಾಃ ॥ ೪೨ ॥
ಅತ್ರೈವ ಲಕ್ಷ್ಮೀಕಾಮಸ್ಯ ವಿಧಿಃ ಸ್ನಾನೇ ಮಯೋಚ್ಯತೇ ।
ಇಷೇ ಭೂತೇ ಚ ದರ್ಶೇ ಚ ಕಾರ್ತಿಕೇ ಪ್ರಥಮೇ ದಿನೇ ॥ ೪೩ ॥
ಯದಾ ಸ್ನಾತಿ ತದಾಭ್ಯಂಗಸ್ನಾನಂ ಕುರ್ಯಾದ್ವಿಧೂದಯೇ ।
ಊರ್ಜಶುಕ್ಲದ್ವಿತೀಯಾಯಾಂ ತಿಥೌ ಚ ಸ್ವಾತಿಯುಗ್ಮಗೇ ॥ ೪೪ ॥
ಮಾನವೋ ಮಂಗಲಸ್ನಾಯೀ ನೈವ ಲಕ್ಷ್ಮ್ಯಾ ವಿಯುಜ್ಯತೇ ।
ದೀಪೈರ್ನೀರಾಜನಾದತ್ರ ಸೈಷಾ ದೀಪಾವಲಿಃ ಸ್ಮೃತಾ ॥ ೪೫ ॥

---

ನಮಸ್ಕಾರವು. ಪರಮೇಷ್ಠಿಗೆ ನಮಸ್ಕಾರವು. ವೃಕೋದರನಿಗೆ ನಮಸ್ಕಾರವು. ಚಿತ್ರನಿಗೆ ನಮಸ್ಕಾರ. ಚಿತ್ರಗುಪ್ತನಿಗೆ ನಮಸ್ಕಾರವು"—ಇವು ಹದಿನಾಲ್ಕು ಮಂತ್ರಗಳು. ಪ್ರತ್ಯೇಕವಾಗಿ ಒಂದೊಂದಕ್ಕೂ 'ನಮಃ' ಎಂದು ಸೇರಿಸಬೇಕು. ಒಂದೊಂದು ಮಂತ್ರವನ್ನು ಹೇಳಿಕೊಂಡು ಮೂರು ಮೂರು ಸಲ ಎಳ್ಳುಸೇರಿಸಿದ ಜಲಾಂಜಲಿಗಳನ್ನು ನೀಡಬೇಕು.

೪೧. ಯಜ್ಞೋಪವೀತಿಯಾಗಿಯಾದರೂ ತರ್ಪಣ ಮಾಡಬಹುದು; ಪ್ರಾಚೀನಾವೀತಿಯಾಗಿಯಾದರೂ ಮಾಡಬಹುದು. ಯಮನಿಗೆ ದೇವತ್ವ, ಪಿತೃತ್ವ—ಈ ಎರಡು ರೂಪಗಳೂ ಉಂಟು.

೪೨. ಜೀವತ್ಪಿತನು (ತಂದೆ ಕೂಡ ಬದುಕಿರುವವನು) ಯಮನಿಗೂ ಭೀಷ್ಮನಿಗೂ ತರ್ಪಣವನ್ನು ಕೊಡತಕ್ಕದ್ದು. ದೇವತೆಗಳನ್ನು ಪೂಜಿಸಿ ನರಕನಿಗೆ ದೀಪವನ್ನು ಹೊತ್ತಿಸಿಡಬೇಕು.

೪೩–೪೫. ಸಂಪತ್ತು ಬೇಕೆಂದು ಅಪೇಕ್ಷೆಯಿರುವವನಿಗೆ ಸ್ನಾನವಿಧಿಯನ್ನು ಇಲ್ಲಿಯೇ ಹೇಳುತ್ತೇನೆ. ಆಶ್ವಿನಮಾಸದಲ್ಲಿ ಕೃಷ್ಣಪಕ್ಷದಲ್ಲಿ ಅಮಾವಾಸ್ಯೆಯಲ್ಲಿ, ಕಾರ್ತಿಕದ ಮೊದಲನೆಯ ದಿನದಲ್ಲಿ—ಈ ಕಾಲಗಳಲ್ಲಿ ಯಾವಾಗ ಸ್ನಾನ ಮಾಡಬೇಕೋ ಆಗ ಚಂದ್ರೋದಯದಲ್ಲಿ ಅಭ್ಯಂಗಸ್ನಾನಮಾಡತಕ್ಕದ್ದು. ಕಾರ್ತಿಕ ಶುಕ್ಲ ಬಿದಿಗೆಯದಿನ, ಆ ತಿಥಿಯು ಸ್ವಾತಿಯುಗ್ಮವನ್ನು ಸೇರಿರುವಲ್ಲಿ ಮಂಗಲಸ್ನಾನಮಾಡುವ ಮಾನವನು ಎಂದೆಂದಿಗೂ ಸಂಪತ್ತಿನಿಂದ ವಿಯೋಗ ಹೊಂದುವುದಿಲ್ಲವು. ಆ ದಿನ ದೀಪಗಳಿಂದ ನೀರಾಜನ ಮಾಡುವುದರಿಂದ ಅದು ದೀಪಾವಲಿಯೆಂದು ಕರೆಯಲ್ಪಡುತ್ತಿದೆ.

ಇಂದುಕ್ಷಯೇಽಪಿ ಸಂಕ್ರಾಂತೌ ರವೌ ಪಾತೇ ದಿನಕ್ಷಯೇ ।
ಅತ್ರಾಭ್ಯಂಗೋ ನ ದೋಷಾಯ ಪ್ರಾತಃ ಪಾಪಾಪನುತ್ತಯೇ ॥ ೪೬ ॥
ಮಾಷಪತ್ರಸ್ಯ ಶಾಕಂ ವೈ ಭುಕ್ತ್ವಾ ತಸ್ಮಿನ್ ದಿನೇ ನರಃ ।
ಪ್ರೇತಾಖ್ಯಾಯಾಂ ಚತುರ್ದಶ್ಯಾಂ ಸರ್ವಪಾಪೈಃ ಪ್ರಮುಚ್ಯತೇ ॥ ೪೭ ॥
ಇಷಾಸಿತಚತುರ್ದಶ್ಯಾಂ ಇಂದುಕ್ಷಯತಿಥಾವಪಿ ।
ದರ್ಶಾದೌ ಸ್ವಾತಿಸಂಯುಕ್ತೇ ತದಾ ದೀಪಾವಲಿರ್ಭವೇತ್ ॥ ೪೮ ॥
ಕುರ್ಯಾತ್ಸಂಲಗ್ನಮೇತಚ್ಚ ದೀಪೋತ್ಸವದಿನತ್ರಯಂ ।
ಮಹಾರಾಜೋ ಬಲಿಃ ಪ್ರೋಕ್ತಃ ತುಷ್ಟೇನ ಹರಿಣಾ ತಥಾ ॥ ೪೯ ॥
ವರಂ ಯಾಚಸ್ವ ಭದ್ರಂ ತೇ ಯದ್ಯನ್ಮನಸಿ ವರ್ತತೇ ।
ಇತಿ ವಿಷ್ಣುವಚಃ ಶ್ರುತ್ವಾ ಬಲಿರ್ವಚನಮಬ್ರವೀತ್ ॥ ೫೦ ॥
ಆತ್ಮಾರ್ಥಂ ಕಿಂ ಯಾಚನೀಯಂ ಸರ್ವಂ ದತ್ತಂ ಮಯಾ ತಥಾ ।
ಲೋಕಾರ್ಥಂ ಯಾಚಯಿಷ್ಯಾಮಿ ಶಕ್ತಶ್ಚೇದ್ದೇಹಿ ತಚ್ಚ ಮೇ ॥ ೫೧ ॥

---

೪೬. ಚಂದ್ರನಿಗೆ ಕ್ಷಯವಿರುವುದಾದರೂ ಸಂಕ್ರಾಂತಿಯಲ್ಲಿ ರವಿಯಿರುವುದಾದರೂ ದಿನಕ್ಷಯವಾಗಿರುವುದಾದರೂ ಆ ಸಮಯದಲ್ಲಿ ಅಭ್ಯಂಗವು ದೋಷರಹಿತವಾದುದೇ ಆಗುವುದು. ಅದು ಪ್ರಾತಃಕಾಲದಲ್ಲಿ ಪಾಪಗಳನ್ನು ಧ್ವಂಸಮಾಡುವುದು.

೪೭. ಪ್ರೇತವೆಂಬ ಹೆಸರುಳ್ಳ ಆ ಚತುರ್ದಶಿಯ ದಿನ ಮಾಷಪತ್ರದ ಶಾಕವನ್ನು ಊಟಮಾಡಿ ನರನು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

೪೮. ಆಶ್ವೀಜಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಚಂದ್ರನ ಕ್ಷಯತಿಥಿಯಲ್ಲಿಯೂ ಅಮಾವಾಸ್ಯೆಯ ಆದಿಯಲ್ಲಿ ಸ್ವಾತಿಯು ಸೇರಿಕೊಂಡಿದ್ದರೂ ಸರಿ, ಆಗ ದೀಪಾವಲಿಯಾಗುತ್ತದೆ.

೪೯. 'ಈ ಮೂರು ದಿನಗಳನ್ನೂ ದೀಪೋತ್ಸವದ ಮೂರು ದಿನಗಳನ್ನಾಗಿ ಎಣಿಸಬೇಕು.'—ಹೀಗೆಂದು ಶ್ರೀಹರಿಯು ಸಂತುಷ್ಟನಾಗಿ ಬಲಿಚಕ್ರವರ್ತಿಗೆ ಹೇಳಿರುವನು.

೫೦. 'ನಿನ್ನ ಮನಸ್ಸಿನಲ್ಲಿ ಏನೇನಿದೆಯೋ ಅದನ್ನೆಲ್ಲ ವರವನ್ನಾಗಿ ಕೇಳು. ನಿನಗೆ ಮಂಗಳವಾಗಲಿ'—ಹೀಗೆಂದು ನುಡಿದ ವಿಷ್ಣುವಿನ ವಚನವನ್ನು ಕೇಳಿ ಬಲಿಯು ಈ ಮಾತನ್ನು ಹೇಳಿದನು.

೫೧. "ನನಗಾಗಿ ಏನುತಾನೆ ಯಾಚಿಸತಕ್ಕದ್ದಿದೆ? ಎಲ್ಲವನ್ನೂ ನಾನು ದಾನಮಾಡಿಬಿಟ್ಟಿದ್ದೇನೆ. ಲೋಕಕ್ಕಾಗಿ ಬೇಡಿಕೊಳ್ಳುತ್ತೇನೆ. ಶಕ್ತನಾಗಿದ್ದರೆ ಅದನ್ನು ನನಗೆ ಕೊಡು.

ಮಯಾದ್ಯ ತೇ ಧರಾ ದತ್ತಾ ವಾಮನಚ್ಛದ್ಮರೂಪಿಣೇ ।
ತ್ರಿಭಿಃ ಪದೈಸ್ತ್ರಿದಿವಸೈಃ ಸಾ ಚಾಕ್ರಾಂತಾ ಯತಸ್ತ್ವಯಾ ॥ ೫೨ ॥
ತಸ್ಮಾದ್ಭೂಮಿತಲೇ ರಾಜ್ಯಂ ಅಸ್ತು ಘಸ್ರತ್ರಯೇ ಹರೇ ॥ ೫೩ ॥
ಮದ್ರಾಜ್ಯೇ ಯೇ ದೀಪದಾನಂ ಭುವಿ ಕುರ್ವಂತಿ ಮಾನವಾಃ ।
ತೇಷಾಂ ಗೃಹೇ ತವ ಸ್ತ್ರೀಯಂ ಸದಾ ತಿಷ್ಠತು ಸುಸ್ಥಿರಾ ॥ ೫೪ ॥
ಮಮ ರಾಜ್ಯೇ ಗೃಹೇ ಯೇಷಾಂ ಅಂಧಕಾರಃ ಪತಿಷ್ಯತಿ ।
ಲಕ್ಷ್ಮೀಸಂತಾನಾಂಧಕಾರಃ ಸದಾ ಪತತು ತದ್ಗೃಹೇ ॥ ೫೫ ॥
ಚತುರ್ದಶ್ಯಾಂ ಚ ಯೇ ದೀಪಾನ್ ನರಕಾಯ ದದಂತಿ ಚ ।
ತೇಷಾಂ ಪಿತೃಗಣಾಸ್ಸರ್ವೇ ನರಕೇ ನ ವಸಂತಿ ಚ ॥ ೫೬ ॥
ಬಲಿರಾಜ್ಯಂ ಸಮಾಸಾದ್ಯ ಯೈರ್ನ ದೀಪಾವಲಿಃ ಕೃತಾ ।
ತೇಷಾಂ ಗೃಹೇ ಕಥಂ ದೀಪಾಃ ಪ್ರಜ್ವಲಿಷ್ಯಂತಿ ಕೇಶವ ॥ ೫೭ ॥
ಬಲಿರಾಜ್ಯೇ ತು ಯೇ ಲೋಕಾಃ ಶೋಕಾನುತ್ಸಾಹಕಾರಿಣಃ ।
ತೇಷಾಂ ಗೃಹೇ ಸದಾ ಶೋಕಃ ಪತೇದಿತಿ ನ ಸಂಶಯಃ ॥ ೫೮ ॥

---

೫೨. ವಾಮನನಂತೆ ಛದ್ಮರೂಪವನ್ನು ಧರಿಸಿ ಬಂದ ನಿನಗೆ ನಾನು ಈಗ ಭೂಮಿಯನ್ನು ಕೊಟ್ಟೆನು. ಆ ಭೂಮಿಯನ್ನು ನೀನು ಮೂರು ಪಾದಗಳಿಂದ ಮೂರು ದಿವಸಗಳಲ್ಲಿ ಆಕ್ರಮಿಸಿಕೊಂಡೆ.

೫೩. ಹರಿಯೇ! ಆದ್ದರಿಂದ, ನನಗೆ ಭೂತಲದಲ್ಲಿ ಮೂರುಗಳಿಗೆಯ ಕಾಲ ರಾಜ್ಯವಿರಲಿ.

೫೪. ನನ್ನ ರಾಜ್ಯದಲ್ಲಿ ಯಾವ ಮಾನವರು ಭೂಮಿಯಲ್ಲಿ ದೀಪದಾನ ವನ್ನು ಮಾಡುತ್ತಾರೋ ಅವರ ಮನೆಯಲ್ಲಿ ನಿನ್ನ ರಾಣಿಯಾದ ಈ ಲಕ್ಷ್ಮಿಯು ಸದಾ ಸುಸ್ಥಿರಳಾಗಿ ನೆಲಸಿರಲಿ.

೫೫. ನನ್ನ ರಾಜ್ಯದಲ್ಲಿ ಯಾರ ಮನೆಯಲ್ಲಿ ಅಂಧಕಾರವಿರುತ್ತದೆಯೋ ಆ ಮನೆಯಲ್ಲಿ ಸಿರಿಯು ಮತ್ತು ಸಂತಾನದ ಅಂಧಕಾರವೂ ಸದಾ ಉಂಟಾಗಲಿ.

೫೬. ಚತುರ್ದಶಿಯದಿನ ಯಾರು ದೀಪಗಳನ್ನು ನರಕನಿಗೆಂದು ಕೊಡು ತ್ತಾರೆಯೋ ಅವರ ಪಿತೃಗಣಗಳು ನರಕದಲ್ಲಿ ವಾಸಿಸುವುದೇ ಇಲ್ಲ.

೫೭. ಓ ಕೇಶವಾ! ಬಲಿಯ ರಾಜ್ಯವನ್ನು ಸೇರಿ ಯಾರು ದೀಪಾವಲಿಯನ್ನಿ ಡುವುದಿಲ್ಲವೋ ಅವರ ಮನೆಯಲ್ಲಿ ದೀಪಗಳು ಹೇಗೆತಾನೇ ಬೆಳಗುತ್ತಿರುವುವು?

೫೮. ನನ್ನ ರಾಜ್ಯದಲ್ಲಿ ಯಾವ ಜನರು ಶೋಕ ಮತ್ತು ಅನುತ್ಸಾಹವ ನ್ನುಂಟುಮಾಡುವವರಾಗಿರುವರೋ ಅವರ ಮನೆಯಲ್ಲಿ ಸದಾ ಕಾಲವೂ ಶೋಕ ವುಂಟಾಗುತ್ತದೆ. ಸಂಶಯವಿಲ್ಲವು.

ಚತುರ್ದಶೀತ್ರಯೇ ರಾಜ್ಯಂ ಬಲೇರಸ್ತ್ವಿತಿ ಯಾಚಯೇತ್ ।
ಪುರಾ ವಾಮನರೂಪೇಣ ಪ್ರಾರ್ಥಯಿತ್ವಾ ಧರಾಮಿಮಾಂ ।
ದದಾವತಿಥಯೇಂದ್ರಾಯ ಬಲಿಂ ಪಾತಾಲವಾಸಿನಂ ॥ ೫೯ ॥
ದತ್ತಂ ದೈತ್ಯಪತೇರಿತ್ಥಂ ಹರಿಣಾ ತದ್ದಿನತ್ರಯಂ ।
ತಸ್ಮಾನ್ಮಹೋತ್ಸವಂ ಚಾತ್ರ ಸರ್ವಥೈವ ಹಿ ಕಾರಯೇತ್ ॥ ೬೦ ॥
ಮಹಾರಾತ್ರಿಸ್ಸಮುತ್ಪನ್ನಾ ಚತುರ್ದಶ್ಯಾಂ ಮುನೀಶ್ವರಾಃ ।
ಅತಸ್ತದುತ್ಸವಃ ಕಾರ್ಯಃ ಶಕ್ತಿಪೂಜಾಪರಾಯಣೈಃ ॥ ೬೧ ॥
ಬಲಿರಾಜ್ಯಂ ಸಮಾಸಾದ್ಯ ಯಕ್ಷಗಂಧರ್ವಕಿನ್ನರಾಃ ।
ಔಷಧ್ಯಶ್ಚ ಪಿಶಾಚಾಶ್ಚ ಮಂತ್ರಾಶ್ಚ ಮಣಯಸ್ತಥಾ ॥ ೬೨ ॥
ಸರ್ವ ಏವ ಪ್ರಹೃಷ್ಯಂತಿ ನೃತ್ಯಂತಿ ಚ ನಿಶಾಮುಖೇ ।
ತತ್ತನ್ಮಂತ್ರಾಶ್ಚ ಸಿಧ್ಯಂತಿ ಬಲಿರಾಜ್ಯೇ ನ ಸಂಶಯಃ ॥ ೬೩ ॥
ಬಲಿರಾಜ್ಯಂ ಸಮಾಸಾದ್ಯ ಯಥಾ ಲೋಕಾಸ್ಸುಹರ್ಷಿತಾಃ ।
ತಥಾ ತದ್ದಿನಮಧ್ಯೇ ತು ಲೋಕಾಸ್ಸ್ಯುರ್ಹರ್ಷಿತಾ ಭೃಶಂ ॥ ೬೪ ॥

---

೫೯. ಚತುರ್ದಶಿಯ ಮೂರು ದಿನಗಳೂ ನನಗೆ ರಾಜ್ಯವಿರಲಿ" ಎಂದು ಪ್ರಾರ್ಥಿಸಬೇಕು. ಪೂರ್ವದಲ್ಲಿ ವಾಮನರೂಪಧಾರಿಯಾದ ಹರಿಯು ಪಾತಾಲ ವಾಸಿಯಾದ ಬಲಿಯನ್ನು ಬೇಡಿ ಈ ಧರೆಯನ್ನು ತೆಗೆದುಕೊಂಡು ಅದನ್ನು ತನ್ನ ಅತಿಥಿಯಾದ ಇಂದ್ರನಿಗೆ ಕೊಟ್ಟನು.

೬೦. ಈ ರೀತಿಯಾಗಿ ದೈತ್ಯಪತಿಯಾದ ಬಲಿಯ ರಾಜ್ಯವು ಹರಿಯಿಂದ ದೇವೇಂದ್ರನಿಗೆ ಕೊಡಲ್ಪಟ್ಟಿತು. ಆದುದರಿಂದ ಈ ಮೂರು ದಿನಗಳೂ ಸರ್ವಥಾ ಮಹೋತ್ಸವವನ್ನು ನಡೆಸಬೇಕು.

೬೧. ಮುನೀಶ್ವರರೇ! ಚತುರ್ದಶಿಯ ದಿನ ಮಹಾರಾತ್ರಿಯುಂಟಾಗುವುದು. ಆದುದರಿಂದ ಶಕ್ತಿಪೂಜಾಪರಾಯಣರಾದವರು ಆ ಉತ್ಸವವನ್ನು ಮಾಡಬೇಕು.

೬೨-೬೩. ಬಲಿರಾಜ್ಯವನ್ನು ಸೇರಿ ಯಕ್ಷಗಂಧರ್ವಕಿನ್ನರರೂ, ಔಷಧಿಗಳೂ, ಪಿಶಾಚಗಳೂ, ಮಂತ್ರಗಳೂ, ಮಣಿಗಳೂ—ಎಲ್ಲರೂ ಪ್ರಾರಂಭದಲ್ಲಿ ಹರ್ಷ ಹೊಂದುತ್ತಾರೆ; ನರ್ತಿಸುತ್ತಾರೆ. ಬಲಿರಾಜ್ಯದಲ್ಲಿ ಆಯಾ ಮಂತ್ರಗಳೂ ಕೂಡ ಸಿದ್ಧಿಸುತ್ತವೆ. ಇದರಲ್ಲಿ ಸಂಶಯವಿಲ್ಲವು.

೬೪. ಬಲಿರಾಜ್ಯವನ್ನು ಸೇರಿ ಲೋಕವೆಲ್ಲವೂ ಯಾವರೀತಿ ಹರ್ಷಿತವಾಗುವುದೊ ಅದೇ ರೀತಿ ಆ ದಿನದ ಮಧ್ಯದಲ್ಲಿಯೂ ಲೋಕದವರೆಲ್ಲ ಅತ್ಯಂತ ಹರ್ಷಿತರಾಗುವರು.

ತುಲಾಸಂಸ್ಥೇ ಸಹಸ್ರಾಂಶೌ ಪ್ರದೋಷೇ ಭೂತದರ್ಶಯೋಃ ।
ಉಲ್ಕಾಹಸ್ತಾ ನರಾ ಕುರ್ಯುಃ ಪಿತೄಣಾಂ ಮಾರ್ಗದರ್ಶನಂ ॥ ೬೫ ॥
ನರಕಸ್ಥಾಸ್ತು ಯೇ ಪ್ರೇತಾಃ ತೇ ಮಾರ್ಗಂ ತು ವ್ರತಾತ್ಸದಾ ।
ಪಶ್ಯಂತ್ಯೇವ ನ ಸಂದೇಹಃ ಕಾರ್ಯೋಽತ್ರ ಮುನಿಪುಂಗವೈಃ ॥ ೬೬ ॥
ಆಶ್ವಿನೇ ಮಾಸಿ ಭೂತಾದಿತಿಥಯಃ ಕೀರ್ತಿತಾಸ್ತ್ರಯಃ ।
ದೀಪದಾನಾದಿಕಾರ್ಯೇಷು ಗ್ರಾಹ್ಯಾ ಮಧ್ಯಾಹ್ನಕಾಲಿಕಾಃ ॥ ೬೭ ॥
ಯದಿ ಸ್ಯುಃ ಸಂಗವಾದರ್ವಾಗೇತಾಶ್ಚ ತಿಥಯಸ್ತ್ರಯಃ ।
ದೀಪದಾನಾದಿಕಾರ್ಯೇಷು ಕರ್ತವ್ಯಾಃ ಪೂರ್ವಸಂಯುತಾಃ ॥ ೬೮ ॥

ಋಷಯ ಊಚುಃ:—

ಕೌಮುದಿನ್ಯಾಸ್ತು ಮಾಹಾತ್ಮ್ಯಂ ಪ್ರಷ್ಟುಮಿಚ್ಛಾಮಹೇ ದ್ವಿಜಾಃ ।
ತಸ್ಮಿನ್ ದಿನೇ ತು ಕಿಂ ಭೋಜ್ಯಂ ಕಸ್ಯ ಪೂಜಾಂ ತು ಕಾರಯೇತ್ ॥೬೯॥
ಕಿಮರ್ಥಂ ಕ್ರಿಯತೇ ಸಾ ತು ತಸ್ಯಾಃ ಕಾ ದೇವತಾ ಭವೇತ್ ।
ಕಿಂ ಚ ತತ್ರ ಭವೇದ್ದೇಯಂ ಕಿಂ ನ ದೇಯಂ ವಿಶೇಷತಃ ॥ ೭೦ ॥

---

೬೫. ಸೂರ್ಯನು ತುಲಾರಾಶಿಯಲ್ಲಿರಲಾಗಿ ಪ್ರದೋಷಕಾಲದಲ್ಲಿ ಕಾರ್ತಿಕ ಮತ್ತು ಅಮಾವಾಸ್ಯೆಯ ದಿನಗಳಲ್ಲಿ ನರರು ಉಲ್ಕಾಹಸ್ತರಾಗಿ (ಕೊಳ್ಳಿಯಿಂದ ಬೆಳಗುವ ಕೈಗಳುಳ್ಳವರಾಗಿ) ಪಿತೃಗಳಿಗೆ ಮಾರ್ಗದರ್ಶನಮಾಡಬೇಕು.

೬೬. ಯಾವ ಪ್ರೇತರು ನರಕದಲ್ಲಿರುವರೋ ಅವರು ವ್ರತದ ಮಹಿಮೆಯಿಂದ ಸದಾ ಕಾಲವೂ ಮಾರ್ಗವನ್ನು ಕಂಡೇ ಕಾಣುತ್ತಾರೆ. ಇದರಲ್ಲಿ ಸಂದೇಹವಿಲ್ಲವು. ಮುನಿಪುಂಗವರೂ ಇದನ್ನು ಆಚರಿಸಬೇಕು.

೬೭. ಆಶ್ವಿನಮಾಸದಲ್ಲಿ ಭೂತಾದಿ ತಿಥಿಗಳು ಮೂರೆಂದು ಹೇಳಲ್ಪಟ್ಟವೆ. ದೀಪದಾನಾದಿ ಕಾರ್ಯಗಳಲ್ಲಿ ಮಧ್ಯಾಹ್ನಕಾಲದಲ್ಲಿ ಬಂದಿರುವ ತಿಥಿಗಳನ್ನು ಗ್ರಹಿಸಬೇಕು.

೬೮. ಈ ಮೂರು ತಿಥಿಗಳು ಪ್ರಾತಃಸ್ನಾನಕಾಲದ ಮೇಲೆ ಮೂರು ಮುಹೂರ್ತಗಳ ಕಾಲ ದೀಪದಾನಾದಿ ಕಾರ್ಯಗಳನ್ನು ಪೂರ್ವಯುಕ್ತಗಳಲ್ಲೇ ನಡೆಸಬೇಕು.

೬೯. ಋಷಿಗಳು ಕೇಳುತ್ತಾರೆ:—“ಎಲೈ ದ್ವಿಜರೇ! ಕೌಮೋದಿನಿಯ ಮಾಹಾತ್ಮ್ಯವನ್ನು ಕೇಳಲಿಚ್ಛಿಸುತ್ತೇವೆ. ಆ ದಿನ ಏನು ಭೋಜನಮಾಡಬೇಕು? ಯಾರನ್ನು ಪೂಜೆಮಾಡಬೇಕು?

೭೦. ಆ ಪೂಜೆಯನ್ನು ಏತಕ್ಕಾಗಿ ಮಾಡಬೇಕು? ಅದಕ್ಕೆ ದೇವತೆ ಯಾರು? ಆ ಪೂಜೆಯಲ್ಲಿ ಏನೇನು ಕೊಡಬೇಕು? ವಿಶೇಷವಾಗಿ, ಏನನ್ನು ಕೊಡಬಾರದು?

ಪ್ರಹರ್ಷಃ ಕೋಽತ್ರ ನಿರ್ದಿಷ್ಟಃ ಕ್ರೀಡಾ ಕಾತ್ರ ಪ್ರಕೀರ್ತಿತಾ ।
ದೀಪಾವಲ್ಯಾಃ ಫಲಂ ಸರ್ವಂ ವದಂತು ಋಷಿಸತ್ತಮಾಃ ॥ ೭೧ ॥

ವಾಲಖಿಲ್ಯಾ ಊಚುಃ:—

ತತಃ ಪ್ರಭಾತಸಮಯೇ ತ್ವಮಾಯಾಂ ತು ಮುನೀಶ್ವರಾಃ ।
ಸ್ನಾತ್ವಾ ದೇವಾನ್ ಪಿತ್ರೂನ್ ಭಕ್ತ್ಯಾ ಸಂಪೂಜ್ಯಾಥ ಪ್ರಣಮ್ಯ ಚ ॥೭೨॥
ಕೃತ್ವಾ ತು ಪಾರ್ವಣಶ್ರಾದ್ಧಂ ದಧಿಕ್ಷೀರಘೃತಾದಿಭಿಃ ।
ದಿವಾ ತತ್ರ ನ ಭೋಕ್ತವ್ಯಂ ಋತೇ ಬಾಲಾತುರಾಜ್ಜನಾತ್ ॥ ೭೩ ॥
ತತಃ ಪ್ರದೋಷಸಮಯೇ ಪೂಜಯೇದಿಂದಿರಾಂ ಶುಭಾಂ ।
ಕುರ್ಯಾನ್ನಾನಾವಿಧೈರ್ವಸ್ತ್ರೈಃ ಸ್ವಚ್ಛಂ ಲಕ್ಷ್ಮ್ಯಾಶ್ಚ ಮಂಡಪಂ ॥ ೭೪ ॥
ನಾನಾಪುಷ್ಪೈಃ ಪಲ್ಲವೈಶ್ಚ ಚಿತ್ರೈಶ್ಚಾಪಿ ವಿಚಿತ್ರಿತಂ ।
ತತ್ರ ಸಂಪೂಜಯೇಲ್ಲಕ್ಷ್ಮೀಂ ದೇವಾಂಶ್ಚಾಪಿ ಪ್ರಪೂಜಯೇತ್ ॥ ೭೫ ॥
ಸಂಪೂಜ್ಯಾ ದೇವನಾರ್ಯೋಽಪಿ ಬಹುಭಿಶ್ಚೋಪಚಾರಕೈಃ ।
ಪಾದಸಂವಾಹನಂ ಕುರ್ಯಾತ್ ಲಕ್ಷ್ಮ್ಯಾದೀನಾಂ ತು ಭಕ್ತಿತಃ ॥ ೭೬ ॥

---

೭೧. ಯಾವ ರೀತಿಯ ಹರ್ಷವು ಇಲ್ಲಿ ನಿರ್ದಿಷ್ಟವಾಗಿದೆ? ಯಾವ ಕ್ರೀಡೆಯು ಇಲ್ಲಿ ಹೇಳಲ್ಪಟ್ಟಿದೆ? ಎಲೈ ಋಷಿಶ್ರೇಷ್ಠರೇ! ದೀಪಾವಲಿಯ ಫಲವೆಲ್ಲವನ್ನೂ ಹೇಳಬೇಕು.''

೭೨–೭೩. ವಾಲಖಿಲ್ಯರು ಹೇಳುತ್ತಾರೆ:—ಎಲೈ ಮುನೀಶ್ವರರೇ! ಅಮಾವಾಸ್ಯೆಯಲ್ಲಿ ಪ್ರಭಾತಸಮಯದಲ್ಲಿ ಸ್ನಾನಮಾಡಿ ದೇವತೆಗಳನ್ನೂ, ಪಿತೃಗಳನ್ನೂ ಭಕ್ತಿಯಿಂದ ಪೂಜಿಸಿ ನಮಸ್ಕರಿಸಿ ಹಾಲು ಮೊಸರು ತುಪ್ಪ ಮೊದಲಾದವುಗಳಿಂದ ಪಾರ್ವಣಶ್ರಾದ್ಧವನ್ನು ಮಾಡಬೇಕು. ಆಗ ಹಗಲು ಹೊತ್ತು ಊಟಮಾಡಬಾರದು. ಬಾಲರಿಗೂ, ಆತುರರಾದ ಜನರಿಗೂ ಈ ನಿರ್ಬಂಧವಿರುವುದಿಲ್ಲವು.

೭೪. ಬಳಿಕ ಪ್ರದೋಷಸಮಯದಲ್ಲಿ ಶುಭಕರಳಾದ ಇಂದಿರೆಯನ್ನು ಪೂಜಿಸಬೇಕು. ನಾನಾವಿಧ ವಸ್ತ್ರಗಳಿಂದ ಲಕ್ಷ್ಮೀದೇವಿಗೆ ಸ್ವಚ್ಛವಾದ ಮಂಟಪವನ್ನು ಕಟ್ಟಬೇಕು.

೭೫. ನಾನಾ ಬಗೆಯ ಹೂವುಗಳಿಂದಲೂ ಬಗೆಬಗೆಯ ಚಿಗುರುಗಳಿಂದಲೂ ಚಿತ್ರಗಳಿಂದಲೂ ಆ ಮಂಟಪವನ್ನು ಅಲಂಕರಿಸಬೇಕು. ಅಲ್ಲಿ ಲಕ್ಷ್ಮಿಯನ್ನು ನೆಲೆಗೊಳಿಸಿ ಪೂಜಿಸಬೇಕು. ದೇವತೆಗಳನ್ನೂ ಪೂಜಿಸಬೇಕು.

೭೬. ದೇವನಾರಿಯರನ್ನು ಕೂಡ ಬಹುವಾದ ಉಪಚಾರಗಳಿಂದ ಪೂಜೆ ಮಾಡಬೇಕು. ಲಕ್ಷ್ಮಿಯೇ ಮೊದಲಾದ ದೇವತೆಗಳಿಗೆ ಭಕ್ತಿಯಿಂದ ಪಾದಸೇವೆ ಮಾಡಬೇಕು.

ಅಸ್ಮಿನ್ನಹನಿ ಸರ್ವೇಽಪಿ ವಿಷ್ಣುನಾ ಮೋಚಿತಾಃ ಪುರಾ ।
ಬಲಿಕಾರಾಗೃಹಾದ್ದೇವಾ ಲಕ್ಷ್ಮೀಶ್ಚಾಪಿ ವಿಮೋಚಿತಾ ॥ ೭೭ ॥
ಲಕ್ಷ್ಮ್ಯಾ ಸಾರ್ಧಂ ತತೋ ದೇವಾ ಜಗ್ಮುಃ ಕ್ಷೀರೋದಧೌ ಪುನಃ ।
ಪ್ರಸುಪ್ತಾ ಬಹುಕಾಲಂ ತೇ ಸುಖಂ ತಸ್ಮಾನ್ಮುನೀಶ್ವರಾಃ ॥ ೭೮ ॥
ರಚನೀಯಾಸ್ಸೂತ್ರಗರ್ಭಾಃ ಪರ್ಯಂಕಾಶ್ಚ ಸುತೂಲಿಕಾಃ ।
ದುಗ್ಧಫೇನೋಪಮೈರ್ವಸ್ತ್ರೈರಾಸ್ತೃತಾಶ್ಚ ಯಥಾ ದಿಶಂ ॥ ೭೯ ॥
ಸ್ಥಾಪಯೇತ್ತಾನ್ ಸುರಾನ್ ಲಕ್ಷ್ಮೀಂ ವೇದಘೋಷಸಮನ್ವಿತಃ ।
ಲಕ್ಷ್ಮೀರ್ದೈತ್ಯಭಯಾನ್ಮುಕ್ತಾ ಸುಖಂ ಸುಪ್ತಾಂಬುಜೋದರೇ ॥ ೮೦ ॥
ಅತೋಽತ್ರ ವಿಧಿವತ್ಕಾರ್ಯಾ ತುಷ್ಟ್ಯೈ ತು ಸುಖಸುಪ್ತಿಕಾ ।
ತದಹ್ನಿ ಪದ್ಮಶಯ್ಯಾಂ ಯಃ ಪದ್ಮಾಸೌಖ್ಯವಿವೃದ್ಧಯೇ ॥ ೮೧ ॥
ಕುರ್ಯಾತ್ತಸ್ಯ ಗೃಹಂ ಮುಕ್ತ್ವಾ ತತ್ಪದ್ಮಾ ಕ್ವಾಪಿ ನ ವ್ರಜೇತ್ ।
ನ ಕುರ್ವಂತಿ ನರಾ ಇತ್ಥಂ ಲಕ್ಷ್ಮ್ಯಾ ಯೇ ಸುಖಸುಪ್ತಿಕಾಂ ॥ ೮೨ ॥
ಧನಚಿಂತಾವಿಹೀನಾಸ್ತೇ ಕಥಂ ರಾತ್ರೌ ಸ್ವಪಂತಿ ಹಿ ।
ತಸ್ಮಾತ್ಸರ್ವಪ್ರಯತ್ನೇನ ಲಕ್ಷ್ಮೀಂ ಸಂಪೂಜಯೇನ್ನರಃ ॥ ೮೩ ॥

---

೭೭. ಈ ದಿನ ಪೂರ್ವದಲ್ಲಿ ಬಲಿಯ ಕಾರಾಗೃಹದಿಂದ ಸರ್ವದೇವತೆಗಳೂ ವಿಷ್ಣುವಿನಿಂದ ಬಿಡಿಸಲ್ಪಟ್ಟರು. ಲಕ್ಷ್ಮಿಯೂ ಕೂಡ ಅವನ ಕಾರಾಗೃಹದಿಂದ ವಿಮೋಚನೆ ಹೊಂದಿದಳು.

೭೮–೮೦. ಬಳಿಕ ದೇವತೆಗಳು ಲಕ್ಷ್ಮಿಯೊಡನೆ ಅಲ್ಲಿಂದ ಕ್ಷೀರಸಮುದ್ರಕ್ಕೆ ಹೋದರು. ಅಲ್ಲಿ ಅವರು ಬಹುಕಾಲ ಮಲಗಿ ಸುಖವಾಗಿ ನಿದ್ರಿಸಿದರು. ಎಲೈ ಮುನೀಶ್ವರರೇ! ಆದುದರಿಂದ ಸೂತ್ರವನ್ನೊಳಕೊಂಡುವೂ, ಒಳ್ಳೆಯ ಮೆತ್ತೆಗಳಿಂದ ಕೂಡಿದುವೂ, ಹಾಲಿನ ನೊರೆಯಂತೆ ಬೆಳ್ಳಗಿರುವ ವಸ್ತ್ರಗಳನ್ನು ಹಾಸಿರುವುವೂ ಆದ ಮಂಚಗಳನ್ನು ರಚಿಸಬೇಕು. ಅವನ್ನು ತಕ್ಕತಕ್ಕ ದಿಕ್ಕುಗಳಲ್ಲಿ ಡಬೇಕು. ದೇವತೆಗಳನ್ನೂ, ಲಕ್ಷ್ಮಿಯನ್ನೂ ಅವುಗಳಲ್ಲಿ ವೇದಘೋಷದೊಡನೆ ಸ್ಥಾಪಿಸಬೇಕು. 'ಲಕ್ಷ್ಮಿಯು ದೈತ್ಯಭಯದಿಂದ ಬಿಡುಗಡೆ ಹೊಂದಿದಳು. ಅಂಬುಜದಲ್ಲಿ ಸುಖವಾಗಿ ಮಲಗಿದಳು' ಎಂದು ಘೋಷಿಸಬೇಕು.

೮೧–೮೩. ಅನಂತರದಲ್ಲಿ ಲಕ್ಷ್ಮೀದೇವಿಯ ಸಂತುಷ್ಟಿಗಾಗಿ 'ಸುಖಸುಪ್ತಿಕಾ' ಉತ್ಸವವನ್ನು ವಿಧಿವತ್ತಾಗಿ ನೆರವೇರಿಸಬೇಕು. ಆ ದಿನ ಯಾವನು ಪದ್ಮೆಯ ಸೌಖ್ಯವೃದ್ಧಿಗಾಗಿ ಪದ್ಮಶಯ್ಯೆಯನ್ನು ರಚಿಸುತ್ತಾನೆಯೋ ಅವನ ಮನೆಯನ್ನು ಬಿಟ್ಟು ಪದ್ಮೆಯು ಮತ್ತೆಲ್ಲಿಯೂ ಹೋಗುವುದಿಲ್ಲ. ಹೀಗೆ ಲಕ್ಷ್ಮಿಗೆ ಯಾರು ಸುಖನಿದ್ರೆಯನ್ನು ಮಾಡಿಸುವುದಿಲ್ಲವೋ ಅವರು ಹೇಗೆತಾನೆ ಧನಚಿಂತಾ

ಸ ತು ದಾರಿದ್ರ್ಯನಿರ್ಮುಕ್ತಃ ಸ್ವಜಾತೌ ಸ್ಯಾತ್ಪ್ರತಿಷ್ಠಿತಃ ।
ಜಾತಿಪತ್ರಲವಂಗೈಲಾತ್ವಕ್ಕರ್ಪೂರರಸಮನ್ವಿತಂ ॥ ೮೪ ॥
ಸಾಚಯಿತ್ವಾ ಗವ್ಯದುಗ್ಧಂ ಸಿತಾಂ ದತ್ವಾ ಯಥೋಚಿತಾಂ ।
ಲಡ್ಡುಕಾಂಸ್ತಸ್ಯ ಕುರ್ವೀತ ತಾಂಶ್ಚ ಲಕ್ಷ್ಮ್ಯೈ ಸಮರ್ಪಯೇತ್ ॥ ೮೫ ॥
ಅನ್ಯಚ್ಚತುರ್ವಿಧಂ ಭಕ್ಷ್ಯಂ ದದ್ಯಾಚ್ಛ್ರೀಃ ಪ್ರೀಯತಾಮಿತಿ ।
ಅಪ್ರಬುದ್ಧೇ ಹರೌ ಪೂರ್ವಂ ಸ್ತ್ರೀಭಿರ್ಲಕ್ಷ್ಮೀಂ ಪ್ರಬೋಧಯೇತ್॥೮೬॥
ಪ್ರಬೋಧಸಮಯೇ ಲಕ್ಷ್ಮೀಂ ಬೋಧಯಿತ್ವಾ ಭುನಕ್ತಿ ಯಾ ।
ಪುಮಾನ್ ವಾ ವತ್ಸರಂ ಯಾವತ್ ಲಕ್ಷ್ಮೀಸ್ತಂ ನೈವ ಮುಂಚತಿ ॥೮೭॥
ಅಭಯಂ ಪ್ರಾಪ್ಯ ವಿಪ್ರೇಭ್ಯೋ ವಿಷ್ಣುಭೀತಾಸ್ಸುರದ್ವಿಷಃ ।
ಕ್ಷೀರಾಬ್ಧೌ ತುಷ್ಟುವುರ್ಜ್ಞಾತ್ವಾ ಸುಪ್ತಾಂ ಪದ್ಮಾಶ್ರಿತಾಂ ಶ್ರಿಯಂ॥೮೮॥
ತ್ವಂ ಜ್ಯೋತಿಃ ಶ್ರೀರವೀಂದ್ವಗ್ನಿವಿದ್ಯುತ್ಸೌವರ್ಣತಾರಕಾಃ ।
ಸರ್ವೇಷಾಂ ಜ್ಯೋತಿಷಾಂ ಜ್ಯೋತಿಃ ದೀಪಜ್ಯೋತಿಸ್ಥಿತೇ ನಮಃ ॥ ೮೯ ॥

---

ವಿಹೀನರಾಗಿ ರಾತ್ರಿಹೊತ್ತು ಮಲಗಿಯಾರು? ಆದ್ದರಿಂದ ಸರ್ವಪ್ರಯತ್ನ ದಿಂದಲೂ ಮನುಷ್ಯನು ಮಹಾಲಕ್ಷ್ಮಿಯನ್ನು ಪೂಜಿಸಬೇಕು.

೮೪-೮೫. ಅಂತಹನು ದಾರಿದ್ರ್ಯದಿಂದ ಮುಕ್ತನಾಗಿ ಸ್ವಜಾತಿಯಲ್ಲಿ ಬಹು ಪ್ರತಿಷ್ಠಾವಂತನಾಗುತ್ತಾನೆ. ಜಾಯಪತ್ರೆ, ಲವಂಗ, ಏಲಕ್ಕಿ ತೊಗಟೆ, ಕರ್ಪೂರ—ಇವನ್ನು ಹಾಕಿ ಹಸುವಿನ ಹಾಲನ್ನು ಚೆನ್ನಾಗಿ ಕಾಯಿಸಿ ಯಥೋಚಿತವಾಗಿ ಸೇರಿಸಿ ಅದರಿಂದ ಲಡ್ಡುಗೆಗಳನ್ನು ಮಾಡಬೇಕು. ಅವನ್ನು ಲಕ್ಷ್ಮಿಗೆ ಸಮರ್ಪಿಸಬೇಕು.

೮೬. ಬೇರೆ ನಾಲ್ಕುಬಗೆಯ ಭಕ್ಷ್ಯಗಳನ್ನೂ 'ಶ್ರೀಯು ಪ್ರೀತಳಾಗಲಿ' ಎಂದು ಸಮರ್ಪಿಸಬೇಕು. ಹರಿಯು ಏಳುವ ಮೊದಲೇ ಸ್ತ್ರೀಯರಿಂದ ಲಕ್ಷ್ಮಿಯನ್ನು ಎಚ್ಚರಗೊಳಿಸಬೇಕು.

೮೭. ಪ್ರಬೋಧ ಸಮಯದಲ್ಲಿ ಲಕ್ಷ್ಮಿಯನ್ನೆಬ್ಬಿಸಿ ಯಾವಳು ಭೋಜನ ಮಾಡುತ್ತಾಳೆಯೋ ಅಥವಾ ಯಾವ ಪುರುಷನು ಹಾಗೆ ಮಾಡುತ್ತಾನೆಯೋ ಅವರನ್ನು ಲಕ್ಷ್ಮಿಯು ಒಂದು ವರ್ಷಕಾಲ ಅಗಲುವುದೇ ಇಲ್ಲ.

೮೮. ವಿಷ್ಣುವಿನಿಂದ ಭೀತರಾದ ದೇವಶತ್ರುಗಳು ಬ್ರಾಹ್ಮಣರಿಂದ ಅಭಯವನ್ನು ಪಡೆದು ಪದ್ಮನಿಲಯೆಯಾದ ಲಕ್ಷ್ಮಿಯು ಕ್ಷೀರಾಬ್ಧಿಯಲ್ಲಿ ಮಲಗಿರುವಳೆಂದರಿತು ಆಕೆಯನ್ನು ಈ ರೀತಿ ಸ್ತುತಿಸಿದರು.

೮೯. "ನೀನೇ ಜ್ಯೋತಿಯು. ಸೂರ್ಯ, ಚಂದ್ರ, ಅಗ್ನಿ, ವಿದ್ಯುತ್, ಸುವರ್ಣ, ನಕ್ಷತ್ರ—ಇವೇ ಮೊದಲಾದ ಸರ್ವಜ್ಯೋತಿರ್ವಸ್ತುಗಳಲ್ಲಿಯೂ

ಯಾ ಲಕ್ಷ್ಮೀರ್ದಿವಸೇ ಪುಣ್ಯೇ ದೀಪಾವಲ್ಯಾಂ ಚ ಭೂತಲೇ ।
ಗವಾಂ ಗೋಷ್ಠೇ ತು ಕಾರ್ತಿಕ್ಯಾಂ ಸಾ ಲಕ್ಷ್ಮೀರ್ವರದಾ ಮಮ ॥ ೯೦ ॥
ದೀಪದಾನಂ ತತಃ ಕುರ್ಯಾತ್ ಪ್ರದೋಷೇ ಚ ತಥೋಲ್ಮುಕಂ ।
ಭ್ರಾಮಯೇತ್ಸ್ವಸ್ಯ ಶಿರಸಿ ಸರ್ವಾರಿಷ್ಟನಿವಾರಣಂ ॥ ೯೧ ॥
ದೀಪವೃಕ್ಷಾಸ್ತಥಾ ಕಾರ್ಯಾಃ ಶಕ್ತ್ಯಾ ದೇವಗೃಹಾದಿಷು ।
ಚತುಷ್ಪಥೇ ಶ್ಮಶಾನೇ ಚ ನದೀಪರ್ವತವೇಶ್ಮಸು ॥ ೯೨ ॥
ವೃಕ್ಷಮೂಲೇಷು ಗೋಷ್ಠೇಷು ಚತ್ವರೇಷು ಗೃಹೇಷು ಚ ।
ವಸ್ತ್ರೈಃ ಪುಷ್ಪೈಶ್ಶೋಭಿತವ್ಯಾ ರಾಜಮಾರ್ಗಸ್ಯ ಭೂಮಯಃ ॥ ೯೩ ॥
ಸರ್ವಂ ಪುರಮಲಂಕೃತ್ಯ ಪ್ರದೋಷೇ ತದನಂತರಂ ।
ಬ್ರಾಹ್ಮಣಾನ್ ಭೋಜಯಿತ್ವಾದೌ ಸಂಭೋಜ್ಯ ಚ ಬುಭುಕ್ಷಿತಾನ್ ॥
ಅಲಂಕೃತೇನ ಭೋಕ್ತವ್ಯಂ ನವವಸ್ತ್ರೋಪಶೋಭಿನಾ ।
ತತೋಽಪರಾಹ್ಣಸಮಯೇ ಘೋಷಯೇನ್ನಗರಂ ನೃಪಃ ॥ ೯೫ ॥

---

ಇರುವ ದಿವ್ಯಜ್ಯೋತಿಯೂ ನೀನೇ. ದೀಪಜ್ಯೋತಿಯಲ್ಲಿಯೂ ನೀನೇ ನೆಲಸಿದ್ದೀಯೆ. ಅಂತಹ ನಿನಗೆ ನಮಸ್ಕಾರವು.

೯೦. ಯಾವ ಲಕ್ಷ್ಮಿಯು ಈ ಪುಣ್ಯದಿವಸದಲ್ಲಿಯೂ, ದೀಪಾವಲಿಯಲ್ಲಿಯೂ, ಭೂತಲದಲ್ಲಿ ಗೋವುಗಳ ಕೊಟ್ಟಿಗೆಯಲ್ಲಿಯೂ, ಕಾರ್ತಿಕದಲ್ಲಿಯೂ ನೆಲಸಿರುವಳೋ ಆ ಲಕ್ಷ್ಮಿಯು ನನಗೆ ವರದಾಯಕಳಾಗಲಿ."

೯೧. ಬಳಿಕ ದೀಪದಾನಮಾಡಬೇಕು. ಪ್ರದೋಷಕಾಲದಲ್ಲಿ ಉರಿಯುವ ಕೊಳ್ಳಿಯನ್ನು ತನ್ನ ತಲೆಯಮೇಲೆ ಸುತ್ತಿಸಿಕೊಳ್ಳಬೇಕು. ಇದು ಸರ್ವಾರಿಷ್ಟಗಳನ್ನೂ ನಿವಾರಣೆಮಾಡುತ್ತದೆ.

೯೨. ಅದೇ ರೀತಿ ದೇವಗೃಹ, ನಾಲ್ಕುಬೀದಿ ಸೇರಿದ ಚೌಕ, ಸ್ಮಶಾನ, ನದೀ ಪರ್ವತಪ್ರದೇಶ, ಮನೆ—ಇವೇ ಮೊದಲಾದ ಸ್ಥಳಗಳಲ್ಲಿ ಶಕ್ತ್ಯನುಸಾರವಾಗಿ ದೀಪವೃಕ್ಷಗಳನ್ನು ರಚಿಸಬೇಕು.

೯೩. ಮರಗಳ ಬುಡದಲ್ಲಿಯೂ ಕೊಟ್ಟಿಗೆಗಳಲ್ಲಿಯೂ ತೊಟ್ಟಿಗಳಲ್ಲಿಯೂ ಮನೆಗಳಲ್ಲಿಯೂ ದೀಪಗಳನ್ನಿಡಬೇಕು. ರಾಜಮಾರ್ಗದ ಭೂಮಿಗಳನ್ನು ವಸ್ತ್ರಗಳಿಂದಲೂ ಪುಷ್ಪಗಳಿಂದಲೂ ಶೋಭಿಸುವಂತೆ ಮಾಡಬೇಕು.

೯೪–೯೫. ಪ್ರದೋಷಕಾಲದಲ್ಲಿ ಪುರವೆಲ್ಲವನ್ನೂ ಅಲಂಕರಿಸಿ ಬಳಿಕ ಬ್ರಾಹ್ಮಣರಿಗೆ ಭೋಜನಮಾಡಿಸಿ, ಹಸಿದವರಿಗೂ ತೃಪ್ತಿಯಾಗುವಂತೆ ಭೋಜನಮಾಡಿಸಿ ಹೊಸ ಬಟ್ಟೆಯನ್ನುಟ್ಟು ಅಲಂಕೃತನಾಗಿ ಭೋಜನಮಾಡಬೇಕು. ಬಳಿಕ ಅಪರಾಹ್ಣಸಮಯದಲ್ಲಿ ರಾಜನಗರದಲ್ಲಿ ಹೀಗೆ ಸಾರಿಸಬೇಕು.

ಅದ್ಯ ರಾಜ್ಯಂ ಬಲೇರ್ಲೋಕಾ ಯಥೇಚ್ಛಂ ಕ್ರೀಡ್ಯತಾಮಿತಿ ।
ಯಥೇಚ್ಛಂ ಕ್ರೀಡ್ಯತಾಂ ಬಾಲಾ ಇತ್ಯಾಜ್ಞಾಪ್ಯ ನೃಪೇಣ ತು ॥ ೯೬ ॥
ತೇಭ್ಯೋ ದದ್ಯಾತ್ಕ್ರೀಡನಕಂ ತತಃ ಪಶ್ಯೇಚ್ಛುಭಾಶುಭಂ ।
ಬಲಿರಾಜ್ಯೇ ಪ್ರಕರ್ತವ್ಯಂ ಯದ್ಯನ್ಮನಸಿ ವರ್ತತೇ ॥ ೯೭ ॥
ಜೀವಹಿಂಸಾ ಸುರಾಪಾನಂ ಅಗಮ್ಯಾಗಮನಂ ತಥಾ ।
ಚೌರ್ಯಂ ವಿಶ್ವಾಸಘಾತಶ್ಚ ಪಂಚೈತಾನಿ ಮುನೀಶ್ವರಾಃ ।
ಬಲಿರಾಜ್ಯೇ ತು ನರಕದ್ವಾರಾಣ್ಯುಕ್ತಾನಿ ಸಂತ್ಯಜೇತ್ ॥ ೯೮ ॥
ತತೋಽರ್ಧರಾತ್ರಸಮಯೇ ಸ್ವಯಂ ರಾಜಾ ವ್ರಜೇತ್ಪುರಂ ।
ಅವಲೋಕಯಿತುಂ ರಮ್ಯಂ ಪದ್ಭ್ಯಾಮೇವ ಶನೈಶ್ಶನೈಃ ।
ಬಲಿರಾಜ್ಯಪ್ರಮೋದಂ ಚ ದೃಷ್ಟ್ವಾ ಸ್ವಗೃಹಮಾವ್ರಜೇತ್ ॥ ೯೯ ॥
ಏವಂ ಗತೇ ನಿಶೀಥೇ ಚ ಜನೇ ನಿದ್ರಾರ್ಧಲೋಚನೇ ।
ಏವಂ ನಗರನಾರೀಭಿಃ ಶೂರ್ಪಡಿಂಡಿಮವಾದನೈಃ ।
ನಿಷ್ಕಾಸ್ಯತೇ ಪ್ರಹೃಷ್ಟಾಭಿರಲಕ್ಷ್ಮೀಃ ಸ್ವಗೃಹಾಂಗಣಾತ್ ॥ ೧೦೦ ॥

---

೯೬–೯೭. 'ಈಗ ಬಲಿಯ ರಾಜ್ಯಪ್ರಜೆಗಳೆಲ್ಲ ಯಥೇಚ್ಛವಾಗಿ ಕ್ರೀಡಿಸಲಿ' ಎಂದು ಘೋಷಣೆಮಾಡಬೇಕು. ಬಾಲಕರು ಯಥೇಚ್ಛವಾಗಿ ಆಟವಾಡಲೆಂದು ಆಜ್ಞಾಪಿಸಿ ಅವರಿಗೆ ಆಟದ ಸಾಮಾನುಗಳನ್ನು ಕೊಡಬೇಕು. ಬಳಿಕ ಶುಭಾಶುಭವನ್ನು ನೋಡಬೇಕು. ಮನಸ್ಸಿನಲ್ಲಿ ಏನಿದೆಯೋ ಅದನ್ನೆಲ್ಲ ಬಲಿರಾಜ್ಯದಲ್ಲಿ ನೆರವೇರಿಸಬೇಕು.

೯೮. ಜೀವಹಿಂಸೆ, ಸುರಾಪಾನ, ಅಗಮ್ಯಾಗಮನ, ಚೌರ್ಯ, ವಿಶ್ವಾಸಘಾತ—ಈ ಐದೂ ನರಕಕ್ಕೆ ಬಾಗಿಲುಗಳೆಂದು ಹೇಳಲ್ಪಟ್ಟಿವೆ. ಎಲೈ ಮುನೀಶ್ವರರೇ! ಇವನ್ನು ಬಲಿರಾಜ್ಯದಲ್ಲಿ ತ್ಯಜಿಸಿಬಿಡಬೇಕು.

೯೯. ಆಮೇಲೆ ಅರ್ಧರಾತ್ರಿ ಸಮಯದಲ್ಲಿ ರಾಜನು ತಾನೇ ಕಾಲುನಡಗೆಯಲ್ಲಿ ಹೊರಟು ರಮ್ಯವಾದ ಪುರವನ್ನು ನೋಡುವುದಕ್ಕಾಗಿ ಮೆಲ್ಲಮೆಲ್ಲನೆ ಬರಬೇಕು. ಬಲಿರಾಜ್ಯದ ಪ್ರಮೋದವನ್ನು ನೋಡಿ ಸ್ವಗೃಹಕ್ಕೆ ಮರಳಿ ಬರಬೇಕು.

೧೦೦. ರಾತ್ರಿ ಹೀಗೆ ಕಳೆಯುತ್ತಿರಲಾಗಿ ಜನರು ನಿದ್ರೆಯಿಂದ ಅರೆಗಣ್ಮುಚ್ಚಿರಲಾಗಿ ಸಂತುಷ್ಟರಾದ ನಗರದ ನಾರಿಯರು ಶೂರ್ಪಡಿಂಡಿಮಗಳ (ಮೊರದಂತಿರುವ ಡಿಂಡಿಮವಾದ್ಯಗಳ) ವಾದನದಿಂದ ತಮ್ಮತಮ್ಮ ಮನೆಯ ಅಂಗಣದಿಂದ ಅಲಕ್ಷ್ಮಿಯನ್ನು ಹೊರಡಿಸುತ್ತಾರೆ.

ದಂಡೈಕರಜನೀಯೋಗೇ ದರ್ಶಃ ಸ್ಯಾತ್ತು ಪರೇಽಹನಿ ।
ತದಾ ವಿಹಾಯ ಪೂರ್ವೇದ್ಯುಃ ಪರೇಽಹ್ನಿ ಸುಖರಾತ್ರಿಕಾ ॥ ೧೦೧ ॥
ಯೇ ವೈಷ್ಣವಾಽವೈಷ್ಣವಾಶ್ಚ ಬಲಿರಾಜ್ಯೋತ್ಸವಂ ನರಾಃ ।
ನ ಕುರ್ವಂತಿ ವೃಥಾ ತೇಷಾಂ ಧರ್ಮಾಃ ಸ್ಯುರ್ನಾತ್ರ ಸಂಶಯಃ ॥೧೦೨॥
ರಾತ್ರೌ ಜಾಗರಣಂ ಕುರ್ಯಾತ್ ಪುರಾಣಪಠನಾದಿಭಿಃ ।
ದ್ಯೂತೇನ ವಾ ಹರೇರಗ್ರೇ ಗೀತಯಾ ವಾ ತಥೈವ ಚ ॥ ೧೦೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ವತ್ಸದ್ವಾದಶೀ ಯಮತ್ರಯೋದಶೀ ನರಕಚತುರ್ದಶೀ ದೀಪಾವಲೀ ಕೃತ್ಯವರ್ಣನಂ" ನಾಮ ನವಮೋಽಧ್ಯಾಯಃ

---

೧೦೧. ಒಂದು ದಂಡಮಾತ್ರ ರಾತ್ರಿಯಿರುವಾಗ ಮುಂದಿನ ದಿನ ಅಮಾವಾಸ್ಯೆಯುಂಟಾದರೆ ಆಗ ಪೂರ್ವದಿನವನ್ನು ಬಿಟ್ಟು ಎರಡನೆಯ ದಿನ ಸುಖ ರಾತ್ರಿಕೆಯನ್ನು ಆಚರಿಸಬೇಕು.

೧೦೨. ವೈಷ್ಣವರಾಗಲಿ, ಅವೈಷ್ಣವರಾಗಲಿ, ಯಾವ ನರರು ಬಲಿರಾಜ್ಯೋತ್ಸವವನ್ನು ಮಾಡುವುದಿಲ್ಲವೋ ಅವರು ಮಾಡಿದ ಧರ್ಮಗಳು ವ್ಯರ್ಥವಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲವು.

೧೦೩. ರಾತ್ರಿಯಲ್ಲಿ ಪುರಾಣಪಠನವೇ ಮೊದಲಾದುವುಗಳಿಂದ ಜಾಗರಣೆ ಮಾಡಬೇಕು. ಹರಿಯ ಮುಂದೆ ದ್ಯೂತದಿಂದಲಾದರೂ, ಗೀತದಿಂದಲಾದರೂ ರಾತ್ರಿ ಜಾಗರಣೆ ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ವತ್ಸದ್ವಾದಶೀ ಯಮತ್ರಯೋದಶೀ ನರಕಚತುರ್ದಶೀ ದೀಪಾವಲೀ ಕೃತ್ಯವರ್ಣನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಕಾರ್ತಿಕಶುಕ್ಲ ಪ್ರತಿಪನ್ಮಾಹಾತ್ಮ್ಯವರ್ಣನಂ

ಬ್ರಹ್ಮೋವಾಚ :—

ಪ್ರತಿಪದ್ಯಥ ಚಾಭ್ಯಂಗಂ ಕೃತ್ವಾ ನೀರಾಜನಂ ತತಃ ।
ಸುವೇಷಃ ಸತ್ಕಥಾಗೀತೈಃ ದಾನೈಶ್ಚ ದಿವಸಂ ನಯೇತ್ ॥ ೧ ॥
ಶಂಕರಸ್ತು ಪುರಾ ದ್ಯೂತಂ ಸಸರ್ಜ ಸುಮನೋಹರಂ ।
ಕಾರ್ತಿಕೇ ಶುಕ್ಲಪಕ್ಷೇತು ಪ್ರಥಮೇಽಹನಿ ಸತ್ಯವತ್ ॥ ೨ ॥
ಬಲಿರಾಜ್ಯದಿನಸ್ಯಾಪಿ ಮಾಹಾತ್ಮ್ಯಂ ಶೃಣು ತತ್ವತಃ ।
ಸ್ನಾತವ್ಯಂ ತಿಲತೈಲೇನ ನರೈರ್ನಾರೀಭಿರೇವ ಚ ॥ ೩ ॥
ಯದಿ ಮೋಹಾನ್ನ ಕುರ್ವೀತ ಸ ಯಾತಿ ಯಮಸಾದನಂ ।
ಪುರಾ ಕೃತಯುಗಸ್ಯಾದೌ ದಾನವೇಂದ್ರೋ ಬಲಿರ್ಮಹಾನ್ ॥ ೪ ॥
ತೇನ ದತ್ತಾ ವಾಮನಾಯ ಭೂಮಿಃ ಸ್ವಮಸ್ತಕಾನ್ವಿತಾ ।
ತದಾನೀಂ ಭಗವಾನ್ ಸಾಕ್ಷಾತ್ ತುಷ್ಟೋ ಬಲಿಮುವಾಚ ಹ ॥ ೫ ॥

---

## ಕನ್ನಡದ ಅನುವಾದ

### ಕಾರ್ತಿಕಶುಕ್ಲಪ್ರತಿಪನ್ಮಾಹಾತ್ಮ್ಯ ವರ್ಣನ

೧. ಬ್ರಹ್ಮನು ಹೇಳುತ್ತಾನೆ:—"ಪಾಡ್ಯದ ದಿನ ಅಭ್ಯಂಗಮಾಡಿಕೊಂಡು ಆರತಿ ಮಾಡಿಸಿಕೊಂಡು ಒಳ್ಳೆಯ ವೇಷಭೂಷಣಗಳುಳ್ಳವನಾಗಿ ಸತ್ಕಥೆ, ಸಂಗೀತ, ದಾನ—ಇವುಗಳಿಂದ ದಿವಸವನ್ನು ಕಳೆಯಬೇಕು.

೨. ಪೂರ್ವದಲ್ಲಿ ಶಂಕರನು ಬಹು ಮನೋಹರವೂ, ಸತ್ಯಯುಕ್ತವೂ ಆದ ದ್ಯೂತವನ್ನು ಕಾರ್ತಿಕದ ಶುಕ್ಲಪಕ್ಷದ ಪ್ರಥಮ ದಿನದಲ್ಲಿ ಸೃಷ್ಟಿಮಾಡಿದನು.

೩. ಬಲಿರಾಜ್ಯದಿನದ ಮಾಹಾತ್ಮ್ಯವನ್ನು ಆಲಿಸು. ಆ ದಿನದಲ್ಲಿ ನರರೂ, ನಾರಿಯರೂ ಎಳ್ಳೆಣ್ಣೆಯನ್ನು ಒತ್ತಿಕೊಂಡು ಸ್ನಾನಮಾಡಬೇಕು.

೪. ಅಜ್ಞಾನದಿಂದ ಇದನ್ನು ಮಾಡದೆ ಹೋಗುವವರು ಯಮನ ಬಳಿಗೆ ಹೋಗುತ್ತಾರೆ. ಪೂರ್ವದಲ್ಲಿ ಕೃತಯುಗದ ಆದಿಯಲ್ಲಿ ಮಹಾತ್ಮನೂ, ದಾನವೇಂದ್ರನೂ ಆದ ಬಲಿಚಕ್ರವರ್ತಿಯು ರಾಜ್ಯವಾಳುತ್ತಿದ್ದನು.

೫. ಅವನು ಮಸ್ತಕಸಮೇತವಾಗಿ ತನ್ನ ಭೂಮಿಯನ್ನು ವಾಮನಾವತಾರಿಯಾದ ಮಹಾವಿಷ್ಣುವಿಗೆ ದಾನವಾಗಿ ಕೊಟ್ಟನು. ಆಗ ಸಾಕ್ಷಾತ್ ಭಗವಂತನು ಸಂತುಷ್ಟನಾಗಿ ಬಲಿಯನ್ನು ಕುರಿತು ಈ ರೀತಿ ಹೇಳಿದನು:—

ಕಾರ್ತಿಕೇ ಮಾಸಿ ಶುಕ್ಲಾಯಾಂ ಪ್ರತಿಪದ್ಯಾಂ ಯತೋ ಭವಾನ್ ।
ಭೂಮಿಂ ಮೇ ದತ್ತವಾನ್ ಭಕ್ತ್ಯಾ ತೇನ ತುಷ್ಟೋಽಸ್ಮಿ ತೇಽನಘ ॥ ೬ ॥
ವರಂ ದದಾಮಿ ತೇ ರಾಜನ್ ಇತ್ಯುಕ್ತ್ವಾಽದಾತ್ ವರಂ ತದಾ ।
ತ್ವನ್ನಾಮ್ನೈವ ಭವೇದ್ರಾಜನ್ ಕಾರ್ತಿಕೀ ಪ್ರತಿಪತ್ತಿಥಿಃ ॥ ೭ ॥
ಏತಸ್ಯಾಂ ಯೇ ಕರಿಷ್ಯಂತಿ ತೈಲಸ್ನಾನಾದಿಕಾರ್ಚನಂ ।
ತದಕ್ಷಯಂ ಭವೇದ್ರಾಜನ್ ನಾತ್ರ ಕಾರ್ಯಾ ವಿಚಾರಣಾ ॥ ೮ ॥
ತದಾಪ್ರಭೃತಿ ಲೋಕೇಽಸ್ಮಿನ್ ಪ್ರಸಿದ್ಧಾ ಪ್ರತಿಪತ್ತಿಥಿಃ ।
ಪ್ರತಿಪತ್ಪೂರ್ವವಿದ್ಧಾ ನೋ ಕರ್ತವ್ಯಾ ತು ಕಥಂಚನ ॥ ೯ ॥
ತತ್ರಾಭ್ಯಂಗಂ ನ ಕುರ್ವೀತ ಅನ್ಯಥಾ ಮೃತಿಮಾಪ್ನುಯಾತ್ ।
ಪತಿಪದ್ಯಾಂ ಯದಾ ದರ್ಶೋ ಮುಹೂರ್ತಪ್ರಮಿತೋ ಭವೇತ್॥ ೧೦ ॥
ಮಾಂಗಲ್ಯಂ ತದ್ದಿನೇ ಚೇತ್ಸ್ಯಾತ್ ವಿತ್ತಾದಿಸ್ತಸ್ಯ ನಶ್ಯತಿ ।
ಬಲೇಶ್ಚ ಪ್ರತಿಪದ್ದರ್ಶಾತ್ ಯದಿ ವಿದ್ಧಂ ಭವಿಷ್ಯತಿ ॥ ೧೧ ॥
ತಸ್ಯಾಂ ಯದ್ಯಥ ಚಾರ್ತಿಕ್ಯಂ ನಾರೀ ಮೋಹಾತ್ಕರಿಷ್ಯತಿ ।
ನಾರೀಣಾಂ ತತ್ರ ವೈಧವ್ಯಂ ಪ್ರಜಾನಾಂ ಮರಣಂ ಧ್ರುವಂ ॥ ೧೨ ॥

---

೬. "ಕಾರ್ತಿಕಮಾಸದಲ್ಲಿ ಶುಕ್ಲಪಕ್ಷದ ಪ್ರಥಮ ತಿಥಿಯಲ್ಲಿ ಭಕ್ತಿಯಿಂದ ನೀನು ನನಗೆ ಭೂಮಿಯನ್ನು ಕೊಟ್ಟಿರುವೆ. ಎಲೈ ಪಾಪರಹಿತನೇ! ಅದರಿಂದ ನಾನು ಸಂತುಷ್ಟನಾಗಿದ್ದೇನೆ.

೭. ಎಲೈ ರಾಜೇಂದ್ರ! ನಿನಗೆ ವರವನ್ನು ಕೊಡುತ್ತೇನೆ" ಎಂದು ನುಡಿದು ಆಗ ಈ ವರವನ್ನು ನೀಡಿದನು. "ಎಲೈ ಬಲಿಯೇ! ಕಾರ್ತಿಕದ ಪ್ರತಿಪತ್ತಿಥಿಯು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗಲಿ.

೮. ಈ ದಿನ ಯಾರು ತೈಲಸ್ನಾನವನ್ನು ಮಾಡಿ ನನ್ನನ್ನು ಅರ್ಚನೆ ಮಾಡುತ್ತಾರೆಯೋ ಅವರು ಮಾಡಿದ ಆ ಅರ್ಚನೆಯು ಅಕ್ಷಯವಾಗುತ್ತದೆ. ಎಲೈ ಮಹಾರಾಜನೇ! ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ."

೯. ಅಂದಿನಿಂದ ಮೊದಲುಗೊಂಡು ಲೋಕದಲ್ಲಿ ಈ ಪ್ರತಿಪತ್ತಿಥಿಯು ಬಲಿಪಾಡ್ಯಮಿ ಎಂದು ಪ್ರಸಿದ್ಧವಾಯಿತು. ಪೂರ್ವವಿದ್ಧವಾದ (ಹಿಂದಿನ ತಿಥಿಯಿಂದ ಕೂಡಿದ) ಪ್ರತಿಪತ್ತಿನ ದಿನ ಬಲಿಪಾಡ್ಯಮಿಯನ್ನು ಸರ್ವಥಾ ಮಾಡತಕ್ಕುದಲ್ಲ.

೧೦–೧೨. ಅಂದು ಅಭ್ಯಂಗಮಾಡಬಾರದು. ಹಾಗೆ ಮಾಡಿದುದಾದರೆ ಮೃತಿಯನ್ನೈದುವರು. ಯಾವಾಗ ಪ್ರತಿಪತ್ತಿನಲ್ಲಿ ಅಮಾವಾಸ್ಯೆಯು ಮುಹೂರ್ತಕಾಲ ಇರುವುದೋ ಆ ದಿನ ಮಾಂಗಲ್ಯ (ಕಾರ್ಯ)ವು ನಡೆದರೆ, ಆ ಕಾರ್ಯವನ್ನು ನಡೆಸಿದವನ ವಿತ್ತವೇ ಮೊದಲಾದುದೆಲ್ಲ ನಾಶವಾಗುತ್ತದೆ. ಬಲಿಪಾಡ್ಯವು ಅಮಾವಾಸ್ಯೆಯಿಂದ ವಿದ್ಧವಾದರೆ, ಅಂತಹ ಬಲಿಪಾಡ್ಯದ ದಿನ ನಾರಿಯು

ಅವಿದ್ಧಾ ಪ್ರತಿಪಚ್ಚೇತ್ಸ್ಯಾತ್ ಮುಹೂರ್ತಮಪರೇಽಹನಿ ।
ಉತ್ಸವಾದಿಕಕೃತ್ಯೇಷು ಸೈವ ಪ್ರೋಕ್ತಾ ಮನೀಷಿಭಿಃ ॥ ೧೩ ॥
ಪ್ರತಿಪತ್ಸ್ವಲ್ಪಮಾತ್ರಾಪಿ ಯದಿ ನ ಸ್ಯಾತ್ಪರೇಽಹನಿ ।
ಪೂರ್ವವಿದ್ಧಾ ತದಾ ಕಾರ್ಯಾ ಕೃತಾ ನೋ ದೋಷಭಾಗ್ಭವೇತ್ ॥೧೪॥
ತದ್ದಿನೇ ಗೃಹಮಧ್ಯೇ ತು ಕುರ್ಯಾನ್ಮೂರ್ತಿಂ ತದಾಂಗಣೇ ।
ಗೋಮಯೇನ ಚ ತತ್ರಾಪಿ ದಧಿ ತತ್ಪುರತಃ ಕ್ಷಿಪೇತ್ ॥ ೧೫ ॥
ಆರ್ತಿಕ್ಯಂ ತತ್ರ ಸಂಸ್ಥಾಪ್ಯ ಏವಂ ಕುರ್ಯಾದ್ವಿಧಾನತಃ ।
ಅಭ್ಯಂಗಂ ಯೇ ನ ಕುರ್ವಂತಿ ತಸ್ಯಾಂ ತು ಮುನಿಪುಂಗವ ॥ ೧೬ ॥
ನ ಮಾಂಗಲ್ಯಂ ಭವೇತ್ತೇಷಾಂ ಯಾವತ್ಸ್ಯಾದ್ವಾಸರಂ ಧ್ರುವಂ ।
ಯೋ ಯಾದೃಶೇನ ರೂಪೇಣ ತಸ್ಯಾಂ ತಿಷ್ಠೇಚ್ಛುಭೇ ದಿನೇ ॥ ೧೭ ॥
ಆವರ್ಷಂ ತದ್ಭವೇತ್ತಸ್ಯ ತಸ್ಮಾನ್ಮಂಗಲಮಾಚರೇತ್ ।
ಯದೀಚ್ಛೇತ್ ಸ್ವಶುಭಾರ್ ಭೋಗಾನ್ ಭೋಕ್ತುಂ ದಿವ್ಯಾನ್ ಮನೋಹರಾನ್

---

ತಿಳಿವಿಲ್ಲದೆ ಪುರುಷನಿಗೆ ಆರತಿಯನ್ನು ಮಾಡಿದರೆ, ಅವಳಿಗೆ ವೈಧವ್ಯವೂ, ಪ್ರಜೆಗಳಿಗೆ ಮರಣವೂ ಆಗಿಯೇ ತೀರುವುದು.

೧೩. ಪೂರ್ವವೇಧೆಯಿಲ್ಲದ ಪ್ರತಿಪತ್‌ತಿಥಿಯು ಮುಂದಿನ ದಿನ ಒಂದು ಮುಹೂರ್ತಕಾಲ ಇರುವುದಾದರೆ ಅದೇ ಮಂಗಳಕರವು. ಉತ್ಸವಾದಿ ಕೃತ್ಯಗಳಿಗೆ ತಿಥಿಯೇ ತಕ್ಕುದೆಂದು ಪಂಡಿತರಿಂದ ಹೇಳಲ್ಪಟ್ಟಿದೆ.

೧೪. ಮುಂದಿನ ದಿನ ಪ್ರತಿಪತ್‌ತಿಥಿಯು ಸ್ವಲ್ಪಮಾತ್ರವೂ ಇಲ್ಲದಿದ್ದರೆ ಪೂರ್ವತಿಥಿಯ ವೇಧೆಯಿಂದ ಕೂಡಿದ್ದರೂ ಆ ದಿನವೇ ಬಲಿಪ್ರತಿಪತ್ತನ್ನು ಆಚರಿಸಬೇಕು. ಇದರಿಂದ ದೋಷಕ್ಕೆ ಭಾಗಿಯಾಗುವುದಿಲ್ಲ.

೧೫. ಆ ದಿನ ಮನೆಯ ಮಧ್ಯದಲ್ಲಿಯೂ, ಅಂಗಳದಲ್ಲಿಯೂ ಗೋಮಯದಿಂದ ಮೂರ್ತಿಯನ್ನು ಮಾಡಿಡಬೇಕು. ಆ ಮೂರ್ತಿಯ ಮುಂದೆ ಮೊಸರನ್ನಿಡಬೇಕು.

೧೬–೨೦. ಅಲ್ಲಿ ಆರತಿಯನ್ನಿಟ್ಟು ವಿಧಿಗನುಸಾರವಾಗಿ ಪೂಜೆಯನ್ನು ನಡೆಸಬೇಕು. ಎಲೈ ಮುನಿಪುಂಗವನೇ! ಆ ದಿನ ಯಾರು ಅಭ್ಯಂಗಮಾಡುವುದಿಲ್ಲವೋ ಅವರಿಗೆ ಆ ವರ್ಷವಿರುವವರೆಗೂ ಮಾಂಗಲ್ಯವುಂಟಾಗುವುದಿಲ್ಲ. ಇದು ಶಾಶ್ವತವು. ಆ ಶುಭದಿನದಲ್ಲಿ ಯಾವನು ಯಾವ ವಿಧವಾಗಿ ಇರುವನೋ ವರ್ಷದವರೆಗೂ ಅವನು ಅದೇ ವಿಧವಾಗಿಯೇ ಇರುತ್ತಾನೆ. ಆದುದರಿಂದ ಮಂಗಳವನ್ನಾಚರಿಸಬೇಕು. ತನಗೆ ಶುಭಗಳಾಗಬೇಕೆಂದೂ, ಮನೋಹರವಾದ ದಿವ್ಯಭೋಗಗಳನ್ನು ಅನುಭವಿಸಬೇಕೆಂದೂ ಬಯಸುವುದಾದರೆ ತ್ರಯೋದಶಿಯೇ ಮೊದಲಾದ ಆ ದಿನಗಳಲ್ಲಿ ದೀಪೋತ್ಸವವನ್ನು ಮಾಡಬೇಕು. ಪೂರ್ವದಲ್ಲಿ

ಕುರು ದೀಪೋತ್ಸವಂ ರಮ್ಯಂ ತ್ರಯೋದಶ್ಯಾದಿಕೇಷು ಚ ।
ಶಂಕರಶ್ಚ ಭವಾನೀ ಚ ಕ್ರೀಡಯಾ ದ್ಯೂತಮಾಸ್ಥಿತೇ ॥ ೧೯ ॥
ಗೌರ್ಯಾ ಜಿತಃ ಪುರಾ ಶಂಭುರ್ನಗ್ನೋ ದ್ಯೂತೇ ಪರಾಜಿತಃ ।
ಅತೋಽರ್ಥಂ ಶಂಕರೋ ದುಃಖೀ ಗೌರೀ ನಿತ್ಯಂ ಸುಖಸ್ಥಿತಾ ॥ ೨೦ ॥
ದ್ಯೂತಂ ನಿಷಿದ್ಧಂ ಸರ್ವತ್ರ ಹಿತ್ವಾ ಪ್ರತಿಪದಂ ಬುಧಾಃ ।
ಪ್ರಥಮಂ ವಿಜಯೋ ಯಸ್ಯ ತಸ್ಯ ಸಂವತ್ಸರಂ ಸುಖಂ ॥ ೨೧ ॥
ಭವಾನ್ಯಾಭ್ಯರ್ಥಿತಾ ಲಕ್ಷ್ಮೀಃ ಧೇನುರೂಪೇಣ ಸಂಸ್ಥಿತಾ ।
ಪ್ರಾತರ್ಗೋವರ್ಧನಃ ಪೂಜ್ಯೋ ದ್ಯೂತಂ ರಾತ್ರೌ ಸಮಾಚರೇತ್ ॥ ೨೨ ॥
ಭೂಷಣೀಯಾಸ್ತದಾ ಗಾವೋ ವರ್ಜ್ಯಾ ವಹನದೋಹನಾತ್ ॥ ೨೩ ॥
ಗೋವರ್ಧನ ಧರಾಽಽಧಾರ ಗೋಕುಲತ್ರಾಣಕಾರಕ ।
ವಿಷ್ಣುಬಾಹುಕೃತೋಚ್ಛ್ರಾಯ ಗವಾಂ ಕೋಟಿಪ್ರದೋ ಭವ ॥ ೨೪ ॥
ಯಾ ಲಕ್ಷ್ಮೀರ್ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ ।
ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ॥ ೨೫ ॥

---

ಶಂಕರನೂ, ಭವಾನಿಯೂ ಆ ದಿನ ವಿನೋದದಿಂದ ದ್ಯೂತವಾಡುತ್ತಿದ್ದರು. ಆಗ ಗೌರಿಯು ಶಂಭುವನ್ನು ಗೆದ್ದಳು. ದ್ಯೂತದಲ್ಲಿ ಗೌರಿಗೆ ಸೋತ ಶಂಕರನು ನಗ್ನನಾಗಿಸಲ್ಪಟ್ಟನು. ಆ ಕಾರಣದಿಂದಲೇ ಶಂಕರನು ದುಃಖಿಯಾಗಿಯೂ, ಗೌರಿಯು ನಿತ್ಯವೂ ಸುಖಸಂಸ್ಥಿತಳಾಗಿಯೂ ಇದ್ದಾರೆ.

೨೧. ಬಲಿಪ್ರತಿಪತ್ತೊಂದು ಹೊರತಾಗಿ ಎಲ್ಲ ಸಂದರ್ಭಗಳಲ್ಲಿಯೂ ದ್ಯೂತವು ನಿಷಿದ್ಧವಾಗಿರುವುದು. ಮೊದಲು ಯಾರಿಗೆ ವಿಜಯವೊ ಅವರಿಗೆ ಸಂವತ್ಸರದವರೆಗೂ ಸುಖವಾಗಿರುವುದು.

೨೨. ಎಲೈ ಮುನಿಯೇ! ಆ ಸಂದರ್ಭದಲ್ಲಿಯೇ ಭವಾನಿಯು ಹಸುವಿನ ರೂಪದಿಂದಿದ್ದ ಲಕ್ಷ್ಮಿಯನ್ನು ಅರ್ಚಿಸಿದಳು. ಪ್ರಾತಃಕಾಲದಲ್ಲಿ ಗೋವರ್ಧನನನ್ನು ಪೂಜಿಸಬೇಕು. ರಾತ್ರಿಯಲ್ಲಿ ದ್ಯೂತವನ್ನಾಚರಿಸಬೇಕು.

೨೩. ಆಗ ಗೋವುಗಳನ್ನು ಅಲಂಕರಿಸಬೇಕು. ಹೊರೆ ಹೇರುವುದನ್ನೂ, ಹಾಲು ಕರೆಯುವುದನ್ನೂ ವರ್ಜಿಸಬೇಕು.

೨೪. "ಗೋವರ್ಧನನೆ! ನೀನು ಧರೆಗೆ ಆಧಾರನಾದವನು; ಗೋಕುಲಕ್ಕೆ ತ್ರಾಣವನ್ನುಂಟುಮಾಡುವವನೂ ನೀನೆ. ವಿಷ್ಣುವಿನ ಬಾಹುಗಳಿಂದ ಮೇಲಕ್ಕೆ ಎತ್ತಲ್ಪಟ್ಟ ನೀನು ಗೋವುಗಳ ಕೋಟಿಪ್ರದನಾಗು.

೨೫. ಯಾವ ಲಕ್ಷ್ಮಿಯು ಲೋಕಪಾಲಕರಿಗಾಗಿ ಗೋರೂಪಧಾರಿಣಿಯಾಗಿದ್ದು ಯಜ್ಞಾರ್ಥವಾಗಿ ಘೃತವನ್ನು ಒದಗಿಸುವಳೋ ಆ ಲಕ್ಷ್ಮಿಯು ನನ್ನ ಪಾಪವನ್ನು ಪರಿಹರಿಸಲಿ.

ಅವಿದ್ಧಾ ಪ್ರತಿಪಚ್ಚೇತ್ಸ್ಯಾತ್ ಮುಹೂರ್ತಮಪರೇಽಹನಿ ।
ಉತ್ಸವಾದಿಕಕೃತ್ಯೇಷು ಸೈವ ಪ್ರೋಕ್ತಾ ಮನೀಷಿಭಿಃ ॥ ೧೩ ॥
ಪ್ರತಿಪತ್ಸ್ವಲ್ಪಮಾತ್ರಾಪಿ ಯದಿ ನ ಸ್ಯಾತ್ಪರೇಽಹನಿ ।
ಪೂರ್ವವಿದ್ಧಾ ತದಾ ಕಾರ್ಯಾ ಕೃತಾ ನೋ ದೋಷಭಾಗ್ಭವೇತ್ ॥೧೪॥
ತದ್ದಿನೇ ಗೃಹಮಧ್ಯೇ ತು ಕುರ್ಯಾನ್ಮೂರ್ತಿಂ ತದಾಂಗಣೇ ।
ಗೋಮಯೇನ ಚ ತತ್ರಾಪಿ ದಧಿ ತತ್ಪುರತಃ ಕ್ಷಿಪೇತ್ ॥ ೧೫ ॥
ಆರ್ತಿಕ್ಯಂ ತತ್ರ ಸಂಸ್ಥಾಪ್ಯ ಏವಂ ಕುರ್ಯಾದ್ವಿಧಾನತಃ ।
ಅಭ್ಯಂಗಂ ಯೇ ನ ಕುರ್ವಂತಿ ತಸ್ಯಾಂ ತು ಮುನಿಪುಂಗವ ॥ ೧೬ ॥
ನ ಮಾಂಗಲ್ಯಂ ಭವೇತ್ತೇಷಾಂ ಯಾವತ್ಸ್ಯಾದ್ವತ್ಸರಂ ಧ್ರುವಂ ।
ಯೋ ಯಾದೃಶೇನ ರೂಪೇಣ ತಸ್ಯಾಂ ತಿಷ್ಠೇಚ್ಛುಭೇ ದಿನೇ ॥ ೧೭ ॥
ಆವರ್ಷಂ ತದ್ಭವೇತ್ತಸ್ಯ ತಸ್ಮಾನ್ಮಂಗಲಮಾಚರೇತ್ ।
ಯದೀಚ್ಛೇತ್ ಸ್ವಶುಭಾ ಭೋಗಾ ಭೋಕ್ತುಂ ದಿವ್ಯಾ ಮನೋಹರಾ

---

ತಿಳಿವಿಲ್ಲದೆ ಪುರುಷನಿಗೆ ಆರತಿಯನ್ನು ಮಾಡಿದರೆ, ಅವಳಿಗೆ ವೈಧವ್ಯವೂ, ಪ್ರಜೆಗಳಿಗೆ ಮರಣವೂ ಆಗಿಯೇ ತೀರುವುದು.

೧೩. ಪೂರ್ವವೇಧೆಯಿಲ್ಲದ ಪ್ರತಿಪತ್‌ತಿಥಿಯು ಮುಂದಿನ ದಿನ ಒಂದು ಮುಹೂರ್ತಕಾಲ ಇರುವುದಾದರೆ ಅದೇ ಮಂಗಳಕರವು. ಉತ್ಸವಾದಿ ಕೃತ್ಯಗಳಿಗೆ ತಿಥಿಯೇ ತಕ್ಕುದೆಂದು ಪಂಡಿತರಿಂದ ಹೇಳಲ್ಪಟ್ಟಿದೆ.

೧೪. ಮುಂದಿನ ದಿನ ಪ್ರತಿಪತ್‌ತಿಥಿಯು ಸ್ವಲ್ಪಮಾತ್ರವೂ ಇಲ್ಲದಿದ್ದರೆ ಪೂರ್ವತಿಥಿಯ ವೇಧೆಯಿಂದ ಕೂಡಿದ್ದರೂ ಆ ದಿನವೇ ಬಲಿಪ್ರತಿಪತ್ತನ್ನು ಆಚರಿಸಬೇಕು. ಇದರಿಂದ ದೋಷಕ್ಕೆ ಭಾಗಿಯಾಗುವುದಿಲ್ಲ.

೧೫. ಆ ದಿನ ಮನೆಯ ಮಧ್ಯದಲ್ಲಿಯೂ, ಅಂಗಳದಲ್ಲಿಯೂ ಗೋಮಯದಿಂದ ಮೂರ್ತಿಯನ್ನು ಮಾಡಿಡಬೇಕು. ಆ ಮೂರ್ತಿಯ ಮುಂದೆ ಮೊಸರನ್ನಿಡಬೇಕು.

೧೬–೨೦. ಅಲ್ಲಿ ಆರತಿಯನ್ನಿಟ್ಟು ವಿಧಿಗನುಸಾರವಾಗಿ ಪೂಜೆಯನ್ನು ನಡೆಸಬೇಕು. ಎಲೈ ಮುನಿಪುಂಗವನೇ! ಆ ದಿನ ಯಾರು ಅಭ್ಯಂಗಮಾಡುವುದಿಲ್ಲವೋ ಅವರಿಗೆ ಆ ವರ್ಷವಿರುವವರೆಗೂ ಮಾಂಗಲ್ಯವುಂಟಾಗುವುದಿಲ್ಲ. ಇದು ಶಾಶ್ವತವು. ಆ ಶುಭದಿನದಲ್ಲಿ ಯಾವನು ಯಾವ ವಿಧವಾಗಿ ಇರುವನೋ ವರ್ಷದವರೆಗೂ ಅವನು ಅದೇ ವಿಧವಾಗಿಯೇ ಇರುತ್ತಾನೆ. ಆದುದರಿಂದ ಮಂಗಳವನ್ನಾಚರಿಸಬೇಕು. ತನಗೆ ಶುಭಗಳಾಗಬೇಕೆಂದೂ, ಮನೋಹರವಾದ ದಿವ್ಯಭೋಗಗಳನ್ನು ಅನುಭವಿಸಬೇಕೆಂದೂ ಬಯಸುವುದಾದರೆ ತ್ರಯೋದಶಿಯೇ ಮೊದಲಾದ ಆ ದಿನಗಳಲ್ಲಿ ದೀಪೋತ್ಸವವನ್ನು ಮಾಡಬೇಕು. ಪೂರ್ವದಲ್ಲಿ

**ಕುರು ದೀಪೋತ್ಸವಂ ರಮ್ಯಂ ತ್ರಯೋದಶ್ಯಾದಿಕೇಷು ಚ ।**
**ಶಂಕರಶ್ಚ ಭವಾನೀ ಚ ಕ್ರೀಡಯಾ ದ್ಯೂತಮಾಸ್ಥಿತೇ ॥ ೧೯ ॥**
**ಗೌರ್ಯಾ ಜಿತಃ ಪುರಾ ಶಂಭುರ್ನಗ್ನೋ ದ್ಯೂತೇ ಪರಾಜಿತಃ ।**
**ಅತೋಽರ್ಥಂ ಶಂಕರೋ ದುಃಖೀ ಗೌರೀ ನಿತ್ಯಂ ಸುಖಸ್ಥಿತಾ ॥ ೨೦ ॥**
**ದ್ಯೂತಂ ನಿಷಿದ್ಧಂ ಸರ್ವತ್ರ ಹಿತ್ವಾ ಪ್ರತಿಪದಂ ಬುಧಾಃ ।**
**ಪ್ರಥಮಂ ವಿಜಯೋ ಯಸ್ಯ ತಸ್ಯ ಸಂವತ್ಸರಂ ಸುಖಂ ॥ ೨೧ ॥**
**ಭವಾನ್ಯಾಭ್ಯರ್ಚಿತಾ ಲಕ್ಷ್ಮೀಃ ಧೇನುರೂಪೇಣ ಸಂಸ್ಥಿತಾ ।**
**ಪ್ರಾತರ್ಗೋವರ್ಧನಃ ಪೂಜ್ಯೋ ದ್ಯೂತಂ ರಾತ್ರೌ ಸಮಾಚರೇತ್ ॥ ೨೨ ॥**
**ಭೂಷಣೀಯಾಸ್ತದಾ ಗಾವೋ ವರ್ಜ್ಯಾ ವಹನದೋಹನಾತ್ ॥ ೨೩ ॥**
**ಗೋವರ್ಧನ ಧರಾಽಽಧಾರ ಗೋಕುಲತ್ರಾಣಕಾರಕ ।**
**ವಿಷ್ಣುಬಾಹುಕೃತೋಚ್ಛ್ರಾಯ ಗವಾಂ ಕೋಟಿಪ್ರದೋ ಭವ ॥ ೨೪ ॥**
**ಯಾ ಲಕ್ಷ್ಮೀರ್ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ ।**
**ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ॥ ೨೫ ॥**

---

ಶಂಕರನೂ, ಭವಾನಿಯೂ ಆ ದಿನ ವಿನೋದದಿಂದ ದ್ಯೂತವಾಡುತ್ತಿದ್ದರು. ಆಗ ಗೌರಿಯು ಶಂಭುವನ್ನು ಗೆದ್ದಳು. ದ್ಯೂತದಲ್ಲಿ ಗೌರಿಗೆ ಸೋತ ಶಂಕರನು ನಗ್ನನಾಗಿಸಲ್ಪಟ್ಟನು. ಆ ಕಾರಣದಿಂದಲೇ ಶಂಕರನು ದುಃಖಿಯಾಗಿಯೂ, ಗೌರಿಯು ನಿತ್ಯವೂ ಸುಖಸಂಸ್ಥಿತಳಾಗಿಯೂ ಇದ್ದಾರೆ.

೨೧. ಬಲಿಪ್ರತಿಪತ್ತೊಂದು ಹೊರತಾಗಿ ಎಲ್ಲ ಸಂದರ್ಭಗಳಲ್ಲಿಯೂ ದ್ಯೂತವು ನಿಷಿದ್ಧವಾಗಿರುವುದು. ಮೊದಲು ಯಾರಿಗೆ ವಿಜಯವೊ ಅವರಿಗೆ ಸಂವತ್ಸರದವರೆಗೂ ಸುಖವಾಗಿರುವುದು.

೨೨. ಎಲೈ ಮುನಿಯೇ! ಆ ಸಂದರ್ಭದಲ್ಲಿಯೇ ಭವಾನಿಯು ಹಸುವಿನ ರೂಪದಿಂದಿದ್ದ ಲಕ್ಷ್ಮಿಯನ್ನು ಅರ್ಚಿಸಿದಳು. ಪ್ರಾತಃಕಾಲದಲ್ಲಿ ಗೋವರ್ಧನನನ್ನು ಪೂಜಿಸಬೇಕು. ರಾತ್ರಿಯಲ್ಲಿ ದ್ಯೂತವನ್ನಾಚರಿಸಬೇಕು.

೨೩. ಆಗ ಗೋವುಗಳನ್ನು ಅಲಂಕರಿಸಬೇಕು. ಹೊರೆ ಹೇರುವುದನ್ನೂ, ಹಾಲು ಕರೆಯುವುದನ್ನೂ ವರ್ಜಿಸಬೇಕು.

೨೪. "ಗೋವರ್ಧನನೆ! ನೀನು ಧರೆಗೆ ಆಧಾರನಾದವನು; ಗೋಕುಲಕ್ಕೆ ತ್ರಾಣವನ್ನುಂಟುಮಾಡುವವನೂ ನೀನೆ. ವಿಷ್ಣುವಿನ ಬಾಹುಗಳಿಂದ ಮೇಲಕ್ಕೆ ಎತ್ತಲ್ಪಟ್ಟ ನೀನು ಗೋವುಗಳ ಕೋಟಿಪ್ರದನಾಗು.

೨೫. ಯಾವ ಲಕ್ಷ್ಮಿಯು ಲೋಕಪಾಲಕರಿಗಾಗಿ ಗೋರೂಪಧಾರಿಣಿಯಾಗಿದ್ದು ಯಜ್ಞಾರ್ಥವಾಗಿ ಘೃತವನ್ನು ಒದಗಿಸುವಳೋ ಆ ಲಕ್ಷ್ಮಿಯು ನನ್ನ ಪಾಪವನ್ನು ಪರಿಹರಿಸಲಿ.

ಅಗ್ರತಸ್ಸಂತು ಮೇ ಗಾವೋ ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಂ ॥ ೨೬ ॥

ಇತಿ ಗೋವರ್ಧನಪೂಜಾ

ಸದ್ಭಾವೇನೈವ ಸಂತೋಷ್ಯ ದೇವಾನ್ ಸತ್ಪುರುಷಾನ್ ನರಾನ್ ।
ಇತರೇಷಾಮನ್ನಪಾನೈರ್ವಾಕ್ಯದಾನೇನ ಪಂಡಿತಾನ್ ॥ ೨೭ ॥
ವಸ್ತ್ರೈಸ್ತಾಂಬೂಲಧೂಪೈಶ್ಚ ಪುಷ್ಪಕರ್ಪೂರಕುಂಕುಮೈಃ ।
ಭಕ್ಷ್ಯೈರುಚ್ಚಾವಚೈರ್ಭೋಜ್ಯೈರಂತಃಪುರನಿವಾಸಿನಃ ॥ ೨೮ ॥
ಗ್ರಾಮ್ಯಾನ್ ವೃಷಭದಾನೈಶ್ಚ ಸಾಮಂತಾನ್ ನೃಪತಿರ್ಧನೈಃ ।
ಪದಾತಿಜನಸಂಘಾಂಶ್ಚ ಗ್ರೈವೇಯೈಃ ಕಟಕೈಃ ಶುಭೈಃ ।
ಸ್ವನಾಮಾಂಕೈಶ್ಚ ತಾನ್ ರಾಜಾ ತೋಷಯೇತ್ ಸಜ್ಜನಾನ್ ಪೃಥಕ್ ॥
ಯಥಾರ್ಥಂ ತೋಷಯಿತ್ವಾ ತು ತತೋ ಮಲ್ಲಾನ್ನರಾಂಸ್ತಥಾ ।
ವೃಷಭಾನ್ ಮಹಿಷಾಂಶ್ಚೈವ ಯುಧ್ಯಮಾನಾನ್ ಪರೈಸ್ಸಹ ॥ ೩೦ ॥
ರಾಜ್ಞಸ್ತಥೈವ ಯೋಧಾಂಶ್ಚ ಪದಾತೀನ್ ಸಮಲಂಕೃತಾನ್ ।
ಮಂಚಾಽಽರೂಢಃ ಸ್ವಯಂ ಪಶ್ಯೇತ್ ನಟನರ್ತಕಚಾರಣಾನ್ ॥ ೩೧ ॥

---

೨೬. ನನ್ನ ಮುಂದುಗಡೆ ಗೋವುಗಳಿರಲಿ. ನನ್ನ ಹಿಂದುಗಡೆ ಗೋವುಗಳಿರಲಿ. ನನ್ನ ಹೃದಯದಲ್ಲಿ ಗೋವುಗಳಿರಲಿ. ಗೋವುಗಳ ಮಧ್ಯದಲ್ಲಿ ನಾನು ವಾಸಮಾಡುತ್ತೇನೆ.'' ಹೀಗೆಂದು ಗೋವರ್ಧನಪೂಜೆ ಮಾಡತಕ್ಕದ್ದು.

೨೭-೨೯. ರಾಜನಾದವನು ದೇವತೆಗಳನ್ನೂ, ಸತ್ಪುರುಷರಾದ ನರರನ್ನೂ ಸದ್ಭಾವದಿಂದ ಸಂತೋಷಪಡಿಸಿ, ಇತರರನ್ನು ಅನ್ನದಾನದಿಂದಲೂ, ಪಂಡಿತರನ್ನು ಯುಕ್ತವಚನಗಳಿಂದಲೂ, ಅಂತಃಪುರನಿವಾಸಿಗಳನ್ನು ವಸ್ತ್ರತಾಂಬೂಲ ಧೂಪಗಳಿಂದಲೂ, ಪುಷ್ಪ, ಕರ್ಪೂರ, ಕುಂಕುಮಗಳಿಂದಲೂ, ಉತ್ತಮವಾದ ಭಕ್ಷ್ಯಭೋಜ್ಯಗಳಿಂದಲೂ ತೃಪ್ತಿಪಡಿಸಿ ಗ್ರಾಮ್ಯರನ್ನು ವೃಷಭದಾನಗಳಿಂದಲೂ, ಸಾಮಂತರನ್ನು ಧನದಾನದಿಂದಲೂ, ಪದಾತಿಗಳನ್ನೂ, ಜನಸಂಘಗಳನ್ನೂ ತನ್ನ ಹೆಸರು ಕೆತ್ತಿರುವ ಗ್ರೈವೇಯ (ಕೊರಳೊಡವೆ), ಕಡಗ ಮೊದಲಾದವುಗಳಿಂದಲೂ ಬೇರೆಬೇರೆಯಾಗಿ ಸಂತೋಷ ಪಡಿಸಬೇಕು.

೩೦-೩೧. ಬಳಿಕ ಎಲ್ಲರನ್ನೂ ತಕ್ಕಂತೆ ಸತ್ಕರಿಸಿ ಸಂತೋಷಪಡಿಸಿ, ಎತ್ತುಗಳೊಡನೆಯೂ ಕೋಣಗಳೊಡನೆಯೂ ಕಾಳೆಗಮಾಡುವ ಮಲ್ಲರನ್ನೂ, ಇತರ ನರರನ್ನೂ, ರಾಜಯೋಧರನ್ನೂ, ಅಲಂಕೃತರಾದ ಪದಾತಿಗಳನ್ನೂ, ನಟನರ್ತಕಚಾರಣರನ್ನೂ ತಾನೇ ಸ್ವತಃ ಬಂದು, ಮಂಚಾರೂಢನಾಗಿ ನೋಡುತ್ತಿರಬೇಕು.

ಯುದ್ಧಾಪಯೇದ್ವಾಸಯೇಚ್ಚ ಗೋಮಹಿಷ್ಯಾದಿಕಂ ಚ ಯತ್ ।
ವತ್ಸಾನಾಕರ್ಷಯೇದ್ಗೋಭಿಃ ಉಕ್ತಿಪ್ರತ್ಯುಕ್ತಿವಾದನಾತ್ ॥ ೩೨ ॥
ತತೋಽಪರಾಹ್ಣಸಮಯೇ ಪೂರ್ವಸ್ಯಾಂ ದಿಶಿ ಸುವ್ರತ ।
ಮಾರ್ಗಪಾಲೀಂ ಪ್ರಬಧ್ನಾತಿ ದುರ್ಗಸ್ತಂಭೇಽಥ ಪಾದಪೇ ॥ ೩೩ ॥
ಕುಶಕಾಶಮಯೀಂ ದಿವ್ಯಾಂ ಲಂಬಕೈರ್ಬಹುಭಿಃ ಪ್ರಿಯೈಃ ।
ವೀಕ್ಷಯಿತ್ವಾ ಗಜಾನಶ್ವಾನ್ ಮಾರ್ಗಪಾಲ್ಯಾಸ್ತಲೇ ನಯೇತ್ ॥ ೩೪ ॥
ಗಾವೋ ವೃಷಾಂಶ್ಚ ಮಹಿಷಾನ್ ಮಹಿಷೀರ್ಘಟಿಕೋತ್ಕಟಾನ್ ।
ಕೃತಹೋಮೈರ್ದ್ವಿಜೇಂದ್ರೈಸ್ತು ಬಧ್ನೀಯಾನ್ಮಾರ್ಗಪಾಲಿಕಾಂ ॥ ೩೫ ॥
ನಮಸ್ಕಾರಂ ತತಃ ಕುರ್ಯಾತ್ ಮಂತ್ರೇಣಾನೇನ ಸುವ್ರತ ।
ಮಾರ್ಗಪಾಲಿ ನಮಸ್ತುಭ್ಯಂ ಸರ್ವಲೋಕಸುಖಪ್ರದೇ ।
ತಲೇ ತವ ಸುಖೇನಾಶ್ವಾ ಗಜಾ ಗಾವಶ್ಚ ಸಂತು ಮೇ ॥ ೩೬ ॥
ಮಾರ್ಗಪಾಲೀತಲೇ ಪುತ್ರ ಯಾಂತಿ ಗಾವೋ ಮಹಾವೃಷಾಃ ।
ರಾಜಾನೋ ರಾಜಪುತ್ರಾಶ್ಚ ಬ್ರಾಹ್ಮಣಾಶ್ಚ ವಿಶೇಷತಃ ॥ ೩೭ ॥
ಮಾರ್ಗಪಾಲೀಂ ಸಮುಲ್ಲಂಘ್ಯ ನೀರುಜಸ್ಸುಖಿನೋ ಹಿ ತೇ ।
ಕೃತ್ವೈತತ್ಸರ್ವಮೇವೇಹ ರಾತ್ರೌ ದೈತ್ಯಪತೇರ್ಬಲೇಃ ॥ ೩೮ ॥

---

೩೨. ಹಸು, ಎಮ್ಮೆ ಮೊದಲಾದುವನ್ನೂ ಹೋರಿಸಬೇಕು; ಹಸುಗಳ ನಡುವೆಯಿದ್ದು ಉಕ್ತಿಪ್ರತ್ಯುಕ್ತಿಗಳನ್ನಾಡುತ್ತಾ ಹಸುಗಳ ಬಳಿಯಿಂದ ಕರುಗಳನ್ನು ಆಕರ್ಷಿಸಬೇಕು.

೩೩–೩೫. ಎಲೈ ಸುವ್ರತನೇ! ಬಳಿಕ ಅಪರಾಹ್ಣಸಮಯದಲ್ಲಿ ಪೂರ್ವ ದಿಕ್ಕಿನಲ್ಲಿ, ಮರದಲ್ಲಿ ಕುಶ (ದರ್ಭೆ), ಕಾಶಮಯವಾಗಿಯೂ, ಬಹು ಲಂಬ ವಾಗಿಯೂ ಇರುವ ದಿವ್ಯವಾದ ಮಾರ್ಗಪಾಲಿ (ರಕ್ಷೆ)ಯನ್ನು ಬಂಧಿಸಬೇಕು. ಅದನ್ನು ತೋರಿಸಿ ಆನೆಗಳನ್ನೂ ಕುದುರೆಗಳನ್ನೂ ಹಸುಗಳನ್ನೂ ಹೋರಿಗಳನ್ನೂ ಎಮ್ಮೆಗಳನ್ನೂ ಮಾರ್ಗಪಾಲಿಯ ತಲಕ್ಕೆ ತರಬೇಕು. ದ್ವಿಜೇಂದ್ರರು ಹೋಮ ಮಾಡಿ ಮಾರ್ಗಪಾಲಿಯನ್ನು ಕಟ್ಟಬೇಕು.

೩೬. ಎಲೈ ಸುವ್ರತನೇ! ಆಮೇಲೆ ಈ ಮಂತ್ರದಿಂದ ಅದಕ್ಕೆ ನಮಸ್ಕಾರ ಮಾಡಬೇಕು. "ಮಾರ್ಗಪಾಲೀ! ನಿನಗೆ ನಮಸ್ಕಾರವು. ನೀನು ಸರ್ವ ಲೋಕಕ್ಕೂ ಸುಖಪ್ರದಳಾದವಳು. ನಿನ್ನ ತಲದಲ್ಲಿ ನನ್ನ ಕುದುರೆಗಳೂ ಆನೆಗಳೂ ಗೋವುಗಳೂ ಸುಖದಿಂದಿರಲಿ."

೩೭. ವತ್ಸ! ಮಾರ್ಗಪಾಲಿಯ ತಲದಲ್ಲಿ ಗೋವುಗಳೂ ಮಹಾವೃಷಭ ಗಳೂ ರಾಜರೂ ರಾಜಪುತ್ರರೂ ಬ್ರಾಹ್ಮಣರೂ ಹೋಗುತ್ತಾರೆ.

೩೮–೩೯. ಮಾರ್ಗಪಾಲಿಯನ್ನು ದಾಟಿ ಅವರೆಲ್ಲರೂ ರೋಗರಹಿತರೂ

ಪೂಜಾಂ ಕುರ್ಯಾತ್ತತಸ್ತಸ್ಮಾತ್ ಭೂಮೌ ಮಂಡಲಕೇ ಕೃತೇ ।
ಬಲಿಮಾಲಿಖ್ಯ ದೈತ್ಯೇಂದ್ರಂ ವರ್ಣಕೈಃ ಪಂಚರಂಗಕೈಃ ॥ ೩೯ ॥
ಸರ್ವಾಭರಣಸಂಪೂರ್ಣಂ ವಿಂಧ್ಯಾವಲಿಸಮನ್ವಿತಂ ।
ಕೂಷ್ಮಾಂಡಮಯಜಂಭೋರುಮಧುದಾನವಸಂವೃತಂ ॥ ೪೦ ॥
ಸಂಪೂರ್ಣಂ ಕೃಷ್ಟವದನಂ ಕಿರೀಟೋತ್ಕಟಕುಂಡಲಂ ।
ದ್ವಿಭುಜಂ ದೈತ್ಯರಾಜಾನಂ ಕಾರಯಿತ್ವಾ ಸ್ವಕೇ ಪುನಃ ॥ ೪೧ ॥
ಗೃಹಸ್ಯ ಮಧ್ಯೇ ಶಾಲಾಯಾಂ ವಿಶಾಲಾಯಾಂ ತತೋಽರ್ಚಯೇತ್ ।
ಮಾತೃಭ್ರಾತೃಜನೈಸ್ಸಾರ್ಧಂ ಸಂತುಷ್ಟೋ ಬಂಧುಭಿಸ್ಸಹ ॥ ೪೨ ॥
ಕಮಲೈಃ ಕುಮುದೈಃ ಪುಷ್ಪೈಃ ಕಲ್ಹಾರೈ ರಕ್ತಕೋತ್ಪಲೈಃ ।
ಗಂಧಪುಷ್ಪಾನ್ನನೈವೇದ್ಯೈಃ ಸಕ್ಷೀರೈರ್ಗುಡಪಾಯಸೈಃ ॥ ೪೩ ॥
ಮದ್ಯಮಾಂಸಸುರಾಲೇಹ್ಯಚೋಷ್ಯಭಕ್ಷ್ಯೋಪಹಾರಕೈಃ ।
ಮಂತ್ರೇಣಾನೇನ ರಾಜೇಂದ್ರ ಸಮಂತ್ರೀ ಸಪುರೋಹಿತಃ ।
ಪೂಜಾಂ ಕರಿಷ್ಯತೇ ಯೋ ವೈ ಸೌಖ್ಯಂ ಸ್ಯಾತ್ತಸ್ಯ ವತ್ಸರಂ ॥ ೪೪ ॥

---

ಸುಖಿಗಳೂ ಆಗುತ್ತಾರೆ. ಈ ಎಲ್ಲವನ್ನೂ ನೆರವೇರಿಸಿ ರಾತ್ರಿಯಲ್ಲಿ ದೈತ್ಯಪತಿಯಾದ ಬಲೀಂದ್ರನ ಪೂಜೆಯನ್ನು ಮಾಡಬೇಕು. ಭೂಮಿಯಲ್ಲಿ ಮಂಡಲವನ್ನು ಮಾಡಿ ಪಂಚರಂಗಿನ ವರ್ಣವಸ್ತುಗಳಿಂದ ದೈತ್ಯೇಂದ್ರನಾದ ಬಲಿಯನ್ನು ಬರೆದು ಪೂಜಿಸಬೇಕು.

೪೦–೪೨. ಸರ್ವಾಭರಣಗಳಿಂದಲೂ ಸಂಪೂರ್ಣನೂ, ವಿಂಧ್ಯಾವಲಿಯಿಂದ ಕೂಡಿದವನೂ, ಕೂಷ್ಮಾಂಡ, ಮಯ, ಜಂಭೋರು, ಮಧು–ಎಂಬೀ ದಾನವರಿಂದ ಸುತ್ತುವರಿಯಲ್ಪಟ್ಟವನೂ, ಸಂಪೂರ್ಣವಾಗಿ ಸಂತೋಷಗೊಂಡವನಾಗಿ ಕಿರೀಟಕುಂಡಲಗಳನ್ನು ಧರಿಸಿ, ಎರಡು ತೋಳುಗಳುಳ್ಳವನಾದ ದೈತ್ಯರಾಜನನ್ನು ತನ್ನ ಮನೆಯ ಮಧ್ಯದಲ್ಲಿ ವಿಶಾಲವಾದ ತೊಟ್ಟಿಯಲ್ಲಿ ಬರೆಯಿಸಿ ಮಾತೃಭ್ರಾತೃಜನಗಳಿಂದಲೂ, ಬಂಧುಗಳಿಂದಲೂ ಕೂಡಿದವನಾಗಿ ಸಂತೋಷದಿಂದ ಅರ್ಚನೆ ಮಾಡಬೇಕು.

೪೩–೪೪. ಕಮಲ, ಕುಮುದ, ಕಲ್ಹಾರ, ರಕ್ತೋತ್ಪಲ ಮೊದಲಾದ ಪುಷ್ಪಗಳಿಂದಲೂ, ಹಾಲು, ಬೆಲ್ಲದ ಪಾಯಸಗಳೊಡಗೂಡಿದ ಅನ್ನ ನೈವೇದ್ಯಗಳಿಂದಲೂ, ಮದ್ಯ, ಮಾಂಸ, ಸುರೆ, ಲೇಹ್ಯ, ಚೋಷ್ಯ, ಭಕ್ಷ್ಯ ಮತ್ತು ಇತರ ಉಪಹಾರಗಳಿಂದಲೂ ಯಾವ ರಾಜೇಂದ್ರನು ಮಂತ್ರಿ ಪುರೋಹಿತ ಸಮೇತನಾಗಿ ಈ ಮುಂದೆ ಹೇಳುವ ಮಂತ್ರದಿಂದ ಬಲೀಂದ್ರನಿಗೆ ಪೂಜೆ ಮಾಡುತ್ತಾನೆಯೋ ಅವನಿಗೆ ವರ್ಷವೆಲ್ಲ ಸೌಖ್ಯವುಂಟಾಗುತ್ತದೆ.

ಬಲಿರಾಜ ನಮಸ್ತುಭ್ಯಂ ವಿರೋಚನಸುತ ಪ್ರಭೋ ।
ಭವಿಷ್ಯೇಂದ್ರ ಸುರಾರಾತೇ ಪೂಜೇಯಂ ಪ್ರತಿಗೃಹ್ಯತಾಂ ॥ ೪೫ ॥
ಏವಂ ಪೂಜಾವಿಧಾನೇನ ರಾತ್ರೌ ಜಾಗರಣಂ ತತಃ ।
ಕಾರಯೇದ್ವೈ ಕ್ಷಣಂ ರಾತ್ರೌ ನಟನೃತ್ಯಕಥಾನಕೈಃ ॥ ೪೬ ॥
ಲೋಕಶ್ಚಾಪಿ ಗೃಹಸ್ಯಾಂತೇ ಸಪರ್ಯಾಂ ಶುಕ್ಲತಂಡುಲೈಃ ।
ಸಂಸ್ಥಾಪ್ಯ ಬಲಿರಾಜಾನಂ ಫಲೈಃ ಪುಷ್ಪೈಃ ಪ್ರಪೂಜಯೇತ್ ॥ ೪೭ ॥
ಬಲಿಮುದ್ದಿಶ್ಯ ವೈ ತತ್ರ ಕಾರ್ಯಂ ಸರ್ವಂ ಚ ಸುವ್ರತ ।
ಯಾನಿ ಯಾನ್ಯಕ್ಷಯಾಣ್ಯಾಹುಃ ಮುನಯಸ್ತತ್ತ್ವದರ್ಶಿನಃ ॥ ೪೮ ॥
ಯದತ್ರ ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ।
ತದಕ್ಷಯಂ ಭವೇತ್ಸರ್ವಂ ವಿಷ್ಣೋಃ ಪ್ರೀತಿಕರಂ ಶುಭಂ ॥ ೪೯ ॥
ರಾತ್ರೌ ಯೇ ನ ಕರಿಷ್ಯಂತಿ ತವ ಪೂಜಾಂ ಬಲೇ ನರಾಃ ।
ತೇಷಾಂ ಚ ಶ್ರೋತ್ರಿಯೋ ಧರ್ಮಃ ಸರ್ವಸ್ತ್ವಾಮುಪತಿಷ್ಠತು ॥ ೫೦ ॥
ವಿಷ್ಣುನಾ ಚ ಸ್ವಯಂ ವತ್ಸ ತುಷ್ಟೇನ ಬಲಯೇ ಪುನಃ ।
ಉಪಕಾರಕರಂ ದತ್ತಂ ಅಸುರಾಣಾಂ ಮಹೋತ್ಸವಂ ॥ ೫೧ ॥

---

೪೫. "ಎಲೈ ಬಲೀಂದ್ರನೇ! ವಿರೋಚನಪುತ್ರನೂ, ಪ್ರಭುವೂ ಆದ ನಿನಗೆ ನಮಸ್ಕಾರವು. ಮುಂದೆ ಇಂದ್ರನಾಗುವವನೂ, ಸುರಶತ್ರುವೂ ಆದ ನೀನು ನಾನು ಮಾಡುವ ಈ ಪೂಜೆಯನ್ನು ಪರಿಗ್ರಹಿಸು."

೪೬. ಹೀಗೆ ಪೂಜೆಮಾಡಿದ ಬಳಿಕ ನೃತ್ಯ, ಗೀತ, ಕಥೆ ಮೊದಲಾದುವುಗಳಿಂದ ರಾತ್ರಿಯಲ್ಲಿ ಜಾಗರಣೆ ಮಾಡಬೇಕು.

೪೭. ದೊರೆಯೇ ಅಲ್ಲದೆ ಜನರು ಕೂಡ ತಮ್ಮತಮ್ಮ ಮನೆಗಳಲ್ಲಿ ಬಿಳಿಯ ಅಕ್ಕಿಗಳಿಂದ ಬಲಿರಾಜನನ್ನು ಸ್ಥಾಪಿಸಿ ಫಲಪುಷ್ಪಗಳಿಂದ ಅವನನ್ನು ಪೂಜಿಸಬೇಕು.

೪೮. ಎಲೈ ಸುವ್ರತನೇ! ಆ ದಿನ ಬಲಿಯನ್ನುದ್ದೇಶಿಸಿಯೇ ಬಲಿಯನ್ನು ಮಾಡಬೇಕು. ತತ್ತ್ವದರ್ಶಿಗಳಾದ ಮುನಿಗಳು ಅವೆಲ್ಲವೂ ಅಕ್ಷಯವಾಗುವುವೆಂದು ಹೇಳುತ್ತಾರೆ.

೪೯. ಆ ದಿನ ಸ್ವಲ್ಪವೇ ಆಗಲಿ, ಬಹಳವೇ ಆಗಲಿ ದಾನಮಾಡಿದ್ದೇ ಆದರೆ ಅದೆಲ್ಲವೂ ಅಕ್ಷಯವಾಗುತ್ತದೆ. ಅದರಿಂದ ವಿಷ್ಣುವಿಗೆ ಪ್ರೀತಿಯೂ, ಲೋಕಕ್ಕೂ ತನಗೂ ಶುಭವೂ ಆಗುತ್ತದೆ.

೫೦. "ಎಲೈ ಬಲಿಯೇ, ರಾತ್ರಿಯಲ್ಲಿ ಯಾವ ನರರು ನಿನ್ನ ಪೂಜೆಯನ್ನು ಮಾಡುವುದಿಲ್ಲವೋ ಅವರ ಶ್ರೋತ್ರಿಯ ಧರ್ಮವೆಲ್ಲವೂ ನಿನ್ನನ್ನೇ ಸೇರಲಿ."

೫೧. ವತ್ಸಾ! ಇರತು ವಿಷ್ಣುವು ಸಂತುಷ್ಟನಾಗಿ ಬಲಿಗೆ ಉಪಕಾರಕವಾದ ವರವನ್ನಿತ್ತು ಈ ಅಸುರಮಹೋತ್ಸವವನ್ನು ತಾನೇ ದಯಪಾಲಿಸಿದನು.

ಏಕಮೇವಮಹೋರಾತ್ರಂ ವರ್ಷೇ ವರ್ಷೇ ಚ ಕಾರ್ತಿಕೇ ।
ದತ್ತಂ ದಾನವರಾಜಸ್ಯ ಆದರ್ಶಮಿವ ಭೂತಲೇ ॥ ೫೨ ॥
ಯಃ ಕರೋತಿ ನೃಪೋ ರಾಜ್ಯೇ ತಸ್ಯ ವ್ಯಾಧಿಭಯಂ ಕುತಃ ।
ಸುಭಿಕ್ಷಂ ಕ್ಷೇಮಮಾರೋಗ್ಯಂ ತಸ್ಯ ಸಂಪದನುತ್ತಮಾ ॥ ೫೩ ॥
ನೀರುಜಶ್ಚ ಜನಾಸ್ಸರ್ವೇ ಸರ್ವೋಪದ್ರವವರ್ಜಿತಾಃ ॥ ೫೪ ॥
ಕೌಮುದೀ ಕ್ರಿಯತೇ ಯಸ್ಮಾತ್ ಭಾವಂ ಕರ್ತುಂ ಮಹೀತಲೇ ।
ಯೋ ಯಾದೃಶೇನ ಭಾವೇನ ತಿಷ್ಠತ್ಯಾಶಾಂ ಚ ಸುವ್ರತ ।
ಹರ್ಷದುಃಖಾದಿಭಾವೇನ ತಸ್ಯ ವರ್ಷಂ ಪ್ರಯಾತಿ ಹಿ ॥ ೫೫ ॥
ರುದಿತೇ ರೋದಿತಂ ವರ್ಷಂ ಪ್ರಹೃಷ್ಟೇ ತು ಪ್ರಹರ್ಷಿತಂ ।
ಭುಕ್ತೌ ಭೋಗ್ಯಂ ಭವೇದ್ವರ್ಷಂ ಸ್ವಸ್ಥೇ ಸ್ವಸ್ಥಂ ಭವಿಷ್ಯತಿ ॥ ೫೬ ॥
ವೈಷ್ಣವೀ ದಾನವೀ ಚೇಯಂ ತಿಥಿಃ ಪ್ರೋಕ್ತಾ ಚ ಕಾರ್ತಿಕೇ ॥ ೫೭ ॥
ದೀಪೋತ್ಸವಂ ಜನಿತಸರ್ವಜನಪ್ರಮೋದಂ
ಕುರ್ವಂತಿ ಯೇ ಶುಭತಯಾ ಬಲಿರಾಜಪೂಜಾಂ ।

---

೫೨. ಈ ರೀತಿಯಾಗಿ ವರ್ಷವರ್ಷವೂ ಕಾರ್ತಿಕಮಾಸದಲ್ಲಿ ಒಂದೇ ಒಂದು ಹಗಲೂ ರಾತ್ರಿಯೂ ದಾನವರಾಜನಾದ ಬಲಿಗೆ ಭೂಮಂಡಲದಲ್ಲಿ ಆದರ್ಶದಂತೆ ಉತ್ಸವವು ಏರ್ಪಡಿಸಿಕೊಡಲ್ಪಟ್ಟಿದೆ.

೫೩. ಯಾವ ರಾಜನು ಬಲೀಂದ್ರಪೂಜೆಯನ್ನು ಮಾಡುತ್ತಾನೆಯೋ ಅವನ ರಾಜ್ಯದಲ್ಲಿ ವ್ಯಾಧಿಭಯವೆಲ್ಲಿಯದು? ಸುಭಿಕ್ಷ, ಕ್ಷೇಮ, ಆರೋಗ್ಯ, ಪರಿಮಿಗಿಲಿಲ್ಲದ ಸಂಪತ್ತು ಇಷ್ಟೂ ಅವನಿಗೆ ಉಂಟಾಗುತ್ತವೆ.

೫೪. ಜನರೆಲ್ಲರೂ ರೋಗರಹಿತರೂ, ಸರ್ವ ಉಪದ್ರವಗಳಿಂದಲೂ ಬಿಡಲ್ಪಟ್ಟವರೂ ಆಗುತ್ತಾರೆ.

೫೫. ಈ ಭೂತಲದಲ್ಲಿ ಜನರಿಗೆ ಒಳ್ಳೆಯ ಭಾವನೆಯನ್ನುಂಟುಮಾಡಲೋಸುಗವೇ ಈ ಬಲಿಪಾಡ್ಯಮಿ ಉತ್ಸವವನ್ನು ಮಾಡಬೇಕು. ಎಲೈ ಸುವ್ರತನೇ! ಈ ಬಲಿಪ್ರತಿಪತ್ತಿನ ದಿನ ಯಾವನು ಯಾವ ಭಾವದಿಂದಿರುತ್ತಾನೆಯೋ ಅವನಿಗೆ ಅದೇ ಹರ್ಷದುಃಖಾದಿ ಭಾವಗಳಿಂದ ವರ್ಷವೆಲ್ಲವೂ ಕಳೆಯುತ್ತದೆ.

೫೬. ಅವನು ಆ ದಿನ ಅತ್ತರೆ ವರ್ಷವೆಲ್ಲ ಅಳುವೇ! ಹೃಷ್ಟನಾಗಿದ್ದರೆ ವರ್ಷವೆಲ್ಲ ಹರ್ಷವೇ! ಒಳ್ಳೆಯ ಊಟ ಮಾಡಿದರೆ ವರ್ಷವೆಲ್ಲ ಒಳ್ಳೆಯ ಊಟವೇ! ಸ್ವಸ್ಥವಾಗಿದ್ದರೆ ವರ್ಷದುದ್ದಕ್ಕೂ ಸ್ವಸ್ಥತೆಯೇ ಉಂಟಾಗುತ್ತದೆ.

೫೭. ಕಾರ್ತಿಕದಲ್ಲಿ ಈ ತಿಥಿಯು ವೈಷ್ಣವಿಯೆಂದೂ, ದಾನವಿಯೆಂದೂ ಎರಡು ತೆರನಾಗಿ ಹೇಳಲ್ಪಟ್ಟಿದೆ.

೫೮. ಕಾರ್ತಿಕದಲ್ಲಿ ಯಾರು ಸರ್ವಜನರಿಗೂ ಬಹು ಸಂತೋಷಕರವಾದ

ದಾನೋಪಭೋಗಸುಖಬುದ್ಧಿಮತಾಂ ಕುಲಾನಾಂ
ಹರ್ಷಂ ಪ್ರಯಾತಿ ಸಕಲಂ ಪ್ರಮುದಾ ಚ ವರ್ಷಂ ॥ ೫೮ ॥
ಬಲಿಪೂಜಾಂ ವಿಧಾಯೈವಂ ಪಶ್ಚಾದ್ಗೋಕ್ರಿಡನಂ ಚರೇತ್ ॥ ೫೯ ॥
ಗವಾಂ ಕ್ರೀಡಾ ದಿನೇ ಯತ್ರ ರಾತ್ರೌ ದೃಶ್ಯೇತ ಚಂದ್ರಮಾಃ ।
ಸೋಮೋ ರಾಜಾ ಪಶೂನ್ ಹಂತಿ ಸುರಭೀಪೂಜಕಾಂಸ್ತಥಾ ॥ ೬೦ ॥
ಪ್ರತಿಪದ್ದರ್ಶಸಂಯೋಗೇ ಕ್ರೀಡನಂ ತು ಗವಾಂ ಮತಂ ।
ಪರವಿದ್ಧಾಸು ಯಃ ಕುರ್ಯಾತ್ ಪುತ್ರದಾರಧನಕ್ಷಯಃ ॥ ೬೧ ॥
ಅಲಂಕಾರ್ಯಾಸ್ತದಾ ಗಾವೋ ಗೋಗ್ರಾಸಾದಿಭಿರರ್ಚಿತಾಃ ।
ಗೀತವಾದಿತ್ರನಿರ್ಘೋಷೈಃ ನಯೇನ್ನಗರಬಾಹ್ಯತಃ ।
ಆನೀಯ ಚ ತತಃ ಪಶ್ಚಾತ್ ಕುರ್ಯಾನ್ನೀರಾಜನಾವಿಧಿಂ ॥ ೬೨ ॥
ಅಥ ಚೇತ್ಪ್ರತಿಪತ್ಸ್ವಲ್ಪಾ ನಾರೀ ನೀರಾಜನಂ ಚರೇತ್ ।
ದ್ವಿತೀಯಾಯಾಂ ತತಃ ಕುರ್ಯಾತ್ ಸಾಯಂ ಮಂಗಲಮಾಲಿಕಾಃ ॥ ೬೩ ॥
ಏವಂ ನೀರಾಜನಂ ಕೃತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಪ್ರತಿಪತ್ಪೂರ್ವವಿದ್ಧೈವ ಯಷ್ಟಿಕಾಕರ್ಷಣೇ ಭವೇತ್ ॥ ೬೪ ॥

---

ದೀಪೋತ್ಸವವನ್ನು ನೆರವೇರಿಸುವರೊ, ಶುಭಮನಸ್ಸಿನಿಂದ ಬಲಿರಾಜನ ಪೂಜೆಯನ್ನು ಮಾಡುವರೋ ಅವರಿಗೆ ದಾನ, ಉಪಭೋಗ, ಸುಖಬುದ್ಧಿಗಳು ವೃದ್ಧಿಯಾಗಿ ವರ್ಷವೆಲ್ಲವೂ ಹರ್ಷದಿಂದಲೇ ಕಳೆಯುತ್ತದೆ.

೫೯–೬೦. ಹೀಗೆ ಬಲಿಪೂಜೆ ಮಾಡಿ, ಅನಂತರ ಗೋಕ್ರೀಡನ ವ್ರತವನ್ನು ನಡೆಸಬೇಕು. ಗೋಕ್ರೀಡಾ ದಿನದಲ್ಲಿ ರಾತ್ರಿ ಚಂದ್ರನು ಕಾಣಿಸಿಕೊಂಡುದಾದರೆ ಪಶುಗಳಿಗೆ ಹಾನಿಯುಂಟಾಗುತ್ತದೆ; ಗೋಪೂಜಕರಿಗೂ ಕೇಡು ಸಂಭವಿಸುತ್ತದೆ.

೬೧. ಅಮಾವಾಸ್ಯೆ ಮತ್ತು ಪಾಡ್ಯಮಿಗಳ ಸಂಯೋಗವಿರುವಾಗ ಗೋಕ್ರೀಡನ ವ್ರತವನ್ನು ನಡೆಸಬಹುದು. ಮುಂದಿನ ತಿಥಿಯ ವೇಧೆಯಿರುವಲ್ಲಿ ಯಾವನು ಗೋಕ್ರೀಡನ ವ್ರತವನ್ನು ಮಾಡುವನೋ ಅವನಿಗೆ ಹೆಂಡತಿ ಮಕ್ಕಳು ಮತ್ತು ಧನಗಳ ಕ್ಷಯವುಂಟಾಗುತ್ತದೆ.

೬೨–೬೩. ಈ ಗೋಕ್ರೀಡನವ್ರತ ಸಮಯದಲ್ಲಿ ಗೋವುಗಳಿಗೆಲ್ಲ ಅಲಂಕಾರ ಮಾಡಬೇಕು. ಅವನ್ನು ಗೋಗ್ರಾಸಾದಿಗಳಿಂದ ಅರ್ಚಿಸಿ ಗೀತವಾದ್ಯಾದಿಗಳ ಘೋಷದಿಂದ ನಗರದ ಹೊರಭಾಗಕ್ಕೆ ಉತ್ಸವದಿಂದ ಕರೆದುಕೊಂಡು ಹೋಗಬೇಕು. ಆ ಬಳಿಕ ಅವಕ್ಕೆ ಆರತಿಯನ್ನು ಮಾಡಬೇಕು. ಆ ದಿನ ಪಾಡ್ಯಮಿಯು ಸ್ವಲ್ಪಮಾತ್ರವೇ ಇರುವುದಾದರೆ ನಾರಿಯು ನೀರಾಜನ ಮಾಡಬೇಕು. ಬಳಿಕ ಬಿದಿಗೆಯಲ್ಲಿ ಸಾಯಂಕಾಲ ಮಂಗಳಮಾಲಿಕೆಗಳನ್ನು ಮಾಡಬೇಕು.

೬೪. ಹೀಗೆ ನೀರಾಜನ ಮಾಡಿದರೆ ಸರ್ವ ಪಾಪಗಳಿಂದಲೂ ಬಿಡುಗಡೆ

**ಕುಶಕಾಶಮಯೀಂ ಕುರ್ಯಾತ್ ಯಷ್ಟಿಕಾಂ ಸುದೃಢಾಂ ನವಾಂ ।**
**ದೇವದ್ವಾರೇ ನೃಪದ್ವಾರೇಽಥವಾ ನೇಯಾ ಚತುಷ್ಪಥೇ ॥ ೬೫ ॥**
**ತಾಮೇಕತೋ ರಾಜಪುತ್ರಾ ಹೀನವರ್ಣಾಸ್ತಥೈಕತಃ ।**
**ಗೃಹೀತ್ವಾಽಕರ್ಷಯೇಯುಸ್ತೇ ಯಥಾಸಾರಂ ಮುಹುರ್ಮುಹುಃ ॥**
**ಸಮಸಂಖ್ಯಾ ದ್ವಯೋಃ ಕಾರ್ಯಾ ಸರ್ವೇಽಪಿ ಬಲವತ್ತರಾಃ ।**
**ಜಯೋಽತ್ರ ಹೀನಜಾತೀನಾಂ ಜಯೋ ರಾಜ್ಞಸ್ತು ವತ್ಸರಂ ॥ ೬೭ ॥**
**ಉಭಯೋಃ ಪೃಷ್ಠತಃ ಕಾರ್ಯಾ ರೇಖಾ ತತ್ಕರ್ಷಕೋಪರಿ ।**
**ರೇಖಾಂತೇ ಯೋ ನಯೇತ್ತಸ್ಯ ಜಯೋ ಭವತಿ ನಾನ್ಯಥಾ ॥ ೬೮ ॥**
**ಜಯಚಿಹ್ನಮಿದಂ ರಾಜಾ ವಿದಧೀತ ಪ್ರಯತ್ನತಃ ॥ ೬೯ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಕಾರ್ತಿಕಶುಕ್ಲ ಪ್ರತಿಪನ್ಮಾಹಾತ್ಮ್ಯವರ್ಣನಂ" ನಾಮ ದಶಮೋಽಧ್ಯಾಯಃ

---

ಯುಂಟಾಗುತ್ತದೆ. ಪೂರ್ವತಿಥಿಯ ವೇಧೆಯಿರುವ ಪ್ರತಿಪತ್‌ತಿಥಿಯೇ ಯಷ್ಟಿಕಾ ಕರ್ಷಣಕ್ಕೆ ತಕ್ಕುದು.

೬೫. ಕುಶಕಾಶಗಳಿಂದ ಬಹು ದೃಢವಾಗಿರುವ ಹೊಸದಾದ ಯಷ್ಟಿಯ (ಕೋಲ)ನ್ನು ರಚಿಸಬೇಕು. ದೇವಸ್ಥಾನದ ಎದುರಿಗೆ ಅಥವಾ ಅರಮನೆಯ ಎದುರಿಗೆ ಅಥವಾ ನಾಲ್ಕು ಬೀದಿಗಳು ಸೇರಿದ ಚೌಕಕ್ಕೆ ಅದನ್ನು ತರಬೇಕು.

೬೬. ಅದನ್ನು ಒಂದು ಕಡೆ ರಾಜಪುತ್ರರೂ, ಮತ್ತೊಂದು ಕಡೆ ಕೆಳವರ್ಣದವರೂ ಹಿಡಿದುಕೊಂಡು ತಮ್ಮ ಶಕ್ತಿಗನುಸಾರವಾಗಿ ಮತ್ತೆಮತ್ತೆ ಎಳೆಯಬೇಕು.

೬೭. ಎರಡು ಕಡೆಯವರನ್ನೂ ಸಮಸಂಖ್ಯೆಯವರನ್ನಾಗಿಯೇ ಸೇರಿಸಬೇಕು. ಎಲ್ಲರೂ ಬಹು ಬಲಶಾಲಿಗಳೇ ಆಗಿರಬೇಕು. ಹೀನಜಾತಿಯವರಿಗೆ ಜಯವಾದರೆ ಅದು ರಾಜನಿಗೆ ವರ್ಷದವರೆಗೂ ಜಯವನ್ನು ಸೂಚಿಸುತ್ತದೆ.

೬೮–೬೯. ಯಷ್ಟಿಯನ್ನು ಎಳೆಯಲು ನಿಂತಿರುವ ಎರಡು ಪಂಗಡಗಳವರ ಹಿಂಭಾಗದಲ್ಲಿಯೂ ಗೆರೆಯನ್ನು ಎಳೆಯಬೇಕು. ಯಾವ ಪಂಗಡದವರು ಆ ಗೆರೆಯಿಂದೀಚೆಗೆ ಯಷ್ಟಿಯನ್ನೆಳೆಯುವರೋ ಅವರಿಗೆ ಜಯವುಂಟಾಗುತ್ತದೆ. ಹಾಗಲ್ಲದೆ ಜಯವು ದೊರೆಯುವುದಿಲ್ಲವು. ಈ ಜಯಚಿಹ್ನೆಯನ್ನು ರಾಜನು ಪ್ರಯತ್ನಪೂರ್ವಕವಾಗಿ ನಡೆಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ಕಾರ್ತಿಕಶುಕ್ಲಪ್ರತಿಪನ್ಮಾಹಾತ್ಮ್ಯವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋಽಧ್ಯಾಯಃ

## ಯಮದ್ವಿತೀಯಾಮಾಹಾತ್ಮ್ಯವರ್ಣನಂ

ನಾರದ ಉವಾಚ :—

**ಭಗವನ್ ಪ್ರಷ್ಟುಮಿಚ್ಛಾಮಿ ತ್ವಾಮಹಂ ವಿನಯಾನ್ವಿತಃ ।**
**ತದ್ವ್ರತಂ ಬ್ರೂಹಿ ಮೇ ಮರ್ತ್ಯೋ ಮೃತ್ಯುಂ ಯೇನ ನ ಪಶ್ಯತಿ ॥ ೧ ॥**

ಬ್ರಹ್ಮೋವಾಚ :—

**ಯದಿ ಪೃಚ್ಛಸಿ ವಿಪ್ರೇಂದ್ರ ವ್ರತಾನಾಮುತ್ತಮಂ ವ್ರತಂ ।**
**ವ್ರತಂ ಯಮದ್ವಿತೀಯಾಖ್ಯಂ ಶೃಣು ತ್ವಂ ಮೃತ್ಯುನಾಶನಂ ॥ ೨ ॥**
**ಕಾರ್ತಿಕೇ ಮಾಸಿ ಶುಕ್ಲಾಯಾಂ ದ್ವಿತೀಯಾಯಾಂ ಮುನೀಶ್ವರ ।**
**ಕರ್ತವ್ಯಂ ತದ್ವಿಧಾನೇನ ಸರ್ವಮೃತ್ಯುನಿವಾರಣಂ ॥ ೩ ॥**
**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ದ್ವಿತೀಯಾಯಾಂ ಮುನೀಶ್ವರ ।**
**ಮನಸಾ ಚಿಂತಯೇದಾತ್ಮಹಿತಂ ನೈವಾಹಿತಂ ಸ್ಮರೇತ್ ॥ ೪ ॥**
**ಪ್ರಾತಃಸ್ನಾನಂ ತತಃ ಕುರ್ಯಾತ್ ದಂತಧಾವನಪೂರ್ವಕಂ ।**
**ತತಃ ಶುಕ್ಲಾಂಬರಧರಃ ಶುಕ್ಲಮಾಲ್ಯಾನುಲೇಪನಃ ॥ ೫ ॥**

---

### ಕನ್ನಡದ ಅನುವಾದ

#### ಯಮದ್ವಿತೀಯಾಮಾಹಾತ್ಮ್ಯವರ್ಣನ

೧. ನಾರದನು ಕೇಳುತ್ತಾನೆ:—“ಭಗವನ್! ವಿನಯವಂತನಾಗಿ ನಾನು ನಿನ್ನನ್ನು ಒಂದು ಪ್ರಶ್ನೆ ಕೇಳಲಿಚ್ಛಿಸುತ್ತೇನೆ. ಯಾವುದರಿಂದ ಮರ್ತ್ಯನು ಮೃತ್ಯುವನ್ನು ಕಾಣುವುದಿಲ್ಲವೋ ಆ ವ್ರತವನ್ನು ನನಗೆ ತಿಳಿಸು.”

೨. “ಎಲೈ ವಿಪ್ರೇಂದ್ರಾ! ವ್ರತಗಳೆಲ್ಲೆಲ್ಲ ಉತ್ತಮವಾದ ವ್ರತವಾವುದೆಂದು ಪ್ರಶ್ನೆಮಾಡುವೆಯಾದರೆ ಹೇಳುವೆನು ಕೇಳು. ಅದೇ ಯಮದ್ವಿತೀಯೆಯೆಂಬ ವ್ರತವು. ಅದು ಮೃತ್ಯುನಾಶಕವಾದುದು.

೩. ಆ ವ್ರತವನ್ನು ಕಾರ್ತಿಕಮಾಸದ ಶುಕ್ಲಪಕ್ಷದಲ್ಲಿ ದ್ವಿತೀಯೆಯ ದಿನ ಮಾಡಬೇಕು. ಮುನೀಶ್ವರಾ! ಅದನ್ನು ಮಾಡುವುದರಿಂದ ಸರ್ವಮೃತ್ಯುನಿವಾರಣೆಯುಂಟಾಗುತ್ತದೆ.

೪. ಬಿದಿಗೆಯ ದಿನ ಬ್ರಾಹ್ಮಮುಹೂರ್ತದಲ್ಲಿ ಎದ್ದು ಆತ್ಮಹಿತವನ್ನು ಮನಸ್ಸಿನಲ್ಲಿ ಚಿಂತಿಸಬೇಕು. ಅಹಿತವಾದುದನ್ನು ಸ್ಮರಿಸಲೇಬಾರದು.

೫. ಬಳಿಕ ಹಲ್ಲುಜ್ಜಿಕೊಂಡು ಪ್ರಾತಃಸ್ನಾನವನ್ನು ಮಾಡಬೇಕು. ಬಳಿಕ ಬಿಳಿಯ ಬಟ್ಟೆಯನ್ನುಟ್ಟು, ಬಿಳಿಯ ಹೂವನ್ನು ಮುಡಿದು ಗಂಧಾದ್ಯನುಲೇಪನಗಳನ್ನು ತೊಡೆದುಕೊಳ್ಳಬೇಕು.

ಕೃತನಿತ್ಯಕ್ರಿಯೋ ಹೃಷ್ಟಃ ಕುಂಡಲಾಂಗದಭೂಷಿತಃ ।
ಔದುಂಬರತರುಂ ಗತ್ವಾ ಕೃತ್ವಾ ಮಂಡಲಮುತ್ತಮಂ ॥ ೬ ॥
ಪದ್ಮಮಷ್ಟದಲಂ ಕೃತ್ವಾ ತಸ್ಮಿನ್ನೌದುಂಬರೇ ಶುಭೇ ।
ವಿಧಿಂ ವಿಷ್ಣುಂ ಚ ರುದ್ರಂ ಚ ವರದಾಂ ಚ ಸರಸ್ವತೀಂ ॥ ೭ ॥
ವೀಣಾಪುಸ್ತಕಸಂಯುಕ್ತಾಂ ಪೂಜಯೇತ್ಸ್ವಸ್ಥಮಾನಸಃ ।
ಚಂದನಾಗರುಕಸ್ತೂರೀಕುಂಕುಮೈರ್ದ್ವಿಜಸತ್ತಮ ॥ ೮ ॥
ಪುಷ್ಪೈರ್ಧೂಪೈಶ್ಚ ನೈವೇದ್ಯೈರ್ನಾರಿಕೇಲಫಲಾದಿಭಿಃ ।
ತತೋ ಮೃತ್ಯುವಿನಾಶಾರ್ಥಂ ಸಾಲಂಕಾರಾಂ ಪಯಸ್ವಿನೀಂ ॥ ೯ ॥
ವಿಪ್ರಾಯ ವೇದವಿದುಷೇ ಗಾಂ ದದ್ಯಾಚ್ಚ ಸವತ್ಸಕಾಂ ।
ಅಪಮೃತ್ಯುವಿನಾಶಾರ್ಥಂ ಸಂಸಾರಾರ್ಣವತಾರಕಾಂ ॥ ೧೦ ॥
ಹೇ ವಿಪ್ರ ತೇ ತ್ವಿಮಾಂ ಸೌಮ್ಯಾಂ ಧೇನುಂ ಸಂಪ್ರದದಾಮ್ಯಹಂ ।
ಇತಿ ಮಂತ್ರೇಣ ಗಾಂ ದದ್ಯಾತ್ ವಿಪ್ರಾಯ ಬ್ರಹ್ಮವಾದಿನೇ ॥ ೧೧ ॥
ತದಲಾಭೇ ತು ವಿಪ್ರಾಯ ಭಕ್ತ್ಯಾ ದದ್ಯಾದುಪಾನಹೌ ।
ತತಃ ಪೂಜಾಂ ಸಮಾಪ್ಯಾಥ ಭಕ್ತಿಮಾನ್ ಪುರುಷೋತ್ತಮೇ ॥ ೧೨ ॥

---

೬. ನಿತ್ಯಕ್ರಿಯಗಳನ್ನೆಲ್ಲ ನೆರವೇರಿಸಿ ಸಂತುಷ್ಟನಾಗಿ ಕುಂಡಲ, ಅಂಗದ ಮೊದಲಾದ ಭೂಷಣಗಳನ್ನು ಧರಿಸಿ ಅತ್ತಿಯ ಮರದ ಬಳಿಗೆ ಹೋಗಿ ಅಲ್ಲಿ ಉತ್ತಮವಾದ ಮಂಡಲವನ್ನು ಮಾಡಬೇಕು.

೭-೯. ಆ ಅತ್ತಿಯ ಮರದಲ್ಲಿ ಅಷ್ಟದಲ ಪದ್ಮವನ್ನು ರಚಿಸಬೇಕು. ಅದರಲ್ಲಿ ವಿಧಿ, ವಿಷ್ಣು, ರುದ್ರ, ವರದಾಯಕಳೂ, ವೀಣಾಪುಸ್ತಕಗಳನ್ನು ಧರಿಸಿ ದವಳೂ ಆದ ಸರಸ್ವತಿ—ಇವರನ್ನು ಸ್ವಸ್ಥಮನಸ್ಸುಳ್ಳವನಾಗಿ ಪೂಜಿಸಬೇಕು. ಚಂದನ, ಅಗುರು, ಕಸ್ತೂರಿ, ಕುಂಕುಮ, ಪುಷ್ಪ, ಧೂಪ, ದೀಪ, ನೈವೇದ್ಯ, ತೆಂಗಿನಕಾಯಿ, ಕದಳೀಫಲ ಮೊದಲಾದುವುಗಳಿಂದ ಪೂಜೆಮಾಡಬೇಕು. ಬಳಿಕ ಮೃತ್ಯುವಿನಾಶಾರ್ಥವಾಗಿ, ಅಲಂಕರಿಸಿರುವ ಕರೆಯುವ ಹಸುವನ್ನು ದಾನ ಮಾಡಬೇಕು.

೧೦. ಸಂಸಾರಸಮುದ್ರವನ್ನು ದಾಟಿಸುವಂತಹುದೂ, ಕರುವಿನಿಂದ ಕೂಡಿದುದೂ ಆದ ಗೋವನ್ನು ಅಪಮೃತ್ಯುವಿನಾಶಾರ್ಥವಾಗಿ ವೇದವಿದ್ವಾಂಸನಾದ ವಿಪ್ರನಿಗೆ ದಾನಮಾಡಬೇಕು.

೧೧. "ಎಲೈ ವಿಪ್ರನೇ! ನಿನಗೆ ಸಾಧುವಾದ ಈ ಹಸುವನ್ನು ಕೊಡುತ್ತೇನೆ" ಎಂಬೀ ಮಂತ್ರದಿಂದ ಬ್ರಹ್ಮವಾದಿಯಾದ ವಿಪ್ರನಿಗೆ ಆ ಗೋವನ್ನು ದಾನ ಕೊಡಬೇಕು.

೧೨. ಅದು ದೊರೆಯದಿದ್ದಲ್ಲಿ, ವಿಪ್ರನಿಗೆ ಭಕ್ತಿಯಿಂದ ಪಾದರಕ್ಷೆಗಳ

ಜ್ಞಾತಿಶ್ರೇಷ್ಠಾನ್ವಯೋವೃದ್ಧಾನ್ ಸಮ್ಯಗ್ಭಕ್ತ್ಯಾಽಭಿವಾದಯೇತ್ ।
ನಾನಾವಿಧೈಃ ಫಲೈ ರಮ್ಯೈಸ್ತರ್ಪಯೇತ್ಸ್ವಜನಾನಪಿ ॥ ೧೩ ॥
ತತಃ ಸೋದರಸಂಪನ್ನಾ ಭಗಿನೀ ಯಾ ಭವೇನ್ಮುನೇ ।
ತಸ್ಯಾ ಗೃಹಂ ಸಮಾಗತ್ಯ ಸಮ್ಯಗ್ಭಕ್ತ್ಯಾಭಿವಾದಯೇತ್ ॥ ೧೪ ॥
ಭಗಿನೀ ಸುಭಗೇ ಭದ್ರೇ ತ್ವದಂಘ್ರಿಸರಸೀರುಹಂ ।
ಶ್ರೇಯಸೇಽಥ ನಮಸ್ಕರ್ತುಂ ಆಗತೋಽಸ್ಮಿ ತವಾಲಯಂ ॥ ೧೫ ॥
ಇತ್ಯುಕ್ತ್ವಾ ಭಗಿನೀಂ ತಾಂ ತು ವಿಷ್ಣುಬುದ್ಧ್ಯಾಽಭಿವಾದಯೇತ್ ।
ತದಾ ತು ಭಗಿನೀ ಶ್ರುತ್ವಾ ಭ್ರಾತುರ್ವಚನಮುತ್ತಮಂ ॥ ೧೬ ॥
ಭಗಿನ್ಯಾ ಭ್ರಾತರಂ ವಾಕ್ಯಂ ವಕ್ತವ್ಯಂ ಪ್ರತಿ ನಾರದ ।
ಅದ್ಯ ಭ್ರಾತರಹಂ ಜಾತಾ ತ್ವತ್ತೋ ಧನ್ಯಾಸ್ಮಿ ಮಂಗಲಾ ॥ ೧೭ ॥
ಭೋಕ್ತವ್ಯಂ ತೇಽದ್ಯ ಮದ್ಗೇಹೇ ಸ್ವಾಯುಷೇ ಕುಲದೀಪಕ ।
ಕಾರ್ತಿಕೇ ಶುಕ್ಲಪಕ್ಷಸ್ಯ ದ್ವಿತೀಯಾಯಾಂ ಸಹೋದರ ॥ ೧೮ ॥

---

ನ್ನಾದರೂ ನೀಡಬೇಕು. ಆಮೇಲೆ ಪುರುಷೋತ್ತಮನಲ್ಲಿ ಭಕ್ತಿಯುಳ್ಳವನಾಗಿ ಪೂಜೆಯನ್ನು ಸಮಾಪ್ತಿಮಾಡಬೇಕು.

೧೩. ಹೀಗೆ ಪೂಜೆಯನ್ನು ಸಮಾಪ್ತಿಮಾಡಿ ವಯೋವೃದ್ಧರಾದ ಜ್ಞಾತಿ ಶ್ರೇಷ್ಠರನ್ನು ಭಕ್ತಿಯಿಂದ ಅಭಿವಾದನಮಾಡಬೇಕು. ಸ್ವಜನರನ್ನು ಕೂಡ ನಾನಾ ವಿಧಗಳಾದ ರಮ್ಯವಾದ ಫಲಗಳಿಂದ ತೃಪ್ತಿಪಡಿಸಬೇಕು.

೧೪. ಎಲೈ ಮುನಿಯೇ! ಬಳಿಕ ಸೋದರಸಂಪನ್ನಳಾದ ಯಾವ ಭಗಿನಿ ಯಿರುವಳೋ ಅವಳ ಮನೆಗೆ ಹೋಗಿ ಬಹಳ ಭಕ್ತಿಯಿಂದ ಆಕೆಗೆ ನಮಸ್ಕಾರ ಮಾಡಬೇಕು.

೧೫. "ಭಗಿನೀ, ಸುಭಗೇ, ಭದ್ರೇ! ನನ್ನ ಶ್ರೇಯಸ್ಸಿಗಾಗಿ ನಿನ್ನ ಪಾದ ಕಮಲವನ್ನು ನಮಸ್ಕರಿಸಲು ನಿನ್ನ ಮನೆಗೆ ಬಂದಿದ್ದೇನೆ."

೧೬-೧೭. ಹೀಗೆಂದು ನುಡಿಯುತ್ತ, ಆ ಭಗಿನಿ (ಅಕ್ಕನ) ಯನ್ನು ವಿಷ್ಣು ವೆಂದು ಭಾವಿಸಿ ಆಕೆಗೆ ಅಭಿವಾದನಮಾಡಬೇಕು. ಆಗ ಭಗಿನಿಯು ಸೋದರನ ಉತ್ತಮವಾದ ಆ ವಚನವನ್ನಾಲಿಸಿ ಆ ಸೋದರನನ್ನು ಕುರಿತು, ಈ ವಚನ ವನ್ನು ನುಡಿಯಬೇಕು. "ಸೋದರಾ! ಈಗ ನಾನು ನಿನ್ನಿಂದ ಧನ್ಯಳಾದೆನು; ಮಂಗಳೆಯಾದೆನು.

೧೮-೧೯. ಎಲೈ ಕುಲದೀಪಕನೇ! ನಿನ್ನ ಆಯುರ್ವೃದ್ಧಿಗಾಗಿ ಈಗ ನನ್ನ ಮನೆಯಲ್ಲಿ ಭೋಜನಮಾಡಬೇಕು. ಸಹೋದರನೆ! ಪೂರ್ವದಲ್ಲಿ ಕಾರ್ತಿಕ ಮಾಸದ ಶುಕ್ಲಪಕ್ಷದ ಬಿದಿಗೆಯ ದಿನ, ಯಮುನೆಯು ಯಮನನ್ನು ಸ್ವಗೃಹ ದಲ್ಲಿ ಅರ್ಚಿಸಿ ಅವನಿಗೆ ಭೋಜನಮಾಡಿಸಿದಳು. ಈ ದಿನ ಯಮನು ಕೂಡ

ಯಮೋ ಯಮುನಯಾ ಪೂರ್ವಂ ಭೋಜಿತಃ ಸ್ವಗೃಹೇಽರ್ಚಿತಃ ।
ಅಸ್ಮಿನ್ ದಿನೇ ಯಮೇನಾಽಪಿ ನಾರಕೀಯಾಶ್ಚ ಮೋಚಿತಾಃ ।
ಅಪಿ ಬದ್ಧಾಃ ಕರ್ಮಪಾಶೈಃ ಸ್ವೇಚ್ಛಯಾ ಪರ್ಯಟಂತಿ ತೇ ॥ ೧೯ ॥
ಸ್ವಸುರ್ನರೋ ವೇಶ್ಮನಿ ಯೋ ನ ಭುಂಕ್ತೇ
ಯಮದ್ವಿತೀಯಾದಿನಮತ್ರ ಲಬ್ಧ್ವಾ ।
ತಂ ಪಾಪಿನಂ ಪ್ರಾಪ್ಯ ವಯಂ ಸುಹೃಷ್ಟಾಃ
ಪ್ರಭಕ್ಷಯಾಮೋಽದ್ಯ ಚ ಭಕ್ಷ್ಯಹೀನಾಃ ॥ ೨೦ ॥
ಇತಿ ಪಾಪಾ ರಟಂತೀಹ ಬ್ರಹ್ಮಹತ್ಯಾದಯಸ್ತಥಾ ।
ತಸ್ಮಾದ್ಭ್ರಾತರ್ಮದ್ಗೃಹೇ ತು ಭೋಜನಂ ಕುರು ಕಾರ್ತಿಕೇ ॥ ೨೧ ॥
ಶುಕ್ಲಾಯಾಂ ತು ದ್ವಿತೀಯಾಯಾಂ ವಿಶ್ರುತಾಯಾಂ ಜಗತ್ತ್ರಯೇ ।
ಅಸ್ಯಾಂ ನಿಜಗೃಹೇ ಪುತ್ರ ಭುಜ್ಯತೇ ನ ಬುಧೈರಪಿ ॥ ೨೨ ॥
ಇತ್ಯುಕ್ತಃ ಸ ತಥೇತ್ಯುಕ್ತ್ವಾ ಭಗಿನೀಂ ಪೂಜಯೇದ್ವ್ರತೀ ।
ಪ್ರಹರ್ಷಾತ್ಸುಮಹಾಭಾಗ ವಸ್ತ್ರಾಲಂಕಾರಭೂಷಣೈಃ ॥ ೨೩ ॥
ಅಗ್ರಜಾಮಭಿವಂದ್ಯಾಽಥ ಆಶಿಷಂ ಚ ಪ್ರಗೃಹ್ಯ ಚ ।
ಸರ್ವಾ ಭಗಿನ್ಯಃ ಸಂತೋಷ್ಯಾ ವಸ್ತ್ರಾಲಂಕಾರದಾನತಃ ॥ ೨೪ ॥
ಅಭಾವೇ ಸ್ವಸ್ಯ ತು ಸ್ವಸುಃ ಪಿತೃವ್ಯಾಃ ಸ್ವಪಿತುಃ ಸ್ವಸಾ ।
ತಸ್ಯಾ ಗೃಹಂ ಸಮಾಗತ್ಯ ಕುರ್ಯಾದ್ಭೋಜನಮಾದರಾತ್ ॥ ೨೫ ॥

---

ಕರ್ಮಪಾಶಗಳಿಂದ ಬದ್ಧರಾದ ನಾರಕಿಗಳನ್ನೂ ಬಿಡುಗಡೆಮಾಡಿದನು. ಅವರು ಸ್ವೇಚ್ಛೆಯಿಂದ ಓಡಾಡುತ್ತಾರೆ.

೨೦. "ಯಮದ್ವಿತೀಯಾ ದಿನವನ್ನು ಪಡೆದೂ ಕೂಡ ಈಗ ಯಾವ ನರನು ಸೋದರಿಯ ಮನೆಯಲ್ಲಿ ಊಟಮಾಡುವುದಿಲ್ಲವೋ ಆ ಪಾಪಿಯನ್ನು ಪಡೆದು ಭಕ್ಷ್ಯಹೀನರಾದ ನಾವು ಬಹಳ ಸಂತುಷ್ಟರಾಗಿ ಅವರನ್ನು ಭಕ್ಷಿಸೋಣ."

೨೧–೨೨. ಹೀಗೆಂದು ಬ್ರಹ್ಮಹತ್ಯವೇ ಮೊದಲಾದ ಪಾಪಗಳು ಕೂಗಾಡುತ್ತಿರುತ್ತವೆ. ಆದುದರಿಂದೆಲೈ ಸೋದರನೆ! ಇಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಕಾರ್ತಿಕದ ಈ ದಿನ ನನ್ನ ಮನೆಯಲ್ಲಿ ಭೋಜನವನ್ನು ಮಾಡು. ಮಗೂ! ಈ ದಿನ ವಿದ್ವಾಂಸರಾರೂ ಸ್ವಗೃಹದಲ್ಲಿ ಭೋಜನ ಮಾಡುವುದಿಲ್ಲ."

೨೩–೨೪. ಹೀಗೆಂದು ಹೇಳಲ್ಪಟ್ಟ ಆ ಸೋದರನು, 'ಹಾಗೆಯೇ ಆಗಲಿ' ಎನ್ನಬೇಕು. ಎಲೈ ಮಹಾಭಾಗನೇ! ಕಾರ್ತಿಕವ್ರತವನ್ನವಲಂಬಿಸಿದವನು ಬಹು ಸಂತೋಷದಿಂದ ಅಗ್ರಜೆಯನ್ನು ವಸ್ತ್ರಾಲಂಕಾರಭೂಷಣಗಳಿಂದ ಪೂಜಿಸಿ ಅಭಿವಂದಿಸಿ ಆಕೆಯ ಆಶೀರ್ವಾದವನ್ನು ಪಡೆದುಕೊಂಡು ಉಳಿದೆಲ್ಲ ಸೋದರಿಯರನ್ನೂ ವಸ್ತ್ರಾಲಂಕಾರಗಳನ್ನು ಕೊಟ್ಟು ಸಂತೋಷಪಡಿಸಬೇಕು.

೨೫–೨೭. ವತ್ಸ! ಈ ರೀತಿಯಾಗಿ ಯಾವನು ಯಮುನ ನಾಮಕವಾದ

ಏವಂ ಯಃ ಕುರುತೇ ಪುತ್ರ ದ್ವಿತೀಯಾಂ ಯಮುನಾಮಿಕಾಂ ।
ಅಪಮೃತ್ಯುವಿನಿರ್ಮುಕ್ತಃ ಪುತ್ರಪೌತ್ರಾದಿಭಿರ್ವೃತಃ ॥ ೨೬ ॥
ಇಹ ಭುಕ್ತ್ವಾ ತು ವಿಪುಲಾನ್ ಭೋಗಾನನ್ಯಾನ್ಯಥೇಪ್ಸಿತಾನ್ ।
ಅಂತೇ ಮೋಕ್ಷಮವಾಪ್ನೋತಿ ನಾನ್ಯಥಾ ಮದ್ವಚೋ ಭವೇತ್ ॥ ೨೭ ॥
ವ್ರತಾನ್ಯೇತಾನಿ ಸರ್ವಾಣಿ ದಾನಾನಿ ವಿವಿಧಾನಿ ಚ ।
ಗೃಹಸ್ಥಸ್ಯೈವ ಯುಜ್ಯಂತೇ ತಸ್ಮಾದ್ಗಾರ್ಹಸ್ಥ್ಯಮಾಶ್ರಯೇತ್ ॥ ೨೮ ॥
ಕಥಾಂ ಯಮದ್ವಿತೀಯಾಯಾ ವ್ರತಸ್ಥಃ ಶೃಣುಯಾನ್ನರಃ ।
ತಸ್ಯ ಸರ್ವಾಣಿ ಪಾಪಾನಿ ನಶ್ಯಂತೀತ್ಯಾಹ ಮಾಧವಃ ॥ ೨೯ ॥

ಸೂತ ಉವಾಚ:—

ಕಾರ್ತಿಕೇ ಚ ದ್ವಿತೀಯಾಯಾಂ ಪೂರ್ವಾಹ್ಣೇ ಯಮಮರ್ಚಯೇತ್ ।
ಭಾನುಜಾಯಾಂ ನರಃ ಸ್ನಾತ್ವಾ ಯಮಲೋಕಂ ನ ಪಶ್ಯತಿ ॥ ೩೦ ॥
ಕಾರ್ತಿಕೇ ಶುಕ್ಲಪಕ್ಷೇ ತು ದ್ವಿತೀಯಾಯಾಂ ತು ಶೌನಕ ।
ಯಮೋ ಯಮುನಯಾ ಪೂರ್ವಂ ಭೋಜಿತಃ ಸ್ವಗೃಹೇಽರ್ಚಿತಃ॥ ೩೧ ॥
ದ್ವಿತೀಯಾಯಾಂ ಮಹೋತ್ಸರ್ಗೋ ನಾರಕೀಯಾಶ್ಚ ತರ್ಪಿತಾಃ ।
ಪಾಪೇಭ್ಯೋ ವಿಪ್ರಯುಕ್ತಾಸ್ತೇ ಮುಕ್ತಾಃ ಸರ್ವೇ ನಿಬಂಧನಾತ್ ॥ ೩೨॥

---

ಈ ದ್ವಿತೀಯೆಯನ್ನು ಆಚರಿಸುತ್ತಾನೆಯೊ ಅವನು ಅಪಮೃತ್ಯುವಿಲ್ಲದವನಾಗಿ ಪುತ್ರಪೌತ್ರಾದಿಗಳಿಂದ ಆವರಿಸಲ್ಪಟ್ಟು ಇಲ್ಲಿ ವಿಫಲವಾಗದ ಭೋಗಗಳನ್ನೂ ತನ್ನ ಇಷ್ಟಾನುಸಾರವಾದ ಇತರ ಸುಖಗಳನ್ನೂ ಅನುಭವಿಸಿ ಕಡೆಗೆ ಮೋಕ್ಷವನ್ನು ಪಡೆಯುತ್ತಾನೆ. ನನ್ನ ಮಾತು ಬೇರೆ ರೀತಿಯಾಗುವುದಿಲ್ಲ.

೨೮. ಈ ಎಲ್ಲ ವ್ರತಗಳೂ ವಿವಿಧ ದಾನಗಳೂ ಗೃಹಸ್ಥನಿಗೇ ಯೋಗ್ಯವಾಗಿರುವುವು. ಆದುದರಿಂದ ಗಾರ್ಹಸ್ಥ್ಯವನ್ನಾಶ್ರಯಿಸಬೇಕು.

೨೯. 'ಯಮದ್ವಿತೀಯೆಯ ಕಥೆಯನ್ನು ವ್ರತಸ್ಥನಾದ ನರನು ಕೇಳಬೇಕು. ಅದರಿಂದ ಅವನ ಸರ್ವಪಾಪಗಳೂ ನಾಶವಾಗುತ್ತವೆ.' ಹೀಗೆಂದು ಮಾಧವನು ಹೇಳಿದನು.

೩೦. ಸೂತಪುರಾಣಿಕನು ಹೇಳುತ್ತಾನೆ:—"ಕಾರ್ತಿಕಮಾಸದ (ಶುಕ್ಲ) ದ್ವಿತೀಯೆಯಲ್ಲಿ ಯಮುನೆಯಲ್ಲಿ ಸ್ನಾನವನ್ನು ಮಾಡಿ ಯಮನನ್ನು ಅರ್ಚಿಸಬೇಕು. ಹಾಗೆ ಅರ್ಚಿಸಿದ ನರನು ಯಮಲೋಕವನ್ನು ಕಾಣುವುದಿಲ್ಲ.

೩೧. ಶೌನಕಾ! ಕಾರ್ತಿಕ ಶುಕ್ಲಪಕ್ಷದ ದ್ವಿತೀಯೆಯ ದಿನ ಪೂರ್ವದಲ್ಲಿ ಯಮನು ಯಮುನೆಯಿಂದ ಸ್ವಗೃಹದಲ್ಲಿ ಅರ್ಚಿಸಲ್ಪಟ್ಟು ಭೋಜನಮಾಡಿಸಲ್ಪಟ್ಟನು.

೩೨. ದ್ವಿತೀಯಾ ತಿಥಿಯಲ್ಲಿ ಪಾಪಿಗಳಿಗೆ ಬಹು ದೊಡ್ಡ ಬಿಡುಗಡೆಯಾ

ಅತ್ರಾಶಿತಾಶ್ಚ ಸಂತುಷ್ಟಾಃ ಸ್ಥಿತಾಃ ಸರ್ವೇ ಯದೃಚ್ಛಯಾ ।
ತೇಷಾಂ ಮಹೋತ್ಸವೋ ವೃತ್ತೋ ಯಮರಾಷ್ಟ್ರಸುಖಾವಹಃ ॥ ೩೩ ॥
ಅತೋ ಯಮದ್ವಿತೀಯೇಯಂ ತ್ರಿಷು ಲೋಕೇಷು ವಿಶ್ರುತಾ ।
ತಸ್ಮಾನ್ನಿಜಗೃಹೇ ವಿಪ್ರ ನ ಭೋಕ್ತವ್ಯಂ ತತೋ ಬುಧೈಃ ॥ ೩೪ ॥
ಸ್ನೇಹೇನ ಭಗಿನೀಹಸ್ತಾತ್ ಭೋಕ್ತವ್ಯಂ ಬಲವರ್ಧನಂ ।
ಊರ್ಜೇ ಶುಕ್ಲದ್ವಿತೀಯಾಯಾಂ ಪೂಜಿತಸ್ತರ್ಪಿತೋ ಯಮಃ ॥ ೩೫ ॥
ಮಹಿಷಾಸನಮಾರೂಢೋ ದಂಡಮುದ್ಗರಭೃತ್ಪ್ರಭುಃ ।
ವೇಷ್ಟಿತಃ ಕಿಂಕರೈರ್ಹೃಷ್ಟೈಸ್ತಸ್ಮೈ ಯಾಮ್ಯಾತ್ಮನೇ ನಮಃ ॥ ೩೬ ॥
ಯೈರ್ಭಗಿನ್ಯಸ್ಸುವಾಸಿನ್ಯೋ ವಸ್ತ್ರದಾನಾದಿತೋಷಿತಾಃ ।
ನ ತೇಷಾಂ ವತ್ಸರಂ ಯಾವತ್ ಕಲಹೋ ನ ರಿಪೋರ್ಭಯಂ ॥ ೩೭ ॥
ಧನ್ಯಂ ಯಶಸ್ಯಮಾಯುಷ್ಯಂ ಧರ್ಮಕಾಮಾರ್ಥಸಾಧನಂ ।
ವ್ಯಾಖ್ಯಾತಂ ಸಕಲಂ ಪುತ್ರ ಸರಹಸ್ಯಂ ಮಯಾನಘ ॥ ೩೮ ॥

---

ಯಿತು; ನರಕವಾಸಿಗಳೆಲ್ಲರೂ ತೃಪ್ತಿಗೊಳಿಸಲ್ಪಟ್ಟರು. ಪಾಪಗಳಿಂದ ಅವರು ವಿಮೋಚನೆ ಹೊಂದಿದರು; ಅಷ್ಟೇ ಅಲ್ಲದೆ, ಅವರು ಎಲ್ಲ ಬಗೆಯ ಬಂಧನಗಳಿಂದಲೂ ಬಿಡುಗಡೆ ಹೊಂದಿದರು.

೩೩. ಅಂದು ಎಲ್ಲರೂ ಅಗ್ರಜೆಯರಿಂದ ಭೋಜನಮಾಡಿಸಲ್ಪಟ್ಟು ಸಂತುಷ್ಟರಾದರು. ಯಮರಾಷ್ಟ್ರದಲ್ಲಿ ಸುಖವನ್ನುಂಟುಮಾಡುವಂತಹ ಮಹೋತ್ಸವವು ಅವರಿಗುಂಟಾಯಿತು.

೩೪. ಆದುದರಿಂದ ಇದು ಯಮದ್ವಿತೀಯೆಯೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ. ಎಲೈ ವಿಪ್ರನೇ! ಆದುದರಿಂದ ಪಂಡಿತರಾದವರು ಅಂದು ಸ್ವಗೃಹದಲ್ಲಿ ಭೋಜನವನ್ನು ಮಾಡಲೇಬಾರದು.

೩೫. ಸ್ನೇಹದಿಂದ ಸೋದರಿಯ ಕೈಯ ಊಟವನ್ನು ಉಣ್ಣಬೇಕು. ಇದು ಸುಖವನ್ನು ವೃದ್ಧಿಮಾಡುವುದು. ಕಾರ್ತಿಕಮಾಸದಲ್ಲಿ ಶುಕ್ಲ ದ್ವಿತೀಯೆಯಲ್ಲಿ ಯಮನು ಪೂಜಿತನಾಗಿ ತೃಪ್ತಿಗೊಳಿಸಲ್ಪಟ್ಟನು.

೩೬. ಮಹಿಷವಾಹನವನ್ನು ಆರೋಹಿಸಿ, ದಂಡಮುದ್ಗರಗಳನ್ನು ಧರಿಸಿ, ಹರ್ಷಗೊಂಡ ಕಿಂಕರರಿಂದ ಸುತ್ತುವರಿಯಲ್ಪಟ್ಟವನಾದ ಆ ಪ್ರಭುವು ಅಂದು ತೃಪ್ತಿಪಡೆದನು. ಯಾಮ್ಯಾತ್ಮನಾದ ಅವನಿಗೆ ನಮಸ್ಕಾರವು!

೩೭. ಯಾರಿಂದ ಸುವಾಸಿನಿಯರಾದ ಭಗಿನಿಯರು ವಸ್ತ್ರದಾನಾದಿಗಳಿಂದ ತೋಷಿತರಾಗುವರೋ, ಅವರಿಗೆ ವರ್ಷದವರೆಗೂ ಕಲಹವಾಗಲಿ, ಶತ್ರುಭಯವಾಗಲಿ ಇರುವುದಿಲ್ಲವು.

೩೮. ವತ್ಸ! ಧನ್ಯವೂ, ಯಶಸ್ಕರವೂ, ಆಯುಷ್ಕಾರಕವೂ, ಧರ್ಮ,

ಯಸ್ಯಾಂ ತಿಥೌ ಯಮುನಯಾ ಯಮರಾಜದೇವಃ
ಸಂಭೋಜಿತಃ ಪ್ರತಿತಿಥೌ ಸ್ವಸೃಸೌಹೃದೇನ ।
ತಸ್ಮಾತ್ಸ್ವಸುಃ ಕರತಲಾದಿಹ ಯೋ ಭುನಕ್ತಿ
ಪ್ರಾಪ್ನೋತಿ ವಿತ್ತಶುಭಸಂಪದಮುತ್ತಮಾಂ ಸಃ ॥ ೩೯ ॥

ಸೂತ ಉವಾಚ :—

ವಿಶೇಷಶ್ಚಾತ್ರ ಸಂಪ್ರೋಕ್ತೋ ವಾಲಖಿಲ್ಯೈರ್ಮಹರ್ಷಿಭಿಃ ।
ತದಹಂ ಸಂಪ್ರವಕ್ಷ್ಯಾಮಿ ಶೃಣುಧ್ವಂ ಮುನಿಸತ್ತಮಾಃ ॥ ೪೦ ॥

ವಾಲಖಿಲ್ಯಾ ಊಚುಃ :—

ಕಾರ್ತಿಕಸ್ಯ ಸಿತೇ ಪಕ್ಷೇ ದ್ವಿತೀಯಾ ಯಮಸಂಜ್ಞಿತಾ ।
ತತ್ರಾಽಪರಾಹ್ಣೇ ಕರ್ತವ್ಯಂ ಸರ್ವಥೈವ ಯಮಾರ್ಚನಂ ॥ ೪೧ ॥
ಪ್ರತ್ಯಹಂ ಯಮುನಾಗತ್ಯ ಯಮಂ ಸಂಪ್ರಾರ್ಥಯತ್ಪುರಾ ।
ಭ್ರಾತರ್ಮಮ ಗೃಹೇ ಯಾಹಿ ಭೋಜನಾರ್ಥಂ ಗಣಾವೃತಃ ॥ ೪೨ ॥
ಅದ್ಯ ಶ್ವೋ ವಾ ಪರಶ್ವೋ ವಾ ಪ್ರತ್ಯಹಂ ವದತೇ ಯಮಃ ।
ಕರ್ತವ್ಯಾಕುಲಚಿತ್ತಾನಾಂ ಅವಕಾಶೋ ನ ಜಾಯತೇ ॥ ೪೩ ॥

---

ಕಾಮ, ಅರ್ಥಗಳಿಗೆ ಸಾಧನವೂ ಆದ ಈ ವ್ರತವೆಲ್ಲವನ್ನೂ ರಹಸ್ಯಸಮೇತವಾಗಿ ನಿನಗೆ ವಿವರಿಸಿದ್ದೇನೆ.

೩೯–೪೦. ಯಾವ ತಿಥಿಯಲ್ಲಿ ಯಮರಾಜನು ಯಮುನೆಯಿಂದ ಸೋದರೀ ಸಹಜವಾದ ಪ್ರೀತಿಯಿಂದ ಭೋಜನಮಾಡಿಸಲ್ಪಟ್ಟನೋ ಆ ತಿಥಿಯಲ್ಲಿ ಸೋದರಿಯ ಕೈಯಿಂದ ಯಾವನು ಭೋಜನಮಾಡುತ್ತಾನೆಯೋ, ಅವನು ಧನವನ್ನೂ, ಶುಭವನ್ನೂ, ಉತ್ತಮವಾದ ಸಂಪತ್ತನ್ನೂ ಪಡೆಯುತ್ತಾನೆ. ಸೂತನು ಹೇಳುತ್ತಾನೆ:—ಈ ವಿಷಯದಲ್ಲಿ ವಾಲಖಿಲ್ಯಮಹರ್ಷಿಗಳು ವಿಶೇಷವನ್ನು ಹೇಳಿದ್ದಾರೆ. ಅದನ್ನು ನಾನು ತಿಳಿಸುತ್ತೇನೆ. ಎಲೈ ಮುನಿಶ್ರೇಷ್ಠರೇ! ಆಲಿಸಿರಿ.

೪೧. ವಾಲಖಿಲ್ಯರು ಹೇಳುತ್ತಾರೆ:—"ಕಾರ್ತಿಕಮಾಸದ ಶುಕ್ಲಪಕ್ಷದಲ್ಲಿ ದ್ವಿತೀಯೆಯು ಯಮದ್ವಿತೀಯೆಯೆಂದು ಹೆಸರಾಗಿರುವುದು. ಅಂದು ಅಪರಾಹ್ಣದಲ್ಲಿ ಏನೇ ಆದರೂ ಯಮಾರ್ಚನೆಯನ್ನು ಮಾಡಲೇಬೇಕು.

೪೨. ಹಿಂದೆ ಯಮುನೆಯು ಪ್ರತಿದಿನವೂ ಬಂದು ಯಮನನ್ನು 'ಅಣ್ಣಾ! ಪರಿವಾರಗಣಗಳಿಂದೊಡಗೂಡಿ ನನ್ನ ಮನೆಗೆ ಊಟಕ್ಕೆ ಬಾ' ಎಂದು ಪ್ರಾರ್ಥಿಸುತ್ತಿದ್ದಳು.

೪೩. 'ಇಂದು, ನಾಳೆ, ನಾಳಿದ್ದು' ಎಂದು ಮುಂತಾಗಿ ಯಮನೂ ದಿನದಿನವೂ ಹೇಳುತ್ತಿದ್ದನು. ಕಾರ್ಯದಲ್ಲಿ ನೆಟ್ಟು ವ್ಯಾಕುಲವಾದ ಚಿತ್ತವುಳ್ಳವರಿಗೆ ಅವಕಾಶವೇ ಆಗುವುದಿಲ್ಲ.

ತದ್ವೈಕದಾ ಯಮುನಯಾ ಬಲಾತ್ಕಾರಾನ್ನಿಮಂತ್ರಿತಃ ।
ಸ ಗತಃ ಕಾರ್ತಿಕೇಮಾಸಿ ದ್ವಿತೀಯಾಯಾಂ ಮುನೀಶ್ವರಾಃ ॥ ೪೪ ॥
ನಾರಕೀಯಜನಾನ್ಮುಕ್ತ್ವಾ ಗಣೈಸ್ಸಹ ರವೇಃ ಸುತಃ ।
ಕೃತಾತಿಥ್ಯೋ ಯಮುನಯಾ ನಾನಾಪಾಕಾಃ ಕೃತಾಃ ಖಗ ॥ ೪೫ ॥
ಕೃತಾಭ್ಯಂಗೋ ಯಮುನಯಾ ತೈಲೈರ್ಗಂಧಮನೋಹರೈಃ ।
ಉದ್ವರ್ತನಂ ಲಾಪಯಿತ್ವಾ ಸ್ನಾಪಿತಸ್ಸೂರ್ಯನಂದನಃ ॥ ೪೬ ॥
ತತೋಽಲಂಕಾರಕಂ ದತ್ತಂ ನಾನಾವಸ್ತ್ರಾಣಿ ಚಂದನಂ ।
ಮಾಲ್ಯಾನಿ ಚ ಪ್ರದತ್ತಾನಿ ಮಂಚೋಪರಿ ಉಪಾವಿಶತ್ ॥ ೪೭ ॥
ಪಕ್ವಾನ್ನಾನಿ ವಿಚಿತ್ರಾಣಿ ಕೃತ್ವಾ ಸಾ ಸ್ವರ್ಣಭಾಜನೇ ।
ಯಮಾಯಾಭೋಜಯದ್ದೇವೀ ಯಮುನಾ ಪ್ರೀತಮಾನಸಾ ॥ ೪೮ ॥
ಭುಕ್ತ್ವಾ ಯಮೋಽಪಿ ಭಗಿನೀಮಲಂಕಾರೈಸ್ಸಮರ್ಚಯತ್ ।
ನಾನಾವಸ್ತ್ರೈಸ್ತತಃ ಪ್ರಾಹ ವರಂ ವರಯ ಭಾಮಿನಿ ।
ಇತಿ ತದ್ವಚನಂ ಶ್ರುತ್ವಾ ಯಮುನಾ ವಾಕ್ಯಮಬ್ರವೀತ್ ॥ ೪೯ ॥

---

೪೪. ಒಂದಾನೊಂದು ದಿನ ಯಮುನೆಯು ಬಲಾತ್ಕಾರಮಾಡಿ ಕರೆದಳು. ಎಲೈ ಮುನೀಶ್ವರರೇ! ಹಾಗೆ ಬಲಾತ್ಕಾರಮಾಡಿ ಕರೆದಂದು ಕಾರ್ತಿಕಮಾಸದ ಶುಕ್ಲ ದ್ವಿತೀಯೆ. ಅಂದು ಯಮನು ಯಮುನೆಯ ಮನೆಗೆ ಹೋದನು.

೪೫. ನರಕದಲ್ಲಿದ್ದ ಜನರನ್ನು ಬಂಧವಿಮೋಚನಗೊಳಿಸಿ, ತನ್ನ ಗಣಗಳಿಂದೊಡಗೂಡಿ ರವಿಸುತನಾದ ಆ ಯಮನು ಸೋದರಿಯ ಮನೆಗೆ ಹೋದನು. ಯಮುನೆಯು ಅವನಿಗೆ ಆತಿಥ್ಯವನ್ನು ಮಾಡಿದಳು; ಬಗೆಬಗೆಯ ಅಡಿಗೆಯನ್ನು ಮಾಡಿದಳು.

೪೬. ಮನೋಹರವಾದ ಗಂಧವುಳ್ಳ ತೈಲಗಳನ್ನು ತೊಡೆದು ಯಮುನೆಯು ಸೂರ್ಯನಂದನನಿಗೆ ಅಭ್ಯಂಗಸ್ನಾನವನ್ನು ಮಾಡಿಸಿದಳು.

೪೭–೪೮. ಆಮೇಲೆ ಅಲಂಕಾರಗಳನ್ನು ಕೊಟ್ಟಳು. ಬಗೆಬಗೆಯ ವಿನೂತ್ನ ವಸ್ತ್ರಗಳನ್ನೂ, ಚಂದನವನ್ನೂ, ಹೂವುಗಳನ್ನೂ ಕೊಟ್ಟಳು. ಬಳಿಕ ಮಂಚದ ಮೇಲೆ ಕುಳ್ಳಿರಿಸಿದಳು. ಆ ಯಮುನಾದೇವಿಯು ಚಿನ್ನದ ಪಾತ್ರೆಯಲ್ಲಿ ವಿಚಿತ್ರವಾದ ಬಗೆಬಗೆಯ ಪಕ್ವಾನ್ನಗಳನ್ನು ಮಾಡಿ ಪ್ರೀತಮನಸ್ಕಳಾಗಿ ಯಮನಿಗೆ ಭೋಜನ ಮಾಡಿಸಿದಳು.

೪೯. ಯಮನು ಕೂಡ ಊಟಮಾಡಿ ಸೋದರಿಯನ್ನು ಅಲಂಕಾರಗಳಿಂದಲೂ, ನಾನಾ ಬಗೆಯ ವಸ್ತ್ರಗಳಿಂದಲೂ ಅರ್ಚಿಸಿದನು. ಬಳಿಕ, 'ಭಾಮಿನಿ! ಏನು ವರ ಬೇಕೋ ಕೇಳು' ಎಂದು ನುಡಿದನು. ಹೀಗೆಂದ ಅವನ ಮಾತನ್ನಾಲಿಸಿ ಯಮುನೆಯು ಹೀಗೆ ಮಾತನಾಡಿದಳು :—

ಯಮುನೋವಾಚ :—

ಪ್ರತಿವರ್ಷಂ ಸಮಾಗಚ್ಛ ಭೋಜನಾರ್ಥಂ ತು ಮೇ ಗೃಹೇ ॥ ೫೦ ॥
ಅದ್ಯ ಸರ್ವೇ ಮೋಚನೀಯಾಃ ಪಾಪಿನೋ ನರಕಾದ್ಯಮ ।
ಯೇಽದ್ಯೈವ ಭಗಿನೀಹಸ್ತಾತ್ ಕರಿಷ್ಯಂತಿ ಚ ಭೋಜನಂ ।
ತೇಷಾಂ ಸೌಖ್ಯಂ ಪ್ರದೇಹಿ ತ್ವಮೇತದೇವ ವೃಣೋಮ್ಯಹಂ ॥ ೫೧ ॥

ಯಮ ಉವಾಚ :—

ಯಮುನಾಯಾಂ ತು ಯಃ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ ॥ ೫೨ ॥
ಭುಂಕ್ತೇ ಚ ಭಗಿನೀ ಗೇಹೇ ಭಗಿನೀಂ ಪೂಜಯೇದಪಿ ।
ಕದಾಚಿದಪಿ ಮದ್ದ್ವಾರಂ ನ ಸ ಪಶ್ಯತಿ ಭಾನುಜೇ ॥ ೫೩ ॥
ವೀರೇಶ್ವೈಶಾನದಿಗ್ಭಾಗೇ ಯಮತೀರ್ಥಂ ಪ್ರಕೀರ್ತಿತಂ ।
ತತ್ರ ಸ್ನಾತ್ವಾ ಚ ವಿಧಿವತ್ ಸಂತರ್ಪ್ಯ ಪಿತೃದೇವತಾಃ ॥ ೫೪ ॥
ಪಠೇದೇತಾನಿ ನಾಮಾನಿ ಆಮಧ್ಯಾಹ್ನಂ ನರೋತ್ತಮಃ ।
ಸೂರ್ಯಸ್ಯಾಭಿಮುಖೋ ಮೌನೀ ಹೃಷ್ಟಚಿತ್ತಃ ಸ್ಥಿರಾಸನಃ ॥ ೫೫ ॥

ಯಮೋ ನಿಹಂತಾ ಪಿತೃಧರ್ಮರಾಜೋ
ವೈವಸ್ವತೋ ದಂಡಧರಶ್ಚ ಕಾಲಃ ।
ಭೂತಾಧಿಪೋ ದತ್ತಕೃತಾನುಸಾರೀ
ಕೃತಾಂತಮೇತದ್ದಶಭಿರ್ಜಪಂತಿ ॥ ೫೬ ॥

---

೫೦–೫೧. ಯಮುನೆಯು ಕೇಳುತ್ತಾಳೆ:— "ಯಮಧರ್ಮರಾಜಾ! ಪ್ರತಿವರ್ಷವೂ ಈ ದಿನ ನನ್ನ ಮನೆಗೆ ಭೋಜನಕ್ಕೆ ಬರುವವನಾಗು. ಈ ದಿನ ಸಮಸ್ತ ಪಾಪಿಗಳನ್ನೂ ನರಕದಿಂದ ಬಿಡುಗಡೆ ಮಾಡಬೇಕು. ಈ ದಿನವೇ ಸೋದರಿಯ ಕೈಯಿಂದ ಯಾರು ಊಟಮಾಡುತ್ತಾರೆಯೊ ಅವರಿಗೆ ಸೌಖ್ಯವನ್ನು ಕೊಡು. ಇದನ್ನೇ ನಾನು ಕೇಳಿಕೊಳ್ಳುತ್ತೇನೆ" ಎಂದಳು.

೫೨–೫೫. ಯಮನು ಹೇಳುತ್ತಾನೆ:—"ಎಲೈ ಭಾನುಪುತ್ರೀ! ಈ ದಿನ ಯಾರು ಯಮುನೆಯಲ್ಲಿ ಸ್ನಾನಮಾಡಿ ಪಿತೃದೇವತೆಗಳನ್ನು ತೃಪ್ತಿಗೊಳಿಸಿ ಸೋದರಿಯ ಮನೆಯಲ್ಲಿ ಊಟಮಾಡುವರೊ, ಸೋದರಿಯರನ್ನು ಪೂಜಿಸುವರೋ ಅವರು ಎಂದೆಂದಿಗೂ ನನ್ನ ನಗರದ ಬಾಗಿಲನ್ನು ಕಾಣುವುದಿಲ್ಲವು. ವೀರೇಶನ ಈಶಾನ್ಯ ದಿಗ್ಭಾಗದಲ್ಲಿ ಯಮತೀರ್ಥವು ಪ್ರಸಿದ್ಧವಾಗಿರುವುದು. ನರೋತ್ತಮನಾದವನು ಅಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ವಿಧಿವತ್ತಾಗಿ ತರ್ಪಣಕೊಟ್ಟು ಸೂರ್ಯನಿಗೆ ಅಭಿಮುಖನಾಗಿ ಮೌನಿಯಾಗಿ ಮನಸ್ಸನ್ನು ಸ್ವಾಧೀನಮಾಡಿಕೊಂಡು ಸ್ಥಿರಾಸನದಲ್ಲಿ ಕುಳಿತು ಮಧ್ಯಾಹ್ನದ ವರೆಗೂ ಈ ನಾಮಗಳನ್ನು ಪಠಿಸಬೇಕು.

೫೬. 'ಯಮ, ನಿಹಂತ, ಪಿತೃರಾಜ, ಧರ್ಮರಾಜ, ವೈವಸ್ವತ,

ತತೋ ಯಮೇಶ್ವರಂ ಪೂಜ್ಯ ಭಗಿನೀಗೃಹಮಾವ್ರಜೇತ್ ।
ಮಂತ್ರೇಣಾನೇನ ಚ ತಯಾ ಭೋಜಿತಃ ಪೂರ್ವಮಾದರಾತ್ ॥ ೫೭ ॥
ಭ್ರಾತಸ್ತವಾನುಜಾ ಚಾಹಂ ಭುಂಕ್ಷ್ವ ಭಕ್ತಮಿದಂ ಶುಭಂ ।
ಪ್ರೀತಯೇ ಯಮರಾಜಸ್ಯ ಯಮುನಾಯಾ ವಿಶೇಷತಃ ॥ ೫೮ ॥
ತತಸ್ಸಂತೋಷ್ಯ ಭಗಿನೀಂ ವಸ್ತ್ರಾಲಂಕರಣಾದಿಭಿಃ ।
ಸ್ವಪ್ನೇಽಪಿ ಯಮಲೋಕಸ್ಯ ಭವಿಷ್ಯತಿ ನ ದರ್ಶನಂ ॥ ೫೯ ॥
ನೃಪೈಃ ಕಾರಾಗೃಹೇ ಯೇ ಚ ಸ್ಥಾಪಿತಾ ಮಮ ವಾಸರೇ ।
ಅವಶ್ಯಂ ತೇ ಪ್ರೇಷಣೀಯಾ ಭೋಜನಾರ್ಥಂ ಸ್ವಸುರ್ಗೃಹೇ ॥ ೬೦ ॥
ವಿಮೋಕ್ತವ್ಯಾ ಮಯಾ ಪಾಪಾ ನರಕೇಭ್ಯೋಽದ್ಯ ವಾಸರೇ ।
ಯೇಽದ್ಯ ಬಂದೀಕರಿಷ್ಯಂತಿ ತೇ ತಾಡ್ಯಾ ಮಮ ಸರ್ವಥಾ ॥ ೬೧ ॥
ಕನೀಯಸೀ ಸ್ವಸಾ ನಾಸ್ತಿ ತದಾ ಜ್ಯೇಷ್ಠಾಗೃಹಂ ವ್ರಜೇತ್ ।
ತದಭಾವೇ ಸಪತ್ನ್ಯಾಯಾಃ ಪಿತೃವ್ಯಜಾಗೃಹೇ ತತಃ ॥ ೬೨ ॥

---

ದಂಡಧರ, ಕಾಲ, ಭೂತಾಧಿಪ, ದತ್ತಾನುಸಾರಿ, ಕೃತಾನುಸಾರಿ'—ಈ ಹತ್ತು ನಾಮುಗಳಿಂದ ಕೃತಾಂತನನ್ನು ಕುರಿತು ಜಪಿಸಬೇಕು.

೫೭. ಬಳಿಕ ಯಮೇಶ್ವರನನ್ನು ಪೂಜಿಸಿ ಸೋದರಿಯ ಮನೆಗೆ ಹೋಗಬೇಕು. ಅವಳಿಂದ ಆದರಪೂರ್ವಕವಾಗಿ ಈ ಮಂತ್ರದಿಂದ ಭೋಜನ ಮಾಡಿಸಲ್ಪಡಬೇಕು.

೫೮. 'ಅಣ್ಣಾ, ನಾನು ನಿನ್ನ ತಂಗಿ. ಯಮರಾಜನ ಮತ್ತು ವಿಶೇಷವಾಗಿ ಯಮುನೆಯ ಪ್ರೀತಿಗಾಗಿ ಶುಭಕರವಾದ ಈ ಅನ್ನವನ್ನು ಊಟಮಾಡು.'

೫೯. ಅನಂತರ ಸೋದರಿಯನ್ನು ವಸ್ತ್ರಾಲಂಕಾರಾದಿಗಳಿಂದ ಸಂತೋಷಪಡಿಸಬೇಕು. ಅಂತಹವನಿಗೆ ಯಮಲೋಕದ ದರ್ಶನವು ಸ್ವಪ್ನದಲ್ಲಿಯೂ ಉಂಟಾಗುವುದಿಲ್ಲ.

೬೦. ದೊರೆಗಳು ಕಾರಾಗೃಹದಲ್ಲಿ ಯಾರನ್ನು ಬಂಧಿಸಿರುವರೋ ಅವರನ್ನು ನನ್ನ ದಿನದಲ್ಲಿ (ಯಮದ್ವಿತೀಯೆಯಲ್ಲಿ) ಸೋದರಿಯ ಮನೆಯಲ್ಲಿ ಊಟ ಮಾಡುವುದಕ್ಕಾಗಿ ಅವಶ್ಯವಾಗಿ ಬಿಟ್ಟು ಕಳಿಸಬೇಕು.

೬೧. ಈ ವಾಸರದಲ್ಲಿ, ನರಕಗಳಿಂದ ಪಾಪಿಗಳನ್ನು ವಿಮೋಚನೆಮಾಡಿಸುತ್ತೇನೆ. ಈ ದಿನ ಯಾರು ಬಂದಿಗಳನ್ನು ಮಾಡುತ್ತಾರೆಯೋ ಅವರು ನನ್ನಿಂದ ಸರ್ವಪ್ರಕಾರದಿಂದಲೂ ದಂಡನೆಗೆ ಅರ್ಹರಾಗುವರು.

೬೨. ಕಿರಿಯ ಸೋದರಿ (ತಂಗಿ) ಇಲ್ಲವಾದರೆ ಆಗ ಹಿರಿಯಳ ಮನೆಗೆ ಹೋಗಬೇಕು. ಅವಳೂ ಇಲ್ಲದಿದ್ದರೆ ಪತಿಯಿಂದೊಡಗೂಡಿದ ಪಿತೃಸೋದರನ ಮಗಳ ಮನೆಗೆ ಹೋಗಬೇಕು.

ತದಭಾವೇ ಮಾತೃಸ್ವಸುಃ ಮಾತುಲಸ್ಯಾತ್ಮಜಾ ತಥಾ ।
ಸಾಪತ್ನಗೋತ್ರ ಸಂಬಂಧೈಃ ಕಲ್ಪಯೇದಥ ವಾ ಕ್ರಮಂ ॥ ೬೩ ॥
ಸರ್ವಾಭಾವೇ ಮಾನನೀಯಾ ಭಗಿನೀ ಕಾಚಿದೇವ ಹಿ ।
ಗೋನದ್ಯಾದ್ಯಥವಾ ತಸ್ಯ ಅಭಾವೇ ಸತಿ ಕಾರಯೇತ್ ॥ ೬೪ ॥
ತದಭಾವೇಽಪ್ಯರಣ್ಯಾನೀಂ ಕಲ್ಪಯಿತ್ವಾ ಸಹೋದರಾಂ ।
ಅಸ್ಯಾಂ ನಿಜಗೃಹೇ ದೇವಿ ನ ಭೋಕ್ತವ್ಯಂ ಕದಾಚನ ॥ ೬೫ ॥
ಯೇ ಭುಂಜಂತೇ ದುರಾಚಾರಾ ನರಕೇ ತೇ ಪತಂತಿ ಚ ।
ಏವಮುಕ್ತ್ವಾ ಧರ್ಮರಾಜೋ ಯಯೌ ಸಂಯಮನೀಂ ತತಃ ॥ ೬೬ ॥
ತಸ್ಮಾದೃಷಿವರಾಸ್ಸರ್ವೇ ಕಾರ್ತಿಕವ್ರತಕಾರಿಣಃ ।
ಭುಂಜಂತೇ ಭಗಿನೀಹಸ್ತಾತ್ ಸತ್ಯಂ ಸತ್ಯಂ ನ ಸಂಶಯಃ ॥ ೬೭ ॥
ಯಮದ್ವಿತೀಯಾಂ ಯಃ ಪ್ರಾಪ್ಯ ಭಗಿನೀಗೃಹಭೋಜನಂ ।
ನ ಕುರ್ಯಾದ್ವರ್ಷಜಂ ಪುಣ್ಯಂ ನಶ್ಯತೀತಿ ರವೇಃ ಶ್ರುತಿಃ ॥ ೬೮ ॥

---

೬೩. ಅವಳೂ ಇಲ್ಲದೆಹೋದರೆ ತಾಯಿಯ ಸೋದರಿಯ ಅಥವಾ ಸೋದರ ಮಾವನ ಮಗಳ ಮನೆಗೆ ಹೋಗಬೇಕು. ಅಥವಾ ದಾಯಾದಿಗೋತ್ರ ಸಂಬಂಧ ಗಳಿಂದ ಸೋದರೀತ್ವವನ್ನು ಅನುಕ್ರಮವಾಗಿ ಕಲ್ಪಿಸಿಕೊಳ್ಳಬೇಕು.

೬೪. ಯಾರೂ ಇಲ್ಲವಾದರೆ ಯಾವಳನ್ನಾದರೂ ಒಬ್ಬಳನ್ನು ಭಗಿನಿಯೆಂದು ಭಾವಿಸಬೇಕು. ಅಂತಹವಳೂ ಇಲ್ಲದಿದ್ದರೆ ಗೋವನ್ನೋ ನದಿಯನ್ನೋ ಭಗಿನಿ ಯೆಂದು ಭಾವಿಸಬೇಕು.

೬೫. ಅದೂ ಇಲ್ಲದಪಕ್ಷದಲ್ಲಿ ಅರಣ್ಯಾವಾಸಿಯನ್ನೇ ಸಹೋದರಿಯೆಂದು ಕಲ್ಪಿಸಿಕೊಳ್ಳಬೇಕು. ಎಲೆ ದೇವಿ! ಈ ಯಮದ್ವಿತೀಯಾ ತಿಥಿಯಲ್ಲಿ ಏನೇ ಆಗಲಿ ಸ್ವಂತ ಮನೆಯಲ್ಲಿ ಭೋಜನಮಾಡಬಾರದು.

೬೬. ಯಾರು ಹಾಗೆ ಸ್ವಗೃಹದಲ್ಲಿ ಭೋಜನಮಾಡುತ್ತಾರೆಯೋ ಅವರು ದುರಾಚಾರಿಗಳು; ನರಕದಲ್ಲಿ ಬೀಳುತ್ತಾರೆ.'' ಹೀಗೆಂದು ನುಡಿದು ಯಮನು ಸಂಯಮನೀ ಪಟ್ಟಣಕ್ಕೆ ಹೊರಟುಹೋದನು.

೬೭. ಎಲೈ ಋಷಿಶ್ರೇಷ್ಠರೇ! ಕಾರ್ತಿಕವ್ರತವನ್ನು ಮಾಡುವವರೆಲ್ಲರೂ ಈ ಕಾರಣದಿಂದ ಯಮದ್ವಿತೀಯೆಯ ದಿನ ಸೋದರಿಯರ ಕೈಯಿಂದ ಭೋಜನ ಮಾಡುತ್ತಾರೆ. ಇದು ಸತ್ಯ, ಸತ್ಯ, ಸಂಶಯವಿಲ್ಲವು.

೬೮. ಯಮದ್ವಿತೀಯೆಯನ್ನು ಪಡೆದು ಯಾವನು ಸೋದರಿಯ ಮನೆಯಲ್ಲಿ ಊಟಮಾಡುವುದಿಲ್ಲವೋ, ಆವನು ಒಂದು ವರ್ಷವೆಲ್ಲ ಸಂಪಾದಿಸಿದ ಪುಣ್ಯವನ್ನು ಕಳೆದುಕೊಳ್ಳುತ್ತಾನೆಂದು ರವಿಯ ಶ್ರುತಿಯುಂಟು.

ಯಾ ತು ಭೋಜಯತೇ ನಾರೀ ಭ್ರಾತರಂ ಭ್ರಾತೃಕೇ ತಿಥೌ ।
ಅರ್ಚಯೇಚ್ಚಾಪಿ ತಾಂಬೂಲೈರ್ನ ಸಾ ವೈಧವ್ಯಮಾಪ್ನುಯಾತ್ ॥ ೭೯ ॥
ಭ್ರಾತುರಾಯುಃಕ್ಷಯೋ ನೂನಂ ನ ಭವೇತ್ತತ್ರ ಕರ್ಹಿಚಿತ್ ।
ಅಪರಾಹ್ಣವ್ಯಾಪಿನೀ ಸಾ ದ್ವಿತೀಯಾ ಭ್ರಾತೃಭೋಜನೇ ॥ ೭೦ ॥
ಅಜ್ಞಾನಾದ್ಯದಿ ವಾ ಮೋಹಾತ್ ನ ಭುಕ್ತಂ ಭಗಿನೀಗೃಹೇ ।
ಪ್ರವಾಸಿನಾ ಹ್ಯಭಾವಾದ್ವಾ ಜ್ವರಿತೇನಾಥ ಬಂದಿನಾ ॥ ೭೧ ॥
ಏತದಾಖ್ಯಾನಕಂ ಶ್ರುತ್ವಾ ಭೋಜನಸ್ಯ ಫಲಂ ಭವೇತ್ ।
ಕಾರ್ತಿಕೇ ತು ವಿಶೇಷೇಣ ಧಾತ್ರೀಛಾಯಾಂ ಸಮಾಶ್ರಿತಃ ॥ ೭೨ ॥
ಭೋಜನಂ ಕುರುತೇ ಯಸ್ತು ಸ ವೈಕುಂಠಮವಾಪ್ನುಯಾತ್ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಯಮದ್ವಿತೀಯಾ ಮಾಹಾತ್ಮ್ಯವರ್ಣನಂ" ನಾಮೈಕಾದಶೋಽಧ್ಯಾಯಃ

---

೭೯. ಯಾವ ನಾರಿಯು ಸೋದರನಿಗೆ ಸಂಬಂಧಿಸಿದ ಈ (ಭ್ರಾತೃಕ) ತಿಥಿಯಲ್ಲಿ ಸೋದರನಿಗೆ ಭೋಜನಮಾಡಿಸುತ್ತಾಳೆಯೋ, ತಾಂಬೂಲಾದಿಗಳಿಂದ ಅರ್ಚಿಸುತ್ತಾಳೆಯೋ, ಅವಳು ವೈಧವ್ಯವನ್ನು ಪಡೆಯುವುದಿಲ್ಲವು.

೭೦–೭೧. ಅಪರಾಹ್ಣದವರೆಗೂ ವ್ಯಾಪಿಸಿರುವ ದ್ವಿತೀಯೆಯು ಭ್ರಾತೃ ಭೋಜನಕ್ಕೆ ತಕ್ಕುದು. ಅಜ್ಞಾನದಿಂದಲಾಗಲಿ, ಮೋಹದಿಂದ (ಮರವಿನಿಂದ) ಲಾಗಲಿ, ಪ್ರವಾಸದಲ್ಲಿರುವುದರಿಂದಲಾಗಲಿ, ಅಭಾವದಿಂದಲಾಗಲಿ, ಜ್ವರ ಪೀಡೆಯಿಂದ ಅಥವಾ ಬಂದಿಯಾಗಿರುವುದರಿಂದಲೇ ಆಗಲಿ ಸೋದರಿಯ ಮನೆ ಯಲ್ಲಿ ಭೋಜನಮಾಡದೆ ಹೋದಲ್ಲಿ ಅದರಿಂದ ಎಂದಿಗೂ ಸೋದರನ ಯಶಸ್ಸು ಖಂಡಿತವಾಗಿಯೂ ಕ್ಷೀಣವಾಗುವುದಿಲ್ಲವು.

೭೨–೭೩. ಈ ಆಖ್ಯಾನವನ್ನು ಕೇಳಿದರೆ ಸೋದರೀಗೃಹ ಭೋಜನದ ಫಲವುಂಟಾಗುತ್ತದೆ. ಕಾರ್ತಿಕಮಾಸದಲ್ಲಿ, ವಿಶೇಷವಾಗಿ ಧಾತ್ರಿಯ (ನೆಲ್ಲಿ ಮರದ) ನೆರಳನ್ನಾಶ್ರಯಿಸಿ ಯಾವನು ಭೋಜನಮಾಡುತ್ತಾನೆಯೋ ಅವನು ವೈಕುಂಠಲೋಕವನ್ನು ಸೇರುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಯಮದ್ವಿತೀಯಾಮಾಹಾತ್ಮ್ಯವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ಧಾತ್ರೀಮಾಹಾತ್ಮ್ಯವರ್ಣನಂ

ಶೌನಕ ಉವಾಚ:—

ಕಾರ್ತಿಕಸ್ಯ ಚ ಮಾಹಾತ್ಮ್ಯಂ ಮಹತ್ಪುಣ್ಯಫಲಪ್ರದಂ ।
ಕದಾ ಧಾತ್ರೀ ಸಮುತ್ಪನ್ನಾ ಕಥಂ ಸಾ ಖ್ಯಾತಿಮಾಗತಾ ॥ ೧ ॥
ಕಸ್ಮಾದಿಯಂ ಪವಿತ್ರಾ ಚ ಕಸ್ಮಾತ್ಪಾಪಪ್ರಣಾಶಿನೀ ।
ಆಮರ್ದಕೀ ಕೃತಾ ಕೇನ ಕಥಯಸ್ವಾತ್ರ ವಿಸ್ತರಾತ್ ॥ ೨ ॥

ಸೂತ ಉವಾಚ:—

ಕಥಯಾಮಿ ದ್ವಿಜಶ್ರೇಷ್ಠ ಯಥಾ ಚೇಯಂ ಹಿ ಪುಣ್ಯದಾ ।
ಊರ್ಜಶುಕ್ಲಚತುರ್ದಶ್ಯಾಂ ಧಾತ್ರೀಪೂಜಾಂ ಸಮಾಚರೇತ್ ॥ ೩ ॥
ಆಮರ್ದಕೀಮಹಾವೃಕ್ಷಃ ಸರ್ವಪಾಪಪ್ರಣಾಶನಃ ।
ವೈಕುಂಠಾಖ್ಯಚತುರ್ದಶ್ಯಾಂ ಧಾತ್ರೀಛಾಯಾಂ ಗತೋ ನರಃ ॥ ೪ ॥
ಪೂಜಯೇತ್ತತ್ರ ದೇವೇಶಂ ರಾಧಯಾ ಸಹಿತಂ ಹರಿಂ ।
ಪ್ರದಕ್ಷಿಣಾಂ ತತಃ ಕುರ್ಯಾತ್ ಶತಮಷ್ಟೋತ್ತರಂ ತಥಾ ॥ ೫ ॥

---

## ಕನ್ನಡದ ಅನುವಾದ

### ಧಾತ್ರೀಮಾಹಾತ್ಮ್ಯವರ್ಣನ

೧. ಶೌನಕನು ಕೇಳುತ್ತಾನೆ:—ಎಲೈ ಮುನಿಯೇ! "ಕಾರ್ತಿಕಮಾಸದ ಮಾಹಾತ್ಮ್ಯವು ಮಹಾಪುಣ್ಯಫಲವನ್ನು ಕೊಡುವಂತಹುದು. ಧಾತ್ರಿ(ನೆಲ್ಲಿ)ಯು ಯಾವಾಗ ಹುಟ್ಟಿತು? ಅದು ಖ್ಯಾತಿಯನ್ನು ಪಡೆದುದೆಂತು?

೨. ಯಾವುದರಿಂದ ಇದು ಪವಿತ್ರವಾಯಿತು? ಯಾವುದರಿಂದ ಪಾಪ ನಾಶಕವಾಯಿತು? ಯಾರಿಂದ ಆಮರ್ದಕಿಯಾಗಿ ಮಾಡಲ್ಪಟ್ಟಿತು? ಈ ಸಂಗತಿಗಳನ್ನು ವಿಸ್ತಾರವಾಗಿ ತಿಳಿಸು."

೩. ಸೂತನು ಹೇಳುತ್ತಾನೆ:—"ಎಲೈ ದ್ವಿಜಶ್ರೇಷ್ಠನೇ! ಇದು ಹೇಗೆ ಪುಣ್ಯಪ್ರದವಾಯಿತೆಂಬುದನ್ನು ಹೇಳುತ್ತೇನೆ; ಕೇಳು. ಕಾರ್ತಿಕಶುಕ್ಲ ಚತುರ್ದಶಿಯ ದಿನ ಧಾತ್ರೀಪೂಜೆಯನ್ನು ಆಚರಿಸಬೇಕು.

೪–೫. ಆಮರ್ದಕೀ ಮಹಾವೃಕ್ಷವು ಸರ್ವಪಾಪಗಳನ್ನೂ ನಾಶಗೊಳಿಸುವಂತಹುದು. ವೈಕುಂಠನಾಮಕವಾದ ಚತುರ್ದಶಿಯಲ್ಲಿ ನರನು ಧಾತ್ರೀವೃಕ್ಷದ ನೆರಳಿಗೆ ಹೋಗಿ ಅಲ್ಲಿ ರಾಧೆಯಿಂದೊಡಗೂಡಿದ ದೇವೇಶನಾದ ಹರಿಯನ್ನು ಪೂಜಿಸಬೇಕು. ಬಳಿಕ ಅದಕ್ಕೆ ನೂರೆಂಟು ಪ್ರದಕ್ಷಿಣೆಗಳನ್ನು ಮಾಡಬೇಕು.

**ಸುವರ್ಣರಜತೈರ್ವಾಪಿ ಫಲೈರಾಮಲಕೈಸ್ತಥಾ ।**
**ಶತಮಷ್ಟೋತ್ತರಂ ಕುರ್ಯಾತ್ ಏಕೈಕೇನ ಪ್ರದಕ್ಷಿಣಾಂ ॥ ೬ ॥**
**ಸಾಷ್ಟಾಂಗಂ ಪ್ರಣತೋ ಭೂತ್ವಾ ಪ್ರಾರ್ಥಯೇತ್ಪರಮೇಶ್ವರಂ ।**
**ಧಾತ್ರೀಛಾಯಾಂ ಸಮಾಶ್ರಿತ್ಯ ಶೃಣುಯಾಚ್ಚ ಕಥಾಮಿಮಾಂ ॥ ೭ ॥**
**ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ಯಥಾಶಕ್ತ್ಯಾ ಚ ದಕ್ಷಿಣಾಂ ।**
**ಬ್ರಾಹ್ಮಣೇಷು ಚ ತುಷ್ಟೇಷು ತುಷ್ಟೋ ಮೋಕ್ಷಪ್ರದೋ ಹರಿಃ ॥ ೮ ॥**
**ಅತ್ರ ತೇ ಕಥಯಿಷ್ಯಾಮಿ ಕಥಾಂ ಪುಣ್ಯಫಲಪ್ರದಾಂ ।**
**ಆಮರ್ದಕೀಫಲಂ ವಕ್ತುಂ ಬ್ರಹ್ಮಣಾಪಿ ನ ಪಾರ್ಯತೇ ॥ ೯ ॥**
**ಏಕಾರ್ಣವೇ ಪುರಾ ಜಾತೇ ನಷ್ಟೇ ಸ್ಥಾವರಜಂಗಮೇ ।**
**ನಷ್ಟೇ ದೇವಾಸುರಗಣೇ ಪ್ರಣಷ್ಟೋರಗರಾಕ್ಷಸೇ ॥ ೧೦ ॥**
**ತತ್ರ ದೇವಾಧಿದೇವೇಶಃ ಪರಮಾತ್ಮಾ ಸನಾತನಃ ।**
**ಜಜಾಪ ಬ್ರಹ್ಮ ಪರಮಂ ಆತ್ಮನಃ ಪರಮವ್ಯಯಂ ॥ ೧೧ ॥**
**ತತೋಽಸ್ಯ ಬ್ರಹ್ಮ ಜಪತೋ ನಿರಗಾಚ್ಛ್ವಸಿತಂ ಪುರಃ ।**
**ತದ್ದರ್ಶನಾನುರಾಗೇಣ ನೇತ್ರಾಭ್ಯಾಮಗಮಜ್ಜಲಂ ॥ ೧೨ ॥**

---

೬. ಚಿನ್ನ ಬೆಳ್ಳಿಗಳಿಂದ ಮಾಡಿದ ಫಲಗಳಿಂದಲಾಗಲಿ, ಆಮಲಕ (ನೆಲ್ಲಿ) ಫಲಗಳಿಂದಾಗಲಿ ಒಂದೊಂದು ಪ್ರದಕ್ಷಿಣೆಗೆ ಒಂದೊಂದು ಫಲದಂತೆ ಹಾಕುತ್ತ ನೂರೆಂಟು ಪ್ರದಕ್ಷಿಣೆಗಳನ್ನು ಮಾಡಬೇಕು.

೭. ಸಾಷ್ಟಾಂಗವಾಗಿ ನಮಸ್ಕಾರಮಾಡಿ ಪರಮೇಶ್ವರನನ್ನು ಪ್ರಾರ್ಥಿಸಿ ಕೊಳ್ಳಬೇಕು. ಧಾತ್ರಿಯ ನೆರಳಿನಲ್ಲಿ ಕುಳಿತು ಕಥೆಯನ್ನು ಕೇಳಬೇಕು.

೮. ಬಳಿಕ ಬ್ರಾಹ್ಮಣರಿಗೆ ಭೋಜನಮಾಡಿಸಿ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ಬ್ರಾಹ್ಮಣರು ಸಂತುಷ್ಟರಾದರೆ ಹರಿಯು ಸಂತುಷ್ಟನಾಗಿ ಮೋಕ್ಷದಾಯಕನಾಗುತ್ತಾನೆ.

೯. ಈ ವಿಷಯಕ್ಕೆ ಸಂಬಂಧಿಸಿ ಪುಣ್ಯಫಲವನ್ನುಂಟುಮಾಡುವಂತಹ ಈ ಕಥೆಯನ್ನು ನಿನಗೆ ಹೇಳುತ್ತೇನೆ. ಆಮರ್ದಕೀಫಲದ ಮಹಿಮೆಯನ್ನು ವರ್ಣಿಸಲು ಬ್ರಹ್ಮನೂ ಶಕ್ತನಲ್ಲವು.

೧೦–೧೧. ಪೂರ್ವದಲ್ಲಿ ಎಲ್ಲೆಲ್ಲೂ ಸಮುದ್ರವೊಂದೇ ಆಗಿ ಸ್ಥಾವರ ಜಂಗಮಗಳೆಲ್ಲ ನಷ್ಟವಾಗಿರಲಾಗಿ, ದೇವಾಸುರರ ಸಮೂಹಗಳೆಲ್ಲ ನಷ್ಟವಾಗಿ, ಉರಗರಾಕ್ಷಸರೂ ವಿನಾಶಹೊಂದಿದಂದು, ಸನಾತನನೂ ಪರಮಾತ್ಮನೂ ಆದ ದೇವಾಧಿದೇವೇಶ್ವರನಾದ ಬ್ರಹ್ಮನು ಪರಮಾವ್ಯಯವಾದ ಪರಬ್ರಹ್ಮಸ್ವರೂಪ ವನ್ನು ಕುರಿತು ಜಪಿಸುತ್ತಿದ್ದನು.

೧೨. ಇಂತು ಜಪಿಸುತ್ತಿದ್ದ ಅವನ ಮುಂದೆ ಪರಬ್ರಹ್ಮವಸ್ತುವು (ವೇದವು)

ಪ್ರೇಮಾಶ್ರುಭರನಿರ್ಭಿನ್ನೋ ಭೂಮೌ ಬಿಂದುಃ ಪಪಾತ ಸಃ ।
ತಸ್ಮಾದ್ಬಿಂದೋಸ್ಸಮುತ್ಪನ್ನಃ ಸ್ವಯಂ ಧಾತ್ರೀ ನಗೋ ಮಹಾನ್ ॥೧೩॥
ಶಾಖಾಪ್ರಶಾಖಾಬಹುಲಃ ಫಲಭಾರೇಣ ಪೀಡಿತಃ ।
ಸರ್ವೆಷಾಮೇವ ವೃಕ್ಷಾಣಾಮಾದಿರೋಹಃ ಪ್ರಕೀರ್ತಿತಃ ॥ ೧೪ ॥
ಬ್ರಹ್ಮಾ ತಮಸೃಜತ್ಪೂರ್ವಂ ತತ್ಪಶ್ಚಾಚ್ಚಾಽಸೃಜತ್ಪ್ರಜಾಃ ।
ದೇವದಾನವಗಂಧರ್ವಯಕ್ಷರಾಕ್ಷಸಪನ್ನಗಾನ್ ॥ ೧೫ ॥
ಅಸೃಜದ್ಭಗವಾನ್ ದೇವೋ ಮಾನುಷಾಂಶ್ಚ ತಥಾ ಬಲಾನ್ ।
ಆಜಗ್ಮುಸ್ತತ್ರ ದೇವಾಸ್ತೇ ಯತ್ರ ಧಾತ್ರೀ ಹರಿಪ್ರಿಯಾ ॥ ೧೬ ॥
ತಾಂ ದೃಷ್ಟ್ವಾ ತೇ ಮಹಾಭಾಗಾಃ ಪರಮಂ ವಿಸ್ಮಯಂ ಗತಾಃ ।
ನ ಜಾನೀಮ ಇಮಂ ವೃಕ್ಷಂ ಚಿಂತಯಂತೋ ಮುಹುರ್ಮುಹುಃ ॥
ಏವಂ ಚಿಂತಯತಾಂ ತೇಷಾಂ ವಾಗುವಾಚಾಶರೀರಿಣೀ ।
ಆಮರ್ದಕೀ ನಗೋ ಹ್ಯೇಷ ಪ್ರವರೋ ವೈಷ್ಣವೋ ಯತಃ ॥ ೧೮ ॥

---

ಶ್ವಾಸರೂಪವಾಗಿ ಹೊರಹೊಮ್ಮಿತು. ಅದನ್ನು ನೋಡಿದಕೂಡಲೆ ಬ್ರಹ್ಮನ ಕಣ್ಣುಗಳಲ್ಲಿ ನೀರು ಬಂದಿತು.

೧೩. ಪ್ರೇಮದಿಂದುಕ್ಕಿದ ಆ ಅಶ್ರುಬಿಂದುವು ಭೂಮಿಯ ಮೇಲೆ ಬಿದ್ದಿತು. ಆ ಬಿಂದುವಿನಿಂದ ಮಹತ್ತಾದ ಆ ಧಾತ್ರೀವೃಕ್ಷವು ಹುಟ್ಟಿತು.

೧೪. ಶಾಖೆ ಪ್ರಶಾಖೆಗಳಿಂದ ಬಹು ದೊಡ್ಡದಾಗಿ ಫಲಭಾರದಿಂದ ಬಗ್ಗಿ ಸರ್ವವೃಕ್ಷಗಳಿಗೂ ಆದಿವೃಕ್ಷವೆಂದು ಅದು ಹೆಸರಾಯಿತು.

೧೫. ಎಲೈ ವಿಪ್ರರೇ! ಬ್ರಹ್ಮನು ಅದನ್ನು ಮೊದಲು ಸೃಷ್ಟಿಸಿದನು. ಅನಂತರವೇ ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಪನ್ನಗರು — ಇವರೇ ಮೊದಲಾದವರನ್ನೂ, ಆಮೇಲೆ ಪ್ರಜೆಗಳನ್ನೂ ಸೃಷ್ಟಿ ಮಾಡಿದನು.

೧೬. ಹಾಗೆಯೇ ಭಗವಂತನಾದ ಆ ಬ್ರಹ್ಮದೇವನು ಅಮಲರಾದ ಮನುಷ್ಯರನ್ನೂ ಸೃಷ್ಟಿಸಿದನು. ಆ ದೇವತೆಗಳೆಲ್ಲರೂ ಹರಿಪ್ರಿಯವಾದ ಧಾತ್ರೀವೃಕ್ಷವು ಎಲ್ಲಿದ್ದಿತೋ ಅಲ್ಲಿಗೆ ಬಂದರು.

೧೭. ಮಹಾಭಾಗರಾದ ಅವರು ಆ ವೃಕ್ಷವನ್ನು ನೋಡಿ ಪರಮ ವಿಸ್ಮಯವನ್ನು ಹೊಂದಿದರು. ''ಮತ್ತೆ ಮತ್ತೆ ಯೋಚಿಸಿದರೂ ಇದು ಯಾವ ವೃಕ್ಷವೆಂದು ತಿಳಿಯಲಾರೆವು' ಎಂದುಕೊಂಡರು.

೧೮. ಹೀಗೆ ಅವರು ಚಿಂತಿಸುತ್ತಿರಲಾಗಿ ಅವರಿಗೆ ಅಶರೀರವಾಣಿಯು ಹೀಗೆ ಹೇಳಿತು :—'ಇದು ಆಮರ್ದಕಿಯೆಂಬ ವೃಕ್ಷವು; ಇದು ವಿಷ್ಣುಪ್ರಿಯವಾದುದು. ಅದರಿಂದಲೇ ಶ್ರೇಷ್ಠವಾದುದು.

ಅಸ್ಯ ವೈ ಸ್ಮರಣಾದೇವ ಲಭೇದ್ಗೋದಾನಜಂ ಫಲಂ ।
ದರ್ಶನಾದ್ದ್ವಿಗುಣಂ ಪುಣ್ಯಂ ತ್ರಿಗುಣಂ ಭಕ್ಷಣಾತ್ತಥಾ ॥ ೧೯ ॥
ತಸ್ಮಾತ್ಸರ್ವಪ್ರಯತ್ನೇನ ಸೇವ್ಯಾ ಆಮರ್ದಕೀ ಸದಾ ।
ಸರ್ವಪಾಪಹರಾ ಪ್ರೋಕ್ತಾ ವೈಷ್ಣವೀ ಪಾಪನಾಶಿನೀ ॥ ೨೦ ॥
ತಸ್ಯಾ ಮೂಲೇ ಸ್ಥಿತೋ ವಿಷ್ಣುಸ್ತದೂರ್ಧ್ವಂ ಚ ಪಿತಾಮಹಃ ।
ಸ್ಕನ್ಧೇ ಚ ಭಗವಾನ್ ರುದ್ರಃ ಸಂಸ್ಥಿತಃ ಪರಮೇಶ್ವರಃ ॥ ೨೧ ॥
ಶಾಖಾಸು ಸವಿತಾರಶ್ಚ ಪ್ರಶಾಖಾಸು ಚ ದೇವತಾಃ ।
ಪರ್ಣೇಷು ದೇವತಾಸ್ಸಂತಿ ಪುಷ್ಪೇಷು ಮರುತಸ್ತಥಾ ॥ ೨೨ ॥
ಪ್ರಜಾನಾಂ ಪತಯಸ್ಸರ್ವೇ ಫಲೇಷ್ವೇವಂ ವ್ಯವಸ್ಥಿತಾಃ ।
ಸರ್ವದೇವಮಯೀ ಹ್ಯೇಷಾ ಧಾತ್ರೀ ವೈ ಕಥಿತಾ ಮಯಾ ॥ ೨೩ ॥
ಅತಸ್ಸಾ ಪೂಜನೀಯಾ ಚ ಸರ್ವಕಾಮಾರ್ಥಸಿದ್ಧಯೇ ।
ಏಕದಾ ನಾರದೋ ಯೋಗೀ ಬ್ರಹ್ಮಣಃ ಪುರತಸ್ಸ್ಥಿತಃ ।
ನಮಸ್ಕೃತ್ವಾ ಜಗನ್ನಾಥಂ ಪಪ್ರಚ್ಛಾತೀವ ವಿಸ್ಮಿತಃ ॥ ೨೪ ॥

---

೧೯. ಇದರ ಸ್ಮರಣಮಾತ್ರದಿಂದಲೇ ಗೋದಾನದಿಂದುಂಟಾಗುವ ಫಲವನ್ನು ಪಡೆಯಲಾಗುವುದು. ದರ್ಶನದಿಂದ ಎರಡರಷ್ಟು ಫಲವುಂಟು. ಭಕ್ಷಣದಿಂದ ಮೂರರಷ್ಟು ಫಲವು ದೊರೆಯುವುದು.

೨೦. ಆದುದರಿಂದ ಸರ್ವಪ್ರಯತ್ನದಿಂದಲೂ ಆಮರ್ದಕಿಯು ಸದಾಕಾಲವೂ ಸೇವ್ಯವಾಗಿರುವುದು. ಇದು ವಿಷ್ಣುಸಂಬಂಧಿಯೆಂದೂ, ಸರ್ವಪಾಪವಿನಾಶಕವೆಂದೂ ಹೇಳಲ್ಪಟ್ಟಿದೆ.

೨೧. ಇದರ ಮೂಲದಲ್ಲಿ ವಿಷ್ಣುವಿರುವನು. ಇದರ ಮೇಲುಗಡೆ ಪಿತಾಮಹನಿದ್ದಾನೆ. ಸ್ಕಂಧ (ಬುಡ)ದಲ್ಲಿ ಭಗವಾನ್ ರುದ್ರಪರಮೇಶನಿದ್ದಾನೆ.

೨೨. ಶಾಖೆಗಳಲ್ಲಿ ಆದಿತ್ಯರು ನೆಲಸಿದ್ದಾರೆ. ಪ್ರಶಾಖೆಗಳಲ್ಲಿ ದೇವತೆಗಳು ನೆಲೆಗೊಂಡಿದ್ದಾರೆ. ಎಲೆಗಳಲ್ಲಿ ದೇವತೆಗಳಿರುವರು. ಹೂವುಗಳಲ್ಲಿ ಮರುತರಿರುವರು.

೨೩. ಫಲಗಳಲ್ಲಿ ಪ್ರಜಾಪತಿಗಳೆಲ್ಲರೂ ನೆಲಸಿರುವರು. ಈ ರೀತಿ ದೇವತೆಗಳೆಲ್ಲರೂ ಇದರಲ್ಲಿಯೆ ವ್ಯವಸ್ಥೆಗೊಂಡಿದ್ದಾರೆ. ಈ ಧಾತ್ರೀವೃಕ್ಷವು ಸರ್ವದೇವಮಯವಾದುದೆಂದು ನನ್ನಿಂದ ಹೇಳಲ್ಪಟ್ಟಿದೆ.

೨೪. ಆದುದರಿಂದ ಸರ್ವಕಾಮಾರ್ಥಸಿದ್ಧಿಗಾಗಿ ಅದನ್ನು ಪೂಜಿಸಬೇಕು. ಒಂದಾನೊಂದು ಕಾಲದಲ್ಲಿ ಯೋಗಿಯಾದ ನಾರದನು ಬ್ರಹ್ಮನೆದುರಿಗೆ ಹೋಗಿ ನಿಂತನು. ಆ ಜಗನ್ನಾಥನಿಗೆ ನಮಸ್ಕರಿಸಿ ಅತಿವಿಸ್ಮಿತನಾಗಿ ಪ್ರಶ್ನೆಮಾಡಿದನು.

ಶ್ರೀ ನಾರದ ಉವಾಚ :—

ಯಥಾ ಪ್ರಿಯಂ ಸುತುಲಸೀಕಾನನಂ ಸರ್ವದಾ ಹರೇಃ ।
ತಥಾ ಧಾತ್ರೀವನಂ ಮಾಸೇ ಕಾರ್ತಿಕೇ ಶ್ರೀಹರಿಪ್ರಿಯಂ ॥ ೨೫ ॥

ಬ್ರಹ್ಮೋವಾಚ :—

ಧಾತ್ರೀವನೇ ಹರೇಃ ಪೂಜಾ ಧಾತ್ರೀಛಾಯಾಸು ಭೋಜನಂ ।
ಕಾರ್ತಿಕೇ ಮಾಸಿ ಯಃ ಕುರ್ಯಾತ್ ತಸ್ಯ ಪಾಪಂ ವಿನಶ್ಯತಿ ॥ ೨೬ ॥
ತೀರ್ಥಾನಿ ಮುನಯೋ ದೇವಾ ಯಜ್ಞಾಸ್ಸರ್ವೇಽಪಿ ಕಾರ್ತಿಕೇ ।
ನಿತ್ಯಂ ಧಾತ್ರೀಂ ಸಮಾಶ್ರಿತ್ಯ ತಿಷ್ಠಂತ್ಯರ್ಕೇ ತುಲಾಸ್ಥಿತೇ ॥ ೨೭ ॥
ಯತ್ಕಿಂಚಿತ್ಕುರುತೇ ಪುಣ್ಯಂ ಧಾತ್ರೀಛಾಯಾಸು ಮಾನವಃ ।
ತತ್ಕೋಟಿಗುಣಿತಂ ಭೂಯಾನ್ನಾತ್ರ ಕಾರ್ಯಾ ವಿಚಾರಣಾ ॥ ೨೮ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ॥ ೨೯ ॥
ಅಯೋಧ್ಯಾನಗರೇ ಕಶ್ಚಿತ್ ವೈಶ್ಯಶ್ಚಾಸೀದ್ದ್ವಿಜೋತ್ತಮ ।
ಪುತ್ರದಾರವಿಹೀನಶ್ಚ ದೈವಾದ್ದಾರಿದ್ರ್ಯಪೀಡಿತಃ ॥ ೩೦ ॥

---

೨೫. ಶ್ರೀನಾರದನು ಹೇಳುತ್ತಾನೆ:—"ಎಲೈ ತಂದೆಯೆ! ಶ್ರೀಹರಿಗೆ ತುಲಸೀವನವು ಯಾವ ರೀತಿ ಸರ್ವದಾ ಪ್ರಿಯವಾಗಿರುವುದೋ ಅದೇ ರೀತಿ ಕಾರ್ತಿಕಮಾಸದಲ್ಲಿ ಧಾತ್ರೀವನವೂ ಪ್ರಿಯವಾಗಿರುವುದು" ಎಂದನು.

೨೬. ಬ್ರಹ್ಮನು ಹೇಳುತ್ತಾನೆ:—"ಕಾರ್ತಿಕಮಾಸದಲ್ಲಿ ಧಾತ್ರೀವನದಲ್ಲಿ ಶ್ರೀಹರಿಗೆ ಪೂಜೆಯನ್ನೂ, ಧಾತ್ರಿಯ ನೆರಳಿನಲ್ಲಿ ಭೋಜನವನ್ನೂ ಯಾವ ಮಾನವನು ಮಾಡುವನೋ ಅವನ ಪಾಪಗಳೆಲ್ಲವೂ ನಾಶವಾಗುತ್ತವೆ.

೨೭. ಸೂರ್ಯನು ತುಲಾರಾಶಿಯಲ್ಲಿರಲಾಗಿ ಕಾರ್ತಿಕದಲ್ಲಿ ತೀರ್ಥಗಳೂ, ಮುನಿಗಳೂ, ಎಲ್ಲ ಯಜ್ಞಗಳೂ, ನಿತ್ಯವೂ ಧಾತ್ರಿಯನ್ನೇ ಆಶ್ರಯಿಸಿ ನೆಲಸಿರುತ್ತವೆ.

೨೮. ಮಾನವನು ಧಾತ್ರಿಯ ನೆರಳಿನಲ್ಲಿ ಏನಾದರೂ ಸ್ವಲ್ಪವಾದ ಪುಣ್ಯವನ್ನೇ ಮಾಡಿದರೂ ಅದು ಕೋಟಿಪಾಲು ಹೆಚ್ಚಾಗುವುದು. ಈ ವಿಷಯದಲ್ಲಿ ತರ್ಕಮಾಡಬೇಕಾದುದೇ ಇಲ್ಲವು.

೨೯. ಈ ಸಂಬಂಧದಲ್ಲಿ ಪುರಾತನವಾದ ಈ ಇತಿಹಾಸವನ್ನು ಉದಾಹರಿಸುತ್ತಾರೆ.

೩೦. ಎಲೈ ದ್ವಿಜೋತ್ತಮನೇ! ಅಯೋಧ್ಯಾನಗರದಲ್ಲಿ ಒಬ್ಬಾನೊಬ್ಬ ವೈಶ್ಯನಿದ್ದನು. ಅದೃಷ್ಟವಶದಿಂದ ಅವನು ಹೆಂಡತಿ ಮಕ್ಕಳನ್ನು ಕಳೆದುಕೊಂಡುದೂ ಅಲ್ಲದೆ ದಾರಿದ್ರ್ಯದಿಂದಲೂ ಪೀಡಿತನಾಗಿದ್ದನು.

ಭಿಕ್ಷಯಾ ಚೋದರಾಗ್ನಿಂ ಸ ಶಮಯಾಮಾಸ ನಾರದ ।
ಕದಾಚಿದ್ವಣಿಜೋ ವೈಶ್ಯೋ ಯಯಾಚೇ ಕ್ಷುತ್ಪ್ರಪೀಡಿತಃ ॥ ೩೧ ॥
ಭಿಕ್ಷಾಪ್ತಚಣಕಾನ್ ಗೃಹ್ಯ ಧಾತ್ರೀಛಾಯಾಮಗಾತ್ಕಿಲ ।
ತತ್ರ ತಾನ್ ಭಕ್ಷಯಾಮಾಸ ಕಾರ್ತಿಕೇ ಮಾಸಿ ನಾರದ ॥ ೩೨ ॥
ಕೇಚಿದುರ್ವರಿತಾಸ್ತೇಷು ಚಣಕಾಸ್ತತ್ರ ನಾರದ ।
ವೈಶ್ಯೇನ ತೇನ ದತ್ತಾ ಹಿ ಕ್ಷುತ್ಕ್ಷಾಮಾಯ ದ್ವಿಜಾತಯೇ ॥ ೩೩ ॥
ತೇನ ಪುಣ್ಯಪ್ರಭಾವೇನ ರಾಜಾಸೀದ್ಧನಿಕಃ ಕ್ಷಿತೌ ।
ತಸ್ಮಾದ್ದಾನಂ ಪ್ರಕರ್ತವ್ಯಂ ಕಾರ್ತಿಕೇ ಮಾಸಿ ಸರ್ವದಾ ॥ ೩೪ ॥
ಧಾತ್ರೀವನೇ ಮುನಿಶ್ರೇಷ್ಠ ಸರ್ವಕಾಮಾರ್ಥಸಿದ್ಧಯೇ ।
ಧಾತ್ರೀಛಾಯಾಂ ಸಮಾಶ್ರಿತ್ಯ ಕಾರ್ತಿಕೇ ಚ ಹರೇಃ ಕಥಾಂ ।
ಯಃ ಶೃಣೋತಿ ಸ ಪಾಪೇಭ್ಯೋ ಮುಚ್ಯತೇ ದ್ವಿಜಸೂನುವತ್ ॥ ೩೫ ॥

ನಾರದ ಉವಾಚ :—

ಕೋಽಭೂದ್ದ್ವಿಜಸುತೋ ಬ್ರಹ್ಮನ್ ಕಿಂ ಪಾಪಂ ಕೃತವಾನ್ ಪುರಾ ।
ತಸ್ಯ ಜಾತಾ ಕಥಂ ಮುಕ್ತಿಃ ಏತದ್ವಿಸ್ತರತೋ ವದ ॥ ೩೬ ॥

---

೩೧. ನಾರದ! ಅವನು ಭಿಕ್ಷೆಮಾಡಿ ಉದರಾಗ್ನಿಯನ್ನು ಶಮನಗೊಳಿಸುತ್ತಿದ್ದನು. ಒಂದಾನೊಂದು ದಿನ ಆ ವೈಶ್ಯನು ಹಸಿವಿನಿಂದ ಪೀಡಿತನಾಗಿ ಭಿಕ್ಷೆ ಬೇಡಿದನು.

೩೨. ಭಿಕ್ಷದಿಂದ ದೊರೆತ ಕಡಲೆಯನ್ನು ತೆಗೆದುಕೊಂಡು ಅವನು ನೆಲ್ಲಿಯ ಮರದ ನೆರಳಿಗೆ ಹೋದನು. ಆಗ ಕಾರ್ತಿಕಮಾಸವಾಗಿದ್ದಿತು. ಅಲ್ಲಿಯೆ ಅವನು ಆ ಕಡಲೆಯನ್ನು ತಿಂದನು.

೩೩. ಆ ಕಡಲೆಕಾಳುಗಳಲ್ಲಿ ಕೆಲವನ್ನು ಹಸಿವಿನಿಂದ ಸಂಕಟಪಡುತ್ತಿದ್ದ ಹಕ್ಕಿಗೆ ಹಾಕಿದನು.

೩೪–೩೫. ಆ ಪುಣ್ಯದ ಪ್ರಭಾವದಿಂದ ಅವನು ಮುಂದಣ ಜನ್ಮದಲ್ಲಿ ಭೂಮಿಯಲ್ಲಿ ಧನಿಕನಾದ ರಾಜನಾದನು. ಆದುದರಿಂದ ಸರ್ವಕಾಮಾರ್ಥಗಳೂ ಸಿದ್ಧಿಸುವುದಕ್ಕಾಗಿ ಯಾವಾಗಲೂ ಕಾರ್ತಿಕಮಾಸದಲ್ಲಿ ದಾನಮಾಡಬೇಕು. ಅಯ್ಯಾ! ಧಾತ್ರೀವನದಲ್ಲಿ ಕಾರ್ತಿಕಮಾಸದಲ್ಲಿ ಧಾತ್ರೀವನದ ನೆರಳನ್ನು ಸೇವಿಸಿ ಹರಿಯ ಕಥೆಯನ್ನು ಯಾವನು ಕೇಳುತ್ತಾನೆಯೊ ಅವನು ದ್ವಿಜಪುತ್ರನಂತೆ ಪಾಪಗಳಿಂದ ಬಿಡುಗಡೆಹೊಂದುತ್ತಾನೆ.

೩೬. ಈ ಮಾತನ್ನು ಕೇಳಿ ನಾರದನು, "ಎಲೈ ಬ್ರಹ್ಮನೇ, ಆ ದ್ವಿಜ ಪುತ್ರನು ಯಾರು? ಅವನು ಹಿಂದೆ ಏನು ಪಾಪಮಾಡಿದನು? ಅವನಿಗೆ ಹೇಗೆ ಮುಕ್ತಿಯಾಯಿತು? ಇದನ್ನು ವಿಸ್ತಾರವಾಗಿ ಹೇಳು" ಎಂದನು.

ಬ್ರಹ್ಮೋವಾಚ :—

ಪುರಾ ದ್ವಿಜವರಶ್ಚಾಸೀತ್ ಕಾವೇರ್ಯಾ ಉತ್ತರೇ ತಟೇ ॥ ೩೭ ॥
ದೇವಶರ್ಮೇತಿ ವಿಖ್ಯಾತೋ ವೇದವೇದಾಂಗಪಾರಗಃ ।
ತಸ್ಯ ಪುತ್ರೋ ದುರಾಚಾರಃ ತಮಾಹ ಚ ಪಿತಾ ಹಿತಂ ॥ ೩೮ ॥
ಇದಾನೀಂ ಕಾರ್ತಿಕೋ ಮಾಸೋ ವರ್ತತೇ ಹರಿವಲ್ಲಭಃ ।
ತತ್ರ ಸ್ನಾನಂ ಚ ದಾನಂ ಚ ವ್ರತಾನಿ ನಿಯಮಾನ್ ಕುರು ॥ ೩೯ ॥
ತುಲಸೀಪುಷ್ಪಸಹಿತಾಂ ಕುರು ಪೂಜಾಂ ಹರೇಸ್ಸುತ ।
ದೀಪದಾನಂ ಚ ವಿವಿಧಂ ನಮಸ್ಕಾರಂ ಪ್ರದಕ್ಷಿಣಾಂ ॥ ೪೦ ॥
ಏವಂ ಪಿತುರ್ವಚಃ ಶ್ರುತ್ವಾ ಪುತ್ರಃ ಕ್ರೋಧಸಮನ್ವಿತಃ ।
ಪಿತರಂ ಪ್ರಾಹ ದುಷ್ಟಾತ್ಮಾ ಚಲದೋಷ್ಠೋ ವಿನಿಂದಯನ್ ॥ ೪೧ ॥

ಪುತ್ರ ಉವಾಚ :—

ನ ಕರಿಷ್ಯಾಮ್ಯಹಂ ತಾತ ಕಾರ್ತಿಕೇ ಪುಣ್ಯಸಂಗ್ರಹಂ ।
ಇತಿ ಪುತ್ರವಚಃ ಶ್ರುತ್ವಾ ಸಕ್ರೋಧಃ ಪ್ರಾಹ ತಂ ಸುತಂ ॥ ೪೨ ॥
ಮೂಷಕೋ ಭವ ದುರ್ಬುದ್ಧೇ ವನೇ ವೃಕ್ಷಸ್ಯ ಕೋಟರೇ ।
ಇತಿ ಶಾಪಭಯಾದ್ಭೀತೋ ನತ್ವಾ ಪಿತರಮಬ್ರವೀತ್ ॥ ೪೩ ॥

---

೩೭-೩೮. ಬ್ರಹ್ಮನು ಹೇಳುತ್ತಾನೆ:—"ಪೂರ್ವದಲ್ಲಿ ಕಾವೇರಿಯ ಉತ್ತರದ ದಡದಲ್ಲಿ ವೇದವೇದಾಂಗ ಪಾರಂಗತನಾದ ದೇವಶರ್ಮನೆಂದು ವಿಖ್ಯಾತನಾದ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು. ಅವನ ಮಗನು ದುರಾಚಾರಿಯಾಗಿದ್ದನು. ಆ ಮಗನಿಗೆ ಅವನ ತಂದೆಯು ಹಿತವಚನವನ್ನು ಹೇಳಿದನು:

೩೯. 'ಈಗ ಹರಿಗೆ ಪ್ರಿಯವಾದ ಕಾರ್ತಿಕ ಮಾಸವು ನಡೆಯುತ್ತಿದೆ. ಈ ಕಾರ್ತಿಕದಲ್ಲಿ ಸ್ನಾನವನ್ನೂ, ದಾನವನ್ನೂ, ವ್ರತಗಳನ್ನೂ, ನಿಯಮಗಳನ್ನೂ ನಡೆಸು.

೪೦. ಎಲೈ ಮಗನೇ! ಹರಿಗೆ ತುಲಸೀಪತ್ರ ಮತ್ತು ಪುಷ್ಪಗಳಿಂದ ಪೂಜೆ ಮಾಡು. ವಿಧವಿಧವಾದ ದೀಪಗಳನ್ನು ದಾನಮಾಡು, ನಮಸ್ಕಾರ ಪ್ರದಕ್ಷಿಣೆಗಳನ್ನು ಮಾಡು.'

೪೧. ತಂದೆಯ ಈ ಮಾತುಗಳನ್ನು ಕೇಳಿ ಮಗನಿಗೆ ಕ್ರೋಧವು ಕೆರಳಿತು. ಆ ದುಷ್ಟನು ಕೋಪದಿಂದ ತುಟಿಗಳು ನಡುಗುತ್ತಿರಲು ತಂದೆಯನ್ನು ಬೈಯುತ್ತ ಹೀಗೆ ಉತ್ತರಕೊಟ್ಟನು:

೪೨-೪೪. ಪುತ್ರನು ಹೇಳುತ್ತಾನೆ:— 'ಅಪ್ಪಾ! ನಾನು ಕಾರ್ತಿಕದಲ್ಲಿ ಪುಣ್ಯಸಂಗ್ರಹಮಾಡುವುದಿಲ್ಲ.' ಹೀಗೆಂದ ಮಗನ ಮಾತನ್ನು ಕೇಳಿ ಕೋಪಗೊಂಡು ಆ ಬ್ರಾಹ್ಮಣನು ಮಗನನ್ನು ಕುರಿತು, 'ಎಲಾ ದುರ್ಬುದ್ಧಿಯೇ!

**ದುರ್ಯೋನೇರ್ಮಮ ಮುಕ್ತಿಸ್ಸ್ಯಾತ್ ಕಥಂ ತದ್ವದ ಮೇ ಗುರೋ ।**
**ಇತಿ ಪ್ರಸಾದಿತೋ ವಿಪ್ರಃ ಪ್ರಾಹ ನಿಷ್ಕೃತಿಕಾರಣಂ ॥ ೪೪ ॥**
**ಯದೋರ್ಜ್ಯವ್ರತಜಂ ಪುಣ್ಯಂ ಶೃಣೋಷಿ ಹರಿವಲ್ಲಭಂ ।**
**ತದಾ ತೇ ಭವಿತಾ ಮುಕ್ತಿಃ ತತ್ಕಥಾಶ್ರವಣಾತ್ಸುತ ॥ ೪೫ ॥**
**ಸ ಪಿತ್ರಾ ಚೈವಮುಕ್ತಸ್ತು ತತ್ಕ್ಷಣಾನ್ಮೂಷಕೋಽಭವತ್ ।**
**ಬಹುವರ್ಷಸಹಸ್ರಾಣಿ ಗಹ್ವರೇ ವಿಪಿನೇ ವಸನ್ ॥ ೪೬ ॥**
**ಏಕದಾ ಕಾರ್ತಿಕೇಮಾಸಿ ವಿಶ್ವಾಮಿತ್ರಃ ಸಶಿಷ್ಯಕಃ ।**
**ಸ್ನಾತ್ವಾ ನದ್ಯಾಂ ಹರಿಂ ಚಾರ್ಚ್ಯ ಧಾತ್ರೀಛಾಯಾಂ ಸಮಾಶ್ರಿತಃ ॥ ೪೭ ॥**
**ಕಥಯಾಮಾಸ ಮಾಹಾತ್ಮ್ಯಂ ಶಿಷ್ಯೇಭ್ಯಶ್ಚೋರ್ಜ್ಜಸಂಭವಂ ।**
**ತದಾ ಕಶ್ಚಿದ್ದುರಾಚಾರೋ ವ್ಯಾಧೋಽಗಾನ್ ಮೃಗಯಾಂ ಚರನ್ ॥**
**ದೃಷ್ಟ್ವಾ ಋಷಿಗಣಾನ್ ಹಂತುಂ ಕೃತೇಚ್ಛಃ ಪ್ರಾಣಿಘಾತಕಃ ।**
**ತೇಷಾಂ ದರ್ಶನಮಾತ್ರೇಣ ಸುಬುದ್ಧಿರಭವತ್ತದಾ ॥ ೪೯ ॥**

---

ನೀನು ವನದಲ್ಲಿ ಮರದ ಪೊಟರೆಯಲ್ಲಿ ಇಲಿಯಾಗಿ ಹೋಗು' ಎಂದು ಬಿಟ್ಟನು. ಈ ರೀತಿಯ ಶಾಪಭಯದಿಂದ ಬೆದರಿ ಆ ಪುತ್ರನು ತಂದೆಯನ್ನು ನಮಸ್ಕರಿಸಿ ಅವನನ್ನು, 'ದುಷ್ಟಜನ್ಮದಲ್ಲಿ ಹುಟ್ಟಿದ ನನಗೆ ಹೇಗೆ ಮುಕ್ತಿಯಾಗುವುದು? ಎಲೈ ಗುರುವೇ! ಅದನ್ನು ನನಗೆ ತಿಳಿಸು' ಎಂದು ಪ್ರಾರ್ಥಿಸಿಕೊಂಡನು. ಹೀಗೆ ಆದುಷ್ಟ ಪುತ್ರನು ಅನುಗ್ರಹವನ್ನು ಬೇಡಲು ಆ ಬ್ರಾಹ್ಮಣನು ಪಾಪಪರಿಹಾರಕ್ಕೆ ಉಪಾಯವನ್ನು ಈ ರೀತಿ ತಿಳಿಸಿದನು.

೪೫. 'ವತ್ಸ! ಯಾವಾಗ ಹರಿವಲ್ಲಭವಾದ ಕಾರ್ತಿಕವ್ರತದ ಮಾಹಾತ್ಮ್ಯವನ್ನು ಶ್ರವಣಮಾಡುವೆಯೋ ಆಗ ಆ ಕಥಾಶ್ರವಣದಿಂದ ನಿನಗೆ ಮುಕ್ತಿಯುಂಟಾಗುತ್ತದೆ.'

೪೬. ತಂದೆಯು ಅವನಿಗೆ ಹಾಗೆ ಹೇಳಿದ ತತ್ಕ್ಷಣವೇ ಅವನು ಇಲಿಯಾದನು. ಬಹುವರ್ಷಸಹಸ್ರಗಳ ಕಾಲ ಅವನು ಇಲಿಯಾಗಿಯೇ ವನವೃಕ್ಷದ ಪೊಟರೆಯೊಂದರಲ್ಲಿ ವಾಸಿಸುತ್ತಿದ್ದನು.

೪೭. ಒಂದಾನೊಂದು ದಿನ ಕಾರ್ತಿಕ ಮಾಸದಲ್ಲಿ ವಿಶ್ವಾಮಿತ್ರನು ಶಿಷ್ಯರಿಂದೊಡಗೂಡಿ ಅಲ್ಲಿಗೆ ಬಂದು ನದಿಯಲ್ಲಿ ಸ್ನಾನಮಾಡಿ ಹರಿಯನ್ನರ್ಚಿಸಿ ನೆಲ್ಲಿಯ ಮರದ ನೆರಳನ್ನಾಶ್ರಯಿಸಿದನು.

೪೮–೪೯. ಆತನು ಕಾರ್ತಿಕಮಾಸದ ಮಾಹಾತ್ಮ್ಯವನ್ನು ಶಿಷ್ಯರಿಗೆ ತಿಳಿಯ ಹೇಳುತ್ತಿದ್ದನು. ಆಗ ಯಾವನೋ ಒಬ್ಬ ದುರಾಚಾರಿಯಾದ ಬೇಡನು ಬೇಟೆಯಾಡುತ್ತಿರುವಾಗ ಋಷಿ ಸಮೂಹವನ್ನು ಕಂಡು ಅವರನ್ನು ಕೊಲ್ಲಬಯಸಿ ಅಲ್ಲಿಗೆ ಬಂದನು. ಅವರ ದರ್ಶನ ಮಾತ್ರದಿಂದಲೇ ಅವನು ಸದ್ಬುದ್ಧಿಯುಳ್ಳವನಾದನು.

ಅಥೋವಾಚ ದ್ವಿಜಾನ್ನತ್ವಾ ಭವದ್ಭಿಃ ಕ್ರಿಯತೇಽತ್ರ ಕಿಂ ।
ತೇನೈವಮುಕ್ತೋ ವಿಪ್ರೇಂದ್ರೋ ವಿಶ್ವಾಮಿತ್ರಸ್ತಮಬ್ರವೀತ್ ॥ ೫೦ ॥

ವಿಶ್ವಾಮಿತ್ರ ಉವಾಚ:—

ಸರ್ವೇಷಾಮೇವ ಮಾಸಾನಾಂ ಕಾರ್ತಿಕಶ್ಶ್ರೇಷ್ಠ ಉಚ್ಯತೇ ।
ತಸ್ಮಿನ್ಯತ್ಕ್ರಿಯತೇ ಕರ್ಮ ವರ್ಧತೇ ವಟಬೀಜವತ್ ॥ ೫೧ ॥
ಕಾರ್ತಿಕೇಮಾಸಿ ಯಃ ಕುರ್ಯಾತ್ ಸ್ನಾನಂ ದಾನಂ ಚ ಪೂಜನಂ ।
ವಿಪ್ರಾಣಾಂ ಭೋಜನಂ ಚೈವ ತದಕ್ಷಯ್ಯಫಲಂ ಭವೇತ್ ॥ ೫೨ ॥
ವ್ಯಾಧಃಪ್ರಯುಕ್ತಮಾಕರ್ಣ್ಯ ಧರ್ಮಂ ಚ ಋಷಿಣಾ ದ್ವಿಜಃ ।
ಮೂಷಕಂ ದೇಹಮುತ್ಸೃಜ್ಯ ದಿವ್ಯದೇಹೋಽಭವತ್ತದಾ ॥ ೫೩ ॥
ವಿಶ್ವಾಮಿತ್ರಂ ಪ್ರಣಮ್ಯಾಥ ಸ್ವವೃತ್ತಾಂತಂ ನಿವೇದ್ಯ ಚ ।
ಅನುಜ್ಞಾತೋಽಥ ಋಷಿಣಾ ವಿಮಾನಸ್ಥೋ ದಿವಂ ಯಯೌ ॥ ೫೪ ॥
ವಿಸ್ಮಿತೋ ಗಾಧಿಪುತ್ರಸ್ತು ವ್ಯಾಧಶ್ಚೈವ ವಿಶೇಷತಃ ।
ವ್ಯಾಧೋಽಪ್ಯೂರ್ಜವ್ರತಂ ಕೃತ್ವಾ ಜಗಾಮ ಹರಿಮಂದಿರಂ ॥ ೫೫ ॥

---

೫೦. ಆಗ ಅವನು ಆ ದ್ವಿಜರಿಗೆ ನಮಸ್ಕಾರಮಾಡಿ, 'ತಾವು ಇಲ್ಲಿ ಏನು ಮಾಡುತ್ತಿದ್ದೀರಿ?' ಎಂದು ಕೇಳಿದನು. ಅವನು ಹೀಗೆನ್ನಲಾಗಿ ವಿಪ್ರೇಂದ್ರನಾದ ವಿಶ್ವಾಮಿತ್ರನು ಅವನನ್ನು ಕುರಿತು ಹೇಳಿದನು.

೫೧. ವಿಶ್ವಾಮಿತ್ರನು ಹೇಳುತ್ತಾನೆ:— 'ಸರ್ವ ಮಾಸಗಳಲ್ಲಿಯೂ ಕಾರ್ತಿಕವು ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಆ ಮಾಸದಲ್ಲಿ ಮಾಡಿದ ಕರ್ಮವು ಆಲದ ಬೀಜದ ಹಾಗೆ ವೃದ್ಧಿಹೊಂದುತ್ತದೆ.

೫೨. ಕಾರ್ತಿಕಮಾಸದಲ್ಲಿ ಮಾಡಿದ ಸ್ನಾನ, ದಾನ, ಪೂಜೆ, ಬ್ರಾಹ್ಮಣ ಭೋಜನ ಇವುಗಳೆಲ್ಲವೂ ಅಕ್ಷಯಫಲದಾಯಕವಾಗುವುವು.'

೫೩. ಈ ರೀತಿ ವ್ಯಾಧನನ್ನುದ್ದೇಶಿಸಿ ಋಷಿಯು ವಿವರಿಸಿದ ಧರ್ಮವನ್ನಾಲಿಸಿ ಆ ದ್ವಿಜನು ಮೂಷಕದೇಹವನ್ನು ತೊರೆದು ಕೂಡಲೆ ದಿವ್ಯ ದೇಹವನ್ನು ಧರಿಸಿದವನಾದನು.

೫೪. ಬಳಿಕ ಅವನು ವಿಶ್ವಾಮಿತ್ರನಿಗೆ ಪ್ರಣಾಮಮಾಡಿ ತನ್ನ ವೃತ್ತಾಂತ ವನ್ನೆಲ್ಲ ತಿಳಿಸಿ ಆ ಋಷಿಯ ಅನುಜ್ಞೆಯನ್ನು ಪಡೆದು ವಿಮಾನವನ್ನೇರಿ ಸ್ವರ್ಗಕ್ಕೆ ನಡೆದನು.

೫೫. ಅದನ್ನು ಕಂಡ ಆ ಗಾಧಿಪುತ್ರನು ವಿಸ್ಮಿತನಾದನು. ಬೇಡನಂತೂ ಬಹಳ ಅಚ್ಚರಿಗೊಂಡನು. ಬಳಿಕ ಅವನೂ ಕಾರ್ತಿಕವ್ರತವನ್ನು ಮಾಡಿ ಹರಿ ಮಂದಿರವನ್ನು ಸೇರಿದನು.

ತಸ್ಮಾತ್ಸರ್ವಪ್ರಯತ್ನೇನ ಕಾರ್ತಿಕೇ ಕೇಶವಾಗ್ರತಃ ।
ಧಾತ್ರೀಛಾಯಾಂ ಸಮಾಶ್ರಿತ್ಯ ಕಥಾಶ್ರವಣಮಾಚರೇತ್ ॥ ೫೬ ॥
ಮೂಷಕೋಽಪಿ ಚ ದುರ್ಯೋನೇಃ ಮುಕ್ತ ಊರ್ಜಕಥಾಶ್ರುತೇಃ ।
ಶೃಣುಯಾಚ್ಛ್ರಾವಯೇದ್ಯೋವಾ ಮುಕ್ತಿಭಾಗೀ ನ ಸಂಶಯಃ ॥ ೫೭ ॥
ಧಾತ್ರೀಛಾಯಾಂ ಸಮಾಶ್ರಿತ್ಯ ವನಭೋಜನಮಾಚರೇತ್ ।
ಆದೌ ಕೃತ್ವಾ ತಥಾ ಸ್ನಾನಂ ಉದಕೇ ವನಸಂಸ್ಥಿತೇ ।
ಕೃತ್ವಾ ಕರ್ಮಾಣಿ ನಿತ್ಯಾನಿ ಮಾಧವಂ ಪೂಜಯೇತ್ತತಃ ॥ ೫೮ ॥
ಧಾತ್ರೀಛಾಯಾಂ ಸಮಾಶ್ರಿತ್ಯ ಹರೌ ಭಕ್ತಿಸಮನ್ವಿತಃ ।
ಶೃಣುಯಾಚ್ಚ ಕಥಾಂ ದಿವ್ಯಾಂ ಮಾಸಮಾಹಾತ್ಮ್ಯಶಂಸನೀಂ ॥ ೫೯ ॥
ತತಸ್ತು ಬ್ರಾಹ್ಮಣಾನ್ ಭಕ್ತ್ಯಾ ಭೋಜಯೇದ್ಬ್ರಹ್ಮವಿತ್ತಮಾನ್ ।
ತತೋ ಭುಂಜೀತ ವಿಪ್ರೇಂದ್ರ ಸ್ವಯಂ ಹರಿಮನುಸ್ಮರನ್ ॥ ೬೦ ॥
ಏವಂ ಕೃತೇ ವ್ರತೇ ವಿಪ್ರ ಕಾರ್ತಿಕೇ ಹರಿವಲ್ಲಭೇ ।
ಯತ್ಪಾಪಂ ನಶ್ಯತೇ ಪುತ್ರ ಸಾವಧಾನಮನಾಃ ಶೃಣು ॥ ೬೧ ॥

---

೫೬. ಆದುದರಿಂದ ಸರ್ವಪ್ರಯತ್ನದಿಂದಲೂ ಕಾರ್ತಿಕಮಾಸದಲ್ಲಿ ಕೇಶವನೆದುರಿಗೆ ನೆಲ್ಲಿಯ ನೆರಳನ್ನಾಶ್ರಯಿಸಿ ಕಥಾಶ್ರವಣವನ್ನು ಮಾಡಬೇಕು.

೫೭. ಕಾರ್ತಿಕವ್ರತದ ಕಥೆಯನ್ನು ಕೇಳಿ ಮೂಷಕವು ಕೂಡ ಆ ದುರ್ಜನ್ಮದಿಂದ ಬಿಡುಗಡೆಯನ್ನು ಹೊಂದಿತು. ಈ ಕಥೆಯನ್ನು ಯಾವನು ಕೇಳುತ್ತಾನೆಯೊ ಅಥವಾ ಇತರರಿಗೆ ಕೇಳಿಸುತ್ತಾನೆಯೊ ಅವನು ಮುಕ್ತಿಭಾಗಿಯಾಗುತ್ತಾನೆ. ಇದರಲ್ಲಿ ಸಂಶಯವಿಲ್ಲವು.

೫೮. ಎಲೈ ವಿಪ್ರನೇ! ಕಾರ್ತಿಕದಲ್ಲಿ ಧಾತ್ರಿಯ ನೆರಳನ್ನಾಶ್ರಯಿಸಿ ವನಭೋಜನವನ್ನು ಮಾಡಬೇಕು. ಮೊದಲು ಕಾಡಿನಲ್ಲಿರುವ ನೀರಿನಲ್ಲಿ ಸ್ನಾನಮಾಡಿ ನಿತ್ಯಕರ್ಮಗಳನ್ನು ಮಾಡಿಕೊಂಡು ಆ ಬಳಿಕ ಮಾಧವನನ್ನು ಪೂಜಿಸಬೇಕು.

೫೯. ಧಾತ್ರೀಚ್ಛಾಯೆಯನ್ನಾಶ್ರಯಿಸಿ ಹರಿಯಲ್ಲಿ ಭಕ್ತಿಯುಳ್ಳವನಾಗಿ ಮಾಸ ಮಾಹಾತ್ಮ್ಯವನ್ನು ಪ್ರಶಂಸಿಸುವ ದಿವ್ಯ ಕಥೆಯನ್ನು ಕೇಳಬೇಕು.

೬೦. ಆ ಮೇಲೆ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರಿಗೆ ಭಕ್ತಿಯಿಂದ ಭೋಜನಮಾಡಿಸಬೇಕು. ವಿಪ್ರೇಂದ್ರಾ! ಅನಂತರ ತಾನೂ ಹರಿಯನ್ನು ಸ್ಮರಿಸುತ್ತಾ ಭೋಜನಮಾಡಬೇಕು.

೬೧. ಎಲೈ ವಿಪ್ರನೇ! ಹರಿಗೆ ಮೆಚ್ಚಾದ ಕಾರ್ತಿಕಮಾಸದಲ್ಲಿ ಹೀಗೆ ವ್ರತ ಮಾಡಿದಲ್ಲಿ ಯಾವ ಪಾಪವು ನಾಶವಾಗುವುದೆಂಬುದನ್ನು ಸಾವಧಾನವಾಗಿ ಲಾಲಿಸು.

ಹರೇರ್ನಾರ್ಪಿತಭೋಗಾಚ್ಚ ಭೋಜನೇ ಸೂರ್ಯದರ್ಶನಾತ್ ।
ರಜಸ್ವಲಾವಾಕ್ಶ್ರವಣಪಾಪಾದ್ಭೋಜನಕೇ ತಥಾ ॥ ೬೨ ॥
ಭೋಜನಾವಸರೇ ಚಾನ್ಯಸ್ಪರ್ಶದೋಷಸ್ತು ಯದ್ಭವೇತ್ ।
ನಿಷಿದ್ಧಭೋಜನಾತ್ತಸ್ಮಾತ್ ಭೋಜನೇ ಚಾನ್ನದೂಷಣಾತ್ ॥ ೬೩ ॥
ಶುದ್ಧಸ್ಯಾಪಿ ತಥಾ ತ್ಯಾಗಾತ್ಪುಣ್ಯಕಾಲೇ ಹರಿಪ್ರಿಯೇ ।
ಏತೈರ್ಯತ್ಸಾಧಿತಂ ಪಾಪಂ ತತ್ಸರ್ವಂ ನಶ್ಯತಿ ಧ್ರುವಂ ॥ ೬೪ ॥
ತಸ್ಮಾತ್ಸರ್ವಪ್ರಯತ್ನೇನ ಧಾತ್ರ್ಯಾಂ ಭೋಜನಮಾಚರೇತ್ ॥ ೬೫ ॥
ಕಾರ್ತಿಕೇ ಮಾಸಿ ವೈ ವಿಪ್ರೋ ಧಾತ್ರೀಮಾಲಾಂ ತು ಯೋ ವಹೇತ್ ।
ತಥೈವ ತುಲಸೀಮಾಲಾಂ ತಸ್ಯ ಪುಣ್ಯಮನಂತಕಂ ॥ ೬೬ ॥
ಧಾತ್ರೀಛಾಯಾಂ ಸಮಾಶ್ರಿತ್ಯ ದೀಪಮಾಲಾರ್ಪಣಂ ನರಃ ।
ಕರಿಷ್ಯತಿ ವಿಶೇಷೇಣ ತಸ್ಯ ಪುಣ್ಯಮನಂತಕಂ ॥ ೬೭ ॥
ರಾಧಾದಾಮೋದರೌ ಪೂಜ್ಯೌ ತುಲಸ್ಯಧೋ ವಿಶೇಷತಃ ।
ತುಲಸ್ಯಭಾವೇ ಕರ್ತವ್ಯಾ ಪೂಜಾ ಧಾತ್ರೀಫಲೇ ಶುಭಾ ॥ ೬೮ ॥
ಧಾತ್ರೀಛಾಯಾತಲೇ ಯೇನ ಸಕೃದ್ಭುಕ್ತಂ ತು ಕಾರ್ತಿಕೇ ।
ದಂಪತ್ಯೋರ್ಭೋಜನಂ ದತ್ತಂ ಅನ್ನದೋಷಾತ್ಪ್ರಮುಚ್ಯತೇ ॥ ೬೯ ॥

---

೬೨-೬೪. ಹರಿಗೆ ಅರ್ಪಿಸದೆ ಮಾಡಿದ ಭೋಗದಿಂದಲೂ, ಭೋಜನ ಸಮಯದಲ್ಲಿ ಸೂರ್ಯದರ್ಶನದಿಂದಲೂ, ರಜಸ್ವಲೆಯ ಮಾತುಗಳನ್ನು ಆಲಿಸುವುದರಿಂದಲೂ, ಮತ್ತೊಬ್ಬರನ್ನು ಸ್ಪರ್ಶಿಸುವುದರಿಂದಲೂ, ಅಲ್ಲದೆ ನಿಷಿದ್ಧ ಭೋಜನದಿಂದಲೂ, ಅನ್ನವನ್ನು ದೂಷಿಸುವುದರಿಂದಲೂ, ಹರಿಪ್ರಿಯವಾದ ಪುಣ್ಯಕಾಲದಲ್ಲಿ ಶುದ್ಧವಾಗಿದ್ದರೂ ಅನ್ನವನ್ನು ತ್ಯಾಗಮಾಡುವುದರಿಂದಲೂ ಸಂಘಟಿತವಾದ ಪಾಪವೆಲ್ಲವೂ ನಾಶವಾಗುತ್ತದೆ. ಇದು ಸತ್ಯವು.

೬೫. ಆದುದರಿಂದ ಸರ್ವಪ್ರಯತ್ನದಿಂದಲೂ ಧಾತ್ರೀಛಾಯೆಯಲ್ಲಿ (ನೆಲ್ಲಿ ಮರದ ಕೆಳಗೆ) ಭೋಜನಮಾಡಬೇಕು.

೬೬-೬೭. ಕಾರ್ತಿಕಮಾಸದಲ್ಲಿ ಯಾವ ವಿಪ್ರನು ಧಾತ್ರೀಮಾಲೆಯನ್ನೂ ಅಂತೆಯೇ ತುಲಸೀಮಾಲೆಯನ್ನೂ ಧರಿಸುತ್ತಾನೆಯೋ ಅವನಿಗೆ ಅನಂತ ಪುಣ್ಯವುಂಟಾಗುವುದು. ನೆಲ್ಲಿಯ ನೆರಳಿನಲ್ಲಿ ಯಾವ ಮನುಷ್ಯನು ದೀಪಮಾಲೆಯನ್ನು ಅರ್ಪಿಸುವನೋ ಅವನ ಪುಣ್ಯವು ಅನಂತವಾಗುವುದು.

೬೮. ರಾಧಾದಾಮೋದರರನ್ನು ವಿಶೇಷವಾಗಿ ತುಲಸೀ ಮೂಲದಲ್ಲಿ ಪೂಜಿಸಬೇಕು. ತುಲಸಿಯಿಲ್ಲವಾದಲ್ಲಿ ನೆಲ್ಲಿಯ ಮರದ ಬುಡದಲ್ಲಿಯಾದರೂ ಸ್ಥಾಪಿಸಿ ಪೂಜೆಮಾಡಬೇಕು.

೬೯. ಕಾರ್ತಿಕಮಾಸದಲ್ಲಿ ಧಾತ್ರೀವೃಕ್ಷದ ನೆರಳಿನಲ್ಲಿ ಯಾವನು ಒಮ್ಮೆಯೋ

ಸಂಪೂರ್ಣೇ ಕಾರ್ತಿಕೇ ಯಸ್ತು ಸಂಪೂಜ್ಯಾಮಲಕೀಂ ಶುಭಾಂ ।
ರಾಧಾದಾಮೋದರಪ್ರೀತ್ಯೈ ಭೋಜಯಿತ್ವಾ ಚ ದಂಪತೀ ।
ಪಶ್ಚಾತ್ಸ್ವಯಂ ತು ಭುಂಜೀತ ನ ಶ್ರೀಸ್ತಸ್ಯ ಕ್ಷಯಂ ವ್ರಜೇತ್ ॥ ೭೦ ॥
ಯಃ ಕಶ್ಚಿದ್ವೈಷ್ಣವೋ ಲೋಕೇ ಧತ್ತೇ ಧಾತ್ರೀಫಲಂ ಮುನೇ ।
ವಿಪ್ರೋ ಭವತಿ ದೇವಾನಾಂ ಮನುಷ್ಯಾಣಾಂ ಚ ಕಾ ಕಥಾ ॥ ೭೧ ॥
ಧಾತ್ರೀಫಲವಿಲಿಪ್ತಾಂಗೋ ಧಾತ್ರೀಫಲಸಮನ್ವಿತಃ ।
ಧಾತ್ರೀಫಲಕೃತಾಹಾರೋ ನರೋ ನಾರಾಯಣೋ ಭವೇತ್ ॥ ೭೨ ॥
ಧಾತ್ರೀಫಲಾನಿ ಯೋ ನಿತ್ಯಂ ವಹತೇ ಕರಸಂಪುಟೇ ।
ತಸ್ಯ ನಾರಾಯಣೋ ದೇವೋ ವರಮಿಷ್ಟಂ ಪ್ರಯಚ್ಛತಿ ॥ ೭೩ ॥
ಶ್ರೀಕಾಮಸ್ಸರ್ವದಾ ಸ್ನಾನಂ ಕುರ್ಯಾದಾಮಲಕೈರ್ನರಃ ।
ತುಷ್ಯತ್ಯಾಮಲಕೈರ್ವಿಷ್ಣುರೇಕಾದಶ್ಯಾಂ ವಿಶೇಷತಃ ॥ ೭೪ ॥
ನವಮ್ಯಾಂ ದರ್ಶೇ ಸಪ್ತಮ್ಯಾಂ ಸಂಕ್ರಾಂತೌ ರವಿವಾಸರೇ ।
ಚಂದ್ರಸೂರ್ಯೋಪರಾಗೇ ಚ ಸ್ನಾನಮಾಮಲಕೈಸ್ತ್ಯಜೇತ್ ॥ ೭೫ ॥

---

ಆದರೂ ಭೋಜನವನ್ನು ಮಾಡಿರುವನೋ, ಯಾವನು ದಂಪತಿಗಳಿಗೆ ಭೋಜನವನ್ನು ನೀಡಿರುವನೋ ಅವನು ಅನ್ನದೋಷದಿಂದ ವಿಮೋಚನೆಹೊಂದುತ್ತಾನೆ.

೭೦. ಕಾರ್ತಿಕಮಾಸವೆಲ್ಲ ಸಂಪೂರ್ಣವಾಗಿ ಯಾವನು ಶುಭವಾದ ಆಮಲಕವನ್ನು ಪೂಜಿಸಿ, ರಾಧಾದಾಮೋದರರ ಪ್ರೀತಿಗಾಗಿ ದಂಪತಿಗಳಿಗೆ ಭೋಜನಮಾಡಿಸಿ ಬಳಿಕ ತಾನೂ ಭೋಜನಮಾಡುವನೋ ಅವನ ಸಂಪತ್ತು ಕ್ಷಯವನ್ನೈದುವುದೇ ಇಲ್ಲವು.

೭೧–೭೩. ಎಲೈ ಮುನಿಯೇ! ಲೋಕದಲ್ಲಿ ವಿಷ್ಣುಭಕ್ತನಾದ ಯಾವ ಮಾನವನು ಧಾತ್ರೀಫಲವನ್ನು ಧರಿಸುವನೊ, ಅವನು ದೇವತೆಗಳಿಗೆ ಪ್ರಿಯನಾಗುತ್ತಾನೆ. ಹಾಗಿರುವಲ್ಲಿ ಅಂತಹವನು ಮನುಷ್ಯರಿಗೆ ಪ್ರಿಯನಾಗುವನೆಂಬುದನ್ನು ಹೇಳುವುದೇಕೆ? ಧಾತ್ರೀಫಲವನ್ನು ಅಂಗಗಳಿಗೆ ಲೇಪಿಸಿಕೊಂಡವನೂ, ಧಾತ್ರೀಫಲದಿಂದ ಕೂಡಿದವನೂ, ಧಾತ್ರೀಫಲವನ್ನು ಆಹಾರವಾಗಿ ಉಪಯೋಗಿಸುವವನೂ ಆದ ನರನು ನಾರಾಯಣನೇ ಆಗುತ್ತಾನೆ. ಯಾವನು ನಿತ್ಯವೂ ಕೈಬೊಗಸೆಯಲ್ಲಿ ಧಾತ್ರೀಫಲಗಳನ್ನು ಹಿಡಿದಿರುತ್ತಾನೆಯೋ, ಅವನಿಗೆ ದೇವದೇವನಾದ ನಾರಾಯಣನು ಇಷ್ಟವಾದ ವರವನ್ನು ಕೊಡುತ್ತಾನೆ.

೭೪. ಸಂಪತ್ತನ್ನು ಬಯಸುವ ನರನು ಸರ್ವದಾ ಆಮಲಕಗಳಿಂದ ಸ್ನಾನಮಾಡಬೇಕು. ಆಮಲಕಗಳಿಂದ ವಿಷ್ಣುವು ಸಂತುಷ್ಟನಾಗುತ್ತಾನೆ. ಶ್ರೀಹರಿಯು ಏಕಾದಶಿಯಲ್ಲಿ ಆಮಲಕಸ್ನಾನದಿಂದ ವಿಶೇಷವಾಗಿ ಸಂತೋಷ ಹೊಂದುತ್ತಾನೆ.

೭೫. ನವಮಿಯಲ್ಲಿಯೂ, ಅಮಾವಾಸ್ಯೆಯಲ್ಲಿಯೂ, ಸಪ್ತಮಿಯಲ್ಲಿಯೂ,

ಧಾತ್ರೀಛಾಯಾಯಾಂ ಸಮಾಶ್ರಿತ್ಯ ಕುರ್ಯಾತ್ಪಿಂಡಂ ತು ಯೋ ನರಃ ।
ಪ್ರಯಾಂತಿ ಪಿತರೋ ಮುಕ್ತಿಂ ಪ್ರಸಾದಾನ್ಮಾಧವಸ್ಯ ತು ॥ ೭೬ ॥
ಮೂರ್ಧ್ನಿ ಪಾಣೌ ಮುಖೇ ಚೈವ ಬಾಹ್ವೋಃ ಕಂಠೇ ತು ಯೋ ನರಃ ।
ಧತ್ತೇ ಧಾತ್ರೀಫಲಂ ವತ್ಸ ಧಾತ್ರೀಫಲವಿಭೂಷಿತಃ ॥ ೭೭ ॥
ಯಾವಲ್ಲುಠತಿ ಕಂಠಸ್ಥಾ ಧಾತ್ರೀಮಾಲಾ ನರಸ್ಯ ಹಿ ।
ತಾವತ್ತಸ್ಯ ಶರೀರೇ ತು ಪ್ರೀತ್ಯಾ ಲುಠತಿ ಕೇಶವಃ ॥ ೭೮ ॥
ಧಾತ್ರೀಫಲಂ ಚ ತುಲಸೀ ಮೃತ್ತಿಕಾ ದ್ವಾರಕೋದ್ಭವಾ ।
ಸಫಲಂ ಜೀವಿತಂ ತಸ್ಯ ತ್ರಿತಯಂ ಯಸ್ಯ ವೇಶ್ಮನಿ ॥ ೭೯ ॥
ಯಾವದ್ದಿನಾನಿ ವಹತೇ ಧಾತ್ರೀಮಾಲಾಂ ಕಲೌ ನರಃ ।
ತಾವದ್ಯುಗಸಹಸ್ರಾಣಿ ವೈಕುಂಠೇ ವಸತಿರ್ಭವೇತ್ ॥ ೮೦ ॥
ಮಾಲಾಯುಗ್ಮಂ ವಹೇದ್ಯಸ್ತು ಧಾತ್ರೀತುಲಸಿಸಂಭವಂ ।
ಯೋ ನರಃ ಕಂಠದೇಶೇ ತು ಕಲ್ಪಕೋಟಿಂ ದಿವಂ ವಸೇತ್ ॥ ೮೧ ॥
ಧಾತ್ರೀಛಾಯಾಯಾಂ ಗತೋ ಯಸ್ತು ದ್ವಾದಶ್ಯಾಂ ಪೂಜಯೇದ್ಧರಿಂ ।
ತತ್ರೈವ ಭೋಜನಂ ಯಸ್ತು ಬ್ರಾಹ್ಮಣಾನಾಂ ಚ ಕಾರಯೇತ್ ॥ ೮೨ ॥

---

ಸಂಕ್ರಾಂತಿಯಲ್ಲಿಯೂ, ಭಾನುವಾರಗಳಲ್ಲಿಯೂ, ಚಂದ್ರ ಸೂರ್ಯಗ್ರಹಣಗಳ ಕಾಲಗಳಲ್ಲಿಯೂ ಆಮಲಕಸ್ನಾನವನ್ನು ತ್ಯಜಿಸಬೇಕು.

೭೬. ಯಾವನು ಧಾತ್ರಿಯ ನೆರಳಿನಲ್ಲಿ ಪಿಂಡಪ್ರದಾನಮಾಡುವನೋ ಅವನ ಪಿತೃಗಳು ಮಾಧವನ ಪ್ರಸಾದದಿಂದ ಮುಕ್ತಿಯನ್ನು ಪಡೆಯುತ್ತಾರೆ.

೭೭-೭೮. ಶಿರಸ್ಸಿನಲ್ಲಿಯೂ, ಕೈಯಲ್ಲಿಯೂ, ಮುಖ, ತೋಳು, ಕಂಠ, ಈಎಡೆಗಳಲ್ಲಿಯೂ ಯಾವನರನು ಧಾತ್ರೀಫಲವನ್ನು ಧರಿಸಿ ಧಾತ್ರೀಫಲಗಳಿಂದಲೇ ವಿಭೂಷಿತನಾಗಿರುವನೋ, ಆ ನರನ ಕಂಠದಲ್ಲಿ ಎಲ್ಲಿಯುವರೆಗೆ ಧಾತ್ರೀಮಾಲೆಯು ಹೊರಳಾಡುವುದೋ ಅಲ್ಲಿಯವರೆಗೂ ಅವನ ಶರೀರದಲ್ಲಿ ಕೇಶವನು ಪ್ರೀತಿಯಿಂದ ವಾಸವಾಗಿರುತ್ತಾನೆ.

೭೯. ಧಾತ್ರೀಫಲ, ತುಲಸಿ, ದ್ವಾರಕೆಯಲ್ಲುಂಟಾದ ಮೃತ್ತಿಕೆ— ಈ ಮೂರೂ ಯಾವನ ಮನೆಯಲ್ಲಿವೆಯೋ ಅವನ ಜೀವನವೇ ಸಫಲವಾದುದು.

೮೦. ಕಲಿಯುಗದಲ್ಲಿ ಮನುಷ್ಯನು ಎಷ್ಟು ದಿನ ಧಾತ್ರೀಮಾಲೆಯನ್ನು ಧರಿಸಿರುವನೋ ಅವನಿಗೆ ಅಷ್ಟು ಸಹಸ್ರಯುಗಗಳವರೆಗೆ ವೈಕುಂಠದಲ್ಲಿ ವಸತಿ ಯುಂಟಾಗುವುದು.

೮೧-೮೩. ಯಾವನು ಧಾತ್ರಿ ಮತ್ತು ತುಲಸಿ, ಈ ಎರಡರಿಂದಲೂ ಮಾಡಿದ ಎರಡು ಮಾಲೆಗಳನ್ನೂ ಕತ್ತಿನಲ್ಲಿ ಧರಿಸುವನೋ ಅವನು ಕಲ್ಪಕೋಟಿ ಕಾಲ ಸ್ವರ್ಗದಲ್ಲಿ ವಾಸಮಾಡುತ್ತಾನೆ. ಯಾವನು ದ್ವಾದಶಿಯ ದಿನ

ಸ್ವಯಂ ಚ ತತ್ರ ಭುಂಕ್ತೇ ಯಃ ಸೂಪಭಕ್ಷ್ಯಾದಿಕಂ ತಥಾ ।
ನ ತಸ್ಯ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೮೩ ॥
ತುಲಸ್ಯಾಶ್ಚೈವ ಧಾತ್ರ್ಯಾಶ್ಚ ಫಲೈಃ ಪತ್ರೈರ್ಹರಿಂ ಯಜೇತ್ ॥ ೮೪ ॥
ತುಲಸೀ ಧಾತ್ರೀಯುಕ್ತಾ ಹಿ ಸಿಕ್ತೇ ಸತಿ ಚ ಕಾರ್ತಿಕೇ ।
ವಿಲಯಂ ಯಾಂತಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ॥ ೮೫ ॥
ಧರ್ಮದತ್ತೋ ದ್ವಿಜಃ ಪೂರ್ವಂ ಯಥಾ ಮುಕ್ತಿಮವಾಪ ಹ ॥ ೮೬ ॥

ನಾರದ ಉವಾಚ :—

ಕಾರ್ತಿಕೇಮಾಸಿ ಸಾ ಸೇವ್ಯಾ ಪೂಜನೀಯಾ ಸದಾ ನರೈಃ ।
ಚಾತುರ್ಮಾಸ್ಯೇ ನ ಸೇವ್ಯಾ ಸಾ ಇತ್ಯುಕ್ತಂ ಭವತಾ ಪುರಾ ।
ತಸ್ಮಾತ್ಸರ್ವಮಶೇಷೇಣ ಕಥಯಸ್ವ ಮಮಾಗ್ರತಃ ॥ ೮೭ ॥

ಬ್ರಹ್ಮೋವಾಚ :—

ಕಾರ್ತಿಕೇ ಮಾಸಿ ವಿಪ್ರರ್ಷೇ ಶುಕ್ಲಾಯಾ ದಶಮೀ ಶುಭಾ ।
ತದ್ದಿನಾರಭ್ಯ ಸಾ ಸೇವ್ಯಾ ದೈವೇ ಪಿತ್ರೇ ಚ ಕರ್ಮಣಿ ।
ದಶಮ್ಯಾರಭ್ಯ ತತ್ಪತ್ರೈಃ ಫಲಕೈರ್ಮಧುಸೂದನಂ ॥ ೮೮ ॥

---

ಧಾತ್ರೀವೃಕ್ಷದ ನೆರಳಿಗೆ ಹೋಗಿ ಶ್ರೀಹರಿಯನ್ನು ಪೂಜಿಸುತ್ತಾನೆಯೋ, ಯಾವನು ಅಲ್ಲಿಯೇ ಬ್ರಾಹ್ಮಣರಿಗೆ ಸೂಪಭಕ್ಷ್ಯ ಮೊದಲಾದುವನ್ನು ಭೋಜನ ಮಾಡಿಸುತ್ತಾನೆಯೋ, ತಾನು ಕೂಡ ಅಲ್ಲಿಯೇ ಊಟಮಾಡುತ್ತಾನೆಯೋ ಅವನಿಗೆ ನೂರಾರು ಕಲ್ಪಕೋಟಿಶತಗಳುರುಳಿದರೂ ಪುನರಾವೃತ್ತಿಯಿರುವುದಿಲ್ಲ; ಮೋಕ್ಷವೇ ದೊರಕುತ್ತದೆ.

೮೪. ತುಲಸಿಯ ಮತ್ತು ಧಾತ್ರಿಯ ಫಲಗಳಿಂದಲೂ, ಪತ್ರಗಳಿಂದಲೂ ಶ್ರೀಹರಿಯನ್ನು ಪೂಜಿಸಬೇಕು.

೮೫. ಕಾರ್ತಿಕಮಾಸದಲ್ಲಿ ಧಾತ್ರಿಯೊಡನೆ ತುಲಸಿಯನ್ನು ಬೆರಸಿ ಶ್ರೀಹರಿಯನ್ನು ಪೂಜಿಸಿದರೆ ಬ್ರಹ್ಮಹತ್ಯಾದಿ ಪಾಪಗಳು ಲಯವಾಗಿ ಹೋಗುತ್ತವೆ.

೮೬. ಪೂರ್ವದಲ್ಲಿ ಧರ್ಮದತ್ತನೆಂಬ ಬ್ರಾಹ್ಮಣನು ಹಾಗೆಯೇ ಮಾಡಿ ಮುಕ್ತಿಯನ್ನು ಪಡೆದನಷ್ಟೆ.''

೮೭. ನಾರದನು ಹೇಳುತ್ತಾನೆ:—''ತಂದೆಯೆ! ಕಾರ್ತಿಕಮಾಸದಲ್ಲಿ ಧಾತ್ರಿಯು ನರರಿಂದ ಸದಾ ಸೇವಿಸಲ್ಪಡಬೇಕು; ಪೂಜಿಸಲ್ಪಡಬೇಕು. ಚಾತುರ್ಮಾಸ್ಯದಲ್ಲಿ ಅದು ಸೇವ್ಯವಲ್ಲವು. ಹೀಗೆಂದು ನೀನು ಹಿಂದೆಯೇ ಹೇಳಿದೆ. ಆದುದರಿಂದ ಎಲ್ಲವನ್ನೂ ನಿಶ್ಶೇಷವಾಗಿ ನನಗೆ ವಿವರಿಸಬೇಕು''

೮೮–೮೯. ಬ್ರಹ್ಮನು ಹೇಳುತ್ತಾನೆ:—''ಎಲೈ ವಿಪ್ರರ್ಷಿಯೇ! ಕಾರ್ತಿಕಮಾಸದಲ್ಲಿ ಶುಕ್ಲಪಕ್ಷದಶಮಿಯು ಶುಭಕರವಾದುದು. ಆ ದಿನದಿಂದ

**ಪೂಜಯಂತಿ ನರಾ ಯೇ ವೈ ತೇ ವೈ ವೈಕುಂಠಗಾಮಿನಃ ।**
**ಸಮಾಪ್ತೇ ಕಾರ್ತಿಕವ್ರತೇ ವನಭೋಜನಮಾಚರೇತ್ ॥ ೮೯ ॥**
**ದಶಮ್ಯಾಂ ವಾಥ ದ್ವಾದಶ್ಯಾಂ ಪೌರ್ಣಮಾಸ್ಯಾಮಥಾಪಿ ವಾ ।**
**ಪಂಚಮ್ಯಾಂ ವಾ ಮಹಾಭಾಗ ವನಭೋಜನಮಾಚರೇತ್ ॥ ೯೦ ॥**
**ಸರ್ವೋಪಸ್ಕರಸಂಯುಕ್ತೋ ವೃದ್ಧಬಾಲೈಶ್ಚ ಸಂಯುತಃ ।**
**ವನಂ ಪ್ರವೇಶಯೇದ್ಧೀಮಾನ್ ಧಾತ್ರೀವೃಕ್ಷೈಸ್ಸುಶೋಭಿತಂ ॥ ೯೧ ॥**
**ಚೂತೈರ್ಬಕೈಸ್ತಥಾಶ್ವತ್ಥೈಃ ಪಿಚುಮಂದೈಃ ಕದಂಬಕೈಃ ।**
**ನ್ಯಗ್ರೋಧತಿಂತ್ರಿಣೀವೃಕ್ಷೈಸ್ಸಮಂತಾತ್ಪರಿಶೋಭಿತಂ ॥ ೯೨ ॥**
**ತತ್ರ ಗತ್ವಾ ಮಹಾಪ್ರಾಜ್ಞ ಪುಣ್ಯಾಹಂ ಕಾರಯೇತ್ಪುರಾ ।**
**ವಾಸ್ತುಪೀಠಂ ತಥಾ ಪೂಜ್ಯಂ ಧಾತ್ರೀಮೂಲೇ ತು ಕಾರಯೇತ್ ॥ ೯೩ ॥**
**ವೇದಿಕಾಂ ಚತುರಸ್ರಾಂ ಚ ಹಸ್ತಮಾತ್ರಾಯುತಾಂ ಶುಭಾಂ ।**
**ತಥೋಪವೇದಿಕಾಂ ಕೃತ್ವಾ ವೇದಿಕಾಗ್ರೇ ಮಹಾಮತೇ ॥ ೯೪ ॥**
**ಉಪವೇಶಾಯ ದೇವಸ್ಯ ಹ್ಯಲಂಕಾರ್ಯಂ ತು ಧಾತುಭಿಃ ।**
**ವೇದಿಕಾಪಶ್ಚಿಮೇ ಭಾಗೇ ಕಾರಯೇತ್ಕುಂಡಮಂಡಪಂ ॥ ೯೫ ॥**

---

ಮೊದಲಾಗಿ ದೇವಪಿತೃಕರ್ಮಗಳೆರಡರಲ್ಲಿಯೂ ಅದು ಸೇವ್ಯವೆನಿಸುವುದು. ದಶಮಿಯಿಂದಾರಂಭಿಸಿ ಅದರ ಪತ್ರಗಳಿಂದಲೂ, ಫಲಗಳಿಂದಲೂ ಮಧುಸೂದನನನ್ನು ಯಾವ ನರರು ಪೂಜಿಸುವರೋ ಅವರು ವೈಕುಂಠಲೋಕಕ್ಕೆ ಹೋಗುತ್ತಾರೆ. ಕಾರ್ತಿಕವ್ರತವು ಸಮಾಪ್ತಿಯಾದ ಮೇಲೆ ವನಭೋಜನವನ್ನು ಮಾಡಬೇಕು.

೯೦. ದಶಮಿಯಲ್ಲಿ ಅಥವಾ ದ್ವಾದಶಿಯಲ್ಲಿ ಅಥವಾ ಪೌರ್ಣಮಿಯಲ್ಲಿ ತಪ್ಪಿದರೆ ಪಂಚಮಿಯಲ್ಲಿ, ವನಭೋಜನವನ್ನಾಚರಿಸಬೇಕು.

೯೧. ಸರ್ವಸಾಮಗ್ರಿಗಳನ್ನೂ ತೆಗೆದುಕೊಂಡು ವೃದ್ಧರಿಂದಲೂ, ಬಾಲರಿಂದಲೂ ಒಡಗೂಡಿ ಧೀಮಂತನಾದವನು ಧಾತ್ರೀವೃಕ್ಷಗಳಿಂದ ಶೋಭಿಸುವ ವನವನ್ನು ಪ್ರವೇಶಿಸಬೇಕು.

೯೨. ಮಾವು, ಬಕ, ಅಶ್ವತ್ಥ, ಪಿಚುಮಂದ, ಕದಂಬ, ಆಲ, ಹುಣಿಸೆ ಈ ಮರಗಳಿಂದ ಸುತ್ತಮುತ್ತ ಪರಿಶೋಭಿಸುತ್ತಿರುವ ವನಕ್ಕೆ ಪ್ರವೇಶಿಸಬೇಕು.

೯೩. ಎಲೈ ಮಹಾಪ್ರಾಜ್ಞನೇ! ಅಲ್ಲಿಗೆ ಹೋಗಿ, ಮೊದಲು ಪುಣ್ಯಾಹ ಮಾಡಬೇಕು. ಧಾತ್ರೀಮೂಲದಲ್ಲಿ ಪೂಜ್ಯವಾದ ವಾಸ್ತುಪೀಠವನ್ನು ನಿರ್ಮಿಸಬೇಕು.

೯೪–೯೫. ಚತುರಸ್ರಾಕಾರವಾಗಿ ಒಂದು ಹಸ್ತದಷ್ಟು ಅಗಲವಾದ ಶುಭ ವೇದಿಕೆಯನ್ನು ನಿರ್ಮಿಸಬೇಕು. ಎಲೈ ಮಹಾಮತಿಯೇ! ಆ ಬಳಿಕ ವೇದಿಕೆಯ

ಮೇಖಲಾತ್ರಯಸಂಯುಕ್ತಂ ಪಿಪ್ಪಲಚ್ಛದಸಂಯುತಂ ।
ಹಸ್ತಮಾತ್ರಾಯತಂ ಸೌಮ್ಯ ಏವಂ ಕುಂಡಂ ತು ಕಾರಯೇತ್ ॥ ೯೬ ॥
ಪಶ್ಚಾತ್ಸ್ನಾತ್ವಾ ತತೋ ಜಪ್ತ್ವಾ ದೇವಪೂಜಾಂ ಸಮಾಚರೇತ್ ।
ಪಶ್ಚಾದಗ್ನಿಂ ಸಮಾಧಾಯ ಹೋಮಂ ಕುರ್ಯಾದ್ಯಥಾವಿಧಿ ॥ ೯೭ ॥
ಪಾಯಸಾಜ್ಯಗುಡೈಸ್ಸೂಪೈಃ ಪಾಲಾಶಸಮಿಧಾ ತಥಾ ।
ಗ್ರಹಾಣಾಂ ವಾಸ್ತುದೇವೇಭ್ಯಶ್ಚರುಂ ಕೃತ್ವಾ ಪ್ರಯತ್ನತಃ ॥ ೯೮ ॥
ಧಾತ್ರೀ ಶಾಂತಿಸ್ತಥಾ ಕಾಂತಿಃ ಮಾಯಾ ಪ್ರಕೃತಿರೇವ ಚ ।
ವಿಷ್ಣುಪತ್ನೀ ಮಹಾಲಕ್ಷ್ಮೀ ರಮಾ ಮಾ ಕಮಲಾ ತಥಾ ॥ ೯೯ ॥
ಇಂದಿರಾ ಲೋಕಮಾತಾ ಚ ಕಲ್ಯಾಣೀ ಕಮಲಾ ತಥಾ ।
ಸಾವಿತ್ರೀ ಚ ಜಗದ್ಧಾತ್ರೀ ಗಾಯತ್ರೀ ಸುಧೃತಿಸ್ತಥಾ ॥ ೧೦೦ ॥
ಅಂತಜ್ಞಾ ವಿಶ್ವರೂಪಾ ಚ ಸುಕೃಪಾ ಹ್ಯಬ್ಧಿಸಂಭವಾ ।
ಪ್ರಧಾನದೇವತಾಭಿಸ್ತು ರಕ್ಷಾಹೋಮಂ ಸಮಾರಭೇತ್ ॥ ೧೦೧ ॥
ಸಂಸೃಷ್ಟೇತಿ ಚ ಮಂತ್ರೇಣ ಋಷಭಂ ಮೇತಿ ಮಂತ್ರತಃ ।
ಅಪೂಪಂ ಗುಡಸೂಪಾಭ್ಯಾಂ ಸಂಯುತಂ ಜುಹುಯಾದ್ಧವಿಃ ॥ ೧೦೨ ॥

---

ವೇಲೆ ದೇವೇಶನು ಕುಳಿತುಕೊಳ್ಳುವುದಕ್ಕಾಗಿ ಉಪವೇದಿಕೆಯನ್ನು ರಚಿಸಿ ಧಾತುಗಳಿಂದಲೂ ರಂಗವಲ್ಲ್ಯಾದಿಗಳಿಂದಲೂ ಅದನ್ನು ಅಲಂಕರಿಸಬೇಕು. ಆ ವೇದಿಕೆಯ ಪಶ್ಚಿಮಭಾಗದಲ್ಲಿ ಕುಂಡಮಂಟಪವನ್ನು ನಿರ್ಮಿಸಬೇಕು.

೯೬. ಮೂರು ಮೇಖಲೆಗಳುಳ್ಳದ್ದಾಗಿಯೂ, ಪಿಪ್ಪಲಿಯ ಮೇಲು ಹೊದಿಕೆಯುಳ್ಳದ್ದಾಗಿಯೂ, ಒಂದು ಹಸ್ತ ಮಾತ್ರದಷ್ಟು ವಿಸ್ತಾರವಾಗಿಯೂ ಆ ಕುಂಡವನ್ನು ನಿರ್ಮಿಸಬೇಕು.

೯೭. ಆಮೇಲೆ ಸ್ನಾನ ಜಪಗಳನ್ನು ಮಾಡಿ ದೇವ ಪೂಜೆಯನ್ನೆಸಗಬೇಕು. ಅನಂತರ ಅಗ್ನಿಪ್ರತಿಷ್ಠೆಯನ್ನು ಮಾಡಿ ಯಥಾವಿಧಿಯಾಗಿ ಹೋಮಮಾಡಬೇಕು.

೯೮. ಪಾಯಸ, ತುಪ್ಪ, ಬೆಲ್ಲ, ಸೂಪ (ತೊವ್ವೆ) ಮುತ್ತುಗದ ಸಮಿತ್ತು ಇವುಗಳಿಂದ ಹೋಮಮಾಡಬೇಕು. ಗ್ರಹಗಳಿಗೂ ವಾಸ್ತುದೇವತೆಗಳಿಗೂ ಪ್ರಯತ್ನಪೂರ್ವಕವಾಗಿ ಚರುವನ್ನು ಮಾಡಿ ಹೋಮಮಾಡಬೇಕು.

೯೯–೧೦೧. ಧಾತ್ರೀ, ಶಾಂತಿ, ಕಾಂತಿ, ಮಾಯಾ, ಪ್ರಕೃತಿ, ವಿಷ್ಣುಪತ್ನೀ, ಮಹಾಲಕ್ಷ್ಮೀ, ರಮಾ, ಮಾ, ಕಮಲಾ, ಇಂದಿರಾ, ಲೋಕಮಾತಾ, ಕಲ್ಯಾಣೀ, ಕಮಲಾ, ಸಾವಿತ್ರೀ, ಜಗದ್ಧಾತ್ರೀ, ಗಾಯತ್ರೀ, ಸುಧೃತಿ, ಅಂತಜ್ಞಾ, ವಿಶ್ವರೂಪಾ, ಸುಕೃಪಾ, ಅಬ್ಧಿಸಂಭವಾ— ಇವು ಧಾತ್ರೀ ನಾಮಗಳು. ಪ್ರಧಾನ ದೇವತೆಗಳಿಂದ ರಕ್ಷಾಹೋಮವನ್ನು ಆರಂಭಿಸಬೇಕು.

೧೦೨. 'ಸಂಸೃಷ್ಟ' ಎಂಬ ಮಂತ್ರದಿಂದಲೂ 'ಋಷಭಂ ಮೇ' ಎಂಬ

**ಅಷ್ಟೋತ್ತರಶತಂ ಹುತ್ವಾ ಮೂಲಮಂತ್ರೇಣ ಪಾಯಸಂ ।**
**ತತೋ ಗ್ರಹಾದಿದೇವಾಂಸ್ತು ಯಥಾಸಂಖ್ಯೇನ ಹೋಮಯೇತ್ ॥೧೦೩॥**
**ಧಾತ್ರೀಹೋಮೇ ಮಹಾಪ್ರಾಜ್ಞ ರಕ್ಷಾಹೋಮೇ ತು ಪಾಯಸಂ ।**
**ತತಃ ಸ್ವಿಷ್ಟಕೃತಂ ಹುತ್ವಾ ಬಲಿದಾನಂ ಸಮಾಚರೇತ್ ॥ ೧೦೪ ॥**
**ಇಂದ್ರಾದಿಲೋಕಪಾಲಾಂಶ್ಚ ರಕ್ಷಾ ಪೂಜ್ಯಾ ಪ್ರಯತ್ನತಃ ।**
**ಧಾತ್ರೀವೃಕ್ಷಸ್ಯ ಸರ್ವತ್ರ ವೇದಿಕಾಸಂಯುತಸ್ಯ ಚ ॥ ೧೦೫ ॥**
**ಸೂಪೇನ ಗುಡಮಿಶ್ರೇಣ ಬಲಿಂ ಪಶ್ಚಾನ್ನಿವೇದಯೇತ್ ।**
**ದೇವಿ ಧಾತ್ರಿ ನಮಸ್ತುಭ್ಯಂ ಗೃಹಾಣ ಬಲಿಮುತ್ತಮಂ ॥ ೧೦೬ ॥**
**ಮಿಶ್ರಿತಂ ಗುಡಸೂಪಾಭ್ಯಾಂ ಸರ್ವಮಂಗಲದಾಯಿನಿ ।**
**ಪುತ್ರಾನ್ ದೇಹಿ ಮಹಾಪ್ರಾಜ್ಞಾನ್ ಯಶೋ ದೇಹಿ ಶುಭಪ್ರದಂ ॥**
**ಪ್ರಜ್ಞಾಂ ಮೇಧಾಂ ಚ ಸೌಭಾಗ್ಯಂ ವಿಷ್ಣುಭಕ್ತಿಂ ಚ ದೇಹಿ ಮೇ ।**
**ನೀರೋಗಂ ಕುರು ಮೇ ನಿತ್ಯಂ ನಿಷ್ಪಾಪಂ ಕುರು ಸರ್ವದಾ ॥ ೧೦೮ ॥**

---

ಮಂತ್ರದಿಂದಲೂ ಗುಡಸೂಪಗಳಿಂದ ಕೂಡಿದ ಅಪೂಪವನ್ನು ಹವಿಯಾಗಿ ಹೋಮಮಾಡಬೇಕು.

೧೦೩. ಮೂಲಮಂತ್ರದಿಂದ ಪಾಯಸವನ್ನು ನೂರೆಂಟು ಸಾರಿ ಹೋಮ ಮಾಡಿ ಆ ಬಳಿಕ ಗ್ರಹಾದಿದೇವತೆಗಳಿಗೆಲ್ಲ ಅವರವರಿಗೆ ಉಕ್ತವಾಗಿರುವಷ್ಟು ಸಂಖ್ಯೆಗೆ ಸರಿಯಾಗಿ ಹೋಮಮಾಡಬೇಕು.

೧೦೪. ಎಲೈ ಮಹಾಪ್ರಾಜ್ಞನೇ! ಧಾತ್ರೀಹೋಮದಲ್ಲಿಯೂ ರಕ್ಷಾ ಹೋಮದಲ್ಲಿಯೂ ಪಾಯಸವನ್ನುಪಯೋಗಿಸಬೇಕು. ಬಳಿಕ ಸ್ವಿಷ್ಟಕೃತ್ ಹೋಮವನ್ನು ಮಾಡಿ ಬಲಿದಾನವನ್ನಾಚರಿಸಬೇಕು.

೧೦೫-೧೦೭. ಇಂದ್ರಾದಿ ಲೋಕಪಾಲಕರನ್ನೂ ರಕ್ಷೆಯನ್ನೂ ಪ್ರಯತ್ನ ಪೂರ್ವಕವಾಗಿ ಪೂಜಿಸಬೇಕು. ಬಳಿಕ ಎಲ್ಲ ಕಡೆಯೂ ವೇದಿಕೆಗಳಿಂದ ಕೂಡಿರುವ ಧಾತ್ರೀ ವೃಕ್ಷಕ್ಕೆ ಗುಡಮಿಶ್ರಿತವಾದ ಸೂಪದಿಂದ ಬಲಿ ನಿವೇದನವಾಡಬೇಕು. 'ದೇವಿ! ಧಾತ್ರಿ! ನಿನಗೆ ನಮಸ್ಕಾರವು! ಎಲೌ ಸರ್ವಮಂಗಲದಾಯಿನೀ! ಗುಡ ಸೂಪಗಳಿಂದ ಮಿಶ್ರಿತವಾಗಿರುವ ಉತ್ತಮವಾದ ಈ ಬಲಿಯನ್ನು ಸ್ವೀಕರಿಸು. ಮಹಾಪ್ರಾಜ್ಞರಾದ ಪುತ್ರರನ್ನೂ, ನನಗೆ ಶುಭಪ್ರದವಾದ ಯಶಸ್ಸನ್ನೂ ದಯೆಪಾಲಿಸು.

೧೦೮. ಪ್ರಜ್ಞೆಯನ್ನೂ, ಮೇಧೆಯನ್ನೂ, ಸೌಭಾಗ್ಯವನ್ನೂ, ವಿಷ್ಣುಭಕ್ತಿ ಯನ್ನೂ ನನಗೆ ಅನುಗ್ರಹಿಸಿಕೊಡು. ನನಗೆ ನಿತ್ಯವೂ ನೀರೋಗವನ್ನುಂಟು ಮಾಡು. ನನ್ನನ್ನು ಸರ್ವದಾ ಪಾಪರಹಿತನನ್ನಾಗಿ ಮಾಡು.

**ವರ್ಚಸ್ಕಂ ಕುರು ಮಾಂ ದೇವಿ ಧನವಂತಂ ತಥಾ ಕುರು ।**
**ಇತಿ ತಾಂ ಪ್ರಾರ್ಥಯೇದ್ದೇವೀಂ ಪ್ರಾದಕ್ಷಿಣ್ಯಾದ್ಬಲಿಂ ನ್ಯಸೇತ್ ॥ ೧೦೯ ॥**
**ಬಲಿಪ್ರದಾನಕಾಲೇ ತು ಯೇ ಕುರ್ವಂತಿ ಪ್ರದಕ್ಷಿಣಂ ।**
**ತೇ ಯಾಂತಿ ವಿಷ್ಣುಸಾಲೋಕ್ಯಂ ಪಿತೃಭಿಸ್ಸಾರ್ಧಮೇವ ಚ ॥ ೧೧೦ ॥**
**ತತಃ ಪೂರ್ಣಾಹುತಿಂ ಹುತ್ವಾ ಹೋಮಶೇಷಂ ಸಮಾಪಯೇತ್ ॥ ೧೧೧ ॥**
**ಧಾತ್ರೀವೃಕ್ಷಸ್ಯ ಮೂಲಸ್ಥಂ ಮಂದಸ್ಮಿತರಮಾಪತಿಂ ।**
**ತೇ ಯಾಂತಿ ವಿಷ್ಣುಸಾಯುಜ್ಯಂ ಯೇ ಪಶ್ಯಂತೀಹ ಚಕ್ಷುಷಾ ॥ ೧೧೨ ॥**
**ವೈಶ್ವದೇವಂ ತತಃ ಕೃತ್ವಾ ಪೂಜಯೇದ್ವನದೇವತಾಃ ।**
**ಗಂಧಾಕ್ಷತಾನ್ ತತೋ ದತ್ವಾ ವಿಪ್ರೇಭ್ಯೋ ಪದ್ಮಸಂಭವ ॥ ೧೧೩ ॥**
**ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ಸ್ವಯಂ ಭುಂಜೀತ ಬಂಧುಭಿಃ ।**
**ಗೃಹಂ ಪ್ರವೇಶಯೇತ್ಪಶ್ಚಾತ್ ವೃದ್ಧಾನ್ ಬಾಲಾದಿಕೈಸ್ಸಹ ॥ ೧೧೪ ॥**
**ಬ್ರಹ್ಮಚಾರೀ ಭವೇದ್ರಾತ್ರೌ ಕ್ಷಿತಿಶಾಯೀ ಭವೇತ್ತತಃ ।**
**ಗ್ರಾಮಸ್ಥೈಶ್ಚ ಮಿಲಿತ್ವಾ ಚ ಸ್ವಯಂ ವಾ ಕಾರಯೇದ್ಬುಧಃ ॥ ೧೧೫ ॥**

---

೧೦೯. ದೇವೀ! ನನ್ನನ್ನು ವರ್ಚಸ್ವಿಯನ್ನಾಗಿ ಮಾಡು. ಹಾಗೆಯೇ ಧನವಂತನಾಗಿಯೂ ಮಾಡು.' ಹೀಗೆಂದು ಆ ಧಾತ್ರೀದೇವಿಯನ್ನು ಪ್ರಾರ್ಥಿಸಿಕೊಳ್ಳಬೇಕು. ಬಳಿಕ ಪ್ರದಕ್ಷಿಣೆಮಾಡಿ ಬಲಿಯನ್ನು ಇಡಬೇಕು.

೧೧೦. ಬಲಿಪ್ರದಾನಕಾಲದಲ್ಲಿ ಯಾರು ಧಾತ್ರೀವೃಕ್ಷಕ್ಕೆ ಪ್ರದಕ್ಷಿಣೆ ಮಾಡುವರೋ ಅವರು ಪಿತೃಸಮೇತರಾಗಿ ವಿಷ್ಣುಲೋಕವನ್ನು ಹೊಂದುತ್ತಾರೆ.

೧೧೧. ಬಳಿಕ ಪೂರ್ಣಾಹುತಿಯನ್ನು ಮಾಡಿ ಹೋಮಶೇಷವನ್ನು ಸಮಾಪ್ತಿ ಮಾಡಬೇಕು.

೧೧೨. ಧಾತ್ರೀವೃಕ್ಷದ ಮೂಲದಲ್ಲಿರುವ ಮಂದಸ್ಮಿತನಾದ ರಮಾಪತಿಯನ್ನು ಯಾರು ಕಣ್ಣಾರೆ ನೋಡುವರೋ ಅವರು ವಿಷ್ಣುಸಾಯುಜ್ಯವನ್ನು ಹೊಂದುತ್ತಾರೆ.

೧೧೩–೧೧೪. ಆಮೇಲೆ ವೈಶ್ವದೇವವನ್ನು ಮಾಡಿ ವನದೇವತೆಗಳನ್ನು ಪೂಜಿಸಬೇಕು. ಬಳಿಕ ವಿಪ್ರರಿಗೆ ಗಂಧಾಕ್ಷತೆಗಳನ್ನಿತ್ತು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಆಮೇಲೆ ಬಂಧುಗಳೊಡಗೂಡಿ ತಾನೂ ಭೋಜನ ಮಾಡಬೇಕು. ಅನಂತರದಲ್ಲಿ ವೃದ್ಧರನ್ನು ಬಾಲಾದಿಗಳೊಡನೆ ಮನೆಗೆ ಕರೆದುಕೊಂಡು ಹೋಗಬೇಕು.

೧೧೫–೧೧೬. ಬ್ರಹ್ಮಚಾರಿಯಾಗಿ ರಾತ್ರಿ ನೆಲದಮೇಲೆ ಮಲಗಬೇಕು. ಪಂಡಿತನಾದವನು ತಾನೇ ಸ್ವಂತವಾಗಿಯಾಗಲಿ, ಗ್ರಾಮಸ್ಥರೊಡನೆ ಜೊತೆಗೂಡಿ

ಸರ್ವಪಾಪವಿಮುಕ್ತ್ಯರ್ಥಂ ವನಭೋಜನಮುತ್ತಮಂ ।
ಕೃತ್ವೈವಂ ಸಕಲಂ ಕರ್ಮ ಕೃಷ್ಣಾಯ ಚ ಸಮರ್ಪಯೇತ್ ॥ ೧೧೬ ॥
ಅಶ್ವಮೇಧಸಹಸ್ರಸ್ಯ ರಾಜಸೂಯಶತಸ್ಯ ಚ ।
ಯತ್ಫಲಂ ಸಮವಾಪ್ನೋತಿ ತತ್ಫಲಂ ವನಭೋಜನೇ ॥ ೧೧೭ ॥
ಅತೋ ಧಾತ್ರೀ ಮಹಾಭಾಗ ಪವಿತ್ರಾ ಪಾಪನಾಶನೀ ।
ಧಾತ್ರೀ ಚೈವ ನೃಣಾಂ ಧಾತ್ರೀ ಧಾತ್ರೀವತ್ಕುರುತೇ ಕ್ರಿಯಾಂ ॥ ೧೧೮ ॥
ದದಾತ್ಯಾಯುಃ ಪಯಃಪಾನಾತ್ ಸ್ನಾನಾದ್ಧ್ವೈ ಧರ್ಮಸಂಚಯಃ ।
ಅಲಕ್ಷ್ಮೀನಾಶನಂ ಸ್ನಾನಮಾತ್ರೈರ್ನಿರ್ವಾಣಮಾಪ್ನುಯಾತ್ ।
ವಿಘ್ನಾನಿ ನೈವ ಜಾಯಂತೇ ಧಾತ್ರೀಸ್ನಾನೇನ ವೈ ನೃಣಾಂ ॥ ೧೧೯ ॥
ತಸ್ಮಾತ್ತ್ವಂ ಕುರು ವಿಪ್ರೇಂದ್ರ ಧಾತ್ರೀಸ್ನಾನಂ ಹಿ ಯತ್ನತಃ ।
ಪ್ರಯಾಸ್ಯಸಿ ಹರೇರ್ಧಾಮ ದೇವತ್ವಂ ಪ್ರಾಪ್ಯ ನಾರದ ॥ ೧೨೦ ॥
ಯತ್ರ ಯತ್ರ ಮುನಿಶ್ರೇಷ್ಠ ಧಾತ್ರೀಸ್ನಾನಂ ಸಮಾಚರೇತ್ ।
ತೀರ್ಥೇ ವಾಪಿ ಗೃಹೇ ವಾಪಿ ತತ್ರ ತತ್ರ ಹರಿಃ ಸ್ಥಿತಃ ॥ ೧೨೧ ॥

---

ಯಾಗಲಿ ಸರ್ವ ಪಾಪ ವಿಮೋಚನೆಗಾಗಿ ಉತ್ತಮವಾದ ವನಭೋಜನವನ್ನು ಆಚರಿಸಬೇಕು. ಹೀಗೆ ಸಕಲ ಕರ್ಮವನ್ನು ಆಚರಿಸಿ ಅದನ್ನು ಶ್ರೀಕೃಷ್ಣನಿಗೆ ಸಮರ್ಪಿಸಬೇಕು.

೧೧೭. ಸಹಸ್ರ ಅಶ್ವಮೇಧಗಳಿಗೆ ಯಾವ ಫಲವೋ, ನೂರು ರಾಜಸೂಯಗಳಿಗೆ ಯಾವ ಫಲವೋ ಆ ಫಲವು ವನಭೋಜನದಿಂದ ಉಂಟಾಗುತ್ತದೆ.

೧೧೮. ಎಲೈ ಮಹಾಭಾಗಾ! ಆದುದರಿಂದ ಧಾತ್ರಿಯು ಪವಿತ್ರವೂ ಪಾಪನಾಶಕವೂ ಆಗಿರುವುದು. ಈ ಧಾತ್ರಿಯೇ ನರರಿಗೆ ಧಾತ್ರಿ (ದಾದಿ). ಧಾತ್ರಿಯಂತೆಯೆ ಕ್ರಿಯೆಗಳನ್ನು ಮಾಡುವುದು.

೧೧೯. ತನ್ನ ಪಯಃಪಾನದಿಂದ (ಹಾಲು ಕುಡಿಯುವುದರಿಂದ) ಆಯುಸ್ಸನ್ನು ನೀಡುತ್ತದೆ. ಸ್ನಾನದಿಂದ ಧರ್ಮಸಂಚಯವನ್ನೂ ಅಲಕ್ಷ್ಮೀನಾಶನವನ್ನೂ ಉಂಟುಮಾಡುತ್ತದೆ. ಸ್ನಾನ ಮಾತ್ರದಿಂದಲೇ ಮುಕ್ತಿಯನ್ನು ಪಡೆಯಲಾಗುವುದು. ಧಾತ್ರೀ ಸ್ನಾನದ ಮಹತ್ವದಿಂದ ನರರಿಗೆ ವಿಘ್ನಗಳು ಹುಟ್ಟುವುದೇ ಇಲ್ಲವು.

೧೨೦. ಎಲೈ ವಿಪ್ರೇಂದ್ರನೇ! ಆದುದರಿಂದ ಪ್ರಯತ್ನಪೂರ್ವಕವಾಗಿ ಧಾತ್ರೀ ಸ್ನಾನವನ್ನು ಮಾಡು. ಅದರಿಂದ ನೀನು ದೇವತ್ವವನ್ನು ಪಡೆದು ಹರಿಧಾಮಕ್ಕೆ ಹೋಗುವೆ.

೧೨೧. ತೀರ್ಥದಲ್ಲಿಯೇ ಆಗಲಿ, ಮನೆಯಲ್ಲೇ ಆಗಲಿ ಎಲ್ಲೆಲ್ಲಿ ಧಾತ್ರೀ ಸ್ನಾನವನ್ನು ಮಾಡಲಾಗುವುದೋ ಅಲ್ಲಲ್ಲಿ ಶ್ರೀ ಹರಿಯು ನೆಲಸಿರುತ್ತಾನೆ.

**ಧಾತ್ರೀಸ್ನಾನೇನ ವಿಪ್ರರ್ಷೇ ಯಸ್ಯಾಸ್ಥೀನಿ ಕಲೇವರೇ ।**
**ಪ್ರಕ್ಷಾಲ್ಯಂತೇ ಮುನಿಶ್ರೇಷ್ಠ ನ ಸ ಗರ್ಭಗೃಹಂ ವಸೇತ್ ॥ ೧೨೨ ॥**
**ಧಾತ್ರೀಜಲೇನ ವಿಪ್ರೇಂದ್ರ ಯೇಷಾಂ ಕೇಶಾಶ್ಚ ರಂಜಿತಾಃ ।**
**ತೇ ನರಾಃ ಕೇಶವಂ ಯಾಂತಿ ನಾಶಯಿತ್ವಾ ಕಲೇರ್ಮಲಂ ॥ ೧೨೩ ॥**
**ಧಾತ್ರೀಫಲಂ ಮಹಾಪುಣ್ಯಂ ಸ್ನಾನಂ ಪುಣ್ಯತಮಂ ಸ್ಮೃತಂ ।**
**ಪುಣ್ಯಾತ್ಪುಣ್ಯತರಂ ವತ್ಸ ಭಕ್ಷಣಂ ಮುನಿಸತ್ತಮ ॥ ೧೨೪ ॥**
**ನ ಗಂಗಾ ನ ಗಯಾ ಕಾಶೀ ನ ವೇಣೀ ನ ಚ ಪುಷ್ಕರಂ ।**
**ಏಕೈವ ಹಿ ಯಥಾ ಪುಣ್ಯಾ ಧಾತ್ರೀ ಮಾಧವವಾಸರೇ ॥ ೧೨೫ ॥**
**ಧಾತ್ರೀಸ್ನಾನಂ ಹರೇರ್ನಾಮ ತಥೈವೈಕಾದಶೀ ಸುತ ।**
**ಗಯಾಶ್ರಾದ್ಧಂ ತಥಾ ವತ್ಸ ಸಮಾನಿ ಮುನಯೋ ವಿದುಃ ॥ ೧೨೬ ॥**
**ಸಂಸ್ಪೃಶನ್ಯಸ್ತು ವೈ ಧಾತ್ರೀಂ ಅಹನ್ಯಹನಿ ಮಾನವಃ ।**
**ಮುಚ್ಯತೇ ಪಾತಕೈಸ್ಸರ್ವೈಃ ಮನೋವಾಕ್ಕಾಯಸಂಭವೈಃ ॥ ೧೨೭ ॥**

---

೧೨೨. ಎಲೈ ವಿಪ್ರರ್ಷಿಯೇ! ಧಾತ್ರೀ ಸ್ನಾನದಿಂದ ಯಾವನ ಕಲೇವರದ ಅಸ್ಥಿಗಳು ತೊಳೆಯಲ್ಪಡುವುವೋ ಅವನು ಮತ್ತೆ ಗರ್ಭಗೃಹವನ್ನು ಪ್ರವೇಶಿಸುವುದಿಲ್ಲವು.

೧೨೩. ವಿಪ್ರೇಂದ್ರಾ! ಧಾತ್ರೀಜಲದಿಂದ ಯಾರ ಕೇಶಗಳು ತೊಡೆಯಲ್ಪಡುವುವೋ ಆ ನರರು ಕಲಿಯ ಮಲವನ್ನು ನಾಶಮಾಡಿಕೊಂಡು ಕೇಶವನನ್ನು ಹೋಗಿ ಸೇರುವರು.

೧೨೪. ಧಾತ್ರೀ ಫಲವು ಮಹಾಪುಣ್ಯಕರವಾದುದು. ಸ್ನಾನವು ಪುಣ್ಯತಮವೆನ್ನಿಸಿಕೊಂಡಿದೆ. ವತ್ಸಾ! ಆ ಪುಣ್ಯಕ್ಕಿಂತಲೂ ಪುಣ್ಯತರವಾದದ್ದು ಧಾತ್ರೀಭಕ್ಷಣಮಾಡುವುದು.

೧೨೫. ಮಾಧವವಾಸರದಲ್ಲಿ ಧಾತ್ರಿಯೊಂದೇ ಪುಣ್ಯಕರವಾದುದು. ಗಂಗೆಯೂ ಅಷ್ಟು ಪುಣ್ಯಕರವಲ್ಲ; ಗಯೆಯೂ ಅಲ್ಲ; ಕಾಶಿಯೂ ಅಲ್ಲ; ತ್ರಿವೇಣಿಯೂ ಅಲ್ಲ; ಪುಷ್ಕರವೂ ಅಲ್ಲವು.

೧೨೬. ಧಾತ್ರೀ ಸ್ನಾನ, ಹರಿಯನಾಮ, ಏಕಾದಶೀ, ಗಯಾಶ್ರಾದ್ಧ— ಇವೆಲ್ಲ ಒಂದಕ್ಕೊಂದು ಸಮನಾದವುಗಳೆಂದು ಮುನಿಗಳು ತಿಳಿಯುತ್ತಾರೆ.

೧೨೭. ಯಾವ ಮಾನವನು ದಿನದಿನವೂ ಧಾತ್ರಿಯನ್ನು ಸ್ಪರ್ಶಿಸುತ್ತಿರುವನೋ ಅವನು ಮನೋವಾಕ್ಕಾಯಗಳಿಂದುಂಟಾದ ಎಲ್ಲ ಪಾತಕಗಳಿಂದಲೂ ಬಿಡುಗಡೆಹೊಂದುತ್ತಾನೆ.

ಧಾತ್ರೀಫಲೈರಮಾವಾಸ್ಯಾಸಪ್ತಮೀನವಮೀಷು ಚ ।
ರವಿವಾರೇ ಚ ಸಂಕ್ರಾಂತೌ ನ ಸ್ನಾಯಾನ್ಮುನಿಸತ್ತಮ ॥ ೧೨೮ ॥
ಯಸ್ಮಿನ್ಗೃಹೇ ಮುನಿವರ ಧಾತ್ರೀ ತಿಷ್ಠತಿ ಸರ್ವದಾ ।
ತಸ್ಮಿನ್ಗೃಹೇ ನ ಗಚ್ಛಂತಿ ಪ್ರೇತಕೂಷ್ಮಾಂಡರಾಕ್ಷಸಾಃ ॥ ೧೨೯ ॥
ಧಾತ್ರೀಫಲಕೃತಾಂ ಮಾಲಾಂ ಕಂಠಸ್ಥಾಂ ಯೋ ವಹೇನ್ನ ಹಿ ।
ಸ ವೈಷ್ಣವೋ ನ ವಿಜ್ಞೇಯೋ ವಿಷ್ಣೋರ್ಭಕ್ತಿಪರೋ ಯದಿ ॥ ೧೩೦ ॥
ನ ತ್ಯಾಜ್ಯಾ ತುಲಸೀಮಾಲಾ ಧಾತ್ರೀಮಾಲಾ ವಿಶೇಷತಃ ।
ತಥಾ ಪದ್ಮಾಕ್ಷಮಾಲಾಪಿ ಧರ್ಮಕಾಮಾರ್ಥಮೀಪ್ಸುಭಿಃ ॥ ೧೩೧ ॥
ಯಾವದ್ದಿನಾನಿ ವಹತೇ ಧಾತ್ರೀಮಾಲಾಂ ಕಲೌ ನರಃ ।
ತಾವದ್ಯುಗಸಹಸ್ರಾಣಿ ವೈಕುಂಠೇ ವಸತಿರ್ಭವೇತ್ ॥ ೧೩೨ ॥
ಸರ್ವದೇವಮಯೀ ಧಾತ್ರೀ ವಾಸುದೇವಮನಃಪ್ರಿಯಾ ।
ಆರೋಪಣೀಯಾ ಸೇವ್ಯಾ ಚ ಪೂಜನೀಯಾ ಸದಾ ನರೈಃ ॥ ೧೩೩ ॥

---

೧೨೮. ಎಲೈ ಮುನಿಶ್ರೇಷ್ಠನೇ! ಅಮಾವಾಸ್ಯೆ, ಸಪ್ತಮಿ, ನವಮಿ, ಭಾನುವಾರ, ಸಂಕ್ರಾಂತಿ— ಈ ದಿನಗಳಲ್ಲಿ ಧಾತ್ರೀ ಫಲಗಳಿಂದ ಸ್ನಾನ ಮಾಡಬಾರದು.

೧೨೯. ಮುನಿವರಾ ! ಯಾವ ಮನೆಯಲ್ಲಿ ಸರ್ವದಾ ಧಾತ್ರಿಯಿರುವುದೋ, ಆ ಮನೆಯನ್ನು ಪ್ರೇತ, ಕೂಷ್ಮಾಂಡ ಮತ್ತು ರಾಕ್ಷಸರು ಪ್ರವೇಶಮಾಡುವುದಿಲ್ಲವು.

೧೩೦. ಯಾವನು ಧಾತ್ರೀ ಫಲದಿಂದ ಮಾಡಿದ ಮಾಲೆಯನ್ನು ಕಂಠದಲ್ಲಿ ಧರಿಸಿರುವುದಿಲ್ಲವೋ ಅವನು ವಿಷ್ಣುವಿನಲ್ಲಿ ಭಕ್ತಿಪರನೇ ಆಗಿದ್ದರೂ ಅವನನ್ನು ವೈಷ್ಣವನೆಂದು ಗಣಿಸತಕ್ಕುದಲ್ಲವು.

೧೩೧. ಧರ್ಮ, ಅರ್ಥ, ಕಾಮ— ಇವನ್ನು ಬಯಸುವವರು ತುಲಸೀ ಮಾಲೆಯನ್ನು ತ್ಯಜಿಸತಕ್ಕುದಲ್ಲವು. ವಿಶೇಷವಾಗಿ ಧಾತ್ರೀ ಮಾಲೆಯನ್ನೂ, ಹಾಗೆಯೇ ಅಕ್ಷಮಾಲೆಯನ್ನೂ ತ್ಯಜಿಸತಕ್ಕುದಲ್ಲ.

೧೩೨. ನರನು ಕಲಿಯುಗದಲ್ಲಿ ಎಷ್ಟು ದಿನಗಳವರೆಗೆ ಧಾತ್ರೀಮಾಲೆಯನ್ನು ಧರಿಸಿರುವನೋ ಅಷ್ಟು ಸಹಸ್ರಯುಗಗಳವರೆಗೆ ವೈಕುಂಠದಲ್ಲಿ ಅವನಿಗೆ ವಸತಿಯುಂಟಾಗುತ್ತದೆ.

೧೩೩. ಧಾತ್ರಿಯು ಸರ್ವದೇವಮಯಿಯು; ವಾಸುದೇವನಿಗೆ ಮನಃಪ್ರಿಯೆಯು. ಆದುದರಿಂದ ನರರು ಸದಾಕಾಲವೂ ಧಾತ್ರಿಯನ್ನು ನೆಡಬೇಕು, ಸೇವಿಸಬೇಕು ಮತ್ತು ಪೂಜಿಸಬೇಕು.

**ಏತತ್ತೇ ಸರ್ವಮಾಖ್ಯಾತಂ ಧಾತ್ರೀಮಾಹಾತ್ಮ್ಯಮುತ್ತಮಂ ।**
**ಶ್ರೋತವ್ಯಂ ಚ ಸದಾ ಭಕ್ತೈಶ್ಚತುರ್ವರ್ಗಫಲಪ್ರದಂ ॥ ೧೩೪ ॥**
**ಧಾತ್ರೀಛಾಯಾಂ ಸಮಾಶ್ರಿತ್ಯ ಕಾರ್ತಿಕೇಽನ್ನಂ ಭುನಕ್ತಿ ಯಃ ।**
**ಅನ್ನಸಂಸರ್ಗಜಂ ಪಾಪಮಾವರ್ಷಂ ತಸ್ಯ ನಶ್ಯತಿ ॥ ೧೩೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಧಾತ್ರೀಮಾಹಾತ್ಮ್ಯ ವರ್ಣನಂ"ನಾಮ ದ್ವಾದಶೋಽಧ್ಯಾಯಃ**

---

೧೩೪. ಉತ್ತಮವಾದ ಈ ಧಾತ್ರೀಮಾಹಾತ್ಮ್ಯವನ್ನು ನಿನಗೆ ಹೇಳಿರುತ್ತೇನೆ. ಚತುರ್ವರ್ಗ ಫಲಗಳನ್ನೂ ಕೊಡುವ ಈ ಮಾಹಾತ್ಮ್ಯವನ್ನು ಭಕ್ತರು ಸದಾ ಕೇಳುತ್ತಿರಬೇಕು.

೧೩೫. ಯಾವನು ಧಾತ್ರೀಚ್ಛಾಯೆಯನ್ನಾಶ್ರಯಿಸಿ ಕಾರ್ತಿಕಮಾಸದಲ್ಲಿ ಅನ್ನವನ್ನು ತಿನ್ನುತ್ತಾನೆಯೋ ಅವನಿಗೆ ವರ್ಷವೆಲ್ಲ ಅನ್ನಸಂಸರ್ಗದಿಂದುಂಟಾದ ಪಾಪವು ನಾಶವಾಗುತ್ತದೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಧಾತ್ರೀಮಾಹಾತ್ಮ್ಯವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

### ಸತ್ಯಭಾಮಾಪೂರ್ವಜನ್ಮವೃತ್ತಾಂತಕಥನಪೂರ್ವಕ ಪ್ರಯಾಗತೀರ್ಥಪ್ರಶಂಸಾವರ್ಣನಂ

ಸೂತ ಉವಾಚ :—

ಶ್ರಿಯಃ ಪತಿಮಥಾಮಂತ್ರ್ಯ ಗತೇ ದೇವರ್ಷಿಸತ್ತಮೇ ।
ಹರ್ಷೋತ್ಫುಲ್ಲಾನನಾತ್ಸತ್ಯಾ ವಾಸುದೇವಮಥಾಬ್ರವೀತ್ ॥ ೧ ॥

ಸತ್ಯಭಾಮೋವಾಚ :—

ಧನ್ಯಾಸ್ಮಿ ಕೃತಕೃತ್ಯಾಸ್ಮಿ ಸಫಲಂ ಜೀವಿತಂ ಮಮ ।
ದಾನಂ ವ್ರತಂ ತಪೋ ವಾಪಿ ಕಿಂ ನು ಪೂರ್ವಂ ಕೃತಂ ಮಯಾ ॥ ೨ ॥
ಯೇನಾಽಹಂ ಮರ್ತ್ಯಜಾ ದೇವ ತವಾಂಗಾರ್ಧಹರಾಽಭವಂ ।
ಭವಾಂತರೇ ಚ ಕಿಂಶೀಲಾ ಕಾ ಚಾಹಂ ಕಸ್ಯ ಕನ್ಯಕಾ ।
ತವಾಽಹಂ ವಲ್ಲಭಾ ಜಾತಾ ತದ್ವದಸ್ವ ಮಮಾಖಿಲಂ ॥ ೩ ॥

ಶ್ರೀ ಕೃಷ್ಣ ಉವಾಚ :—

ಶೃಣುಷ್ವೈಕಮನಾಃ ಕಾಂತೇ ಯಥಾ ತ್ವಂ ಪೂರ್ವಜನ್ಮನಿ ॥ ೪ ॥
ಪುಣ್ಯವ್ರತಂ ಕೃತವತೀ ತತ್ಸರ್ವಂ ಕಥಯಾಮಿ ತೇ ।
ಆಸೀತ್ಕೃತಯುಗಸ್ಯಾಂತೇ ಮಾಯಾಪೂರ್ಯಾಂ ದ್ವಿಜೋತ್ತಮಃ ॥ ೫ ॥

---

## ಕನ್ನಡದ ಅನುವಾದ

### ಸತ್ಯಭಾಮೆಯ ಪೂರ್ವಜನ್ಮಕಥನಪೂರ್ವಕ—ಪ್ರಯಾಗತೀರ್ಥಪ್ರಶಂಸಾವರ್ಣನ

೧. ಸೂತಪೌರಾಣಿಕನು, "ಎಲೈ ಮುನಿಗಳಿರಾ! ಒಮ್ಮೆ ದೇವರ್ಷಿಶ್ರೇಷ್ಠನಾದ ನಾರದನು ಶ್ರೀಪತಿಯನ್ನು ಕಂಡು ಹೊರಟುಹೋದ ಬಳಿಕ ಸತ್ಯಭಾಮೆಯು ಹರ್ಷದಿಂದರಳಿದ ಮುಖವುಳ್ಳವಳಾಗಿ ಆ ವಾಸುದೇವನನ್ನು ಕುರಿತು ಹೀಗೆ ಹೇಳಿದಳು."

೨-೩. ಸತ್ಯಭಾಮೆಯು ಹೇಳುತ್ತಾಳೆ; "ದೇವಾ! ಮರ್ತ್ಯನ ಮಗಳಾಗಿ ಹುಟ್ಟಿದವಳಾದರೂ ನಿನ್ನ ಅರ್ಧಾಂಗಿಯಾಗಿರುವುದರಿಂದ ನಾನು ಧನ್ಯಳಾದೆನು; ಕೃತಕೃತ್ಯಳಾದೆನು; ನನ್ನ ಜೀವಿತವು ಸಫಲವಾಯಿತು. ಇದಕ್ಕೆ ನಾನು ಪೂರ್ವದಲ್ಲಿ ಯಾವ ದಾನ, ವ್ರತ, ತಪಸ್ಸುಗಳನ್ನು ಮಾಡಿದ್ದೆನೋ! ನಾನು ಹಿಂದಿನ ಜನ್ಮದಲ್ಲಿ ಯಾವರೀತಿಯ ಶೀಲವುಳ್ಳವಳಾಗಿದ್ದೆನೊ? ಯಾರಾಗಿದ್ದೆನೊ? ಯಾರ ಮಗಳಾಗಿದ್ದೆನೊ? ನಿನಗೆ ನಾನು ಮೆಚ್ಚಿನ ಮಡದಿಯಾದುದರಿಂದ ನೀನು ಅದನ್ನೆಲ್ಲವನ್ನೂ ಪೂರ್ತಿಯಾಗಿ ನನಗೆ ತಿಳಿಸಬೇಕು" ಎಂದು ಕೇಳಿಕೊಂಡಳು.

೪-೬. ಶ್ರೀಕೃಷ್ಣನು ಹೇಳುತ್ತಾನೆ:—"ಕಾಂತೇ! ಒಮ್ಮನದಿಂದ ಕೇಳು. ನೀನು ಪೂರ್ವಜನ್ಮದಲ್ಲಿ ಯಾವರೀತಿ ಪುಣ್ಯವ್ರತವನ್ನು ಮಾಡಿದೆಯೋ

ಆತ್ರೇಯೋ ದೇವಶರ್ಮೇತಿ ವೇದವೇದಾಂಗಪಾರಗಃ ।
ತಸ್ಯಾತಿವಯಸಶ್ಚಾಸೀತ್ ನಾಮ್ನಾ ಗುಣವತೀ ಸುತಾ ॥ ೬ ॥
ಅಪುತ್ರಃ ಸ ಸ್ವಶಿಷ್ಯಾಯ ಚಂದ್ರನಾಮ್ನೇ ದದೌ ಸುತಾಂ ।
ತಮೇವ ಪುತ್ರವನ್ಮೇನೇ ಸ ಚ ತಂ ಪಿತೃವದ್ವಶೀ ॥ ೭ ॥
ತೌ ಕದಾಚಿದ್ವನಂ ಯಾತೌ ಕುಶೇಧ್ಮಾಹರಣಾರ್ಥಿನೌ ।
ನಿಹತೌ ರಕ್ಷಸಾ ತೌ ಚ ಕೃತಾಂತಸಮರೂಪಿಣಾ ॥ ೮ ॥
ಸ್ವಸ್ವಪುಣ್ಯಪ್ರಭಾವೇನ ವಿಷ್ಣುಲೋಕಂ ಗತಾವುಭೌ ।
ತತೋ ಗುಣವತೀ ಶ್ರುತ್ವಾ ರಕ್ಷಸಾ ನಿಹತಾವುಭೌ ॥ ೯ ॥
ಪಿತೃಭರ್ತೃಜದುಃಖಾರ್ತಾ ಕಾರುಣ್ಯಂ ಪರ್ಯದೇವಯತ್ ।
ಸಾ ಗೃಹೋಪಸ್ಕರಾನ್ ಸರ್ವಾನ್ ವಿಕ್ರೀಯಾಶು ಚ ಕರ್ಮ ತತ್ ॥
ತಯೋಶ್ಚಕ್ರೇ ಯಥಾಶಕ್ತಿ ಪಾರಲೌಕೀಂ ತತಃ ಕ್ರಿಯಾಂ ।
ತಸ್ಮಿನ್ನೇವ ಪುರೇ ಚಕ್ರೇ ವಾಸಂ ಸಾ ವೃತಜೀವಿನೀ ॥ ೧೧ ॥
ವ್ರತದ್ವಯಂ ತಯಾ ಸಮ್ಯಗಾಜನ್ಮಮರಣಾತ್ಕೃತಂ ।
ಏಕಾದಶೀವ್ರತಂ ಸಮ್ಯಕ್ ಸೇವನಂ ಕಾರ್ತಿಕಸ್ಯ ಚ ॥ ೧೨ ॥

---

ಅದೆಲ್ಲವನ್ನೂ ನಿನಗೆ ಹೇಳುತ್ತೇನೆ. ಕೃತಯುಗದ ಅಂತ್ಯಭಾಗದಲ್ಲಿ ಮಾಯಾಪುರಿಯಲ್ಲಿ ಆತ್ರೇಯಗೋತ್ರದವನಾದ ದೇವಶರ್ಮನೆಂಬ ಬ್ರಾಹ್ಮಣನೋರ್ವನಿದ್ದನು. ಅವನು ವೇದ ವೇದಾಂಗ ಪಾರಂಗತನಾಗಿದ್ದನು. ಕೇವಲ ವೃದ್ಧನಾಗಿದ್ದ ಆತನಿಗೆ ನೀನು ಗುಣವತಿಯೆಂಬ ಹೆಸರಿನ ಮಗಳಾಗಿದ್ದೆ.

೭. ಅಪುತ್ರನಾದ ಆ ಬ್ರಾಹ್ಮಣನು ಚಂದ್ರನೆಂಬ ತನ್ನ ಶಿಷ್ಯನಿಗೆ ಮಗಳಾದ ನಿನ್ನನ್ನು ಮದುವೆಮಾಡಿಕೊಟ್ಟು, ಆ ಶಿಷ್ಯನನ್ನೇ ತನ್ನ ಮಗನಂತೆ ಭಾವಿಸಿದನು. ಅವನು ಕೂಡ ಆ ಬ್ರಾಹ್ಮಣನನ್ನು ತಂದೆಯಂತೆಯೇ ಭಾವಿಸಿದ್ದನು.

೮. ಅವರಿಬ್ಬರೂ ಒಂದಾನೊಂದು ದಿನ ಕುಶ ಸಮಿತ್ತುಗಳನ್ನು ತರುವುದಕ್ಕಾಗಿ ಕಾಡಿಗೆ ಹೋದರು. ಆಗ ಅಲ್ಲಿ ಯಮಸಮಾನವಾದ ರೂಪವುಳ್ಳ ರಾಕ್ಷಸನೊಬ್ಬನಿಂದ ಅವರಿಬ್ಬರೂ ಹತರಾದರು.

೯-೧೧. ತಮ್ಮ ತಮ್ಮ ಪುಣ್ಯಪ್ರಭಾವದಿಂದ ಅವರಿಬ್ಬರೂ ವಿಷ್ಣುಲೋಕಕ್ಕೆ ಹೋದರು. ಬಳಿಕ ಗುಣವತಿಯು ರಾಕ್ಷಸನಿಂದ ತನ್ನ ತಂದೆ, ಗಂಡ ಇಬ್ಬರೂ ಹತರಾದರೆಂಬುದನ್ನು ಕೇಳಿ ದುಃಖಾರ್ತಳಾಗಿ ಕೇಳಿದವರಿಗೆ ಕರುಣೆಯುಂಟಾಗುವಂತೆ ಗೋಳಾಡಿದಳು. ಅವಳು ಮನೆಯ ಉಪಕರಣಗಳನ್ನೆಲ್ಲ ಮಾರಿ ಅವರಿಬ್ಬರಿಗೂ ಯಥಾಶಕ್ತಿಯಾಗಿ ಪರಲೋಕಸಾಧಕಗಳಾದ ಕರ್ಮಗಳನ್ನು ಮಾಡಿದಳು. ಬಳಿಕ ಜೀವಚ್ಛವ ಸದೃಶಳಾಗಿ ಅದೇ ಪಟ್ಟಣದಲ್ಲಿಯೇ ವಾಸಮಾಡುತ್ತಿದ್ದಳು.

೧೨. ಹುಟ್ಟಿದಂದಿನಿಂದ ಸಾಯುವವರೆಗೂ ಅವಳು ಎರಡು ವ್ರತಗಳನ್ನು

ಇತ್ಥಂ ಗುಣವತೀ ಸಮ್ಯಕ್ ಪ್ರತ್ಯಬ್ದಂ ವ್ರತಿನೀ ಹ್ಯಭೂತ್ ।
ಕದಾಚಿತ್ಸರುಜಾ ಸಾಽಥ ಕೃಶಾಂಗೀ ಜ್ವರಪೀಡಿತಾ ॥ ೧೩ ॥
ಸ್ನಾತುಂ ಗಂಗಾಂ ಗತಾ ಕಾಂತೇ ಕಥಂಚಿಚ್ಛನಕೈಸ್ತ್ರಥಾ ।
ಯಾವಜ್ಜಲಾಂತರಗತಾ ಕಂಪಿತಾ ಶೀತಪೀಡಿತಾ ॥ ೧೪ ॥
ತಾವತ್ಸಾ ವಿಹ್ವಲಾಽಪಶ್ಯತ್ ವಿಮಾನಂ ಯಾತಮಂಬರಾತ್ ।
ಅಥ ಸಾ ತದ್ವಿಮಾನಸ್ಥಾ ವೈಕುಂಠಭವನಂ ಯಯೌ ॥ ೧೫ ॥
ಕಾರ್ತಿಕವ್ರತಪುಣ್ಯೇನ ಮತ್ಸಾನ್ನಿಧ್ಯಂ ಗತಾಽಭವತ್ ।
ಅಥ ಬ್ರಹ್ಮಾದಿದೇವಾನಾಂ ಯದಾ ಪ್ರಾರ್ಥನಯಾ ಭುವಂ ॥ ೧೬ ॥
ಆಗತೋಽಹಂ ಗಣಾಸ್ಸರ್ವೇ ಯಾತಾಸ್ತೇಽಪಿ ಮಯಾ ಸಹ ।
ಏತೇ ಹಿ ಯಾದವಾಸ್ಸರ್ವೇ ಮದ್ಗಣಾ ಏವ ಭಾಮಿನಿ ॥ ೧೭ ॥
ಪಿತಾ ತೇ ದೇವಶರ್ಮಾಽಭೂತ್ ಸತ್ರಾಜಿದಭಿಧೋ ಹ್ಯಯಂ ।
ಯಶ್ಚಂದ್ರನಾಮಾ ಸೋಽಕ್ರೂರಃ ತ್ವಂ ಸಾ ಗುಣವತೀ ಶುಭಾ ॥ ೧೮ ॥
ಕಾರ್ತಿಕವ್ರತಪುಣ್ಯೇನ ಬಹುಮತ್ಪ್ರೀತಿದಾಯಿನೀ ।
ಮದ್ದ್ವಾರಿ ಯತ್ತ್ವಯಾ ಪೂರ್ವಂ ತುಲಸೀವಾಟಿಕಾ ಕೃತಾ ॥ ೧೯ ॥

---

ಚೆನ್ನಾಗಿ ಮಾಡುತ್ತಿದ್ದಳು. ಒಂದು ಏಕಾದಶೀವ್ರತ; ಮತ್ತೊಂದು ಕಾರ್ತಿಕ ವ್ರತ.

೧೩–೧೫. ಗುಣವತಿಯು ಈ ರೀತಿಯಲ್ಲಿ ಪ್ರತಿವರ್ಷವೂ ಈ ಎರಡು ವ್ರತಗಳನ್ನೂ ಬಹು ಚೆನ್ನಾಗಿ ಮಾಡುತ್ತಿದ್ದಳು. ಒಂದಾನೊಂದು ಸಲ ಅವಳು ಜ್ವರಪೀಡಿತಳಾಗಿ ಕೃಶಳಾದಳು. ಅವಳು ಸ್ನಾನಮಾಡುವುದಕ್ಕಾಗಿ ಹೇಗೆ ಹೇಗೆಯೊ ಕಷ್ಟಪಟ್ಟುಕೊಂಡು ಮೆಲ್ಲ ಮೆಲ್ಲನೆ ಗಂಗೆಗೆ ಹೋದಳು. ನೀರಿನೊಳಗೆ ಇಳಿದಕೂಡಲೆ ಶೀತಪೀಡಿತಳಾಗಿ ಗಡಗಡನೆ ನಡುಗಿದಳು; ಭಯವಿಹ್ವಲಳಾದಳು. ಆ ಕ್ಷಣವೇ ಆಕಾಶದಿಂದಿಳಿದು ಬಂದ ವಿಮಾನವನ್ನೂ ಕಂಡಳು. ಬಳಿಕ ಆ ವಿಮಾನದಲ್ಲಿ ಕುಳಿತು ಅವಳು ವೈಕುಂಠಲೋಕಕ್ಕೆ ಹೋದಳು.

೧೬–೧೭. ಎಲೌ ಸತ್ಯಭಾಮೇ! ಬಳಿಕ ಆಕೆಯು ಕಾರ್ತಿಕವ್ರತದ ಪುಣ್ಯದಿಂದ ನನ್ನ ಸಾನ್ನಿಧ್ಯವನ್ನು ಸೇರಿದಳು. ಬಳಿಕ ಬ್ರಹ್ಮಾದಿದೇವತೆಗಳ ಪ್ರಾರ್ಥನೆಯಿಂದ ನಾನು ಭೂಮಿಗೆ ಬಂದಾಗ ನನ್ನ ಗಣಗಳೆಲ್ಲರೂ ನನ್ನೊಡನೆಯೇ ಬಂದರು. ಈ ಯಾದವರೆಲ್ಲರೂ ನನ್ನ ಗಣಗಳೇ ಸರಿ.

೧೮. ನಿನ್ನ ತಂದೆಯಾಗಿದ್ದ ದೇವಶರ್ಮನು ಈ ಸತ್ರಾಜಿತರಾಜನು. ಚಂದ್ರನೆಂಬುವನೇ ಅಕ್ರೂರನು. ಶುಭವತಿಯಾದ ಆ ಗುಣವತಿಯೇ ನೀನು.

೧೯–೨೩. ಕಾರ್ತಿಕ ವ್ರತಪುಣ್ಯದಿಂದ ನೀನು ನನಗೆ ಬಹಳ ಪ್ರೀತಿದಾಯಿನಿಯಾಗಿದ್ದೀಯೆ. ಎಲೆ ಶುಭಕರಿ, ಪೂರ್ವದಲ್ಲಿ ನೀನು ನನ್ನ ಬಾಗಿಲಿನ

ತಸ್ಮಾದಯಂ ಕಲ್ಪವೃಕ್ಷಸ್ತ್ವಾಂಗಣಗತಶ್ಶುಭೇ ।
ಆಜನ್ಮಮರಣಾತ್ಪೂರ್ವಂ ಯತ್ಕೃತಂ ಕಾರ್ತಿಕವ್ರತಂ ॥ ೨೦ ॥
ಕದಾಚಿದಪಿ ತೇನ ತ್ವಂ ಮದ್ವಿಯೋಗಂ ನ ಯಾಸ್ಯಸಿ ।

ಸತ್ಯೋವಾಚ :—

ಮಾಸಾನಾಂ ತು ಕಥಂ ನಾಮ ಸ ಮಾಸಃ ಕಾರ್ತಿಕೋ ವರಃ ॥ ೨೧ ॥
ಪ್ರಿಯಸ್ತೇ ದೇವದೇವೇಶ ಕಾರಣಂ ತತ್ರ ಕಥ್ಯತಾಂ ।

ಶ್ರೀ ಕೃಷ್ಣ ಉವಾಚ :—

ಸಾಧು ಪೃಷ್ಟಂ ತ್ವಯಾ ಕಾಂತೇ ಶೃಣುಷ್ವೈಕಾಗ್ರಮಾನಸಾ ॥ ೨೨ ॥
ಪೃಥೋರ್ವೈನ್ಯಸ್ಯ ಸಂವಾದಂ ಮಹರ್ಷೇರ್ನಾರದಸ್ಯ ಚ ।
ಏವಮೇವ ಪುರಾ ಪೃಷ್ಟೋ ನಾರದಃ ಪೃಥುನಾಽಬ್ರವೀತ್ ॥ ೨೩ ॥

ನಾರದ ಉವಾಚ :—

ಶಂಖನಾಮಾಽಭವತ್ಪೂರ್ವಂ ಅಸುರಸ್ಸಾಗರಾತ್ಮಜಃ ।
ಇಂದ್ರಾದಿಲೋಕಪಾಲಾನಾಂ ಅಧಿಕಾರಾನ್ ಜಹಾರ ಹ ॥ ೨೪ ॥
ಸುವರ್ಣಾದ್ರಿಗುಹಾದುರ್ಗಸಂಸ್ಥಿತಾ ತ್ರಿದಶಾದಯಃ ।
ತದ್ವೀಕ್ಷ್ಯಯಾಂಬಭೂವುಸ್ತೇ ತದಾ ದೈತ್ಯೋ ವ್ಯಚಿಂತಯತ್ ॥ ೨೫ ॥

---

ಮುಂದೆ ತುಲಸಿಯ ತೋಟವನ್ನು ಬೆಳಸಿದ್ದರಿಂದ ಈಗ ಈ ಕಲ್ಪವೃಕ್ಷವು ನಿನ್ನ ಅಂಗಳಕ್ಕೆ ಬಂದಿರುವುದು. ನೀನು ಆಜನ್ಮಮರಣಪರ್ಯಂತವಾಗಿ ಕಾರ್ತಿಕ ವ್ರತವನ್ನು ಮಾಡಿದ್ದರಿಂದ ಆ ಪುಣ್ಯದಫಲವಾಗಿ ನಿನಗೆ ಎಂದಿಗೂ ನನ್ನ ವಿಯೋಗ ವುಂಟಾಗುವುದಿಲ್ಲವು. ಸತ್ಯಭಾಮೆಯು ಹೇಳುತ್ತಾಳೆ.—"ಕಾಂತ!! ಮಾಸ ಗಳಲ್ಲೆಲ್ಲಾ ಕಾರ್ತಿಕಮಾಸವೇ ಹೇಗೆ ಶ್ರೇಷ್ಠವಾಯಿತು? ಅದು ಹೇಗೆ ನಿನಗೆ ಪ್ರಿಯವಾಯಿತು? ದೇವದೇವೇಶ! ಅದರ ಕಾರಣವನ್ನು ಹೇಳಬೇಕು." ಶ್ರೀ ಕೃಷ್ಣನು ಹೇಳುತ್ತಾನೆ:—ನೀನು ಚೆನ್ನಾಗಿ ಕೇಳಿದೆ. ವೇನಪುತ್ರನಾದ ಪೃಥುವಿಗೂ, ನಾರದಮಹರ್ಷಿಗೂ ನಡೆದ ಸಂವಾದವನ್ನು ಏಕಾಗ್ರವಾದ ಮನ ಸ್ಸುಳ್ಳವಳಾಗಿ ಆಲಿಸು. ಇದೇ ರೀತಿ ಪೃಥುವಿನಿಂದ ಪ್ರಶ್ನಿಸಲ್ಪಟ್ಟ ನಾರದನು ಅವನಿಗೆ ಈ ವೃತ್ತಾಂತವನ್ನು ತಿಳಿಸಿದನು.

೨೪. ನಾರದನು ಹೇಳುತ್ತಾನೆ.— ಪೂರ್ವದಲ್ಲಿ ಸಾಗರಾತ್ಮಜನಾದ ಶಂಖ ನೆಂಬೊಬ್ಬ ಅಸುರನಿದ್ದನು. ಅವನು ಇಂದ್ರನೇ ಮೊದಲಾದ ಲೋಕಪಾಲಕರ ಅಧಿಕಾರವನ್ನೆಲ್ಲ ಕಸಿದುಕೊಂಡನು.

೨೫. ದೇವತೆಗಳು ಸ್ವರ್ಗವನ್ನು ತೊರೆದು ಸುವರ್ಣಾದ್ರಿಯ ಗುಹೆಗಳಿಗೆ ಬಂದು ನೆಲಸಿದರು. ಹಾಗೆ ನೆಲಸಿರಲು ಒಮ್ಮೆ ಅವರು ಶಂಖರಾಕ್ಷಸನ ಕಣ್ಣಿಗೆ ಬಿದ್ದರು. ಆಗಲಾ ದೈತ್ಯನು ಹೀಗೆ ಆಲೋಚಿಸಿದನು.

**ಹೃತಾಧಿಕಾರಾಸ್ತ್ರಿದಶಾ ಮಯಾ ಯದ್ಯಪಿ ನಿರ್ಜಿತಾಃ ।**
**ಲಕ್ಷ್ಯಂತೇ ಬಲಯುಕ್ತಾಸ್ತೇ ಕರಣೀಯಂ ಮಯಾತ್ರ ಕಿಂ ॥ ೨೬ ॥**
**ಜ್ಞಾತಂ ತತ್ತು ಮಯಾ ದೇವಾಃ ವೇದಮಂತ್ರಬಲಾನ್ವಿತಾಃ ।**
**ತಾನ್ ಹರಿಷ್ಯೇ ತತಃ ಸರ್ವೇ ಬಲಹೀನಾ ಭವಂತಿ ವೈ ॥ ೨೭ ॥**
**ಇತಿ ಮತ್ವಾ ತತೋ ದೈತ್ಯೋ ವಿಷ್ಣುಮಾಲಕ್ಷ್ಯ ನಿದ್ರಿತಂ ।**
**ಸತ್ಯಲೋಕಾತ್ ಜಹಾರಾಶು ವೇದಾನಾದಿಸ್ವಯಂಭುವಃ ॥ ೨೮ ॥**
**ನೀತಾಸ್ತು ತೇನ ತೇ ವೇದಾಃ ತದ್ಭಯಾತ್ತೇ ನಿರಾಕ್ರಮನ್ ।**
**ತೋಯಾನಿ ವಿವಿಶುರ್ಯಜ್ಞಮಂತ್ರಬೀಜಸಮನ್ವಿತಾಃ ॥ ೨೯ ॥**
**ತಾನ್ ಮಾರ್ಗಮಾಣಃ ಶಂಖೋಽಪಿ ಸಮುದ್ರಾಂತರ್ಗತೋ ಭ್ರಮನ್**
**ನ ದದರ್ಶ ತದಾ ದೈತ್ಯಃ ಕ್ವಚಿದೇಕತ್ರ ಸಂಸ್ಥಿತಾನ್ ।**
**ಅಥ ದೇವೈಃ ಸ್ತುತೋ ವಿಷ್ಣುರ್ಬೋಧಿತಸ್ತಾನುವಾಚ ಹ ॥ ೩೦ ॥**

**ವಿಷ್ಣುರುವಾಚ :—**

**ವರದೋಽಹಂ ಸುರಗಣಾ ಗೀತವಾದ್ಯಾದಿಮಂಗಲೈಃ ॥ ೩೧ ॥**

---

೨೬. "ದೇವತೆಗಳ ಅಧಿಕಾರವನ್ನು ಕಸಿದುಕೊಂಡಿದ್ದೇನೆ. ನನಗೆ ಅವರು ಸೋತು ಹೋಗಿದ್ದಾರೆಂಬುದೂ ನಿಜ. ಆದರೂ ಅವರು ಬಲಿಷ್ಠರಾಗಿಯೆ ತೋರುತ್ತಿದ್ದಾರೆ. ಇದಕ್ಕೆ ನಾನೇನು ಮಾಡಲಿ?

೨೭. ಅವರ ಬಲಕಾರಣವು ನನಗೆ ತಿಳಿಯಿತು. ದೇವತೆಗಳು ವೇದ ಮಂತ್ರಗಳ ಬಲದಿಂದ ಕೂಡಿದವರು. ಆ ವೇದ ಮಂತ್ರಗಳನ್ನು ಹರಣ ಮಾಡುವೆನು. ಆಗ ಅವರೆಲ್ಲರೂ ಬಲಹೀನರಾಗಿಯೇತೀರುವರು.

೨೮. ಹೀಗೆಂದು ಭಾವಿಸಿ ಆ ದೈತ್ಯನು ವಿಷ್ಣುವು ನಿದ್ರೆಮಾಡುತ್ತಿರುವುದನ್ನು ಕಂಡು ಆದಿಸ್ವಯಂಭುವನ ಬಳಿಯಿದ್ದ ವೇದಗಳನ್ನು ಸತ್ಯಲೋಕದಿಂದ ಬಹುಬೇಗನೆ ಸೆಳೆದು ತಂದನು.

೨೯. ಅವನಿಂದ ತರಲ್ಪಟ್ಟ ಆ ವೇದಗಳಾದರೊ ಅವನ ಭಯದಿಂದ ಹೊರ ಹೊರಟು ಯಜ್ಞದ ಬೀಜದ ಮಂತ್ರಗಳಿಂದೊಡಗೂಡಿ ನೀರನ್ನು ಪ್ರವೇಶಿಸಿದವು.

೩೦. ಅವನ್ನು ಹುಡುಕುತ್ತಾ ಶಂಖನುಕೂಡ ಸಮುದ್ರದೊಳಹೊಕ್ಕನು. ಅವನು ಎಲ್ಲೆಲ್ಲಿ ಸುತ್ತಿದರೂ ಒಂದುಕಡೆ ಒಂದುಗೂಡಿ ನೆಲಸಿದ್ದ ವೇದಗಳನ್ನು ಕಾಣಲೇ ಇಲ್ಲವು. ಆ ಅನಂತರದಲ್ಲಿ ದೇವತೆಗಳು ವಿಷ್ಣುವನ್ನು ಸ್ತುತಿಸಿ ಎಚ್ಚರಿಸಿದರು. ಎಚ್ಚರಗೊಂಡ ವಿಷ್ಣುವು ಅವರನ್ನು ಕುರಿತು ಹೇಳಿದನು.

೩೧. ವಿಷ್ಣುವು ಹೇಳುತ್ತಾನೆ.—"ಎಲೈ ಸುರಗಣಗಳೇ! ಗೀತವಾದ್ಯಾದಿ ಮಂಗಳಗಳಿಂದ ನೀವೆಸಗಿದ ಸ್ತುತಿಯಿಂದ ನಾನು ನಿಮಗೆ ವರದನಾಗಿದ್ದೇನೆ.

ಊರ್ಜಸ್ಯ ಶುಕ್ಲೈಕಾದಶ್ಯಾಂ ಭವದ್ಭಿಃ ಪ್ರತಿಬೋಧಿತಃ ।
ಅತಶ್ಚೈಷಾ ತಿಥಿರ್ಮಾನ್ಯಾ ಸಾತೀವ ಪ್ರೀತಿದಾ ಮಮ ॥ ೩೨ ॥
ವೇದಾಶ್ಶಂಖಹೃತಾಸ್ಸರ್ವೇ ತಿಷ್ಠಂತ್ಯುದಕಸಂಸ್ಥಿತಾಃ ।
ತಾನಾನಯಾಮ್ಯಹಂ ದೇವಾ ಹತ್ವಾ ಸಾಗರನಂದನಂ ॥ ೩೩ ॥
ಅದ್ಯಪ್ರಭೃತಿ ವೇದಾಸ್ತು ಮಂತ್ರಬೀಜಸಮನ್ವಿತಾಃ ।
ಪ್ರತ್ಯಬ್ದಂ ಕಾರ್ತಿಕೇ ಮಾಸಿ ವಿಶ್ರಮಂತ್ವಪ್ಸು ಸರ್ವದಾ ॥ ೩೪ ॥
ಕಾಲೇಽಸ್ಮಿನ್ ಯೇ ಪ್ರಕುರ್ವಂತಿ ಪ್ರಾತಃಸ್ನಾನಂ ನರೋತ್ತಮಾಃ ।
ತೇ ಸರ್ವಯಜ್ಞಾವಭೃಥೈಃ ಸುಸ್ನಾತಾಸ್ಸ್ಯುರ್ನ ಸಂಶಯಃ ॥ ೩೫ ॥
ಅದ್ಯಪ್ರಭೃತ್ಯಹಮಪಿ ಭವಾಮಿ ಜಲಮಧ್ಯಗಃ ।
ಭವಂತೋಽಪಿ ಮಯಾ ಸಾರ್ಧಮಾಯಾಂತು ಸಮುನೀಶ್ವರಾಃ ॥ ೩೬ ॥
ಕಾರ್ತಿಕವ್ರತಿನಾಂ ಚೇಂದ್ರ ರಕ್ಷಾ ಕಾರ್ಯಾ ತ್ವಯಾ ಸದಾ ।
ಇತ್ಯುಕ್ತ್ವಾ ಭಗವಾನ್ ವಿಷ್ಣುಃ ಶಫರೀತುಲ್ಯರೂಪಧೃಕ್ ।
ಖಾತ್ಪಪಾತ ಜಲೇ ವಿಂಧ್ಯವಾಸಿನಃ ತಸ್ಯ ಪಶ್ಯತಃ ॥ ೩೭ ॥

---

೩೨. ಕಾರ್ತಿಕಮಾಸದ ಶುಕ್ಲ ಏಕಾದಶಿಯ ದಿನ ನಾನು ನಿಮ್ಮಿಂದ ಎಚ್ಚರಗೊಳಿಸಲ್ಪಟ್ಟಿದ್ದೇನೆ. ಆದುದರಿಂದ ಈ ತಿಥಿಯು ನನಗೆ ಬಹಳ ಪ್ರೀತಿಕರವೆಂದು ತಿಳಿಯಬೇಕು.

೩೩. ಶಂಖನಿಂದ ಹೃತಗಳಾದ ವೇದಗಳೆಲ್ಲವೂ ಉದಕದಲ್ಲಿ ನೆಲಸಿರುವುವು. ಎಲೈ ದೇವತೆಗಳಿರಾ! ಸಾಗರನಂದನನಾದ ಆ ಶಂಖನನ್ನು ಕೊಂದು ವೇದಗಳನ್ನು ತರುತ್ತೇನೆ.

೩೪. ಇಂದು ಮೊದಲುಗೊಂಡು ವೇದಗಳು ಮಂತ್ರಬೀಜಗಳಿಂದೊಡಗೂಡಿ ಪ್ರತಿವರ್ಷವೂ ಕಾರ್ತಿಕ ಮಾಸದಲ್ಲಿ ನೀರಿನಲ್ಲಿದ್ದು ವಿಶ್ರಮಿಸಿಕೊಳ್ಳಲಿ.

೩೫. ಈ ಕಾಲದಲ್ಲಿ ಯಾವ ನರೋತ್ತಮರು ಪ್ರಾತಃಸ್ನಾನವನ್ನು ಮಾಡುವರೋ ಅವರೆಲ್ಲರೂ ಯಜ್ಞದ ಅವಭೃಥಗಳಲ್ಲಿ ಚೆನ್ನಾಗಿ ಸ್ನಾನಮಾಡಿದವರಾಗುತ್ತಾರೆ. ಇದರಲ್ಲಿ ಸಂಶಯವಿಲ್ಲವು.

೩೬. ಇಂದಿನಿಂದ ನಾನು ಕೂಡ ಜಲದ ಮಧ್ಯದಲ್ಲಿ ನೆಲಸಿರುತ್ತೇನೆ. ನೀವು ಮುನೀಶ್ವರರ ಸಮೇತರಾಗಿ ನನ್ನೊಡನೆ ಬನ್ನಿರಿ.

೩೭. ಎಲೈ ಇಂದ್ರನೇ! ನೀನು ಕಾರ್ತಿಕ ವ್ರತಧಾರಿಗಳಾದವರಿಗೆ ಸದಾ ರಕ್ಷಣೆಯನ್ನುಂಟುಮಾಡಬೇಕು.'' ಹೀಗೆಂದು ನುಡಿದು ಭಗವಂತನಾದ ವಿಷ್ಣುವು ಶಫರಿ ಎಂಬ ಮೀನಿಗೆಣೆಯಾದ ರೂಪವನ್ನು ಧರಿಸಿ ವಿಂಧ್ಯವಾಸಿಯು ನೋಡುತ್ತಿರಲು ಆಕಾಶದಿಂದ ಕಡಲ ನೀರಿಗಿಳಿದನು.

**ಹತ್ವಾ ಶಂಖಾಸುರಂ ವಿಷ್ಣುರ್ಬದರೀವನಮಾಗಮತ್ ।**
**ತತ್ರಾಹೂಯ ಋಷೀನ್ ಸರ್ವಾನ್ ಇದಮಾಜ್ಞಾಪಯತ್ಪ್ರಭುಃ ॥ ೩೮ ॥**

ವಿಷ್ಣುರುವಾಚ :—

**ಜಲಾಂತರವಿಶೀರ್ಣಾಂಸ್ತಾನ್ಯೂಯಂ ವೇದಾನ್ವಿಮಾರ್ಗಥ ।**
**ಆನಯಧ್ವಂ ಚ ತ್ವರಿತಾಃ ಸಾಗರಸ್ಯ ಜಲಾಂತರಾತ್ ।**
**ತಾವತ್ಪ್ರಯಾಗೇ ತಿಷ್ಠಾಮಿ ದೇವತಾಗಣಸಂಯುತಃ ॥ ೩೯ ॥**

ನಾರದ ಉವಾಚ :—

**ತತಸ್ತೈಸ್ಸರ್ವಮುನಿಭಿಃ ತಪೋಬಲಸಮನ್ವಿತೈಃ ॥ ೪೦ ॥**
**ಉದ್ಧೃತಾಶ್ಚ ಸಬೀಜಾಸ್ತೇ ವೇದಾ ಯಜ್ಞಸಮನ್ವಿತಾಃ ।**
**ತೇಷು ಯಾವನ್ಮಿತಂ ಯೇನ ಲಬ್ಧಂ ತಾವದ್ಧಿ ತಸ್ಯ ತತ್ ॥ ೪೧ ॥**
**ಸ ಸ ಏವ ಋಷಿರ್ಜಾತಸ್ತತ್ಪ್ರಭೃತಿ ಪಾರ್ಥಿವ ।**
**ಅಥ ಸರ್ವೇಽಪಿ ಸಂಗಮ್ಯ ಪ್ರಯಾಗಂ ಮುನಯೋ ಯಯುಃ ॥ ೪೨ ॥**
**ವಿಷ್ಣವೇ ಸವಿಧಾತ್ರೇ ತೇ ಲಬ್ಧಾನ್ವೇದಾನ್ನ್ಯವೇದಯನ್ ।**
**ಲಬ್ಧ್ವಾ ವೇದಾನ್ ಸಮಗ್ರಾಂಸ್ತು ಬ್ರಹ್ಮಾ ಹರ್ಷಸಮನ್ವಿತಃ ॥ ೪೩ ॥**

---

೩೮. ತರುವಾಯ ಶಂಖಾಸುರನನ್ನು ಕೊಂದು ವಿಷ್ಣುವು ಬದರೀವನಕ್ಕೆ ಬಂದನು. ಅಲ್ಲಿ ಸಮಸ್ತ ಋಷಿಗಳನ್ನೂ ಕರೆದು ಆ ಪ್ರಭುವು ಅವರಿಗೆ ಈರೀತಿ ಆಜ್ಞಾಪಿಸಿದನು.

೩೯. ವಿಷ್ಣುವು ಹೇಳುತ್ತಾನೆ:—"ಎಲೈ ಋಷಿಗಳಿರಾ! ನೀರಿನೊಳಗೆ ಚೆದುರಿ ಹೋಗಿರುವ ಆ ವೇದಗಳನ್ನು ನೀವು ಹುಡುಕಿರಿ. ಸಾಗರದ ನೀರಿನೊಳಗಿನಿಂದ ತ್ವರಿತವಾಗಿ ಅವನ್ನು ತನ್ನಿರಿ. ಅಲ್ಲಿಯವರೆಗೆ ನಾನು ದೇವತಾಗಣಗಳಿಂದ ಕೂಡಿ ಪ್ರಯಾಗದಲ್ಲಿ ನೆಲಸಿರುತ್ತೇನೆ" ಎಂದನು.

೪೦-೪೧. ನಾರದನು ಹೇಳುತ್ತಾನೆ: "ಬಳಿಕ ತಪೋಬಲಸಮನ್ವಿತರಾದ ಮುನಿಗಳೆಲ್ಲರೂ ಮಂತ್ರಬೀಜಗಳಿಂದೊಡಗೂಡಿ ಯಜ್ಞ ಸಮೇತಗಳಾಗಿದ್ದ ಆ ವೇದಗಳನ್ನು ಉದ್ಧರಿಸಿದರು. ಅವುಗಳಲ್ಲಿ ಎಷ್ಟು ಮಾತ್ರ ಯಾರಿಂದ ಕಂಡು ತರಲ್ಪಟ್ಟಿತೋ ಅಷ್ಟು ಮಾತ್ರವೇ ಅವರವರದು.

೪೨. ಎಲೈ ರಾಜನೇ! ಅವಕ್ಕೆ ಅವರವರೇ ಋಷಿಗಳಾದರು. ಬಳಿಕ ಮುನಿಗಳೆಲ್ಲರೂ ಒಟ್ಟುಗೂಡಿ ಪ್ರಯಾಗಕ್ಕೆ ಹೋದರು.

೪೩. ಅವರು ತಮಗೆ ದೊರೆತ ವೇದಗಳನ್ನು ಬ್ರಹ್ಮನಿಂದೊಡಗೂಡಿದ ವಿಷ್ಣುವಿಗೆ ನಿವೇದಿಸಿದರು. ಸಮಗ್ರವಾಗಿ ವೇದಗಳನ್ನು ಪಡೆದು ಬ್ರಹ್ಮನು ಹರ್ಷಸಮನ್ವಿತನಾದನು.

ಅಯಜದ್ವಾಜಿಮೇಧೇನ ದೇವರ್ಷಿಗಣಸಂಯುತಃ।
ಯಜ್ಞಾಂತೇ ದೇವತಾಸ್ಸರ್ವೇ ವಿಜ್ಞಪ್ತಿಂ ಚಕ್ರುರಂಜಸಾ ॥ ೪೪ ॥

ದೇವಾ ಊಚುಃ :—

ದೇವದೇವ ಜಗನ್ನಾಥ ವಿಜ್ಞಪ್ತಿಂ ಶೃಣು ನಃ ಪ್ರಭೋ ।
ಹರ್ಷಕಾಲೋಽಯಮಸ್ಮಾಕಂ ತಸ್ಮಾತ್ತ್ವಂ ವರದೋ ಭವ ॥ ೪೫ ॥
ಸ್ಥಾನೇಽಸ್ಮಿನ್ ದ್ರುಹಿಣೋ ವೇದಾನ್ ನಷ್ಟಾನ್ಪ್ರಾಪ ಪುನಸ್ತ್ವಯಂ ।
ಯಜ್ಞಭಾಗಾನ್ವಯಂ ಪ್ರಾಪ್ತಾಃ ತ್ವತ್ಪ್ರಸಾದಾದ್ರಮಾಪತೇ ॥ ೪೬ ॥
ಸ್ಥಾನಮೇತದ್ಧಿ ನಃ ಶ್ರೇಷ್ಠಂ ಪೃಥಿವ್ಯಾಂ ಪುಣ್ಯವರ್ಧನಂ ।
ಭುಕ್ತಿಮುಕ್ತಿಪ್ರದಂ ಚಾಸ್ತು ಪ್ರಸಾದಾದ್ಭವತಸ್ಸದಾ ॥ ೪೭ ॥
ಕಾಲೋಽಪ್ಯಯಂ ಮಹಾಪುಣ್ಯೋ ಬ್ರಹ್ಮಘ್ನಾದಿವಿಶುದ್ಧಿಕೃತ್ ।
ದತ್ತಾಕ್ಷಯಕರಂ ಚಾಸ್ತು ವರಮೇವಂ ದದಸ್ವ ನಃ ॥ ೪೮ ॥

ವಿಷ್ಣುರುವಾಚ :—

ಮಮಾಪ್ಯೇತದ್ವೃತಂ ದೇವಾ ಯದ್ಭವದ್ಭಿರುದಾಹೃತಂ ।
ತಥಾಸ್ತು ಸುಲಭಂ ತ್ವೇತತ್ ಬ್ರಹ್ಮಕ್ಷೇತ್ರಮಿತಿ ಪ್ರಥಾಂ ॥ ೪೯ ॥

---

೪೪. ಆಗಲಾ ಬ್ರಹ್ಮನು ದೇವರ್ಷಿಗಣದಿಂದ ಕೂಡಿ ಅಲ್ಲಿಯೇ ಅಶ್ವಮೇಧ ಯಜ್ಞವನ್ನೂ ಮಾಡಿದನು. ಯಜ್ಞಾಂತ್ಯದಲ್ಲಿ ದೇವತೆಗಳೆಲ್ಲರೂ ಆತನಲ್ಲಿ ಇಂತೆಂದು ವಿಜ್ಞಾಪನೆ ಮಾಡಿಕೊಂಡರು.

೪೫. ದೇವತೆಗಳು ಹೇಳುತ್ತಾರೆ.—"ದೇವದೇವಾ, ಜಗನ್ನಾಥಾ, ಪ್ರಭುವೇ! ನಮ್ಮ ವಿಜ್ಞಾಪನೆಯನ್ನು ಲಾಲಿಸು. ಇದು ನಮಗೆ ಹರ್ಷಕಾಲವು. ಆದುದರಿಂದ ನೀನು ನಮಗೆ ವರದನಾಗಬೇಕು.

೪೬. ನಷ್ಟವಾಗಿದ್ದ ವೇದಗಳನ್ನು ಬ್ರಹ್ಮನು ಈಯೆಡೆಯಲ್ಲಿ ಪುನಃ ಪಡೆದನು. ಎಲೈ ರಮಾಪತಿಯೇ! ನಿನ್ನ ಪ್ರಸಾದದಿಂದ ನಾವು ಯಜ್ಞಭಾಗಗಳನ್ನು ಹೊಂದಿದೆವು.

೪೭–೪೮. ಈ ಸ್ಥಾನವು ನಮಗೆ ಶ್ರೇಷ್ಠವಾದುದು. ಈ ಸ್ಥಾನವು ನಿನ್ನ ಅನುಗ್ರಹದಿಂದ ಪೃಥ್ವಿಯಲ್ಲಿ ಸದಾ ಪುಣ್ಯವರ್ಧನವೂ ಭುಕ್ತಿಮುಕ್ತಿಪ್ರದಾಯಕವೂ ಆಗಲಿ. ಈ ಕಾಲವೂ ಕೂಡ ಮಹಾಪುಣ್ಯಕರವೂ, ಬ್ರಹ್ಮಹತ್ಯಾದಿ ಪಾಪಗಳಿಂದ ಪರಿಶುದ್ಧಿಯನ್ನುಂಟುಮಾಡುವುದೂ, ಮಾಡಿದ ದಾನಗಳನ್ನು ಅಕ್ಷಯಗೊಳಿಸತಕ್ಕುದೂ ಆಗಲಿ. ನಮಗೆ ಈ ವರವನ್ನು ದಯಪಾಲಿಸು.

೪೯. ವಿಷ್ಣುವು ಹೇಳುತ್ತಾನೆ:—"ಎಲೈ ದೇವತೆಗಳಿರಾ! ನೀವು ಉದಾಹರಿಸಿದ ಈ ವಿಷಯವನ್ನು ನಾನು ಕೂಡ ವರಿಸಿದೆನು. ಹಾಗೆಯೇ ಆಗಲಿ. ಇದು ಸುಲಭವಾಗಿ ಬ್ರಹ್ಮಕ್ಷೇತ್ರವೆಂಬ ಹೆಸರನ್ನು ಪಡೆಯಲಿ.

ಸೂರ್ಯವಂಶೋದ್ಭವೋ ರಾಜಾ ಗಂಗಾಮತ್ರಾನಯಿಷ್ಯತಿ ।
ಸಾ ಸೂರ್ಯಕನ್ಯಯಾ ಚಾತ್ರ ಕಾಲಿಂದ್ಯಾ ಯೋಗಮೇಷ್ಯತಿ ॥ ೫೦ ॥
ಯೂಯಂ ಚ ಸರ್ವೇ ಬ್ರಹ್ಮಾದ್ಯಾ ನಿಯಮಂ ತು ಮಯಾ ಸಹ ।
ತೀರ್ಥರಾಜೇತಿ ವಿಖ್ಯಾತಂ ತೀರ್ಥಮೇತದ್ಭವಿಷ್ಯತಿ ॥ ೫೧ ॥
ಸರ್ವಪಾಪಾನಿ ನಶ್ಯಂತಿ ತೀರ್ಥರಾಜಸ್ಯ ದರ್ಶನಾತ್ ।
ಸೂರ್ಯೇ ಮಕರಗೇ ಪ್ರಾಪ್ತೇ ಸ್ನಾಯಿನಾಂ ಪಾಪನಾಶನಃ ॥ ೫೨ ॥
ಕಾಲೋಽಪ್ಯೇಷ ಮಹಾಪುಣ್ಯಫಲದೋಽಸ್ತು ಸದಾ ನೃಣಾಂ ।
ಸಾಲೋಕ್ಯಾದಿಫಲಂ ಸ್ನಾನೈರ್ಮಾಘೇ ಮಕರಗೇ ರವೌ ॥ ೫೩ ॥

ನಾರದ ಉವಾಚ :—

ಏವಂ ದೇವಾನ್ ದೇವದೇವಸ್ತದುಕ್ತ್ವಾ
ತತ್ರೈವಾಂತರ್ಧಾನಮಾಗತ್ಯ ವೇಧಾಃ ।
ದೇವಾಸ್ಸರ್ವೇಽಪ್ಯಂಶಕೈಸ್ತೇಽಪ್ಯತಿಷ್ಠಂ
ಶ್ಚಾಂತರ್ಧಾನಂ ಪ್ರಾಪುರಿಂದ್ರಾದಯಸ್ತೇ ॥ ೫೪ ॥

---

೫೦. ಮುಂದೆ ಸೂರ್ಯವಂಶೋದ್ಭವನಾದ ಭಗೀರಥರಾಜನು ಗಂಗೆಯನ್ನು ಇಲ್ಲಿಗೆ ಕರೆತರುತ್ತಾನೆ. ಆ ಗಂಗೆಯು ಇಲ್ಲಿ ಸೂರ್ಯಕನ್ಯೆಯಾದ ಯಮುನೆಯೊಡನೆ ಸಂಗಮ ಹೊಂದುತ್ತಾಳೆ.

೫೧. ಬ್ರಹ್ಮನೇ ಮೊದಲಾದ ನೀವುಗಳೆಲ್ಲರೂ ನನ್ನಿಂದೊಡಗೂಡಿ ಇಲ್ಲಿಯೇ ವಾಸಮಾಡಿರಿ. ಇದು ತೀರ್ಥರಾಜವೆಂದು ಪ್ರಖ್ಯಾತವಾದ ತೀರ್ಥವಾಗಿ ಪರಿಣಮಿಸುವುದು.

೫೨. ಈ ತೀರ್ಥರಾಜದ ದರ್ಶನದಿಂದ ಸರ್ವಪಾಪಗಳೂ ನಾಶವಾಗುತ್ತವೆ. ಸೂರ್ಯನು ಮಕರದಲ್ಲಿರುವಾಗ ಇಲ್ಲಿ ಸ್ನಾನ ಮಾಡುವವರ ಪಾಪಗಳೂ ಪರಿಹಾರವಾಗುವುವು.

೫೩. ಈ ಕಾಲವು ಮನುಷ್ಯರಿಗೆ ಸದಾ ಮಹಾಪುಣ್ಯಫಲವನ್ನು ಕೊಡುವಂತಹುದಾಗಲಿ. ಮಾಘದಲ್ಲಿ ಸೂರ್ಯನು ಮಕರದಲ್ಲಿರುವಾಗ ಸ್ನಾನಮಾಡುವವರಿಗೆ ನನ್ನ ಸಾಲೋಕ್ಯವೇ ಮೊದಲಾದ ಫಲಗಳುಂಟಾಗಲಿ.''

೫೪. ನಾರದನು ಹೇಳುತ್ತಾನೆ.— ''ದೇವದೇವನಾದ ಆ ನಾರಾಯಣನು ದೇವತೆಗಳಿಗೆ ಈ ರೀತಿ ಹೇಳಿ ಬ್ರಹ್ಮನೊಡನೆ ಅಲ್ಲಿಯೇ ಅಂತರ್ಧಾನ ಹೊಂದಿದನು. ಇಂದ್ರನೇ ಮೊದಲಾದ ಸಮಸ್ತ ದೇವತೆಗಳೂ ತಮ್ಮ ತಮ್ಮ ಅಂಶಗಳಿಂದ ಅಲ್ಲಿ ನೆಲಸುವವರಾಗಿ ಅಲ್ಲಿಯೇ ಅಂತರ್ಧಾನ ಹೊಂದಿದರು.

**ಕಾರ್ತಿಕೇ ತುಲಸೀಮೂಲೇ ಯೋಽರ್ಚಯೇದ್ಧರಿಮೀಶ್ವರಂ ।**
**ಭುಕ್ತ್ವೇಹ ನಿಖಿಲಾನ್ ಭೋಗಾನ್ ಅಂತೇ ವಿಷ್ಣುಪುರಂ ವ್ರಜೇತ್॥೫೫॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಸತ್ಯಭಾಮಾಪೂರ್ವಜನ್ಮವೃತ್ತಾಂತಕಥನಪೂರ್ವಕ ಪ್ರಯಾಗತೀರ್ಥ ಪ್ರಶಂಸಾವರ್ಣನಂ" ನಾಮ ತ್ರಯೋದಶೋಽಧ್ಯಾಯಃ**

---

೫೫. ಕಾರ್ತಿಕಮಾಸದಲ್ಲಿ ತುಲಸೀ ಮೂಲದಲ್ಲಿ ಯಾವನು ಈಶ್ವರನಾದ ಹರಿಯನ್ನು ಅರ್ಚಿಸುವನೋ ಅವನು ಇಹದಲ್ಲಿ ನಿಖಿಲ ಭೋಗಗಳನ್ನೂ ಅನುಭವಿಸಿ ಕಡೆಗೆ ವಿಷ್ಣುಪುರಕ್ಕೆ ಹೋಗಿ ಸೇರುತ್ತಾನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಸತ್ಯಭಾಮಾ ಪೂರ್ವಜನ್ಮಕಥನಪೂರ್ವಕ ಪ್ರಯಾಗತೀರ್ಥಪ್ರಶಂಸಾವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಜಲಂಧರೋತ್ಪತ್ತಿವರ್ಣನಂ

ಪೃಥುರುವಾಚ :—

ಯತ್ತ್ವಯಾ ಕಥಿತಂ ಬ್ರಹ್ಮನ್ ವ್ರತಮೂರ್ಜಸ್ಯ ವಿಸ್ತರಾತ್ ।
ತತ್ರ ಯಾ ತುಲಸೀಮೂಲೇ ವಿಷ್ಣೋಃ ಪೂಜಾ ತ್ವಯೋದಿತಾ ॥ ೧ ॥
ತೇನಾಹಂ ಪ್ರಷ್ಟುಮಿಚ್ಛಾಮಿ ಮಾಹಾತ್ಮ್ಯಂ ತುಲಸೀಭವಂ ।
ಕಥಂ ಸಾಽತಿಪ್ರಿಯಾ ತಸ್ಯ ದೇವದೇವಸ್ಯ ಶಾರ್ಙ್ಗಿಣಃ ॥ ೨ ॥
ಕಥಮೇಷಾ ಸಮುತ್ಪನ್ನಾ ಕಸ್ಮಿನ್ ಸ್ಥಾನೇ ಚ ನಾರದ ।
ಏವಂ ಬ್ರೂಹಿ ಸಮಾಸೇನ ಸರ್ವಜ್ಞೋಽಸಿ ಮತೋ ಮಮ ॥ ೩ ॥

ನಾರದ ಉವಾಚ :—

ಶೃಣು ರಾಜನ್ನವಹಿತೋ ಮಾಹಾತ್ಮ್ಯಂ ತುಲಸೀಭವಂ ।
ಸೇತಿಹಾಸಂ ಪುರಾವೃತ್ತಂ ತತ್ಸರ್ವಂ ಕಥಯಾಮಿ ತೇ ॥ ೪ ॥
ಪುರಾ ಶಕ್ರಃ ಶಿವಂ ದ್ರಷ್ಟುಮಗಾತ್ಕೈಲಾಸಪರ್ವತಂ ।
ಸರ್ವದೇವೈಃ ಪರಿವೃತೋ ಹ್ಯಪ್ಸರೋಗಣಸೇವಿತಃ ॥ ೫ ॥

---

### ಕನ್ನಡದ ಅನುವಾದ

#### ಜಲಂಧರೋತ್ಪತ್ತಿ ವರ್ಣನ

೧. ಪೃಥುವು ಹೇಳುತ್ತಾನೆ:—"ಭೋ ಬ್ರಹ್ಮನ್! ನೀನು ಕಾರ್ತಿಕ ಮಾಸದ ಮಹಿಮೆಯನ್ನು ವಿಸ್ತಾರವಾಗಿ ಹೇಳಿದೆ. ಅಲ್ಲಿ ತುಲಸೀಮೂಲದಲ್ಲಿ ವಿಷ್ಣುವನ್ನು ಪೂಜಿಸಬೇಕೆಂದು ತಿಳಿಸಿದೆ.

೨. ಆದುದರಿಂದ ತುಲಸಿಯ ಮಾಹಾತ್ಮ್ಯವನ್ನು ಮತ್ತೂ ಕೇಳಲಿಚ್ಛಿಸುತ್ತೇನೆ. ಆ ತುಲಸಿಯು ದೇವದೇವನಾದ ಶಾರ್ಙ್ಗಧರನಿಗೆ ಹೇಗೆ ಅತಿ ಪ್ರಿಯವಾಯಿತು?

೩. ಅದು ಹೇಗೆ ಹುಟ್ಟಿತು? ಯಾವ ಸ್ಥಾನದಲ್ಲಿ ಹುಟ್ಟಿತು? ನಾರದ ಮುನಿಯೆ! ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸು. ನೀನು ಸರ್ವಜ್ಞನಾಗಿದ್ದೀಯೆಂದು ನನ್ನ ಅಭಿಪ್ರಾಯವು."

೪. ನಾರದನು ಹೇಳುತ್ತಾನೆ:–"ಮಹಾರಾಜ! ತುಲಸಿಯ ಮಾಹಾತ್ಮ್ಯವನ್ನು ಸಾವಧಾನದಿಂದ ಆಲಿಸು. ಹಿಂದೆ ನಡೆದ ಸಂಗತಿಯೆಲ್ಲವನ್ನೂ ಇತಿಹಾಸಸಮೇತವಾಗಿ ನಿನಗೆ ಹೇಳುತ್ತೇನೆ.

೫. ಪೂರ್ವದಲ್ಲಿ ಇಂದ್ರನು ಶಿವನನ್ನು ನೋಡುವುದಕ್ಕಾಗಿ ಸಮಸ್ತ

ಯಾವದ್ಗತಶ್ಶಿವಗೃಹಂ ತಾವತ್ತತ್ರ ಸ ದೃಷ್ಟವಾನ್ ।
ಪುರುಷಂ ಭೀಮಕರ್ಮಾಣಂ ದಂಷ್ಟ್ರಾನನವಿಭೀಷಣಂ ॥ ೬ ॥
ಸ ಪೃಷ್ಟಸ್ತೇನ ಕಸ್ತ್ವಂ ಭೋಃ ಕ್ವ ಗತೋ ಜಗದೀಶ್ವರಃ ।
ಏವಂ ಪುನಃ ಪುನಃ ಪೃಷ್ಟಃ ಸ ತದಾ ನೋಕ್ತವಾನ್ನೃಪ ॥ ೭ ॥
ತತಃ ಕ್ರುದ್ಧೋ ವಜ್ರಪಾಣಿಃ ತಂ ನಿರ್ಭರ್ತ್ಸ್ಯ ವಚೋಽಬ್ರವೀತ್ ।
ರೇ ಮಯಾ ಪೃಚ್ಛ್ಯಮಾನೋಽಪಿ ನೋತ್ತರಂ ದತ್ತವಾನಸಿ ॥ ೮ ॥
ಅತಸ್ತ್ವಾಂ ಹನ್ಮಿ ವಜ್ರೇಣ ಕಸ್ತೇ ತ್ರಾತಾಸ್ತಿ ದುರ್ಮತೇ ।
ಇತ್ಯುದೀರ್ಯ ತತೋ ವಜ್ರೀ ವಜ್ರೇಣಾಭ್ಯಹನತ್ ದೃಢಂ ॥ ೯ ॥
ತೇನಾಸ್ಯ ಕಂಠೋ ನೀಲತ್ವಂ ಅಗಾದ್ವಜ್ರಂ ಚ ಭಸ್ಮತಾಂ ।
ತತೋ ರುದ್ರಃ ಪ್ರಜಜ್ವಾಲ ತೇಜಸಾ ಪ್ರದಹನ್ನಿವ ॥ ೧೦ ॥
ದೃಷ್ಟ್ವಾ ಬೃಹಸ್ಪತಿಸ್ತೂರ್ಣಂ ಕೃತಾಂಜಲಿಪುಟೋಽಭವತ್ ।
ಇಂದ್ರಂ ಚ ದಂಡವದ್ಭೂಮೌ ಕೃತ್ವಾ ಸ್ತೋತುಂ ಪ್ರಚಕ್ರಮೇ ॥ ೧೧ ॥

---

ದೇವತೆಗಳಿಂದಲೂ ಸುತ್ತುವರೆಯಲ್ಪಟ್ಟು ಅಪ್ಸರೆಯರ ಸಮೂಹದಿಂದ ಸೇವಿಸಲ್ಪಡುತ್ತ ಕೈಲಾಸಪರ್ವತಕ್ಕೆ ಹೋದನು.

೬. ಶಿವನ ಮಂದಿರಕ್ಕೆ ಹೋಗಿ ಸೇರುವಷ್ಟರಲ್ಲಿ ಅಲ್ಲಿ ಕೋರೆಹಲ್ಲುಗಳುಳ್ಳವನಾಗಿ ಭಯಂಕರನೂ, ಭೀಮಕರ್ಮನೂ ಆದ ಒಬ್ಬ ಪುರುಷನನ್ನು ಕಂಡನು.

೭. ಅವನನ್ನು ಕಂಡು 'ಅಯ್ಯಾ, ನೀನು ಯಾರು? ಜಗದೀಶ್ವರನು ಎಲ್ಲಿ ಹೋಗಿದ್ದಾನೆ?' ಎಂದು ಅವನನ್ನು ಪ್ರಶ್ನಿಸಿದನು. ಹೀಗೆ ಮತ್ತೆ ಮತ್ತೆ ಪ್ರಶ್ನೆಮಾಡುತ್ತಿದ್ದರೂ ಅವನು ಏನೂ ಮರುಮಾತನಾಡಲಿಲ್ಲ.

೮. ಬಳಿಕಲಾ ವಜ್ರಪಾಣಿಯು ಕ್ರುದ್ಧನಾಗಿ ಅವನನ್ನು ಬೆದರಿಸಿ ಮಾತಾಡಿದನು. 'ಎಲಾ! ನಾನು ಪ್ರಶ್ನೆಮಾಡುತ್ತಿದ್ದರೂ ನೀನು ಉತ್ತರವನ್ನೇ ಕೊಡಲಿಲ್ಲವು.

೯. ಆದುದರಿಂದ ನಿನ್ನನ್ನು ವಜ್ರದಿಂದ ಹೊಡೆದು ಕೊಂದುಬಿಡುತ್ತೇನೆ. ಎಲಾ ದುರ್ಮತೀ! ನಿನ್ನನ್ನು ಕಾಪಾಡುವವನು ಯಾವನಿದ್ದಾನೆ?'' ಹೀಗೆಂದು ನುಡಿದು ಆ ವಜ್ರಪಾಣಿಯು ವಜ್ರದಿಂದ ಅವನನ್ನು ಬಲವಾಗಿ ಹೊಡೆದನು.

೧೦. ಆದರಿಂದ ಅವನ ಕಂಠವು ನೀಲವರ್ಣವಾಯಿತು. ವಜ್ರವೂ ಭಸ್ಮವಾಯಿತು. ಬಳಿಕಲಾರುದ್ರನು ತೇಜಸ್ಸಿನಿಂದ ಸುಟ್ಟುಬಿಡುವನೋ ಎಂಬಂತೆ ಅಲ್ಲಿಯೇ ಪ್ರಜ್ವಲಿಸಿದನು.

೧೧. ಅದನ್ನು ಕಂಡು ಬೃಹಸ್ಪತಿಯು ಬದ್ಧಾಂಜಲಿಪುಟನಾಗಿ ನಿಂತನು. ಇಂದ್ರನನ್ನು ಭೂಮಿಯಲ್ಲಿ ದಂಡಪ್ರಣಾಮಮಾಡಿದಂತೆ ಮಲಗಿಸಿ ಆ ಮಹಾರುದ್ರನನ್ನು ಸ್ತೋತ್ರಮಾಡಲು ಪ್ರಾರಂಭಿಸಿದನು.

ಬೃಹಸ್ಪತಿರುವಾಚ :—

ನಮೋ ದೇವಾಧಿಪತಯೇ ತ್ರ್ಯಂಬಕಾಯ ಕಪರ್ದಿನೇ ।
ತ್ರಿಪುರಘ್ನಾಯ ಶರ್ವಾಯ ನಮೋಽಂಧಕನಿಷೂದಿನೇ ॥ ೧೨ ॥
ವಿರೂಪಾಯಾತಿರೂಪಾಯ ಬಹುರೂಪಾಯ ಶಂಭವೇ ।
ಯಜ್ಞವಿಧ್ವಂಸಕರ್ತ್ರೇ ಚ ಯಜ್ಞಾನಾಂ ಫಲದಾಯಿನೇ ॥ ೧೩ ॥
ಕಾಲಾಂತಕಾಯ ಕಾಲಾಯ ಕಾಲಭೋಗಿಧರಾಯ ಚ ।
ನಮೋ ಬ್ರಹ್ಮಶಿರೋಹಂತ್ರೇ ಬ್ರಾಹ್ಮಣಾಯ ನಮೋ ನಮಃ ॥ ೧೪ ॥

ನಾರದ ಉವಾಚ :—

ಏವಂ ಸ್ತುತಸ್ತದಾ ಶಂಭುರ್ಧಿಷಣೇನ ಜಗಾದ ತಂ ।
ಸಂಹರನ್ ನಯನಜ್ವಾಲಾಂ ತ್ರಿಲೋಕೀದಹನಕ್ಷಮಾಂ ॥ ೧೫ ॥
ವರಂ ವರಯ ಭೋ ಬ್ರಹ್ಮನ್ ಪ್ರೀತಃ ಸ್ತುತ್ಯಾಽನಯಾ ತವ ।
ಇಂದ್ರಸ್ಯ ಜೀವದಾನೇನ ಜೀವೇತಿ ತ್ವಂ ಪ್ರಥಾಂ ವ್ರಜ ॥ ೧೬ ॥

ಬೃಹಸ್ಪತಿರುವಾಚ :—

ಯದಿ ತುಷ್ಟೋಽಸಿ ದೇವ ತ್ವಂ ಪಾಹೀಂದ್ರಂ ಶರಣಾಗತಂ ।
ಅಗ್ನಿರೇಷ ಶಮಂ ಯಾತು ಭಾಲನೇತ್ರಸಮುದ್ಭವಃ ॥ ೧೭ ॥

---

೧೨–೧೩. ಬೃಹಸ್ಪತಿಯು ಹೇಳುತ್ತಾನೆ :—'ದೇವಾಧಿಪತೀ! ನಿನಗೆ ನಮಸ್ಕಾರವು. ತ್ರಿಣಯನನೂ, ಕಪರ್ದಿಯೂ, ತ್ರಿಪುರಗಳನ್ನು ಧ್ವಂಸಮಾಡಿದವನೂ, ಅಂಧಕನನ್ನು ಸಂಹರಿಸಿದವನೂ, ವಿರೂಪನೂ, ಅತಿರೂಪನೂ, ಬಹುರೂಪಧರನೂ, ಶಂಭುವೂ, ದಕ್ಷಯಜ್ಞವನ್ನು ವಿಧ್ವಂಸಮಾಡಿದವನೂ, ಯಜ್ಞಫಲಪ್ರದನೂ ಆದ ಓ ದೇವಾ! ನಿನಗೆ ನಮಸ್ಕಾರವು!!

೧೪. ಕಾಲಾಂತಕ! ಕಾಲಸ್ವರೂಪನಾಗಿ, ಕಾಲಸರ್ಪಧರನಾಗಿ, ಬ್ರಹ್ಮನ ಶಿರಸ್ಸನ್ನು ಕತ್ತರಿಸಿದ ನಿನಗಿದೊ ನಮಸ್ಕಾರವು. ಎಲೈ ಬ್ರಾಹ್ಮಣಸ್ವರೂಪನೇ! ನಿನಗೆ ನಮೋ ನಮಃ.'

೧೫–೧೬. ನಾರದನು ಹೇಳುತ್ತಾನೆ:— ಬೃಹಸ್ಪತಿಯಿಂದ ಈ ರೀತಿ ಸ್ತುತಿಸಲ್ಪಟ್ಟ ಶಂಭುವು ಮೂರು ಲೋಕವನ್ನೂ ಸುಡಲು ಸಮರ್ಥವಾದ ನಯನಜ್ವಾಲೆಯನ್ನು ಕೊನೆಗಾಣಿಸಿಕೊಂಡು ಅವನನ್ನು ಕುರಿತು 'ಭೋ ಬ್ರಹ್ಮನ್! ನಿನ್ನ ಈ ಸ್ತುತಿಯಿಂದ ನಾನು ಸುಪ್ರೀತನಾಗಿದ್ದೇನೆ. ವರವನ್ನು ಬೇಡಿಕೊ. ಇಂದ್ರನಿಗೆ ಜೀವದಾನಮಾಡಿದುದರಿಂದ ನೀನು "ಜೀವ"ನೆಂಬ ಹೆಸರನ್ನು ಹೊಂದು' ಎಂದು ನುಡಿದನು.

೧೭. ಬೃಹಸ್ಪತಿಯು ಹೇಳುತ್ತಾನೆ :—'ದೇವಾ! ನೀನು ಸುಂತುಷ್ಟನಾಗಿರುವುದಾದರೆ ಶರಣಾಗತನಾದ ಈ ಮಹೇಂದ್ರನನ್ನು ಕಾಪಾಡು. ನಿನ್ನ ಹಣೆಗಣ್ಣಿನಿಂದ ಉದ್ಭವಿಸಿರುವ ಈ ಅಗ್ನಿಯು ಶಮನವಾಗಲಿ.'

ಈಶ್ವರ ಉವಾಚ :—

ಪುನಃ ಪ್ರವೇಶಮಾಯಾತಿ ಭಾಲನೇತ್ರೇ ಕಥಂ ಶಿಖೀ ।
ಏನಂ ತ್ಯಕ್ತ್ವಾಮ್ಯಹಂ ದೂರೇ ಯಥೇಂದ್ರಂ ನೈವ ಪೀಡಯೇತ್ ॥ ೧೮ ॥

ನಾರದ ಉವಾಚ :—

ಇತ್ಯುಕ್ತ್ವಾ ತಂ ಕರೇ ಧೃತ್ವಾ ಪ್ರಾಕ್ಷಿಪಲ್ಲವಣಾರ್ಣವೇ ।
ಸೋಽಪತತ್ಸಿಂಧುಗಂಗಾಯಾಃ ಸಾಗರಸ್ಯ ಚ ಸಂಗಮೇ ॥ ೧೯ ॥
ತಾವತ್ಸ ಬಾಲರೂಪತ್ವಂ ಅಗಾತ್ತತ್ರ ರುರೋದ ಚ ।
ರುದತಸ್ತಸ್ಯ ಶಬ್ದೇನ ಪ್ರಾಕಂಪದ್ಧರಣೀ ಮುಹುಃ ॥ ೨೦ ॥
ಸ್ವರ್ಗಾದ್ಯಾಸ್ಸತ್ಯಲೋಕಾಂತಾಃ ತತ್ಸ್ವನಾದ್ಬಧಿರೀಕೃತಾಃ ।
ಶ್ರುತ್ವಾ ಬ್ರಹ್ಮಾ ಯಯೌ ತತ್ರ ಕಿಮೇತದಿತಿ ವಿಸ್ಮಿತಃ ॥ ೨೧ ॥
ತಾವತ್ಸಮುದ್ರಸ್ಯೋತ್ಸಂಗೇ ತಂ ಬಾಲಂ ಸ ದದರ್ಶ ಹ ।
ದೃಷ್ಟ್ವಾ ಬ್ರಹ್ಮಾಣಮಾಯಾಂತಂ ಸಮುದ್ರೋಽಪಿ ಕೃತಾಂಜಲಿಃ ॥ ೨೨ ॥
ಪ್ರಣಮ್ಯ ಶಿರಸಾ ಬಾಲಂ ತಸ್ಯೋತ್ಸಂಗೇ ನ್ಯವೇಶಯತ್ ।
ಭೋ ಬ್ರಹ್ಮನ್ಸಿಂಧುಗಂಗಾಯಾಂ ಜಾತೋಽಯಂ ಮಮ ಪುತ್ರಕಃ ।
ಜಾತಕರ್ಮಾದಿಸಂಸ್ಕಾರಾನ್ ಕುರುಷ್ವಾದ್ಯ ಜಗದ್ಗುರೋ ॥ ೨೩ ॥

---

೧೮. ಆಗ ಈಶ್ವರನು, 'ಈ ಬೆಂಕಿಯು ಹಣೆಗಣ್ಣಿನೊಳಕ್ಕೆ ಮತ್ತೆ ಹೇಗೆ ಪ್ರವೇಶಮಾಡೀತು? ಇಂದ್ರನನ್ನು ಸ್ವಲ್ಪವೂ ಪೀಡಿಸದ ಹಾಗೆ ಇದನ್ನು ದೂರದಲ್ಲಿ ಬಿಟ್ಟುಬಿಡುತ್ತೇನೆ' ಎಂದನು.

೧೯. ನಾರದನು ಹೇಳುತ್ತಾನೆ:—ಈ ರೀತಿ ನುಡಿದು ಆ ಅಗ್ನಿಯನ್ನು ಕೈಯಲ್ಲಿ ಹಿಡಿದುಕೊಂಡು ಅದನ್ನು ಲವಣಸಮುದ್ರದಲ್ಲಿ ಬೀಳುವಂತೆ ಚಿಮ್ಮಿ ಎಸೆದನು. ಆ ಅಗ್ನಿಯು ಸಿಂಧು. ಗಂಗೆ ಮತ್ತು ಸಾಗರಗಳ ಸಂಗಮದಲ್ಲಿ ಬಿದ್ದಿತು.

೨೦. ಬಿದ್ದೊಡನೆಯೇ ಆ ಅಗ್ನಿಯು ಬಾಲರೂಪವನ್ನು ಧರಿಸಿ ಅಳತೊಡಗಿದನು. ಅಳುವ ಅವನ ಶಬ್ದದಿಂದ ಭೂಮಿಯು ಮತ್ತೆ ಮತ್ತೆ ನಡುಗುತ್ತಿತ್ತು.

೨೧. ಸ್ವರ್ಗಲೋಕವು ಮೊದಲಾಗಿ, ಸತ್ಯಲೋಕವು ಕೊನೆಯಾಗಿರುವ ಸಮಸ್ತ ಲೋಕಗಳೂ ಕಿವುಡುಗೊಳಿಸಲ್ಪಟ್ಟವು. ಅದನ್ನಾಲಿಸಿ ಬ್ರಹ್ಮನು ಇದೇನೆಂದು ವಿಸ್ಮಿತನಾಗಿ ಅಲ್ಲಿಗೆ ಹೋದನು.

೨೨–೨೩. ಹೋಗಿ ಸೇರಿದೊಡನೆಯೆ ಅವನು ಕಡಲಮಡಿಲಲ್ಲಿ ಆ ಬಾಲಕನನ್ನು ಕಂಡನು. ತನ್ನೆಡೆಗೆ ಬರುತ್ತಿರುವ ಆ ಬ್ರಹ್ಮನನ್ನು ಕಂಡು ಸಮುದ್ರನೂ ಅಂಜಲಿಯನ್ನು ರಚಿಸಿ ತಲೆಬಾಗಿ ಪ್ರಣಾಮಮಾಡಿ ಬಾಲಕನನ್ನು ಅವನ ತೊಡೆಯ ಮೇಲೆ ಕುಳ್ಳಿರಿಸಿದನು. 'ಭೋ ಬ್ರಹ್ಮನ್! ಇವನು ಸಿಂಧು

ನಾರದ ಉವಾಚ :—

ಇತ್ಥಂ ವದತಿ ಪಾಥೋಧೌ ಸ ಬಾಲಃ ಸಾಗರಾತ್ಮಜಃ ॥ ೨೪ ॥
ಬ್ರಹ್ಮಾಣಮನುಗೃಹೀತ್ವಾಕೂರ್ಚೇ ವಿಧುನ್ವಂತಂ ಮುಹುರ್ಮುಹುಃ ।
ಧುನ್ವತಸ್ತಸ್ಯ ಕೂರ್ಚೇ ತು ನೇತ್ರಾಭ್ಯಾಮುಗಮಜ್ಜಲಂ ।
ಕಥಂಚಿನ್ಮುಕ್ತಕೂರ್ಚೋಽಥ ಬ್ರಹ್ಮಾ ಪ್ರೋವಾಚ ಸಾಗರಂ ॥ ೨೫ ॥

ಬ್ರಹ್ಮೋವಾಚ :—

ನೇತ್ರಾಭ್ಯಾಂ ವಿಧೃತಂ ಯಸ್ಮಾತ್ ಅನೇನೈತಜ್ಜಲಂ ಮಮ ।
ತಸ್ಮಾಜ್ಜಲಂಧರ ಇತಿ ಖ್ಯಾತೋ ನಾಮ್ನಾ ಭವಿಷ್ಯತಿ ॥ ೨೬ ॥
ಅನೇನೈವೈಷ ತರುಣಃ ಸರ್ವಶಸ್ತ್ರಾಸ್ತ್ರಪಾರಗಃ ।
ಅವಧ್ಯಸ್ಸರ್ವಭೂತಾನಾಂ ವಿನಾ ರುದ್ರಂ ಭವಿಷ್ಯತಿ ॥ ೨೭ ॥
ಯತ ಏಷ ಸಮುದ್ಭೂತಃ ತತ್ರೈವಾಂತಂ ಗಮಿಷ್ಯತಿ ॥ ೨೮ ॥

ನಾರದ ಉವಾಚ :—

ಇತ್ಯುಕ್ತ್ವಾ ಶುಕ್ರಮಾಹೂಯ ರಾಜ್ಯೇ ತಂ ಚಾಭ್ಯಷೇಚಯತ್ ।
ಆಮಂತ್ರ್ಯ ಸರಿತಾಂ ನಾಥಂ ಬ್ರಹ್ಮಾಂತರ್ಧಾನಮಾಗಮತ್ ॥ ೨೯ ॥

---

ಗಂಗೆಯಲ್ಲಿ ಹುಟ್ಟಿದನು; ಇವನು ನನ್ನ ಮಗ. ಆದ್ಯಜಗದ್ಗುರುವೇ! ಇವನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ನೆರವೇರಿಸು' ಎಂದು ಪ್ರಾರ್ಥಿಸಿದನು.

೨೪–೨೫. ನಾರದನು ಹೇಳುತ್ತಾನೆ:—ಸಮುದ್ರನು ಈ ರೀತಿ ಹೇಳುತ್ತಿರಲಾಗಿ ಸಾಗರಾತ್ಮಜನಾದ ಆ ಬಾಲನು ಬ್ರಹ್ಮನ ಮೀಸೆಯನ್ನು ಹಿಡಿದುಕೊಂಡು ಮತ್ತೆ ಮತ್ತೆ ಎಳೆದಳ್ಳಾಡಿಸತೊಡಗಿದನು. ಹಾಗೆ ಎಳೆಯುತ್ತಿರಲು ಅವನ ಕಣ್ಣುಗಳಿಂದ ನೀರು ಬಂದಿತು. ಬಳಿಕ ಹೇಗೋ ಮೀಸೆಯನ್ನು ಬಿಡಿಸಿಕೊಂಡು ಬ್ರಹ್ಮನು ಸಾಗರನನ್ನು ಕುರಿತು ಹೇಳಿದನು.

೨೬. ಬ್ರಹ್ಮನು ಹೇಳುತ್ತಾನೆ:—'ಎಲೈ ಸಾಗರರಾಜನೇ! ಇವನಿಂತು ನನ್ನ ಕಣ್ಣುಗಳಲ್ಲಿ ಜಲವನ್ನು ತರಿಸಿದವನಾದುದರಿಂದ ಇವನು ಜಲಂಧರನೆಂದು ಭೂಮಿಯಲ್ಲಿ ಪ್ರಖ್ಯಾತನಾಗುವನು.

೨೭. ಇದರಿಂದಲೇ ಈ ತರುಣನು ಸರ್ವಶಸ್ತ್ರಾಸ್ತ್ರಪಾರಂಗತನಾಗಿ, ರುದ್ರನೊಬ್ಬನು ಹೊರತಾಗಿ ಉಳಿದೆಲ್ಲ ಭೂತಗಳಿಗೂ ಅವಧ್ಯನಾಗುವನು.

೨೮. ಯಾರಿಂದಿವನು ಉದ್ಭವಿಸಿದನೋ ಆ ಶಿವನಲ್ಲಿಯೇ ಇವನು ಲಯವನ್ನೈದುವನು' ಎಂದನು.

೨೯. ನಾರದನು ಹೇಳುತ್ತಾನೆ:—ಹೀಗೆ ನುಡಿದು ಶುಕ್ರನನ್ನು ಕರೆದು ಅಸುರರಾಜ್ಯದಲ್ಲಿ ಅವನನ್ನು ಅಭಿಷೇಕಮಾಡಿದನು. ಬಳಿಕ ಸರಿತ್ಪತಿಯಾದ ಸಮುದ್ರನಿಗೆ ತಿಳಿಸಿ ಬ್ರಹ್ಮನು ಅಲ್ಲಿಯೆ ಅಂತರ್ಧಾನಹೊಂದಿದನು.

ಅಥ ತದ್ದರ್ಶನೋತ್ಫುಲ್ಲನಯನಸ್ಸಾಗರಸ್ತದಾ ।
ಕಾಲನೇಮಿಸುತಾಂ ವೃಂದಾಂ ತದ್ಭಾರ್ಯಾರ್ಥಮಯಾಚತ ॥ ೩೦ ॥
ತೇ ಕಾಲನೇಮಿಪ್ರಮುಖಾಃ ತತೋಽಸುರಾಃ
ತಸ್ಮೈ ಸುತಾಂ ತಾಂ ಪ್ರದದುಃ ಪ್ರಹರ್ಷಿತಾಃ ।
ಸ ಚಾಪಿ ತಾಂ ಪ್ರಾಪ್ಯ ಸುಹೃದ್ವರಾಂ ವಶಾಂ
ಶಶಾಸ ಗಾಂ ಶುಕ್ರಸಹಾಯವಾನ್ ಬಲೀ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಜಲಂಧರೋತ್ಪತ್ತಿ ವರ್ಣನಂ"ನಾಮ ಚತುರ್ದಶೋಽಧ್ಯಾಯಃ

---

೩೦. ಅಮೇಲೆ ಸಾಗರರಾಜನು ಅವನ ದರ್ಶನದಿಂದ ಅರಳಿದ ಕಣ್ಣುಗಳುಳ್ಳವನಾಗಿ ಕಾಲನೇಮಿಯ ಮಗಳಾದ ವೃಂದೆಯನ್ನು ಅವನಿಗೆ ಭಾರ್ಯಾರ್ಥವಾಗಿ ಕೇಳಿದನು.

೩೧. ಆಗ ಕಾಲನೇಮಿಯೆ ಮೊದಲಾದ ಅಸುರರು ಬಹು ಹರ್ಷಗೊಂಡವರಾಗಿ ಆ ಮಗಳನ್ನು ಅವನಿಗೆ ಕೊಟ್ಟರು. ಅವನು ಕೂಡ ಸುಹೃದ್ವರಳಾದ ಅವಳನ್ನು ಪಡೆದು ಶುಕ್ರನ ಸಹಾಯದಿಂದ ಮಹಾಬಲಿಷ್ಠನೂ ಆಗಿ ತನ್ನ ವಶವರ್ತಿಯಾದ ಈ ಭೂಮಿಯನ್ನು ಆಳುತ್ತಿದ್ದನು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಜಲಂಧರೋತ್ಪತ್ತಿವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ಜಲಂಧರ ವಿಜಯಪ್ರಾಪ್ತಿವರ್ಣನಂ

ನಾರದ ಉವಾಚ :—

ಯೇ ದೇವೈರ್ನಿರ್ಜಿತಾ ಪೂರ್ವಂ ದೈತ್ಯಾ ಪಾತಾಲಸಂಸ್ಥಿತಾಃ ।
ತೇಽಪಿ ಭೂಮಂಡಲಂ ಯಾತಾ ನಿರ್ಭಯಾಸ್ತಮುಪಾಶ್ರಿತಾಃ ॥ ೧ ॥
ಕದಾಚಿಚ್ಛಿನ್ನಶಿರಸಂ ರಾಹುಂ ದೃಷ್ಟ್ವಾ ಸ ದೈತ್ಯರಾಟ್ ।
ಪಪ್ರಚ್ಛ ಭಾರ್ಗವಂ ತತ್ರ ತಚ್ಛಿರಶ್ಛೇದಕಾರಣಂ ॥ ೨ ॥
ಸ ಶಶಂಸ ಸಮುದ್ರಸ್ಯ ಮಥನಂ ದೇವಕಾರಿತಂ ।
ರತ್ನಾಪಹರಣಂ ಚೈವ ದೈತ್ಯಾನಾಂ ಚ ಪರಾಭವಂ ॥ ೩ ॥
ಸ ಶ್ರುತ್ವಾ ಕ್ರೋಧರಕ್ತಾಕ್ಷಃ ಸ್ವಪಿತುರ್ಮಥನಂ ತದಾ ।
ದೂತಂ ಸಂಪ್ರೇಷಯಾಮಾಸ ಘಸ್ಮರಂ ಶಕ್ರಸಂನಿಧೌ ॥ ೪ ॥
ದೂತಸ್ತ್ರಿವಿಷ್ಟಪಂ ಗತ್ವಾ ಸುಧರ್ಮಾಂ ಪ್ರಾವಿಶದ್ವರಾಂ ।
ಜಗಾದಾಖರ್ವಮೌಲಿಸ್ತು ದೇವೇಂದ್ರಂ ವಾಕ್ಯಮುದ್ಭುತಂ ॥ ೫ ॥

---

## ಕನ್ನಡದ ಅನುವಾದ

### ಜಲಂಧರನ ವಿಜಯಪ್ರಾಪ್ತಿವರ್ಣನ

೧. ನಾರದನು ಹೇಳುತ್ತಾನೆ:—ಪೂರ್ವದಲ್ಲಿ ಯಾವ ದೈತ್ಯರು ದೇವತೆಗಳಿಂದ ಸೋಲಿಸಲ್ಪಟ್ಟು ಪಾತಾಲದಲ್ಲಿ ನೆಲಸಿದ್ದರೋ ಅವರೆಲ್ಲರೂ ನಿರ್ಭಯವಾಗಿ ಭೂಮಂಡಲಕ್ಕೆ ಬಂದು ಅವನನ್ನು ಆಶ್ರಯಿಸಿದರು.

೨. ಒಂದು ಸಲ ಆ ದೈತ್ಯರಾಜನು ತಲೆ ಕತ್ತರಿಸಿಹೋಗಿದ್ದ ರಾಹುವನ್ನು ಕಂಡು ಸಮೀಪದಲ್ಲಿದ್ದ ಭಾರ್ಗವ (ಶುಕ್ರ)ನನ್ನು ಕುರಿತು ಅವನ ಶಿರಶ್ಛೇದಕ್ಕೆ ಕಾರಣವೇನೆಂದು ಪ್ರಶ್ನೆಮಾಡಿದನು.

೩. ಶುಕ್ರನು ಸಮುದ್ರಮಥನವನ್ನೂ, ದೇವತೆಗಳು ಮಾಡಿದ ರತ್ನಾಪಹರಣವನ್ನೂ, ದೈತ್ಯರ ಪರಾಭವವನ್ನೂ ಅವನಿಗೆ ವಿವರಿಸಿ ತಿಳಿಸಿದನು.

೪. ಜಲಂಧರನು ತನ್ನ ತಂದೆಯನ್ನು ಮಥಿಸಿದರೆಂಬ ಸಂಗತಿಯನ್ನು ಕೇಳಿ ಕ್ರೋಧದಿಂದ ಕೆಂಪಡರಿದ ಕಣ್ಣುಗಳುಳ್ಳವನಾಗಿ ಇಂದ್ರನ ಸನ್ನಿಧಿಗೆ ಘಸ್ಮರನೆಂಬ ದೂತನನ್ನು ಕಳುಹಿಸಿದನು.

೫. ಆ ದೂತನು ಸ್ವರ್ಗಕ್ಕೆ ಹೋಗಿ ಶ್ರೇಷ್ಠವಾದ ಸುಧರ್ಮವೆಂಬ ಇಂದ್ರಸಭೆಯನ್ನು ಪ್ರವೇಶಿಸಿ ತಲೆತಗ್ಗಿಸದೆಯೇ ದೇವೇಂದ್ರನಿಗೆ ಅದ್ಭುತವಾದ ಈ ವಾಕ್ಯವನ್ನುಸುರಿದನು.

ಘಸ್ಮರ ಉವಾಚ :—

ಜಲಂಧರೋಽಬ್ಧಿತನಯಃ ಸರ್ವದೈತ್ಯಜನೇಶ್ವರಃ ।
ದೂತೋಽಹಂ ಪ್ರೇಷಿತಸ್ತೇನ ಸ ಯದಾಹ ಶೃಣುಷ್ವ ತತ್ ॥ ೬ ॥
ಕಸ್ಮಾತ್ತ್ವಯಾ ಮಮ ಪಿತಾ ಮಥಿತಃ ಸಾಗರೋಽದ್ರಿಣಾ ।
ನೀತಾನಿ ಸರ್ವರತ್ನಾನಿ ತಾನಿ ಶೀಘ್ರಂ ಪ್ರಯಚ್ಛ ಮೇ ॥ ೭ ॥
ಇತಿ ದೂತವಚಃ ಶ್ರುತ್ವಾ ವಿಸ್ಮಿತಸ್ತ್ರಿದಿಶಾಧಿಪಃ ।
ಉವಾಚ ಘಸ್ಮರಂ ರೌದ್ರಂ ಭಯವೇಪಸಮನ್ವಿತಃ ॥ ೮ ॥

ಇಂದ್ರ ಉವಾಚ :—

ಶೃಣು ದೂತ ಮಯಾ ಪೂರ್ವಂ ಮಥಿತಸ್ಸಾಗರೋ ಯಥಾ ।
ಅದ್ರಯೋ ಮದ್ಭಯಾತ್ತ್ರಸ್ತಾಃ ಸ್ವಕುಕ್ಷಿಸ್ಥಾಃ ಕೃತಾಸ್ತಥಾ ॥ ೯ ॥
ಅನ್ಯೇಽಪಿ ಮದ್ದ್ವಿಷಸ್ತೇನ ರಕ್ಷಿತಾ ದಿತಿಜಾಃ ಪುರಾ ।
ತಸ್ಮಾದ್ಯತ್ತತ್ರಜಾತಂ ತು ಮಯಾಪ್ಯಪಹೃತಂ ಕಿಲ ॥ ೧೦ ॥
ಶಂಖೋಽಪ್ಯೇವಂ ಪುರಾ ದೇವಾಸದ್ವಿಷತ್ಸಾಗರಾತ್ಮಜಃ ।
ಮಮಾನುಜೇನ ನಿಹತಃ ಪ್ರವಿಷ್ಟಃ ಸಾಗರೋದರಂ ॥ ೧೧ ॥

---

೬. ಘಸ್ಮರನು ಹೇಳುತ್ತಾನೆ :—“ ದೇವೇಂದ್ರಾ ! ಸಮುದ್ರತನಯನಾದ ಜಲಂಧರನು ಸರ್ವದೈತ್ಯ ಜನಕ್ಕೂ ಒಡೆಯನು. ನಾನು ಆತನಿಂದ ಕಳುಹಿಸಲ್ಪಟ್ಟ ದೂತನು. ಆತನೇನು ಹೇಳಿದನೋ ಅದನ್ನು ಹೇಳುತ್ತೇನೆ ಕೇಳು.

೭. ‘ಮಂದರಗಿರಿಯನ್ನಿಟ್ಟು ನನ್ನ ತಂದೆಯಾದ ಸಾಗರನನ್ನು ಏತಕ್ಕೆ ಮಥಿಸಿದ್ದೀಯೆ? ನವರತ್ನಗಳನ್ನೂ ಏಕೆ ತೆಗೆದುಕೊಂಡೆ? ಅವೆಲ್ಲವನ್ನೂ ಶೀಘ್ರವಾಗಿ ನನಗೆ ತಂದೊಪ್ಪಿಸು.’

೮. ಹೀಗೆಂದು ನುಡಿದ ದೂತನ ವಚನವನ್ನಾಲಿಸಿ ತ್ರಿದಶಾಧಿಪತಿಯು ವಿಸ್ಮಿತನಾದನು. ಭಯದಿಂದ ನಡುಗುತ್ತ ಅವನು ಘಸ್ಮರನಿಗೆ ಹೀಗೆ ಹೇಳಿದನು.

೯. ಇಂದ್ರನು ಹೇಳುತ್ತಾನೆ :—“ ಎಲಾ ದೂತಾ! ಪೂರ್ವದಲ್ಲಿ ನಾನು ಸಾಗರವನ್ನೇಕೆ ಮಥಿಸಿದೆನೆಂಬ ಕಾರಣವನ್ನು ಕೇಳು. ನನ್ನ ಭಯದಿಂದ ಗಾಬರಿಗೊಂಡ ಪರ್ವತಗಳಿಗೆ ಸಾಗರನು ತನ್ನೊಡಲಿನಲ್ಲಿ ಎಡೆಗೊಟ್ಟನು.

೧೦-೧೧. ನನ್ನ ಶತ್ರುಗಳಾದ ಇನ್ನೂ ಬೇರೆ ದೈತ್ಯರನ್ನು ಅವನು ರಕ್ಷಿಸಿದನು. ಆದಕಾರಣ ಸಮುದ್ರಮಥನದಿಂದ ಯಾವ ಯಾವ ವಸ್ತುವು ಹುಟ್ಟಿ ಬಂದಿತೋ ಅದನ್ನು ನಾನೇ ತೆಗೆದುಕೊಂಡೆನಷ್ಟೆ. ಪೂರ್ವದಲ್ಲಿ ಸಾಗರಾತ್ಮಜನಾದ ಶಂಖನೂ ಕೂಡ ಇದೇ ರೀತಿ ದೇವತೆಗಳನ್ನು ದ್ವೇಷಿಸಿದನು. ಅವನು ಸಹ ಸಾಗರದ ಉದರವನ್ನೇ ಪ್ರವೇಶಮಾಡಿ ನನ್ನ ಅನುಜನಿಂದ ಹತನಾದನು

ತದ್ಗಚ್ಛ ಕಥಯಸ್ವಾಸ್ಯ ಸರ್ವಂ ಮಥನಕಾರಣಂ ।

ನಾರದ ಉವಾಚ:—

ಇತ್ಥಂ ವಿಸರ್ಜಿತೋ ದೂತಸ್ತದೇಂದ್ರೇಣಾಗಮುದ್ಭುವಂ ॥ ೧೨ ॥
ತದಿದಂ ವಚನಂ ಸರ್ವಂ ದೈತ್ಯಾಯಾಕಥಯತ್ತದಾ ।
ತನ್ನಿಶಮ್ಯ ತದಾ ದೈತ್ಯೋ ರೋಷಾತ್ಪ್ರಸ್ಫುರಿತಾಧರಃ ॥ ೧೩ ॥
ದೈತ್ಯಸೇನಾಸಮಾಯುಕ್ತೋ ಯಯೌ ಯೋದ್ಧುಂ ತ್ರಿವಿಷ್ಟಪಂ ।
ತತೋ ಯುದ್ಧೋ ಮಹಾನ್ ಜಾತೋ ದೇವದಾನವಸಂಕ್ಷಯಃ ॥ ೧೪ ॥
ತತ್ರ ಯುದ್ಧೇ ಮಹಾನ್ ದೈತ್ಯಾನ್ ಭಾರ್ಗವಸ್ತೂದತಿಷ್ಠಿಪತ್ ।
ವಿದ್ಯಯಾ ಮೃತಜೀವಿನ್ಯಾ ಮಂತ್ರಿತೈಸ್ತೋಯಬಿಂದುಭಿಃ ॥ ೧೫ ॥
ದೇವಾನಪಿ ತಥಾ ಯುದ್ಧೇ ತತ್ರಾಜೀವಯದಂಗಿರಾಃ ।
ದಿವ್ಯೌಷಧೀಃ ಸಾಮಾನೀಯ ದ್ರೋಣಾದ್ರೇಃ ಸ ಪುನಃ ಪುನಃ ॥ ೧೬ ॥
ದೃಷ್ಟ್ವಾ ದೇವಾಂಸ್ತಥಾ ಯುದ್ಧೇ ಪುನರೇವ ಸಮುತ್ಥಿತಾನ್ ।
ಜಲಂಧರಃ ಕ್ರೋಧವಶೋ ಭಾರ್ಗವಂ ವಾಕ್ಯಮಬ್ರವೀತ್ ॥ ೧೭ ॥

---

೧೨. ಆದುದರಿಂದ ಹೋಗು. ಸಮುದ್ರ ಮಥನದ ಸರ್ವ ಕಾರಣವನ್ನೂ ನಿನ್ನ ಒಡೆಯನಾದ ಆ ಜಲಂಧರನಿಗೆ ತಿಳಿಸು" ಎಂದನು. ನಾರದನು ಹೇಳುತ್ತಾನೆ:— ಈ ರೀತಿ ಇಂದ್ರನು ಹೇಳಿಕಳುಹಿಸಿದ ಆ ದೂತನು ಭೂಲೋಕಕ್ಕೆ ಬಂದನು.

೧೩. ಈ ಎಲ್ಲ ಮಾತನ್ನೂ ಅವನು ಜಲಂಧರದೈತ್ಯನಿಗೆ ತಿಳಿಸಿದನು. ಅದನ್ನು ಕೇಳಿ ಅವನು ರೋಷದಿಂದ ಅದುರುವ ತುಟಿಗಳುಳ್ಳವನಾದನು.

೧೪. ದೈತ್ಯಸೇನೆಯಿಂದೊಡಗೂಡಿ ಯುದ್ಧಮಾಡಲು ಸ್ವರ್ಗಕ್ಕೆ ನಡೆದನು. ಬಳಿಕಲಾ ಯುದ್ಧದಲ್ಲಿ ದೇವದಾನವರ ನಾಶವು ಮಹತ್ತರವಾಯಿತು.

೧೫. ಆ ಯುದ್ಧದಲ್ಲಿ ಮೃತರಾದ ದೈತ್ಯರನ್ನು ಭಾರ್ಗವನು ಮೃತ ಸಂಜೀವಿನೀ ವಿದ್ಯೆಯಿಂದ ಮಂತ್ರಿತವಾದ ಜಲಬಿಂದುಗಳಿಂದ ಉಜ್ಜೀವಗೊಳಿಸುತ್ತಿದ್ದನು.

೧೬. ಬೃಹಸ್ಪತಿಯು ಸಹ ದ್ರೋಣಾದ್ರಿಯಿಂದ ಪುನಃ ಪುನಃ ದಿವ್ಯೌಷಧಿಗಳನ್ನು ತರಿಸಿ ಅವುಗಳಿಂದ ಯುದ್ಧದಲ್ಲಿ ಮೃತರಾದ ದೇವತೆಗಳನ್ನೂ ಕೂಡ ಮತ್ತೆ ಮತ್ತೆ ಬದುಕಿಸುತ್ತಿದ್ದನು.

೧೭. ಯುದ್ಧದಲ್ಲಿ ಆ ರೀತಿ ಮೃತರಾಗುತ್ತಿದ್ದ ದೇವತೆಗಳು ಮತ್ತೆ ಎದ್ದು ನಿಂತುದನ್ನು ಕಂಡು ಜಲಂಧರನು ಕ್ರೋಧವಶನಾಗಿ ಭಾರ್ಗವನನ್ನು ಕುರಿತು ಈ ರೀತಿ ಮಾತನಾಡಿದನು.

ಜಲಂಧರ ಉವಾಚ :—

ಮಯಾ ಯುದ್ಧೇ ಹತಾ ದೇವಾ ಉತ್ತಿಷ್ಠಂತಿ ಕಥಂ ಪುನಃ ।
ತವ ಸಂಜೀವಿನೀ ವಿದ್ಯಾ ನವಾನ್ಯತ್ರೇತಿ ವಿಶ್ರುತಂ ॥ ೧೮ ॥

ಶುಕ್ರ ಉವಾಚ :—

ದಿವ್ಯೌಷಧೀಃ ಸಮಾನೀಯ ದ್ರೋಣಾದ್ರೇರಂಗಿರಾಃ ಸುರಾನ್ ।
ಜೀವಯತ್ಯೇವ ತಚ್ಛೀಘ್ರಂ ದ್ರೋಣಾದ್ರಿಂ ತ್ವಮುಪಾಹರ ॥ ೧೯ ॥

ನಾರದ ಉವಾಚ :—

ಇತ್ಯುಕ್ತಸ್ಸ ತು ದೈತ್ಯೇಂದ್ರೋ ನೀತ್ವಾ ದ್ರೋಣಾಚಲಂ ತದಾ ।
ಪ್ರಾಕ್ಷಿಪತ್ಸಾಗರೇ ತೂರ್ಣಂ ಪುನರಾಗಾನ್ಮಹಾಹವಂ ॥ ೨೦ ॥
ಅಥ ದೇವಾನ್ ಹತಾನ್ ದೃಷ್ಟ್ವಾ ದ್ರೋಣಾದ್ರಿಮಗಮದ್ಗುರುಃ ।
ತಾವತ್ತತ್ರ ಗಿರೀಂದ್ರಂ ತು ನ ದದರ್ಶ ಸುರಾರ್ಚಿತಃ ॥ ೨೧ ॥
ಜ್ಞಾತ್ವಾ ದೈತ್ಯಹೃತಂ ದ್ರೋಣಂ ಧಿಷಣೋ ಭಯವಿಹ್ವಲಃ ।
ಆಗತ್ಯ ದೂತಾನ್ವ್ಯಾಜಹ್ರೇ ಶ್ವಾಸಾಕುಲಿತವಿಗ್ರಹಃ ॥ ೨೨ ॥
ಪಲಾಯಧ್ವಂ ಜವಾದ್ದೇವಾ ನೈನಂ ಜೇತುಂ ಕ್ಷಮೋ ಯತಃ ।
ರುದ್ರಾಂಶಸಂಭವೋ ಹ್ಯೇಷ ಸ್ಮರಧ್ವಂ ಶಕ್ರಚೇಷ್ಟಿತಂ ॥ ೨೩ ॥

---

೧೮. ಜಲಂಧರನು ಹೇಳುತ್ತಾನೆ:—“ನನ್ನಿಂದ ಯುದ್ಧದಲ್ಲಿ ಹತರಾದ ದೇವತೆಗಳು ಪುನರ್ಜೀವಿತರಾಗುತ್ತಿರುವುದೆಂತು? ಗುರುವೇ! ನಿನ್ನ ಸಂಜೀವಿನೀ ವಿದ್ಯೆಯು ಬೇರೆ ಕಡೆಯಲ್ಲಿ ಇಲ್ಲವೆಂದು ವಿಖ್ಯಾತವಾಗಿದೆ” ಎಂದನು.

೧೯. ಶುಕ್ರನು ಹೇಳುತ್ತಾನೆ:— “ಜಲಂಧರಾ! ಬೃಹಸ್ಪತಿಯು ದ್ರೋಣಾದ್ರಿಯಿಂದ ದಿವ್ಯೌಷಧಿಗಳನ್ನು ತರಿಸಿ ಸುರರಿಗೆ ಜೀವವೆರೆಯುತ್ತಿದ್ದಾನೆ. ಆದುದರಿಂದ ದ್ರೋಣಾದ್ರಿಯನ್ನು ನೀನು ಬೇರೆಡೆಗೆ ತೆಗೆದು ಸಾಗಿಸು.”

೨೦. ನಾರದನು ಹೇಳುತ್ತಾನೆ:—ಶುಕ್ರನು ಈ ರೀತಿ ಹೇಳಲಾಗಿ ಆ ದೈತ್ಯೇಂದ್ರನು ದ್ರೋಣಾಚಲವನ್ನು ತಂದು ಬೇಗನೆ ಸಮುದ್ರದಲ್ಲಿ ಎತ್ತಿ ಹಾಕಿದನು. ಬಳಿಕ ಮರಳಿಯೂ ಆ ಮಹಾಯುದ್ಧಕ್ಕೆ ಪೋದನು.

೨೧. ಆಗ ದೇವತೆಗಳು ಹತರಾದುದನ್ನು ಕಂಡು ಗುರುವು ದ್ರೋಣಾದ್ರಿಗೆ ಹೋದನು. ಹೋಗಿ ನೋಡಲಾಗಿ ಸುರಾರ್ಚಿತನಾದ ಆತನು ಅಲ್ಲಿ ಆ ಗಿರಿಯನ್ನು ಕಾಣಲೇ ಇಲ್ಲವು.

೨೨–೨೩. ಆ ದೈತ್ಯನು ದ್ರೋಣಾಚಲವನ್ನು ಅಪಹರಿಸಿದನೆಂದರಿತು ಬೃಹಸ್ಪತಿಯು ಭಯವಿಹ್ವಲನಾಗಿ ಹಿಂದಕ್ಕೆ ಬಂದು ದೂರದಲ್ಲೇ ನಿಂತು ನಿಟ್ಟುಸುರಿನಿಂದ ಆಕುಲಗೊಂಡ ಶರೀರವುಳ್ಳವನಾಗಿ, “ಅಯ್ಯಾ ದೇವತೆಗಳಿರಾ! ಯುದ್ಧವನ್ನು ಬಿಟ್ಟು ಜಾಗ್ರತೆಯಾಗಿ ಓಡಿಹೋಗಿರಿ. ಇವನನ್ನು

ಶ್ರುತ್ವಾ ತದ್ವಚನಂ ದೇವಾ ಭಯವಿಹ್ವಲಿತಾಸ್ತದಾ ।
ದೈತ್ಯೇನ ವಧ್ಯಮಾನಾಸ್ತೇ ಪಲಾಯಂತೇ ದಿಶೋ ದಶ ॥ ೨೪ ॥
ದೇವಾನ್ ವಿದ್ರಾವಿತಾನ್ ದೃಷ್ಟ್ವಾ ದೈತ್ಯೈಸ್ಸಾಗರನಂದನಃ ।
ಶಂಖಭೇರೀಜಯರವೈಃ ಪ್ರವಿವೇಶಾಮರಾವತೀಂ ॥ ೨೫ ॥
ಪ್ರವಿಷ್ಟೇ ನಗರೀಂ ದೈತ್ಯೇ ದೇವಾಶ್ಶಕ್ರಪುರೋಗಮಾಃ ।
ಸುವರ್ಣಾದ್ರಿಗುಹಾಂ ಪ್ರಾಪ್ಯ ನ್ಯವಸನ್ ದೈತ್ಯತಾಪಿತಾಃ ॥ ೨೬ ॥
ತತಶ್ಚ ಸರ್ವೇಷ್ವಸುರೋಽಧಿಕಾರೇ
ಷ್ವಿಂದ್ರಾದಿಕಾನಾಂ ವಿನಿವೇಶಯತ್ತದಾ ।
ಶುಂಭಾದಿಕಾನ್ ದೈತ್ಯವರಾನ್ ಪೃಥಕ್ಪೃಥಕ್
ಸ್ವಯಂ ಸುವರ್ಣಾದ್ರಿಗುಹಾಮಗಾತ್ಪುನಃ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಜಲಂಧರವಿಜಯಪ್ರಾಪ್ತಿ
ವರ್ಣನಂ"ನಾಮ ಪಂಚದಶೋಽಧ್ಯಾಯಃ

---

ಜಯಿಸಲು ಸಾಧ್ಯವಿಲ್ಲ. ಏಕೆಂದರೆ ಇವನು ರುದ್ರಾಂಶದಿಂದ ಹುಟ್ಟಿದವನು. ಹಿಂದೆ ಶುಕ್ರನು ನಿಮಗೆ ಮಾಡಿದ ಶಾಸ್ತಿಯನ್ನು ಸ್ಮರಿಸಿಕೊಳ್ಳಿರಿ" ಎಂದು ಕೂಗಿದನು.

೨೪–೨೫. ಆ ವಚನವನ್ನಾಲಿಸಿ ದೇವತೆಗಳು ಭಯದಿಂದ ದಿಕ್ಕುತೋಚದವರಾದರು. ದೈತ್ಯನಿಂದ ವಧೆಗೀಡಾಗುತ್ತಿದ್ದ ಅವರು ದಶದಿಕ್ಕುಗಳಿಗೂ ಪಲಾಯನ ಮಾಡಿದರು. ದೇವತೆಗಳು ಓಡಿಹೋದುದನ್ನು ಕಂಡು ಸಾಗರ ನಂದನನಾದ ಆ ಜಲಂಧರನು ದೈತ್ಯರಿಂದೊಡಗೂಡಿ ಶಂಖಭೇರಿಗಳ ಜಯಧ್ವನಿಯನ್ನು ಮಾಡುತ್ತಾ ಅಮರಾವತಿಯನ್ನು ಪ್ರವೇಶಿಸಿದನು.

೨೬. ಆ ದೈತ್ಯನು ನಗರಿಯನ್ನು ಪ್ರವೇಶಿಸಲಾಗಿ ಇಂದ್ರನೇ ಮೊದಲಾದ ದೇವತೆಗಳು ಸುವರ್ಣಾದ್ರಿಯ (ಮೇರು ಪರ್ವತದ) ಗುಹೆಗೆ ಹೋಗಿ ಸೇರಿದರು. ದೈತ್ಯರಿಂದ ಪೀಡಿಸಲ್ಪಟ್ಟವರಾಗಿ ಅವರೆಲ್ಲರೂ ಅಲ್ಲಿಯೇ ವಾಸಿಸುತ್ತಿದ್ದರು.

೨೭. ಬಳಿಕ ಅಸುರನು ಇಂದ್ರಾದಿಗಳ ಎಲ್ಲ ಅಧಿಕಾರಗಳಲ್ಲಿಯೂ ಶುಂಭನೇ ಮೊದಲಾದ ದೈತ್ಯಶ್ರೇಷ್ಠರನ್ನು ಬೇರೆಬೇರೆಯಾಗಿ ನೇಮಕಮಾಡಿದನು. ಹಾಗೆ ನೇಮಿಸಿ ತಾನು ಮತ್ತೆ ಸುವರ್ಣಾದ್ರಿಯ ಗುಹೆಯನ್ನು ಹೋಗಿ ಸೇರಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ
"ಜಲಂಧರನ ವಿಜಯಪ್ರಾಪ್ತಿವರ್ಣನ"ವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಜಲಂಧರಸಭಾಯಾಂ ನಾರದಾಗಮನಂ

ನಾರದ ಉವಾಚ :—

ಪುನರ್ದೈತ್ಯಂ ಸಮಾಯಾಂತಂ ದೃಷ್ಟ್ವಾ ದೇವಾ ಸವಾಸವಾಃ ।
ಭಯಪ್ರಕಂಪಿತಾಸ್ಸರ್ವೇ ವಿಷ್ಣುಂ ಸ್ತೋತುಂ ಪ್ರಚಕ್ರಮುಃ ॥ ೧ ॥

ನಮೋ ಮತ್ಸ್ಯಕೂರ್ಮಾದಿ ನಾನಾಸ್ವರೂಪೈ
ಸ್ಸದಾಭಕ್ತಕಾರ್ಯೋದ್ಯತಾಯಾರ್ತಿಹಂತ್ರೇ ।
ವಿಧಾತ್ರಾದಿ ಸರ್ಗಸ್ಥಿತಿಧ್ವಂಸಕರ್ತ್ರೇ
ಗದಾಶಂಖಪದ್ಮಾರಿಹಸ್ತಾಯ ತೇಽಸ್ತು ॥ ೨ ॥

ರಮಾವಲ್ಲಭಾಯಾಸುರಾಣಾಂ ನಿಹಂತ್ರೇ
ಭುಜಂಗಾರಿಯಾನಾಯ ಪೀತಾಂಬರಾಯ ।
ಮುಖಾದಿಕ್ರಿಯಾಪಾಕಕರ್ತ್ರೇ ವಿಕರ್ತ್ರೇ
ಶರಣ್ಯಾಯ ತಸ್ಮೈ ನತಾಸ್ಮೋ ನತಾಸ್ಮಃ ॥ ೩ ॥

---

## ಕನ್ನಡದ ಅನುವಾದ

### ಜಲಂಧರನ ಸಭೆಗೆ ನಾರದಾಗಮನ

೧. ನಾರದನು ಹೇಳುತ್ತಾನೆ:—ಪುನಃ ತಮ್ಮ ಕಡೆಗೆ ಬರುತ್ತಿರುವ ಆ ದೈತ್ಯನನ್ನು ಕಂಡು ಇಂದ್ರಸಮೇತರಾದ ದೇವತೆಗಳೆಲ್ಲರೂ ಭಯದಿಂದ ಗಡಗಡನೆ ನಡುಗುತ್ತಾ ವಿಷ್ಣುವನ್ನು ಸ್ತುತಿಸಲು ಪ್ರಾರಂಭಿಸಿದರು.

೨. "ಎಲೈ ನಾರಾಯಣನೇ! ಮತ್ಸ್ಯ ಕೂರ್ಮಾದಿ ನಾನಾ ಸ್ವರೂಪಗಳಿಂದ ಭಕ್ತರ ಕಾರ್ಯಗಳಲ್ಲಿಯೇ ಯಾವಾಗಲೂ ತೊಡಗಿರುವ ಆರ್ತಿವಿನಾಶಕನಾದ ನಿನಗೆ ನಮಸ್ಕಾರವು. ಬ್ರಹ್ಮಾದಿಗಳ ಮೂಲಕ ಸೃಷ್ಟಿ ಸ್ಥಿತಿ ಪ್ರಳಯಗಳನ್ನು ನಡೆಸುವವನಿಗೆ ನಮಸ್ಕಾರವು. ಗದೆ, ಶಂಖ, ಪದ್ಮ ಮೊದಲಾದುವನ್ನು ಹಸ್ತಗಳಲ್ಲಿ ಧರಿಸಿರುವ ಸ್ವಾಮಿಯೆ! ನಿನಗೆ ನಮಸ್ಕಾರವು.

೩. ರಮಾವಲ್ಲಭ! ನಿನಗೆ ನಮೋ ನಮಃ. ಅಸುರಧ್ವಂಸಿಯೂ ಗರುಡವಾಹನನೂ ಆದ ನಿನಗೆ ನಮಸ್ಕಾರವು. ಪೀತಾಂಬರಧಾರೀ! ನಿನಗೆ ನಮಸ್ಕಾರವು. ಯಜ್ಞ ಮೊದಲಾದ ಕ್ರಿಯೆಗಳನ್ನು ಪಕ್ವಗೊಳಿಸುವವನೂ ಪ್ರಳಯಕರ್ತನೂ ಆದ ನಿನಗೆ ನಮಸ್ಕಾರವು. ಶರಣ್ಯನಾದ ನಿನಗೆ ತಲೆಬಾಗಿ ವಂದಿಸುವೆವು.

ನಮೋ ದೈತ್ಯಸಂತಾಪಿತಾಮರ್ತ್ಯದುಃಖಾ
ಚಲಧ್ವಂಸದಂಭೋಲಯೇ ವಿಷ್ಣವೇ ತೇ ।
ಭುಜಂಗೇಶತಲ್ಪೇಶಯಾಯಾರ್ಕಚಂದ್ರ
ದ್ವಿನೇತ್ರಾಯ ತಸ್ಮೈ ನತಾಸ್ಮೋ ನತಾಸ್ಮಃ ॥ ೪ ॥

ನಾರದ ಉವಾಚ :—

ಸಂಕಷ್ಟನಾಶನಂ ನಾಮ ಸ್ತೋತ್ರಮೇತತ್ಪಠೇನ್ನರಃ ।
ಸ ಕದಾಚಿನ್ನ ಸಂಕಷ್ಟೈಃ ಪೀಡ್ಯತೇ ಕೃಪಯಾ ಹರೇಃ ॥ ೫ ॥
ಇತಿ ದೇವಾ ಸ್ತುತಿಂ ಯಾವತ್ ಕುರ್ವಂತಿ ದನುಜದ್ವಿಷಃ ।
ತಾವತ್ಸುರಾಣಾಮಾಪತ್ತಿಃ ವಿಜ್ಞಾತಾ ವಿಷ್ಣುನಾ ತದಾ ॥ ೬ ॥
ಸಹಸೋತ್ಥಾಯ ದೈತ್ಯಾರಿಃ ಸಕ್ರೋಧಃ ಖಿನ್ನಮಾನಸಃ ।
ಆರೂಢೋ ಗರುಡಂ ವೇಗಾತ್ ಲಕ್ಷ್ಮೀಂ ವಚನಮಬ್ರವೀತ್ ॥ ೭ ॥

ಶ್ರೀ ಭಗವಾನುವಾಚ :—

ಜಲಂಧರೇಣ ತೇ ಭ್ರಾತ್ರಾ ದೇವಾನಾಂ ಕದನಂ ಕೃತಂ ।
ತೈರಾಹೂತೋ ಗಮಿಷ್ಯಾಮಿ ಯುದ್ಧಾಯಾದ್ಯ ತ್ವರಾನ್ವಿತಃ ॥ ೮ ॥

---

೪. ದೈತ್ಯರಿಂದ ಸಂತಾಪಗೊಂಡ ದೇವತೆಗಳ ದುಃಖಾಚಲವನ್ನು ಧ್ವಂಸ ಮಾಡುವ ವಜ್ರಾಯುಧವಾಗಿರುವ ಎಲೈ ಶ್ರೀಪತಿಯೇ! ನಿನಗೆ ನಮಸ್ಕಾರವು. ಸರ್ಪರಾಜನೆಂಬ ಹಾಸಿಗೆಯ ಮೇಲೆ ಮಲಗಿರುವವನೂ, ಸೂರ್ಯಚಂದ್ರರೆಂಬೆರಡು ನೇತ್ರಗಳುಳ್ಳವನೂ ಆದ ಓ ಪ್ರಭುವೇ! ನಿನಗೆ ನಮೋನಮಃ!!"

೫. ನಾರದನು ಹೇಳುತ್ತಾನೆ:—ಸಂಕಷ್ಟನಾಶನವೆಂಬ ಈ ಸ್ತೋತ್ರವನ್ನು ಯಾವ ಮಾನವನು ಪಠಿಸುತ್ತಾನೆಯೋ ಅವನು ಶ್ರೀಹರಿಯ ಕೃಪೆಯಿಂದ ಯಾವಾಗಲೂ ಸಂಕಷ್ಟಗಳಿಂದ ಪೀಡಿತನಾಗುವುದಿಲ್ಲ.

೬. ಈ ರೀತಿಯಾಗಿ ದೇವತೆಗಳು ಆ ದೈತ್ಯಾರಿಯನ್ನು ಸ್ತುತಿಸಲು ಆ ಪ್ರಭುವು ಅವರಿಗೆ ಒದಗಿಬಂದಿದ್ದ ಆಪತ್ತನ್ನು ಅರಿತುಕೊಂಡನು.

೭. ಆಗಲಾದೈತ್ಯಾರಿಯು ತಟ್ಟನೆದ್ದು ಕ್ರೋಧಗೊಂಡು ಖಿನ್ನಮಾನಸನಾಗಿ ಬೇಗನೆ ಗರುಡನ ಮೇಲೇರಿ ಲಕ್ಷ್ಮೀದೇವಿಗೆ ಈ ಮಾತನ್ನು ಹೇಳಿದನು.

೮. ಶ್ರೀಭಗವಂತನು ಹೇಳುತ್ತಾನೆ:—"ಎಲೆ ದೇವಿ! ನಿನ್ನ ಸೋದರನಾದ ಜಲಂಧರನು ದೇವತೆಗಳೊಡನೆ ಕದನಮಾಡಿದನು. ಆ ದೇವತೆಗಳು ನನ್ನನ್ನು ಸಹಾಯಕ್ಕಾಗಿ ಕರೆದಿರುವರು. ಈಗ ನಾನು ತ್ವರೆಯಿಂದ ಯುದ್ಧಕ್ಕೆ ಹೋಗುತ್ತೇನೆ" ಎಂದನು.

ಶ್ರೀರುವಾಚ :—

**ಅಹಂ ತೇ ವಲ್ಲಭಾ ನಾಥ ಭಕ್ತ್ಯಾ ಚ ಯದಿ ಸರ್ವದಾ ।**
**ತತ್ಕಥಂ ತೇ ಮಮ ಭ್ರಾತಾ ಯುದ್ಧೇ ವಧ್ಯಃ ಕೃಪಾನಿಧೇ ॥ ೯ ॥**

ಶ್ರೀ ಭಗವಾನುವಾಚ :—

**ರುದ್ರಾಂಶಸಂಭವತ್ವಾಚ್ಚ ಬ್ರಹ್ಮಣೋ ವಚನಾದಪಿ ।**
**ಪ್ರೀತ್ಯಾ ಚ ತವ ನೈವಾಯಂ ಮಮ ವಧ್ಯೋ ಜಲಂಧರಃ ॥ ೧೦ ॥**

ನಾರದ ಉವಾಚ :—

**ಇತ್ಯುಕ್ತ್ವಾ ಗರುಡಾರೂಢಃ ಶಂಖಚಕ್ರಗದಾಽಸಿಭೃತ್ ।**
**ವಿಷ್ಣುರ್ವೇಗಾದ್ಯಯೌ ಯೋದ್ಧುಂ ಯತ್ರ ದೇವಾಃ ಸ್ತುವಂತಿ ತೇ ॥**
**ಅಥಾರುಣಾನುಜಾತ್ಯುಗ್ರಪಕ್ಷವಾತಪ್ರಪೀಡಿತಾಃ ।**
**ವಾತ್ಯಾ ವಿಮರ್ದಿತಾ ದೈತ್ಯಾ ಬಭ್ರಮುಃ ಖೇ ಯಥಾ ಘನಾಃ ॥ ೧೨ ॥**
**ತತೋ ಜಲಂಧರೋ ದೃಷ್ಟ್ವಾ ದೈತ್ಯಾನ್ ವಾತ್ಯಾ ಪ್ರಪೀಡಿತಾನ್ ।**
**ಉದ್ವೃತ್ತನಯನಃ ಕ್ರೋಧಾತ್ ತತೋ ವಿಷ್ಣುಂ ಸಮಭ್ಯಯಾತ್॥ ೧೩ ॥**

---

೯. ಆಗ ಲಕ್ಷ್ಮಿಯು "ನಾಥಾ! ನೀನು ಕೃಪಾನಿಧಿಯು; ಭಕ್ತಿಯಿಂದ ನಾನು ಸರ್ವದಾ ನಿನಗೆ ವಲ್ಲಭೆಯಾಗಿರುವೆನು. ಇದು ನಿಜವಾದರೆ ನನ್ನ ಸೋದರನು ಯುದ್ಧದಲ್ಲಿ ನಿನಗೆ ಹೇಗೆ ವಧ್ಯನಾಗುವನು?" ಎಂದಳು.

೧೦. ಲಕ್ಷ್ಮಿಯ ಮಾತನ್ನಾಲಿಸಿ ಶ್ರೀ ಭಗವಂತನು "ದೇವಿ! ರುದ್ರಾಂಶ ಸಂಭವನಾಗಿರುವುದರಿಂದಲೂ, ಬ್ರಹ್ಮನ ವಚನದಿಂದಲೂ, ನಿನ್ನಲ್ಲಿ ನನಗಿರುವ ಪ್ರೀತಿಯಿಂದಲೂ ಈ ಜಲಂಧರನು ನನಗೆ ವಧ್ಯನಾಗುವುದಿಲ್ಲವು" ಎಂದು ಮರು ನುಡಿದನು.

೧೧. ನಾರದನು ಹೇಳುತ್ತಾನೆ:—ಈ ರೀತಿಯಾಗಿ ನುಡಿದು ವಿಷ್ಣುವು ಶಂಖ, ಚಕ್ರ, ಗದೆ ಮೊದಲಾದ ಆಯುಧಗಳನ್ನು ಧರಿಸಿ ಗರುಡಾರೂಢನಾಗಿ ದೇವತೆಗಳು ತನ್ನನ್ನು ಸ್ತುತಿಸುತ್ತಿದ್ದಲ್ಲಿಗೆ ಆ ದಾನವನೊಡನೆ ಯುದ್ಧಮಾಡ ಲೋಸುಗ ವೇಗದಿಂದ ಪ್ರಯಾಣಮಾಡಿದನು.

೧೨. ಆಗ ಅರುಣಾನುಜನಾದ ಗರುಡನ ಅತ್ಯುಗ್ರವಾದ ರೆಕ್ಕೆಗಳಿಂದೆದ್ದ ಗಾಳಿಯಿಂದ ಬಹಳವಾಗಿ ಪೀಡಿತರಾಗಿ ದೈತ್ಯರು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಆಕಾಶದಲ್ಲಿ ಚೆಲ್ಲಾಪಿಲ್ಲಿಯಾದ ಮೋಡಗಳಂತೆ ಸಿಕ್ಕಿದ ಕಡೆಗಳಲ್ಲೆಲ್ಲ ಓಡಾಡ ತೊಡಗಿದರು.

೧೩. ಬಳಿಕ ಬಿರುಗಾಳಿಯಿಂದ ದನುಜರು ಪೀಡಿತರಾಗಿರುವುದನ್ನು ಕಂಡು ಜಲಂಧರನು ದೊಡ್ಡದಾಗಿ ಕಣ್ಣರಳಿಸಿ ಕ್ರೋಧದಿಂದ ವಿಷ್ಣುವಿಗೆ ಅಭಿಮುಖನಾಗಿ ನಡೆದನು.

ತತಸ್ಸಮಭವದ್ಯುದ್ಧಂ ವಿಷ್ಣುದೈತ್ಯೇಂದ್ರಯೋರ್ಮಹತ್ ।
ಆಕಾಶಂ ಕುರ್ವತೋರ್ಬಾಣೈಃ ತದಾ ನಿರವಕಾಶವತ್ ॥ ೧೪ ॥
ವಿಷ್ಣುರ್ದೈತ್ಯಸ್ಯ ಬಾಣೌಘೈಃ ಧ್ವಜಂ ಛತ್ರಂ ಧನುರ್ಹಯಾನ್ ।
ಚಿಚ್ಛೇದ ತಂ ಚ ಹೃದಯೇ ಬಾಣೇನೈಕೇನ ತಾಡಯತ್ ॥ ೧೫ ॥
ತತೋ ದೈತ್ಯಸ್ಸಮುತ್ಪತ್ಯ ಗದಾಪಾಣಿಸ್ತ್ವರಾನ್ವಿತಃ ।
ಆಹತ್ಯ ಗರುಡಂ ಮೂರ್ಧ್ನಿ ಪಾತಯಾಮಾಸ ಭೂತಲೇ ॥ ೧೬ ॥
ವಿಷ್ಣುರ್ಗದಾಂ ಸ್ವಖಡ್ಗೇನ ಚಿಚ್ಛೇದ ಪ್ರಹಸನ್ನಿವ ।
ತಾವತ್ಸ ಹೃದಯೇ ವಿಷ್ಣುಂ ಜಘಾನ ದೃಢಮುಷ್ಟಿನಾ ॥ ೧೭ ॥
ತತಸ್ತೌ ಬಾಹುಯುದ್ಧೇನ ಯುಯುಧಾತೇ ಮಹಾಬಲೌ ।
ಬಾಹುಭಿರ್ಮುಷ್ಟಿಭಿಶ್ಚೈವ ಜಾನುಭಿರ್ನಾದಯನ್ಮಹೀಂ ॥ ೧೮ ॥
ಏವಂ ತೌ ಸುಚಿರಂ ಯುದ್ಧಂ ಕೃತ್ವಾ ವಿಷ್ಣುಃ ಪ್ರತಾಪವಾನ್ ।
ಉವಾಚ ದೈತ್ಯರಾಜಾನಂ ಮೇಘಗಂಭೀರನಿಸ್ವನಂ ॥ ೧೯ ॥

ವಿಷ್ಣುರುವಾಚ :—

ವರಂ ವರಯ ದೈತ್ಯೇಂದ್ರ ಪ್ರೀತೋಽಸ್ಮಿ ತವ ವಿಕ್ರಮಾತ್ ।
ಅದೇಯಮಪಿ ತೇ ದದ್ಮಿ ಯತ್ತೇ ಮನಸಿ ವರ್ತತೇ ॥ ೨೦ ॥

---

೧೪. ಬಳಿಕ ವಿಷ್ಣುವಿಗೂ, ದೈತ್ಯೇಂದ್ರನಿಗೂ ಮಹತ್ತಾದ ಯುದ್ಧವಾಯಿತು. ಅವರಿಬ್ಬರೂ ಬಾಣಗಳಿಂದ ಆಕಾಶವನ್ನು ನಿರವಕಾಶವೋ ಎಂಬಂತೆ ಮಾಡುತ್ತಿದ್ದರು.

೧೫. ವಿಷ್ಣುವು ಬಾಣಪರಂಪರೆಗಳಿಂದ ದೈತ್ಯನ ಧ್ವಜವನ್ನೂ, ಛತ್ರವನ್ನೂ, ಧನುಸ್ಸನ್ನೂ, ಕುದುರೆಗಳನ್ನೂ ಕತ್ತರಿಸಿದನು. ಅವನನ್ನು ಒಂದು ಬಾಣದಿಂದ ಎದೆಗೆ ಗುರಿಯಿಟ್ಟು ಹೊಡೆದನು.

೧೬. ಬಳಿಕ ದೈತ್ಯನು ನೆಗೆದೆದ್ದು ಗದಾಪಾಣಿಯಾಗಿ ತ್ವರೆಯಿಂದ ಕೂಡಿ ತಲೆಯ ಮೇಲೆ ಹೊಡೆದು ಗರುಡನನ್ನು ನೆಲಕ್ಕೆ ಕೆಡವಿದನು.

೧೭. ವಿಷ್ಣುವು ಆ ಗದೆಯನ್ನು ತನ್ನ ಖಡ್ಗದಿಂದ ನಗುನಗುತ್ತಲೇ ಕತ್ತರಿಸಿ ಹಾಕಿದನು. ಆಗ ಅವನು ಮುಷ್ಟಿ ಬಿಗಿದು ವಿಷ್ಣುವಿನ ಎದೆಗೆ ಹೊಡೆದನು.

೧೮. ಬಳಿಕ ಬಹಾಬಲರಾದ ಅವರಿಬ್ಬರೂ ಬಾಹುಯುದ್ಧದಲ್ಲಿ ಹೋರಿದರು. ಬಾಹುಗಳಿಂದಲೂ ಮುಷ್ಟಿಗಳಿಂದಲೂ ಮೊಳಕಾಲುಗಳಿಂದಲೂ ಭೂಮಿಯನ್ನೆಲ್ಲ ಗುಡುಗುಟ್ಟಿಸುತ್ತ ಹೋರಾಡಿದರು.

೧೯–೨೦. ಹೀಗೆ ಅವರು ಬಾಹುಕಾಲ ಯುದ್ಧಮಾಡಿದ ಮೇಲೆ ವಿಷ್ಣುವು ಮೇಘದಂತೆ ಗಂಭೀರವಾದ ಧ್ವನಿಯಿಂದ ದೈತ್ಯರಾಜನನ್ನು ಕುರಿತು, "ದೈತ್ಯೇಂದ್ರನೆ! ವರವನ್ನು ಕೇಳಿಕೊ. ನಿನ್ನ ವಿಕ್ರಮದಿಂದ ಪ್ರೀತನಾಗಿದ್ದೇನೆ.

ಜಲಂಧರ ಉವಾಚ :—

ಯದಿ ಭಾವುಕ ತುಷ್ಟೋಽಸಿ ವರಮೇನಂ ದದಸ್ವ ಮೇ ।
ಮದ್ಭಗಿನ್ಯಾ ಸಹಾದ್ಯ ತ್ವಂ ಮದ್ಗೃಹೇ ಸಗಣೋ ವಸ ॥ ೨೧ ॥

ನಾರದ ಉವಾಚ :—

ತಥೇತ್ಯುಕ್ತ್ವಾ ಸ ಭಗವಾನ್ ಸರ್ವದೇವಗಣೈಸ್ಸಹ ।
ತದಾ ಜಲಂಧರಪುರಂ ಅಗಮದ್ರಮಯಾ ಸಹ ॥ ೨೨ ॥
ಜಲಂಧರಸ್ತು ದೇವಾನಾಂ ಅಧಿಕಾರೇಷು ದಾನವಾನ್ ।
ಸ್ಥಾಪಯಿತ್ವಾ ಮಹಾಬಾಹುಃ ಪುನರಾಗಾನ್ಮಹೀತಲಂ ॥ ೨೩ ॥
ದೇವಗಂಧರ್ವಸಿದ್ಧೇಷು ಯತ್ಕಿಂಚಿದ್ರತ್ನಸಂಯುತಂ ।
ತದಾತ್ಮವಶಗಂ ಕೃತ್ವಾಽತಿಷ್ಠತ್ಸಾಗರನಂದನಃ ॥ ೨೪ ॥
ಪಾತಾಲಭುವನೇ ದೈತ್ಯಂ ನಿಶುಂಭಂ ಸ ಮಹಾಬಲಂ ।
ಸ್ಥಾಪಯಿತ್ವಾ ಸ ಶೇಷಾದೀನ್ ಆನಯದ್ಭೂತಲಂ ಬಲೀ ॥ ೨೫ ॥
ದೇವಗಂಧರ್ವಸಿದ್ಧಾದ್ಯಾನ್ ಸರ್ವರಾಕ್ಷಸಮಾನುಷಾನ್ ।
ಸ್ವಪುರೇ ನಾಗರಾನ್ ಕೃತ್ವಾ ಶಶಾಸ ಭುವನತ್ರಯಂ ॥ ೨೬ ॥

---

ನಿನ್ನ ಮನಸ್ಸಿನಲ್ಲಿ ಏನಿದೆಯೋ ಕೇಳು. ಅದೇಯವಾಗಿದ್ದರೂ ಅದನ್ನು ಕೊಡುತ್ತೇನೆ'' ಎಂದು ನುಡಿದನು.

೨೧. ವಿಷ್ಣುವಿನ ಮಾತನ್ನಾಲಿಸಿ ಜಲಂಧರನು ''ಭಾವಾ, ನೀನು ಸಂತುಷ್ಟನಾಗಿರುವೆಯಾದರೆ, ನನಗೆ ಈ ವರವನ್ನು ಕೊಡು. ಈಗ ನೀನು ನನ್ನ ಸೋದರಿಯೊಡನೆ ಸಪರಿವಾರನಾಗಿ ನನ್ನ ಮನೆಯಲ್ಲಿ ವಾಸಮಾಡು'' ಎಂದು ವರವನ್ನು ಕೇಳಿಕೊಂಡನು.

೨೨. ನಾರದನು ಹೇಳುತ್ತಾನೆ:—ಆಗ ಭಗವಂತನು 'ಹಾಗೆಯೇ ಆಗಲಿ' ಎಂದು ನುಡಿದು ಸರ್ವದೇವಗಣಗಳಿಂದೊಡಗೂಡಿ ಲಕ್ಷ್ಮೀಸಮೇತನಾಗಿ ಜಲಂಧರನ ಪುರಕ್ಕೆ ಹೋದನು.

೨೩. ಮಹಾಬಾಹುವಾದ ಜಲಂಧರನಾದರೋ ದೇವತೆಗಳ ಅಧಿಕಾರಗಳಲ್ಲಿ ದಾನವರನ್ನು ಸ್ಥಾಪಿಸಿ ಪುನಃ ಮಹೀತಲಕ್ಕೆ ಬಂದನು.

೨೪. ದೇವಗಂಧರ್ವಸಿದ್ಧರಲ್ಲಿ ಅಲ್ಪಸ್ವಲ್ಪ ರತ್ನಸಂಚಯವೇನಿದ್ದಿತೋ ಅದನ್ನೆಲ್ಲವನ್ನೂ ಆ ಸಾಗರನಂದನನು ತನ್ನ ವಶಕ್ಕೆ ತೆಗೆದುಕೊಂಡನು.

೨೫. ಪಾತಾಲಲೋಕದಲ್ಲಿ ಮಹಾಬಲನಾದ ನಿಶುಂಭದೈತ್ಯನನ್ನು ಸ್ಥಾಪಿಸಿ ಆ ಬಲಶಾಲಿಯು ಶೇಷಾದಿಗಳನ್ನು ಭೂತಲಕ್ಕೆ ಕರೆತಂದನು.

೨೬. ದೇವಗಂಧರ್ವಸಿದ್ಧಾದಿಗಳನ್ನೂ, ಸರ್ವರಾಕ್ಷಸರು, ಮನುಷ್ಯರು ಇವರೆಲ್ಲರನ್ನೂ ತನ್ನ ಪುರದ ಪ್ರಜೆಗಳನ್ನಾಗಿ ಮಾಡಿಕೊಂಡು ಮೂರು ಲೋಕಗಳನ್ನೂ ಆಳುತ್ತಿದ್ದನು.

ಏವಂ ಜಲಂಧರಃ ಕೃತ್ವಾ ದೇವಾನ್ ಸ್ವವಶವರ್ತಿನಃ ।
ಧರ್ಮೇಣ ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ ॥ ೨೭ ॥
ನ ಕಶ್ಚಿದ್ವ್ಯಾಧಿತೋ ನೈವ ದುಃಖೀ ನೈವ ಕೃಶಸ್ತಥಾ ।
ನ ದೀನೋ ದೃಶ್ಯತೇ ತಸ್ಮಿನ್ ಧರ್ಮಾದ್ರಾಜ್ಯಂ ಪ್ರಶಾಸತಿ ॥ ೨೮ ॥
ಏವಂ ಮಹೀಂ ಶಾಸತಿ ದಾನವೇಂದ್ರೇ
ಧರ್ಮೇಣ ಸಮ್ಯಕ್ಚ ದಿದೃಕ್ಷಯಾಽಹಂ ।
ಕದಾಚಿದಾಗಾಮಥ ತಸ್ಯ ಲಕ್ಷ್ಮೀಂ
ವಿಲೋಕಿತುಂ ಶ್ರೀರಮಣಂ ಚ ಸೇವಿತುಂ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಜಲಂಧರಸಭಾಯಾಂ ನಾರದಾಗಮನಂ"ನಾಮ ಷೋಡಶೋಽಧ್ಯಾಯಃ

---

೨೭. ಈ ರೀತಿಯಲ್ಲಿ ಜಲಂಧರನು ದೇವತೆಗಳನ್ನು ತನ್ನ ವಶವರ್ತಿಗಳಾಗಿ ಮಾಡಿಕೊಂಡು ಪ್ರಜೆಗಳನ್ನು ಸ್ವಂತ ಮಕ್ಕಳೋಪಾದಿಯಲ್ಲಿ ನೋಡಿಕೊಳ್ಳುತ್ತ ಧರ್ಮದಿಂದ ಪಾಲಿಸುತ್ತಿದ್ದನು.

೨೮. ಅವನು ಧರ್ಮದಿಂದ ರಾಜ್ಯವನ್ನಾಳುತ್ತಿರಲಾಗಿ ವ್ಯಾಧಿಪೀಡಿತನೊಬ್ಬನೂ ಇರಲಿಲ್ಲ. ಯಾವನೊಬ್ಬನೂ ದುಃಖಿಯಾಗಿರಲಿಲ್ಲ, ಕೃಶನಾಗಿರಲಿಲ್ಲ. ದೀನನಾದವನೊಬ್ಬನೂ ಕಾಣಿಸುತ್ತಿರಲಿಲ್ಲ.

೨೯. ಹೀಗೆ ಆ ದಾನವೇಂದ್ರನು ಧರ್ಮದಿಂದ ಚೆನ್ನಾಗಿ ರಾಜ್ಯಭಾರ ಮಾಡುತ್ತಿರುವಲ್ಲಿ, ನಾನೊಮ್ಮೆ ಕುತೂಹಲದಿಂದ ಅವನ ಸಂಪತ್ತನ್ನು ನೋಡುವುದಕ್ಕಾಗಿಯೂ ಶ್ರೀರಮಣನನ್ನು ಸಂದರ್ಶಿಸಿ ಸೇವಿಸುವುದಕ್ಕಾಗಿಯೂ ಅಲ್ಲಿಗೆ ಹೋದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ಜಲಂಧರಸಭೆಯಲ್ಲಿ ನಾರದಾಗಮನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತದಶೋಽಧ್ಯಾಯಃ

## ಜಲಂಧರೋಪಾಖ್ಯಾನೇ ದೂತವಾಕ್ಯಕಥನಂ

ನಾರದ ಉವಾಚ :—

ಸ ಮಾಂ ಪ್ರೋವಾಚ ವಿಧಿವತ್ ಸಂಪೂಜ್ಯಾತೀವ ಭಕ್ತಿಮಾನ್ ।
ಸಂಪ್ರಹಸ್ಯ ತದಾ ವಾಕ್ಯಂ ಸ್ನೇಹಪೂರ್ವಂ ಚ ವೈ ನೃಪ ॥ ೧ ॥
ಕುತ ಆಗಮ್ಯತೇ ಬ್ರಹ್ಮನ್ ಕಿಂಚಿದ್ದೃಷ್ಟಂ ತ್ವಯಾ ಪ್ರಭೋ ।
ಯದರ್ಥಮಿಹ ಚಾಯಾತಃ ತದಾಜ್ಞಾಪಯ ಮಾಂ ಮುನೇ ॥ ೨ ॥

ನಾರದ ಉವಾಚ :—

ಗತಃ ಕೈಲಾಸಶಿಖರಂ ದೈತ್ಯೇಂದ್ರಾಹಂ ಯದೃಚ್ಛಯಾ ।
ತತ್ರೋಮಯಾ ಸಮಾಸೀನಂ ದೃಷ್ಟವಾನಸ್ಮಿ ಶಂಕರಂ ॥ ೩ ॥
ಯೋಜನಾಯುತವಿಸ್ತೀರ್ಣೇ ಕಲ್ಪವೃಕ್ಷೇ ಮಹಾವನೇ ।
ಕಾಮಧೇನುಶತಾಕೀರ್ಣೇ ಚಿಂತಾಮಣಿಸುದೀಪಿತೇ ॥ ೪ ॥
ತದ್ದೃಷ್ಟ್ವಾ ಮಹದಾಶ್ಚರ್ಯಂ ವಿಸ್ಮಯೋ ಮೇಽಭವತ್ತದಾ ।
ಕ್ವಾಪೀದೃಶೀ ಭವೇದ್ವೃದ್ಧಿಃ ತ್ರೈಲೋಕ್ಯೇ ವಾ ನ ವೇತಿ ಚ ॥ ೫ ॥

---

## ಕನ್ನಡದ ಅನುವಾದ

### ದೂತವಾಕ್ಯ ಕಥನ

೧. ನಾರದನು ಹೇಳುತ್ತಾನೆ:— ಎಲೈ ನೃಪನೇ! ಅವನು ನನ್ನನ್ನು ಕಂಡು ಬಹಳ ಭಕ್ತಿಯುಳ್ಳವನಾಗಿ ವಿಧಿವತ್ತಾಗಿ ಪೂಜೆಮಾಡಿ ಜೊತೆಯಲ್ಲಿ ನಕ್ಕು ನಲಿದು ಸ್ನೇಹಪೂರ್ವಕವಾಗಿ ಮಾತನಾಡಿಸಿದನು.

೨. ಅವನು ನನ್ನನ್ನು ಕುರಿತು, "ಭೋ! ಬ್ರಹ್ಮನ್, ಎಲ್ಲಿಂದ ಬರೋಣ ವಾಯಿತು? ಏನೇನು ನೋಡೋಣವಾಯಿತು? ಇಲ್ಲಿ ಬಂದುದರ ಉದ್ದೇಶ ವೇನು? ಮುನಿಯೇ! ಅದನ್ನು ನನಗೆ ಆಜ್ಞಾಪಿಸಬೇಕು" ಎಂದು ನುಡಿದನು.

೩. ನಾರದನು ಹೇಳುತ್ತಾನೆ:— ದೈತ್ಯೇಂದ್ರಾ! ಮನಬಂದೆಡೆಯಲ್ಲಿ ಸುತ್ತುತ್ತಾ ನಾನು ಕೈಲಾಸಶಿಖರಕ್ಕೆ ಹೋದೆನು. ಅಲ್ಲಿ ಉಮೆಯೊಡನೆ ಕುಳಿತಿದ್ದ ಶಂಕರನನ್ನು ಕಂಡೆನು.

೪. ಅಯುತ(ಹತ್ತುಸಾವಿರ)ಯೋಜನವಿಸ್ತೀರ್ಣವಾಗಿಯೂ, ನೂರಾರು ಕಾಮಧೇನುಗಳಿಂದ ತುಂಬಿದುದಾಗಿಯೂ, ಚಿಂತಾಮಣಿಯ ದೀಪಗಳಿಂದ ಬೆಳಗುವುದಾಗಿಯೂ ಇದ್ದ ಕಲ್ಪವೃಕ್ಷದ ಮಹಾವನದಲ್ಲಿ ಅವರು ಕುಳಿತಿದ್ದರು.

೫. ಆ ಮಹದಾಶ್ಚರ್ಯವನ್ನು ನೋಡಿದಾಗ ಮೂರುಲೋಕದಲ್ಲಿ ಎಲ್ಲಿ

ತದಾ ತವಾಪಿ ದೈತ್ಯೇಂದ್ರ ಸಮೃದ್ಧಿಸ್ಸಂಸ್ಮೃತಾ ಮಯಾ ।
ತದ್ವಿಲೋಕನಕಾಮೋಽಸ್ಮಿ ತ್ವತ್ಸಾನ್ನಿಧ್ಯಮಿಹಾಗತಃ ॥ ೬ ॥
ತ್ವತ್ಸಮೃದ್ಧಿಮಿಮಾಂ ಪಶ್ಯನ್ ಸ್ತ್ರೀರತ್ನರಹಿತಾಂ ಧ್ರುವಂ ।
ತರ್ಕಯಾಮಿ ಶಿವಾದನ್ಯತ್ ತ್ರಿಲೋಕ್ಯಾಂ ನ ಸಮೃದ್ಧಿಮಾನ್ ॥ ೭ ॥
ಅಪ್ಸರೋನಾಗಕನ್ಯಾದ್ಯಾಃ ಯದ್ಯಪಿ ತ್ವದ್ವಶೇ ಸ್ಥಿತಾಃ ।
ತಥಾಪಿ ತಾ ನ ಪಾರ್ವತ್ಯಾ ರೂಪೇಣ ಸದೃಶಾ ಧ್ರುವಂ ॥ ೮ ॥
ಯಸ್ಯಾ ಲಾವಣ್ಯಜಲಧೌ ನಿಮಗ್ನಶ್ಚತುರಾನನಃ ।
ಸ್ವಧೈರ್ಯಮಮುಚತ್ಪೂರ್ವಂ ತಯಾ ಕಾನ್ಯೋಪಮೀಯತೇ ॥ ೯ ॥
ವೀತರಾಗೋಽಪಿ ಹಿ ಯಥಾ ಮದನಾರಿಃ ಸ್ವಲೀಲಯಾ ।
ಸೌಂದರ್ಯಗಹನೇಽಭ್ರಾಮಿ ಶಫರೀರೂಪಯಾ ಪುರಾ ॥ ೧೦ ॥
ಯಸ್ಯಾಃ ಪುನಃ ಪುನಃ ಪಶ್ಯನ್ ರೂಪಂ ಧಾತಾಪಿ ಸರ್ಜತೇ ।
ಸಸರ್ಜಾಪ್ಸರಸಸ್ತಾಸಾಂ ತತ್ಸಮೈಕಾಪಿ ನಾಽಭವತ್ ॥ ೧೧ ॥

---

ಯಾದರೂ ಈರೀತಿಯ ವೃದ್ಧಿಯು ಇದ್ದೀತೋ ಇಲ್ಲವೋ ಎಂದು ನನಗೆ ವಿಸ್ಮಯ ವಾಯಿತು.

೬. ಎಲೈ ದೈತ್ಯೇಂದ್ರನೆ! ಆಗ ನಿನ್ನ ಸಮೃದ್ಧಿಯೂ ನನಗೆ ನೆನಪಾಯಿತು. ಅದನ್ನು ನೋಡಬೇಕೆಂಬ ಇಚ್ಛೆಯುಳ್ಳವನಾಗಿ ನಿನ್ನ ಸನ್ನಿಧಿಗೆ ಈಗ ಬಂದಿದ್ದೇನೆ.

೭. ನಿನ್ನ ಈ ಸಮೃದ್ಧಿಯನ್ನು ನೋಡಿ ಇದು ಸ್ತ್ರೀರತ್ನರಹಿತವಾದು ದೆಂದು ತರ್ಕಿಸುತ್ತೇನೆ. ತ್ರಿಲೋಕದಲ್ಲಿಯೂ ಶಿವನಲ್ಲದೆ ಬೇರೆ ಯಾವನೂ ಸಮೃದ್ಧಿವಂತನಲ್ಲ.

೮. ಅಪ್ಸರೆಯರೂ ನಾಗಕನ್ಯೆಯರೇ ಮೊದಲಾದವರೂ ನಿನ್ನ ವಶದಲ್ಲಿರುವ ರೆಂಬುದೇನೋ ನಿಜ. ಆದರೂ ಅವರು ಪಾರ್ವತಿಯ ರೂಪಕ್ಕೆ ಖಂಡಿತ ವಾಗಿಯೂ ಸಮಾನರಲ್ಲ.

೯. ಯಾವಳ ಲಾವಣ್ಯಜಲಧಿಯಲ್ಲಿ ಮುಳುಗಿ ಚತುರಾನನನು ಪೂರ್ವ ದಲ್ಲಿ ತನ್ನ ಧೈರ್ಯವನ್ನು ಕಳೆದುಕೊಂಡನೋ ಅಂತಹ ಆ ಪಾರ್ವತಿಯೊಡನೆ ಬೇರೆ ಯಾವಳು ತಾನೆ ಹೋಲಿಸತಕ್ಕವಳಾಗುತ್ತಾಳೆ?

೧೦. ಆ ಮದನಾರಿಯು ತಾನು ವೀತರಾಗನಾದರೂ ಪೂರ್ವದಲ್ಲಿ ತನ್ನ ಲೀಲೆಯಿಂದ ಶಫರೀ (ಮೀನಿನ) ರೂಪಿಯಾದ ಆಕೆಯ ಸೌಂದರ್ಯವೆಂಬ ಅರಣ್ಯದಲ್ಲಿ ತೊಳಲಾಡಿದನು.

೧೧. ಬ್ರಹ್ಮನು ಕೂಡ ಸೃಷ್ಟಿಸಮಯದಲ್ಲಿ ಆ ಪಾರ್ವತಿಯ ರೂಪವನ್ನು ಪುನಃ ಪುನಃ ನೋಡುತ್ತ ಅಪ್ಸರೆಯರನ್ನು ಸೃಷ್ಟಿಮಾಡಿದನು. ಅವರಲ್ಲಿ ಒಬ್ಬಳೂ ಅವಳಿಗೆ ಸಮಳಾಗಲಿಲ್ಲವು.

ಅತಃ ಸ್ತ್ರೀರತ್ನಸಂಭೋಕ್ತುಃ ಸಮೃದ್ಧಿಸ್ತಸ್ಯ ಸಾ ವರಾ ।
ತಥಾ ನ ತವ ದೈತ್ಯೇಂದ್ರ ಸರ್ವರತ್ನಾಧಿಪಸ್ಯ ಚ ॥ ೧೨ ॥
ಏವಮುಕ್ತ್ವಾ ತಮಾಮಂತ್ರ್ಯ ಗತೇ ಸತಿ ಸ ದೈತ್ಯರಾಟ್ ।
ತದ್ರೂಪಶ್ರವಣಾದಾಸೀತ್ ಅನಂಗಜ್ವರಪೀಡಿತಃ ॥ ೧೩ ॥
ಅಥ ಸಂಪ್ರೇಷಯಾಮಾಸ ಸ ದೂತಂ ಸಿಂಹಿಕಾಸುತಂ ।
ತ್ರ್ಯಂಬಕಾಯಾಪಿ ಚ ತದಾ ವಿಷ್ಣುಮಾಯಾವಿಮೋಹಿತಃ ॥ ೧೪ ॥
ಕೈಲಾಸಮಗಮದ್ರಾಹುಃ ಕುರ್ವಂಚ್ಛುಕ್ಲೇಂದುವರ್ಚಸಂ ।
ಕಾರ್ಷ್ಣೇನ ಕೃಷ್ಣಪಕ್ಷೇಂದುವರ್ಚಸಂ ಸ್ವಾಂಗಜೇನ ತಂ ॥ ೧೫ ॥
ನಿವೇದಿತಸ್ತದೇಶಾಯ ನಂದಿನಾ ಪ್ರವಿವೇಶ ಸಃ ।
ತ್ರ್ಯಂಬಕಭ್ರೂಲತಾಸಂಜ್ಞಾಪ್ರೇರಿತೋ ವಾಕ್ಯಮಬ್ರವೀತ್ ॥ ೧೬ ॥

ರಾಹುರುವಾಚ :—

ದೇವ ಪನ್ನಗಸೇವ್ಯಸ್ಯ ತ್ರೈಲೋಕ್ಯಾಧಿಪತೇಃ ಪ್ರಭೋಃ ।
ಸರ್ವರತ್ನೇಶ್ವರಸ್ಯ ತ್ವಂ ಆಜ್ಞಾಂ ಶೃಣು ವೃಷಧ್ವಜ ॥ ೧೭ ॥

---

೧೨. ಆದುದರಿಂದ ಅಂತಹ ಸ್ತ್ರೀರತ್ನವನ್ನನುಭವಿಸುವವನಾದ ಶಿವನ ಸಮೃದ್ಧಿಯೇ ಶ್ರೇಷ್ಠವಾದದ್ದು. ದೈತ್ಯೇಂದ್ರಾ! ಸರ್ವರತ್ನಾಧಿಪತಿಯಾದ ನಿನ್ನ ಸಮೃದ್ಧಿಯು ಆ ಶಿವನ ಸಮೃದ್ಧಿಗೆಣೆಯಲ್ಲ.

೧೩. ಹೀಗೆಂದು ನುಡಿದು ಅವನನ್ನು ಬೀಳ್ಕೊಂಡು ಆ ನಾರದನು ಪ್ರಯಾಣ ಮಾಡಿದನು. ಬಳಿಕ ಆ ದೈತ್ಯರಾಜನು ಆ ಪಾರ್ವತಿಯ ರೂಪವರ್ಣನೆಯನ್ನು ಕೇಳಿದುದರಿಂದ ಕಾಮಜ್ವರಪೀಡಿತನಾದನು.

೧೪. ಅನಂತರದಲ್ಲಿ ಅವನು ವಿಷ್ಣುಮಾಯೆಯಿಂದ ಮೋಹಿತನಾಗಿ ಸಿಂಹಿಕೆಯ ಮಗನಾದ ರಾಹುವನ್ನು ತ್ರ್ಯಂಬಕನ ಬಳಿಗೆ ತನ್ನ ದೂತನನ್ನಾಗಿ ಕಳುಹಿಸಿದನು.

೧೫. ಶುಕ್ಲಚಂದ್ರನ ಕಾಂತಿಯನ್ನು ತನ್ನ ದೇಹದಿಂದುದಿಸಿದ ಕಪ್ಪಿನಿಂದ ಕೃಷ್ಣಪಕ್ಷದ ಚಂದ್ರಕಾಂತಿಯನ್ನಾಗಿ ಮಾಡುತ್ತಾ ರಾಹುವು ಕೈಲಾಸಕ್ಕೆ ಹೋಗಿ ಸೇರಿದನು.

೧೬. ಆಗ ನಂದಿಯಿಂದ ಈಶ್ವರನಿಗೆ ನಿವೇದಿಸಲ್ಪಟ್ಟವನಾಗಿ ಒಳಗೆ ಪ್ರವೇಶಮಾಡಿದನು. ತ್ರ್ಯಂಬಕನ ಹುಬ್ಬಿನ ಸಂಜ್ಞೆಯಿಂದ ಪ್ರೇರಿತನಾಗಿ ಅವನು ಮಾತನಾಡಿದನು.

೧೭. ರಾಹುವು ಹೇಳುತ್ತಾನೆ:—"ಎಲೈ ವೃಷಧ್ವಜನೇ! ದೇವಪನ್ನಗಸೇವ್ಯನೂ ತ್ರೈಲೋಕ್ಯಾಧಿಪತಿಯೂ ಸರ್ವರತ್ನೇಶ್ವರನೂ ಆದ ನಮ್ಮ ಜಲಂಧರ ಪ್ರಭುವಿನ ಆಜ್ಞೆಯನ್ನು ಆಲಿಸು.

ಸ್ಮಶಾನವಾಸಿನೋ ನಿತ್ಯಂ ಅಸ್ಥಿಭಾರವಹಸ್ಯ ಚ ।
ದಿಗಂಬರಸ್ಯ ತೇ ಭಾರ್ಯಾ ಕಥಂ ಹೈಮವತೀ ಶುಭಾ ॥ ೧೮ ॥
ಅಹಂ ರತ್ನಾಧಿನಾಥೋಽಸ್ಮಿ ಸಾ ಚ ಸ್ತ್ರೀರತ್ನಸಂಜ್ಞಿಕಾ ।
ತಸ್ಮಾನ್ಮಮೈವ ಸಾ ಯೋಗ್ಯಾ ನೈವ ಭಿಕ್ಷಾಶಿನಸ್ತವ ॥ ೧೯ ॥

ನಾರದ ಉವಾಚ :—

ವದತ್ಯೇನಂ ತದಾ ರಾಹೌ ಭ್ರೂಮಧ್ಯಾಚ್ಛೂಲಪಾಣಿನಃ ।
ಅಭವತ್ಪುರುಷೋ ರೌದ್ರಃ ತೀವ್ರಾಶನಿಸಮಸ್ವನಃ ॥ ೨೦ ॥
ಸಿಂಹಾಸ್ಯಃ ಪ್ರಲಲಜ್ಜಿಹ್ವಃ ಸ ಜ್ವಲನ್ನಯನೋ ಮಹಾನ್ ।
ಊರ್ಧ್ವಕೇಶಶ್ಶುಷ್ಕತನುಃ ನೃಸಿಂಹ ಇವ ಚಾಪರಃ ॥ ೨೧ ॥
ಸ ತಂ ಖಾದಿತುಮಾಯಾಂತಂ ದೃಷ್ಟ್ವಾ ರಾಹುರ್ಭಯಾತುರಃ ।
ಅಧಾವತ ಸ ವೇಗೇನ ಬಹಿಃ ಸ ಚ ದಧಾರ ತಂ ॥ ೨೨ ॥
ಸ ಚ ರಾಹುರ್ಮಹಾಬಾಹೋ ಮೇಘಗಂಭೀರಯಾ ಗಿರಾ ।
ಉವಾಚ ದೇವದೇವ ತ್ವಂ ಪಾಹಿ ಮಾಂ ಶರಣಾಗತಂ ॥ ೨೩ ॥

---

೧೮. ಸ್ಮಶಾನವಾಸಿಯೂ ಸದಾ ಅಸ್ಥಿಗಳ ಭಾರವನ್ನು ಹೊತ್ತಿರುವವನೂ, ದಿಗಂಬರನೂ ಆದ ನಿನಗೆ ಮಂಗಳಾಂಗಿಯಾದ ಹೈಮವತಿಯು ಭಾರ್ಯೆಯಾಗಿರುವುದು ಹೇಗೆತಾನೆ ಹೊಂದುವುದು?

೧೯. ನಾನು ರಾತ್ನಾಧಿನಾಥನಾಗಿದ್ದೇನೆ. ಆಕೆಯಾದರೊ ಸ್ತ್ರೀರತ್ನವೆನಿಸಿಕೊಂಡಿರುವಳು. ಆದುದರಿಂದ ನನಗೇ ಅವಳು ಯೋಗ್ಯಳು. ಭಿಕ್ಷವುಣ್ಣುವ ನಿನಗೆ ಆಕೆಯು ತಕ್ಕವಳಲ್ಲವೇ ಅಲ್ಲ.''

೨೦. ನಾರದನು ಹೇಳುತ್ತಾನೆ:—ರಾಹುವು ಈ ರೀತಿ ಹೇಳುತ್ತಿರಲು ಆಗಲೇ ಶೂಲಪಾಣಿಯ ಹುಬ್ಬಿನ ನಡುವೆಯಿಂದ ತೀವ್ರವಾದ ಸಿಡಿಲಿಗೆ ಸಮಾನವಾದ ಧ್ವನಿಯುಳ್ಳ ಭಯಂಕರ ಪುರುಷನೊಬ್ಬನು ಉದಿಸಿ ಬಂದನು.

೨೧. ಅವನು ಸಿಂಹದ ಮುಖವುಳ್ಳವನು; ಜೋಲಾಡುವ ನಾಲಿಗೆಯುಳ್ಳವನು; ಉರಿಗಣ್ಣುಗಳುಳ್ಳವನು. ಅವನ ಕೂದಲುಗಳು ಮೇಲ್ಮುಖವಾಗಿ ನಿಮಿರಿನಿಂತಿರುವುವು; ಅವನ ಶರೀರವು ಶುಷ್ಕವಾಗಿರುವುದು. ಹೀಗೆ ಅವನು ಎರಡನೆಯ ನೃಸಿಂಹನಂತೆ ತೋರುತ್ತಿದ್ದನು.

೨೨. ತನ್ನನ್ನು ತಿನ್ನುವುದಕ್ಕೆ ಬರುತ್ತಿರುವ ಆ ಪುರುಷನನ್ನು ಕಂಡು ಭಯಾತುರನಾಗಿ ರಾಹುವು ವೇಗದಿಂದ ಹೊರಗಡೆಗೆ ಓಡಿಹೋದನು. ಅವನು ಕೂಡ ರಾಹುವನ್ನು ಹಿಂಬಾಲಿಸಿ ಹಿಡಿದುಕೊಂಡನು.

೨೩–೨೪. ಎಲೈ ಮಹಾಬಾಹುವೇ! ಆ ರಾಹುವು ಮೇಘದಂತೆ ಗಂಭೀರವಾದ ಮಾತಿನಿಂದ 'ದೇವದೇವಾ, ಶರಣಾಗತನಾದ ನನ್ನನ್ನು ನೀನು

ಬ್ರಾಹ್ಮಣಂ ಮಾಂ ಮಹಾದೇವ ಖಾದಿತುಂ ಸಮುಪಾಗತಃ ।
ಮಹಾದೇವೋ ವಚಃ ಶ್ರುತ್ವಾ ಬ್ರಾಹ್ಮಣಸ್ಯ ತದಾಬ್ರವೀತ್ ॥ ೨೪ ॥
ನೈವಾಸೌ ವಧ್ಯತಾಮೇತಿ ದೂತೋಽಯಂ ಪರವಾನ್ಯತಃ ।
ಮುಞ್ಚೇತಿ ಪುರುಷಃ ಶ್ರುತ್ವಾ ರಾಹುಂ ತತ್ಯಾಜ ಸೋಽಂಬರೇ ॥ ೨೫ ॥
ರಾಹುಂ ತ್ಯಕ್ತ್ವಾಽಥ ಪುರುಷಃ ತದಾ ರುದ್ರಂ ವ್ಯಜಿಜ್ಞಪತ್ ।

ಪುರುಷ ಉವಾಚ :—

ಕ್ಷುಧಾ ಮಾಂ ಬಾಧತೇಽತ್ಯಂತಂ ಕ್ಷುತ್‌ಕ್ಷಾಮಶ್ಚಾಸ್ಮಿ ಸರ್ವಥಾ॥ ೨೬ ॥
ಕಿಂ ಭಕ್ಷಯಾಮಿ ದೇವೇಶ ತದಾಽಽಜ್ಞಾಪಯ ಮಾಂ ಪ್ರಭೋ ।

ಈಶ್ವರ ಉವಾಚ :—

ಭಕ್ಷಯಸ್ವಾತ್ಮನಶ್ಶೀಘ್ರಂ ಮಾಂಸಂ ತ್ವಂ ಹಸ್ತಪಾದಯೋಃ ॥ ೨೭ ॥

ನಾರದ ಉವಾಚ :—

ಸ ಶಿವೇನೈವಮಾಜ್ಞಪ್ತಃ ಚಖಾದ ಪುರುಷಸ್ಸ್ವಕಂ ।
ಹಸ್ತಪಾದೋದ್ಭವಂ ಮಾಂಸಂ ಶಿರಶ್ಶೇಷೋ ಯಥಾಭವತ್ ॥ ೨೮ ॥
ದೃಷ್ಟ್ವಾಶಿರೋಽವಶೇಷಂ ತಂ ಸುಪ್ರಸನ್ನಸ್ತದಾ ಶಿವಃ ।
ಉವಾಚ ಭೀಮಕರ್ಮಾಣಂ ಪುರುಷಂ ಜಾತವಿಸ್ಮಯಃ ॥ ೨೯ ॥

---

ಕಾಪಾಡು. ಮಹಾದೇವಾ! ಬ್ರಾಹ್ಮಣನಾದ ನನ್ನನ್ನು ಈ ಪುರುಷನು ತಿನ್ನಲು ಬರುತ್ತಿದ್ದಾನೆ.' ಎಂದು ಪ್ರಾರ್ಥಿಸಿದನು. ಮಹಾದೇವನು ಬ್ರಾಹ್ಮಣನ ಮಾತನ್ನಾಲಿಸಿ ಆಗ 'ಇವನನ್ನು ವಧಿಸತಕ್ಕದಲ್ಲ. ಇವನು ದೂತನಾಗಿ ಬಂದಿದ್ದಾನೆ. ಪರಾಧೀನನಾದವನು. ಆದುದರಿಂದ ಇವನನ್ನು ಬಿಟ್ಟುಬಿಡು' ಎಂದು ನುಡಿದನು. ಆ ಪುರುಷನು ಅದನ್ನು ಕೇಳಿ ರಾಹುವನ್ನು ಆಕಾಶದಲ್ಲಿಯೆ ಬಿಟ್ಟುಬಿಟ್ಟನು.

೨೬–೨೭. ರಾಹುವನ್ನು ಬಿಟ್ಟ ಬಳಿಕ ಆ ಪುರುಷನು ರುದ್ರನಿಗೆ, "ಹಸಿವು ನನ್ನನ್ನು ಅತಿಯಾಗಿ ಬಾಧಿಸುತ್ತಿದೆ. ನಾನು ಹಸಿವಿನಿಂದ ಸೊರಗಿಹೋಗಿದ್ದೇನೆ. ದೇವೇಶಾ! ನಾನೇನು ತಿನ್ನಲಿ? ಪ್ರಭುವೇ! ಅದನ್ನು ನನಗೆ ಆಜ್ಞಾಪಿಸು" ಎಂದು ವಿಜ್ಞಾಪಿಸಿಕೊಂಡನು. ಅದನ್ನು ಕೇಳಿ ಈಶ್ವರನು "ನೀನು ನಿನ್ನ ಕೈಕಾಲುಗಳ ಮಾಂಸವನ್ನೇ ಬೇಗ ಭಕ್ಷಿಸು' ಎಂದು ಆಜ್ಞೆಮಾಡಿದನು.

೨೮. ನಾರದನು ಹೇಳುತ್ತಾನೆ:—ಶಿವನಿಂದ ಆಜ್ಞಪ್ತನಾದ ಆ ಪುರುಷನು ತನ್ನ ಹಸ್ತಪಾದಗಳ ಮಾಂಸವನ್ನೆ, ತಲೆಯೊಂದು ಮಾತ್ರ ಉಳಿಯುವಹಾಗೆ ತಿಂದನು.

೨೯–೩೦. ತಲೆಯು ಮಾತ್ರ ಉಳಿದ ಅವನನ್ನು ನೋಡಿ ಶಿವನು ಸುಪ್ರಸನ್ನನಾಗಿ ವಿಸ್ಮಯಹೊಂದಿ ಅಂತಹ ಭೀಮಕರ್ಮವನ್ನು ಮಾಡಿದ

ಈಶ್ವರ ಉವಾಚ :—

ತ್ವಂ ಕೀರ್ತಿಮುಖಸಂಜ್ಞೋ ಹಿ ಭವ ಮದ್ದ್ವಾರಿಗಸ್ಸದಾ ।
ತ್ವದರ್ಚಾಂ ಯೇ ನ ಕುರ್ವಂತಿ ನೈವ ತೇ ಮೇ ಪ್ರಿಯಂಕರಾಃ ॥ ೩೦ ॥

ನಾರದ ಉವಾಚ :—

ತದಾಪ್ರಭೃತಿ ದೇವಸ್ಯ ದ್ವಾರಿ ಕೀರ್ತಿಮುಖಃ ಸ್ಥಿತಃ ।
ನಾರ್ಚಯಂತೀಹ ಯೇ ಪೂರ್ವಂ ತೇಷಾಮರ್ಚಾ ವೃಥಾ ಭವೇತ್॥ ೩೧॥
ರಾಹುರ್ವಿಮುಕ್ತೋ ಯಸ್ತೇನ ಸೋಽಪಿ ತದ್ಬರ್ಬರೇ ಸ್ಥಲೇ ।
ಅತಸ್ಸ ಬರ್ಬರೋದ್ಭೂತ ಇತಿ ಭೂಮೌ ಪ್ರಥಾಂ ಗತಃ ॥ ೩೨ ॥

ತತಸ್ಸ ರಾಹುಃ ಪುನರೇವ ಜಾತಂ
ಆತ್ಮಾನಮಸ್ಮಿನ್ನಿತಿ ಮನ್ಯಮಾನಃ ।
ಸಮೇತ್ಯ ಸರ್ವಂ ಕಥಯಾಂಬಭೂವ
ಜಲಂಧರಾಯೈವ ವಿಚೇಷ್ಟಿತಂ ತತ್ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಜಲಂಧರೋಪಾಖ್ಯಾನೇ ದೂತವಾಕ್ಯಕಥನಂ"ನಾಮ ಸಪ್ತದಶೋಽಧ್ಯಾಯಃ

---

ಆ ಪುರುಷನನ್ನು ಕುರಿತು "ನೀನು ಕೀರ್ತಿಮುಖನೆಂಬ ಹೆಸರುಳ್ಳವನಾಗಿ, ಯಾವಾಗಲೂ ನನ್ನ ದ್ವಾರಪಾಲಕನಾಗಿರು. ನಿನ್ನ ಅರ್ಚನೆಯನ್ನು ಯಾರು ಮಾಡುವುದಿಲ್ಲವೋ ಅವರು ನನಗೆ ಪ್ರಿಯಕರರಲ್ಲವೇ ಅಲ್ಲವು" ಎಂದು ನುಡಿದನು.

೩೧. ನಾರದನು ಹೇಳುತ್ತಾನೆ:—ಅಂದಿನಿಂದ ದೇವದೇವನ ಕೈಲಾಸ ಮಂದಿರದ ಬಾಗಿಲಿನಲ್ಲಿ ಕೀರ್ತಿಮುಖನು ನೆಲಸಿದ್ದಾನೆ. ಯಾರು ಮೊದಲು ಅವನನ್ನು ಅರ್ಚಿಸುವುದಿಲ್ಲವೊ ಅವರು ಮಾಡಿದ ಅರ್ಚನೆಯು ವ್ಯರ್ಥವಾಗುತ್ತದೆ.

೩೨. ಆತನಿಂದ ರಾಹುವು ಬರ್ಬರಸ್ಥಲದಲ್ಲಿ ಬಿಡಲ್ಪಟ್ಟನಾದುದರಿಂದ ಅವನು ಬರ್ಬರೋದ್ಭೂತನೆಂದು ಭೂಮಿಯಲ್ಲಿ ಹೆಸರು ಪಡೆದನು.

೩೩. ಬಳಿಕ ರಾಹುವು ಈಗ ತಾನು ಮತ್ತೆ ಹುಟ್ಟಿಬಂದಂತೆ ಭಾವಿಸಿಕೊಂಡು ಜಲಂಧರನ ಸಮೀಪಕ್ಕೆ ಹೋಗಿ ಅಲ್ಲಿ ನಡೆದ ಸಮಸ್ತ ಸಂಗತಿಯನ್ನೂ ಅವನಿಗೆ ತಿಳಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ಜಲಂಧರೋಪಾಖ್ಯಾನದಲ್ಲಿ ದೂತವಾಕ್ಯ ಕಥನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಷ್ಟಾದಶೋಽಧ್ಯಾಯಃ

### ಜಲಂಧರೋಪಾಖ್ಯಾನೇ ರುದ್ರಸೇನಾಪರಾಭವವರ್ಣನಂ

ನಾರದ ಉವಾಚ :—

ಜಲಂಧರಸ್ತು ತಚ್ಛ್ರುತ್ವಾ ಕೋಪಾಕುಲಿತವಿಗ್ರಹಃ ।
ನಿರ್ಜಗಾಮಾಶು ದೈತ್ಯಾನಾಂ ಕೋಟಿಭಿಃ ಪರಿವಾರಿತಃ ॥ ೧ ॥
ಗಚ್ಛತೋಽಸ್ಯಾಗ್ರತಃ ಶುಕ್ರೋ ರಾಹುಃ ದೃಷ್ಟಿಪಥೇಽಭವತ್ ।
ಮುಕುಟಶ್ಚಾಪತದ್ಭೂಮೌ ವೇಗಾತ್ಪ್ರಸ್ಖಲಿತಸ್ತದಾ ॥ ೨ ॥
ದೈತ್ಯಸೈನ್ಯಾವೃತೈಸ್ತಸ್ಯ ವಿಮಾನಾನಾಂ ಶತೈಸ್ತದಾ ।
ವ್ಯರಾಜತ ನಭಃ ಪೂರ್ಣಂ ಪ್ರಾವೃಷೀವ ಯಥಾ ಘನೈಃ ॥ ೩ ॥
ತಸ್ಯೋದ್ಯೋಗಂ ತದಾ ದೃಷ್ಟ್ವಾ ದೇವಾಶ್ಶಕ್ರಪುರೋಗಮಾಃ ।
ಅಲಕ್ಷಿತಾಸ್ತದಾ ಜಗ್ಮುಃ ಶೂಲಿನಂ ತಂ ವ್ಯಜಿಜ್ಞಪುಃ ॥ ೪ ॥

ದೇವಾ ಊಚುಃ :—

ನ ಜಾನಾಸಿ ಕಥಂ ಸ್ವಾಮಿನ್ ದೇವಾಪತ್ತಿಮಿಮಾಂ ವಿಭೋ ।
ತದಸ್ಮದ್ರಕ್ಷಣಾರ್ಥಾಯ ಜಹಿ ಸಾಗರನಂದನಂ ॥ ೫ ॥

---

## ಕನ್ನಡದ ಅನುವಾದ

### ರುದ್ರಸೇನಾಪರಾಭವವರ್ಣನ

೧. ನಾರದನು ಹೇಳುತ್ತಾನೆ:—ಜಲಂಧರನು ಅದನ್ನಾಲಿಸಿ ಕೋಪಾವೇಶದಿಂದ ಆಕುಲಗೊಂಡು ಕೋಟಿಕೋಟಿ ದೈತ್ಯರಿಂದ ಪರಿವೃತನಾಗಿ ಬೇಗಬೇಗನೆ ಹೊರಹೊರಟನು.

೨. ಅವನ ಮುಂಗಡೆ ಶುಕ್ರನಿದ್ದನು; ದೃಷ್ಟಿಪಥದಲ್ಲಿ ರಾಹುವಿದ್ದನು. ಅವನ ಕಿರೀಟವೂ ವೇಗದಿಂದ ಅಲುಗಿ ಭೂಮಿಯಮೇಲೆ ಬಿದ್ದಿತು.

೩. ಆಗಲಾದೈತ್ಯೇಂದ್ರನ ದೈತ್ಯಸೈನ್ಯಗಳಿಂದ ಆವರಿಸಲ್ಪಟ್ಟ ನೂರಾರು ವಿಮಾನಗಳಿಂದ ಆಕಾಶವು ಮಳೆಗಾಲದಲ್ಲಿ ಮೋಡಗಳಿಂದ ತುಂಬಿದ್ದರೆ ಹೇಗೋ ಹಾಗೆ ಪ್ರಕಾಶಿಸಿತು.

೪. ಅವನ ಆಗಿನ ಉದ್ಯೋಗವನ್ನು ಕಂಡು ಇಂದ್ರನೇ ಮೊದಲಾದ ದೇವತೆಗಳು ಆ ದೈತ್ಯನಿಗೆ ಕಾಣಿಸಿಕೊಳ್ಳದಂತೆ ಶೂಲಪಾಣಿಯ ಸಮೀಪಕ್ಕೆ ಹೋಗಿ ವಿಜ್ಞಾಪಿಸಿಕೊಂಡರು.

೫. ದೇವತೆಗಳು ಹೇಳುತ್ತಾರೆ:—"ಪರಮೇಶ್ವರಾ! ದೇವತೆಗಳಿಗೆ ಬಂದಿರುವ ಈ ಆಪತ್ತನ್ನು ನೀನು ಅರಿಯದಿರುವುದು ಹೇಗೆ? ನಮ್ಮನ್ನು ರಕ್ಷಿಸುವುದಕ್ಕಾಗಿ ಆ ಸಾಗರನಂದನನನ್ನು ವಧಿಸು."

ನಾರದ ಉವಾಚ :—

ಇತಿ ದೇವವಚಃ ಶ್ರುತ್ವಾ ಪ್ರಹಸ್ಯ ವೃಷಭಧ್ವಜಃ ।
ಮಹಾವಿಷ್ಣುಂ ಸಮಾಹೂಯ ವಚನಂ ಚೇದಮಬ್ರವೀತ್ ॥ ೬ ॥

ಈಶ್ವರ ಉವಾಚ :—

ಜಲಂಧರಃ ಕಥಂ ವಿಷ್ಣೋ ನ ಹತಃ ಸಂಗರೇ ತ್ವಯಾ ।
ತದ್ಗೃಹಂ ಚಾಪಿ ಯಾತೋಽಸಿ ತ್ಯಕ್ತ್ವಾ ವೈಕುಂಠಮಾತ್ಮನಃ ॥ ೭ ॥

ವಿಷ್ಣುರುವಾಚ :—

ತವಾಂಶಸಂಭವತ್ವಾಚ್ಚ ಭ್ರಾತೃತ್ವಾಚ್ಚ ತಥಾ ಶ್ರಿಯಃ ।
ನ ಮಯಾ ನಿಹತಃ ಸಂಖ್ಯೇ ತವೇನಂ ಜಹಿ ದಾನವಂ ॥ ೮ ॥

ಈಶ್ವರ ಉವಾಚ :—

ನಾಯಮೇಭಿರ್ಮಹಾತೇಜಾಃ ಶಸ್ತ್ರಾಸ್ತ್ರೈರ್ವಧ್ಯತೇ ಮಯಾ ।
ದೇವೈಸ್ಸಹ ಸ್ವತೇಜೋಽಂಶಂ ಶಸ್ತ್ರಾರ್ಥಂ ದೀಯತಾಂ ಮಮ ॥ ೯ ॥

ನಾರದ ಉವಾಚ :—

ಅಥ ವಿಷ್ಣುಮುಖಾ ದೇವಾಃ ಸ್ವತೇಜಾಂಸಿ ದದುಸ್ತದಾ ।
ತಾನ್ಯೈಕ್ಯಮಾಗತಾನೀಶೋ ದೃಷ್ಟ್ವಾ ಸ್ವಂಚಾಮುಚನ್ಮಹಃ ॥ ೧೦ ॥

---

೬. ನಾರದನು ಹೇಳುತ್ತಾನೆ:—ಈ ಪ್ರಕಾರವಾಗಿ ನುಡಿದ ದೇವತೆಗಳ ಮಾತನ್ನಾಲಿಸಿ ವೃಷಭಧ್ವಜನು ನಕ್ಕು ಮಹಾವಿಷ್ಣುವನ್ನು ಕರೆದು ಈ ವಚನವನ್ನು ಹೇಳಿದನು.

೭. ಈಶ್ವರನು ಹೇಳುತ್ತಾನೆ:—"ಎಲೈ ವಿಷ್ಣುವೇ! ಯುದ್ಧದಲ್ಲಿ ನೀನು ಜಲಂಧರನನ್ನು ವಧಿಸಲಿಲ್ಲವೇಕೆ? ವೈಕುಂಠವನ್ನು ತೊರೆದು ಅವನ ಮನೆಗೇ ನೀನು ಹೋಗಿದ್ದೆಯಲ್ಲಾ, ಅದೇಕೆ?" ಎಂದು ಕೇಳಿದನು.

೮. ಆ ಮಾತಿಗೆ ವಿಷ್ಣುವಿಂತೆಂದನು:—"ಅವನು ನಿನ್ನ ಅಂಶದಿಂದ ಹುಟ್ಟಿದವನಾದುದರಿಂದಲೂ ಲಕ್ಷ್ಮಿಗೆ ಅವನಲ್ಲಿರುವ ಭ್ರಾತೃತ್ವದಿಂದಲೂ ನಾನು ಯುದ್ಧದಲ್ಲಿ ಅವನನ್ನು ಕೊಲ್ಲಲಿಲ್ಲ. ಈ ದಾನವನನ್ನು ನೀನು ಕೊಲ್ಲು" ಎಂದನು.

೯–೧೦. ಅದಕ್ಕೆ ಈಶ್ವರನು "ಮಹಾತೇಜಸ್ವಿಯೇ! ಇವನನ್ನು ಈ ಶಸ್ತ್ರಾಸ್ತ್ರಗಳಿಂದ ಕೊಲ್ಲಲಾಗುವುದಿಲ್ಲ. ದೇವತೆಗಳೂ ನೀನೂ ನಿಮ್ಮನಿಮ್ಮ ತೇಜಸ್ಸಿನ ಒಂದೊಂದಂಶವನ್ನು ಶಸ್ತ್ರಾರ್ಥವಾಗಿ ನನಗೆ ಕೊಡಿರಿ" ಎಂದು ಮರುನುಡಿದನು. ನಾರದನು ಹೀಗೆ ಹೇಳಿದನು:—ಅನಂತರದಲ್ಲಿ ವಿಷ್ಣುವೇ ಮೊದಲಾದ ದೇವತೆಗಳು ತಮ್ಮತಮ್ಮ ತೇಜಸ್ಸುಗಳನ್ನು ಕೊಟ್ಟರು. ಆವೆಲ್ಲ ಒಟ್ಟುಗೂಡಿದ್ದನ್ನು ಕಂಡು ಈಶನು ತನ್ನ ತೇಜಸ್ಸನ್ನು ಹೊರಬಿಟ್ಟನು.

ತೇನಾಕರೋನ್ಮಹಾದೇವೋ ಮಹಸಾ ಶಸ್ತ್ರಮುತ್ತಮಂ ।
ಚಕ್ರಂ ಸುದರ್ಶನಂ ನಾಮ ಜ್ವಾಲಾಮಾಲಾತಿಭೀಷಣಂ ॥ ೧೧ ॥
ತತಶ್ಶೇಷೇಣ ಚ ತದಾ ವಜ್ರಂ ಚ ಕೃತವಾನ್ ಹರಿಃ ।
ತಾವಜ್ಜಲಂಧರೋ ದೃಷ್ಟಃ ಕೈಲಾಸತಲಭೂಮಿಷು ॥ ೧೨ ॥
ಹಸ್ತ್ಯಶ್ವರಥಪತ್ತೀನಾಂ ಕೋಟಿಭಿಃ ಪರಿವಾರಿತಃ ।
ತಂ ದೃಷ್ಟ್ವಾsಲಕ್ಷಿತಾ ಜಗ್ಮುಃ ದೇವಾಸ್ಸರ್ವೇ ಯಥಾಗತಾಃ ॥ ೧೩ ॥
ಗಣಾಶ್ಚ ಸಮಸಜ್ಜಂತ ಯುದ್ಧಾಯಾತಿತ್ವರಾನ್ವಿತಾಃ ।
ನಂದೀಭವಕ್ತ್ರಸೇನಾನೀಮುಖಾಸ್ಸರ್ವೇ ಶಿವಾಜ್ಞಯಾ ॥ ೧೪ ॥
ಅವತೇರುರ್ಗಣಾ ವೇಗಾತ್ ಕೈಲಾಸಾದ್ಯುದ್ಧದುರ್ಮದಾಃ ।
ತತಸ್ಸಮಭವದ್ಯುದ್ಧಂ ಕೈಲಾಸಾಪತ್ಯಕಾಭುವಿ ॥ ೧೫ ॥
ಪ್ರಮಥಾಧಿಪದೈತ್ಯಾನಾಂ ಘೋರಶಸ್ತ್ರಾಸ್ತ್ರಸಂಕುಲಂ ।
ಭೇರೀಮೃದಂಗಶಂಖೌಘನಿಸ್ವನೈರ್ವೀರಹರ್ಷಣೈಃ ॥ ೧೬ ॥
ಗಜಾಶ್ವರಥಶಬ್ದೈಶ್ಚ ನಾದಿತಾ ಭೂರ್ವ್ಯಕಂಪತ ।
ಶಕ್ತಿತೋಮರಬಾಣೌಘಮುಸಲಪ್ರಾಸಪಟ್ಟಿಶೈಃ ॥ ೧೭ ॥

---

೧೧. ಮಹಾದೇವನು ಆ ತೇಜಸ್ಸಿನಿಂದ ಉತ್ತಮವಾದ ಜ್ವಾಲಾಮಾಲೆಗಳಿಂದ ಅತಿ ಭೀಷಣವಾದ ಸುದರ್ಶನವೆಂಬ ಚಕ್ರವೊಂದನ್ನು ನಿರ್ಮಿಸಿದನು.

೧೨. ಅದಕ್ಕಾಗಿ ಮಿಕ್ಕ ತೇಜಸ್ಸಿನಿಂದ ಹರಿಯು ವಜ್ರಾಯುಧವನ್ನೂ ಮಾಡಿಕೊಂಡನು. ಅಷ್ಟರಲ್ಲಿ ಕೈಲಾಸದ ತಲಪ್ರದೇಶದಲ್ಲಿ ಜಲಂಧರನು ಕಾಣಿಸಿಕೊಂಡನು.

೧೩. ಆನೆ, ಕುದುರೆ, ರಥ, ಕಾಲಾಳುಗಳ ಕೋಟಿ ಕೋಟಿಗಳಿಂದ ಅವನು ಪರಿವೃತನಾಗಿದ್ದನು. ಅವನನ್ನು ಕಂಡು ದೇವತೆಗಳೆಲ್ಲರೂ ಕಾಣಿಸಿಕೊಳ್ಳದಂತೆ ತಾವು ಬಂದಂತೆಯೇ ಹೊರಟುಹೋದರು.

೧೪. ನಂದಿ, ಗಜಮುಖ, ಕುಮಾರಸ್ವಾಮಿ ಮೊದಲಾದ ಗಣಗಳೆಲ್ಲರೂ ಶಿವನ ಆಜ್ಞೆಯಿಂದ ಅತಿತ್ವರಿತವಾಗಿ ಯುದ್ಧಕ್ಕೆ ಸಜ್ಜಾಗಿ ನಿಂತರು.

೧೫–೧೬. ಯುದ್ಧಮತ್ತರಾದ ಆ ಗಣಗಳು ಕೈಲಾಸದಿಂದ ಇಳಿದು ಬಂದರು. ಬಳಿಕ ಕೈಲಾಸದ ತಪ್ಪಲು ಪ್ರದೇಶದಲ್ಲಿ ಪ್ರಮಥಾಧಿಪರಿಗೂ ದೈತ್ಯರಿಗೂ ಯುದ್ಧವು ನಡೆಯಿತು. ಅದರಲ್ಲಿ ಘೋರವಾದ ಶಸ್ತ್ರಾಸ್ತ್ರಗಳು ವಿಜೃಂಭಿಸಿದುವು. ಭೇರಿ, ಮೃದಂಗ, ಶಂಖಾದಿಗಳ ಧ್ವನಿಯಿಂದಲೂ ವೀರರ ಗರ್ಜನೆಯಿಂದಲೂ ರಣರಂಗವು ತುಂಬಿಹೋಯಿತು.

೧೭–೨೧. ಆನೆ, ಕುದುರೆ, ರಥಗಳ ಶಬ್ದಗಳಿಂದ ನಾದಿತವಾಗಿ ಭೂಮಿಯು

ವ್ಯರಾಜತ ನಭಃ ಪೂರ್ಣಂ ಉಲ್ಕಾಭಿರಿವ ಸಂವೃತಂ ।
ನಿಹತೈ ರಥನಾಗೈಶ್ಚ ಪತ್ತಿಭಿರ್ಭೂಃ ವ್ಯರಾಜತ ॥ ೧೮ ॥
ವಜ್ರಾಹತಾಚಲಶಿರಃ ಶಕಲೈರಿವ ಸಂಯುತಾ ।
ಪ್ರಮಥಾಹತದೈತ್ಯೌಘೈಃ ದೈತ್ಯಾಹತಗಣೈಸ್ತಥಾ ॥ ೧೯ ॥
ವಸಾಸೃಙ್ಮಾಂಸಪಂಕಾಢ್ಯಾ ಭೂರಗಮ್ಯಾಽಭವತ್ತದಾ ।
ಪ್ರಮಥಾಹತದೈತ್ಯೌಘಾನ್ ಭಾರ್ಗವಸ್ಸಮಜೀವಯತ್ ॥ ೨೦ ॥
ಯುದ್ಧೇ ಪುನಃ ಪುನಸ್ತತ್ರ ಮೃತಸಂಜೀವಿನೀಬಲಾತ್ ।
ತಂ ದೃಷ್ಟ್ವಾ ವ್ಯಾಕುಲೀಭೂತಾ ಗಣಾಸ್ಸರ್ವೇ ಭಯಾನ್ವಿತಾಃ ।
ಶಶಂಸುರ್ದೇವದೇವಾಯ ತತ್ಸರ್ವಂ ಶುಕ್ರಚೇಷ್ಟಿತಂ ॥ ೨೧ ॥
ಅಥ ರುದ್ರಮುಖಾತ್ಕೃತ್ಯಾ ಬಭೂವಾತೀವಭೀಷಣಾ ।
ತಾಲಜಂಘಾ ದರೀವಕ್ತ್ರಾ ಸ್ತನಾಪೀಡಿತಭೂರುಹಾ ॥ ೨೨ ॥
ಸಾ ಯುದ್ಧಭೂಮಿಮಾಸಾದ್ಯ ಭಕ್ಷಯಂತೀ ಮಹಾಸುರಾನ್ ।
ಭಾರ್ಗವಂ ಸ್ವಭಗೇ ಧೃತ್ವಾ ಜಗಮಾಂತರ್ಹಿತಾ ನಭಃ ॥ ೨೩ ॥

---

ಕಂಪಿಸಿತು. ಶಕ್ತಿ, ತೋಮರ, ಬಾಣಸಮೂಹ, ಮುಸಲ, ಪ್ರಾಸ, ಪಟ್ಟಿಶ — ಮೊದಲಾದುವುಗಳಿಂದ ತುಂಬಿ ಆಕಾಶವು ಉಲ್ಕೆಗಳಿಂದಾವರಿಸಲ್ಪಟ್ಟಿತೋ ಎಂಬಂತೆ ರಂಜಿಸಿತು. ಹತವಾಗಿ ಬಿದ್ದ ಆನೆ, ಕುದುರೆ, ಕಾಲಾಳುಗಳಿಂದ ಭೂಮಿಯು ವಜ್ರಾಯುಧದ ಏಟಿಗೆ ಸಿಕ್ಕಿದ ಪರ್ವತ ಶಿಖರಗಳ ತುಂಡುಗಳಿಂದ ತುಂಬಿತೋ ಎಂಬಂತೆ ಕಾಣುತ್ತಿತ್ತು. ಪ್ರಮಥರಿಂದ ಹೊಡೆಯಲ್ಪಟ್ಟ ದೈತ್ಯ ಸಮೂಹಗಳಿಂದಲೂ, ದೈತ್ಯರಿಂದ ಹೊಡೆಯಲ್ಪಟ್ಟ ಶಿವಗಣಗಳಿಂದಲೂ ಹೊರ ಚೆಲ್ಲಿದ ನೆಣ, ರಕ್ತ, ಮಾಂಸಗಳ ಕೆಸರಿನಿಂದ ಭೂಮಿಯು ಅಗಮ್ಯವಾಯಿತು. ಪ್ರಮಥರಿಂದ ಯುದ್ಧದಲ್ಲಿ ಹತರಾದ ದೈತ್ಯ ಸಮೂಹಗಳನ್ನು ಮೃತ ಸಂಜೀವಿನಿಯ ಬಲದಿಂದ ಭಾರ್ಗವನು ಮತ್ತೆ ಮತ್ತೆ ಬದುಕಿಸುತ್ತಿದ್ದನು. ಹಾಗೆ ಮಾಡುತ್ತಿದ್ದ ಆತನನ್ನು ಕಂಡು ಗಣಗಳೆಲ್ಲರೂ ವ್ಯಾಕುಲಗೊಂಡರು. ಭಯಾನ್ವಿತರಾಗಿ ಶುಕ್ರನು ಮಾಡುತ್ತಿದ್ದುದನ್ನೆಲ್ಲ ದೇವದೇವನಿಗೆ ಅರಿಕೆ ಮಾಡಿದರು.

೨೨. ಆಗ ರುದ್ರನ ಮುಖದಿಂದ ತಾಲವೃಕ್ಷದಂತಿರುವ ಕಾಲುಗಳೂ, ಗುಹೆಯಂತಿರುವ ಬಾಯಿಯೂ, ಮರಗಳನ್ನು ಒತ್ತಿ ಪೀಡಿಸುತ್ತಿರುವ ಸ್ತನಗಳೂ ಉಳ್ಳವಳಾಗಿ ಅತ್ಯಂತ ಭಯಂಕರಳಾದ ಕೃತ್ಯೆಯು ಉದ್ಭವಿಸಿದಳು.

೨೩. ಅವಳು ಯುದ್ಧಭೂಮಿಗೆ ಹೋಗಿ ಮಹಾ ಮಹಾ ಅಸುರರನ್ನು ಭಕ್ಷಿಸುತ್ತಾ, ಭಾರ್ಗವನನ್ನು ತನ್ನ ಭಗದಲ್ಲಿಟ್ಟುಕೊಂಡು ಆಕಾಶಕ್ಕೆ ನೆಗೆದು ಅದೃಶ್ಯಳಾಗಿ ಹೋದಳು.

ವಿಧೃತಂ ಭಾರ್ಗವಂ ದೃಷ್ಟ್ವಾ ದೈತ್ಯಸೈನ್ಯಂ ಗಣಾಸ್ತದಾ ।
ಅಮ್ಲಾನವದನಾ ಹರ್ಷಾತ್ ನಿಜಘ್ನುರ್ಯುದ್ಧದುರ್ಮದಾಃ ॥ ೨೪ ॥
ಅಥಾಽಭಜ್ಯತ ದೈತ್ಯಾನಾಂ ಸೇನಾ ಗಣಭಯಾರ್ದಿತಾ ।
ವಾಯುವೇಗೇನಾಹತೇವ ಪ್ರಕೀರ್ಣಾ ತೃಣಸಂತತಿಃ ॥ ೨೫ ॥
ಭಗ್ನಾಂ ಗಣಭಯಾತ್ ಸೇನಾಂ ದೃಷ್ಟ್ವಾಮರ್ಷಯುತಾ ಯಯುಃ ।
ನಿಶುಂಭಶುಂಭೌ ಸೇನಾನ್ಯೌ ಕಾಲನೇಮಿಶ್ಚ ವೀರ್ಯವಾನ್ ॥ ೨೬ ॥
ತ್ರಯಸ್ತೇ ವಾರಯಾಮಾಸುಃ ಗಣಸೇನಾಂ ಮಹಾಬಲಾಃ ।
ಮುಂಚಂತಃ ಶರವರ್ಷಾಣಿ ಪ್ರಾವೃಷೀವ ಬಲಾಹಕಾಃ ॥ ೨೭ ॥
ತತೋ ದೈತ್ಯಶರೌಘಾಸ್ತೇ ಶಲಭಾನಾಮಿವ ವ್ರಜಾಃ ।
ರುರುಧುಃ ಖಂ ದಿಶಸ್ಸರ್ವಾ ಗಣಸೇನಾಮಕಂಪಯನ್ ॥ ೨೮ ॥
ಗಣಾಶ್ಶರಶತೈರ್ಭಿನ್ನಾ ರುಧಿರಾಸಾರವರ್ಷಿಣಃ ।
ವಸಂತೇ ಕಿಂಶುಕಾಭಾಸಾ ನ ಪ್ರಾಜ್ಞಾಯತ ಕಿಂಚನ ॥ ೨೯ ॥
ಪತಿತಾಃ ಪಾತ್ಯಮಾನಾಶ್ಚ ಭಿನ್ನಾಶ್ಛಿನ್ನಾಸ್ತದಾ ಗಣಾಃ ।
ತ್ಯಕ್ತ್ವಾ ಸಂಗ್ರಾಮಭೂಮಿಂ ತೇ ಸರ್ವೇಽಪಿ ವಿಮುಖಾಽಭವನ್ ॥ ೩೦ ॥

---

೨೪. ಭಾರ್ಗವನನ್ನು ಹಾಗೆ ಹಾರಿಸಿಕೊಂಡು ಹೋದುದನ್ನು ಕಂಡು ಗಣಗಳೆಲ್ಲರೂ ಹರ್ಷಗೊಂಡರು. ಬಾಡದ ಮುಖಗಳುಳ್ಳವರಾಗಿ ಯುದ್ಧದಲ್ಲಿ ಅತಿಮತ್ತರಾಗಿ ದೈತ್ಯ ಸೈನ್ಯವನ್ನು ಧ್ವಂಸಮಾಡಿದರು.

೨೫. ಆಗ ದೈತ್ಯರ ಸೇನೆಯು ಗಣಗಳ ಭಯದಿಂದ ನೊಂದು ವಾಯು ವೇಗದಿಂದ ಹೊಡೆಯಲ್ಪಟ್ಟು ಚೆದರಿ ಬಿದ್ದ ಹುಲ್ಲುರಾಶಿಯಂತೆ ಸೀಳಿಹೋಯಿತು.

೨೬–೨೭. ಗಣಭಯದಿಂದ ಸೇನೆಯು ಭಗ್ನವಾದುದನ್ನು ಕಂಡು ಸೇನಾನಿಗಳಾದ ನಿಶುಂಭ ಮತ್ತು ಶುಂಭರೂ, ಕಾಲನೇಮಿಯೂ ಕ್ರೋಧದಿಂದ ನುಗ್ಗಿ ನಡೆದರು. ಮಹಾಬಲರಾದ ಆ ಮೂವರೂ ಮಳೆಗಾಲದ ಮೇಘಗಳಂತೆ ಶರವರ್ಷಗಳನ್ನು ಸುರಿಸುತ್ತಾ ಗಣಸೇನೆಯನ್ನು ನಿವಾರಣೆಮಾಡಿದರು.

೨೮. ಬಳಿಕ ಆ ದೈತ್ಯ ಶರಸಮೂಹಗಳು ಶಲಭಗಳ ಪಡೆಗಳಂತೆ ಸರ್ವ ದಿಕ್ಕುಗಳಲ್ಲೂ ಹರಡಿ ಆಕಾಶಮಾರ್ಗವನ್ನು ತಡೆಗಟ್ಟಿದುವು; ಗಣಸೇನೆಯನ್ನು ನಡುಗಿಸಿದುವು.

೨೯–೩೦. ಗಣಗಳು ನೂರಾರು ಬಾಣಗಳಿಂದ ಇರಿಯಲ್ಪಟ್ಟು ರಕ್ತದ ಮಳೆಯನ್ನು ಸುರಿಸುತ್ತಾ ವಸಂತಕಾಲದ ಮುತ್ತುಗದಂತೆ ಕಾಣುತ್ತಾ ಏನೂ ಅರಿಯದವರಾದರು. ಗಣಗಳಲ್ಲಿ ಕೆಲವರು ಬಿದ್ದರು; ಕೆಲವರು ಬೀಳಿಸಲ್ಪಡುತ್ತಿದ್ದರು; ಕೆಲವರು ಛಿನ್ನಭಿನ್ನರಾದರು. ಹೀಗಾಗಿ ಅವರೆಲ್ಲರೂ ಯುದ್ಧಭೂಮಿಯನ್ನು ತ್ಯಜಿಸಿ ವಿಮುಖರಾದರು.

ತತಃ ಪ್ರಭಗ್ನಂ ಸ್ವಬಲಂ ವಿಲೋಕ್ಯ
ಶೈಲಾದಿಲಂಬೋದರಕಾರ್ತಿಕೇಯಾಃ ।
ತ್ವರಾನ್ವಿತಾ ದೈತ್ಯವರಾನ್ಪ್ರಸಹ್ಯ
ನಿವಾರಯಾಮಾಸುರಮರ್ಷಿಣಸ್ತೇ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಜಲಂಧರೋಪಾಖ್ಯಾನೇ ರುದ್ರಸೇನಾಪರಾಭವೋ"ನಾಮ ಅಷ್ಟಾದಶೋಽಧ್ಯಾಯಃ

---

೩೧. ಬಳಿಕ ತಮ್ಮ ಬಲವು ಭಗ್ನವಾದುದನ್ನು ಕಂಡು ನಂದಿ, ಲಂಬೋದರ ಮತ್ತು ಕಾರ್ತಿಕೇಯ—ಈ ಮೂವರೂ ಕೋಪಗೊಂಡವರಾಗಿ ತ್ವರೆಯಿಂದ ಕೂಡಿ ದೈತ್ಯಶ್ರೇಷ್ಠರನ್ನು ತಡೆದು ನಿಲ್ಲಿಸಿ ನಿವಾರಣೆಮಾಡಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ ಜಲಂಧರೋಪಾಖ್ಯಾನದಲ್ಲಿ "ರುದ್ರಸೇನಾಪರಾಭವವರ್ಣನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಏಕೋನವಿಂಶೋಽಧ್ಯಾಯಃ

## ಜಲಂಧರೋಪಾಖ್ಯಾನೇ ವೀರಭದ್ರಪತನಂ

ನಾರದ ಉವಾಚ:—

ತೇ ಗಣಾಧಿಪತೀನ್ ದೃಷ್ಟ್ವಾ ನಂದೀಭಮುಖಷಣ್ಮುಖಾನ್ ।
ಅಮರ್ಷಾದಭ್ಯಧಾವಂತ ದ್ವಂದ್ವಯುದ್ಧಾಯ ದಾನವಾಃ ॥ ೧ ॥
ನಂದಿನಂ ಕಾಲನೇಮಿಶ್ಚ ಶುಂಭೋ ಲಂಬೋದರಂ ತಥಾ ।
ನಿಶುಂಭಃ ಷಣ್ಮುಖಂ ವೇಗಾತ್ ಅಭ್ಯಧಾವತ ದಂಶಿತಃ ॥ ೨ ॥
ನಿಶುಂಭಃ ಕಾರ್ತಿಕೇಯಸ್ಯ ಮಯೂರಂ ಪಂಚಭಿಃ ಶರೈಃ ।
ಹೃದಿ ವಿವ್ಯಾಧ ವೇಗೇನ ಮೂರ್ಛಿತಃ ಸ ಪಪಾತ ಚ ॥ ೩ ॥
ತತಶ್ಶಕ್ತಿಧರಃ ಶಕ್ತಿಂ ಯಾವಜ್ಜಗ್ರಾಹ ರೋಷಿತಃ ।
ತಾವನ್ನಿಶುಂಭೋ ವೇಗೇನ ಸ್ವಶಕ್ತ್ಯಾ ತಮಪಾತಯತ್ ॥ ೪ ॥
ನಂದೀಶ್ವರಃ ಶರವ್ರಾತೈಃ ಕಾಲನೇಮಿಮವಧ್ಯತ ।
ಸಪ್ತಭಿಶ್ಚ ಹಯಾನ್ಕೇತುಂ ತ್ರಿಭಿಸ್ಸಾರಥಿಮಚ್ಛಿನತ್ ॥ ೫ ॥

---

## ಕನ್ನಡದ ಅನುವಾದ

### ವೀರಭದ್ರಪತನವರ್ಣನ

೧. ನಾರದನಿಂತೆಂದನು :—ಆ ದಾನವರು ನಂದಿ, ಗಜಮುಖ, ಷಣ್ಮುಖ ಮೊದಲಾದ ಗಣಾಧಿಪತಿಗಳನ್ನು ನೋಡಿ ಕೋಪದಿಂದ ದ್ವಂದ್ವಯುದ್ಧಕ್ಕಾಗಿ ಅವರೆದುರಿಗೆ ಓಡಿಬಂದರು.

೨. ನಂದಿಯನ್ನು ಕಾಲನೇಮಿಯೂ, ಶುಂಭನು ಲಂಬೋದರನನ್ನೂ, ನಿಶುಂಭನು ಷಣ್ಮುಖನನ್ನೂ ವೇಗದಿಂದೋಡಿ ಎದುರಿಸಿದರು.

೩. ನಿಶುಂಭನು ಕಾರ್ತಿಕೇಯನ ಮಯೂರವನ್ನು ಐದು ಬಾಣಗಳಿಂದ ಹೃದಯಕ್ಕೆ ಗುರಿಯಿಟ್ಟು ವೇಗದಿಂದ ಹೊಡೆದನು. ಆ ನವಿಲು ಮೂರ್ಛೆ ಹೊಂದಿ ಬಿದ್ದುಬಿಟ್ಟಿತು.

೪. ಬಳಿಕ ಶಕ್ತಿಧರನು ರೋಷಗೊಂಡು ಶಕ್ತಿಯನ್ನು ಸೆಳೆದುಕೊಂಡನು. ಕುಮಾರನು ಶಕ್ತಿಯನ್ನೆಳೆಯುವಷ್ಟರೊಳಗೇ ನಿಶುಂಭನು ತನ್ನ ಶಕ್ತಿಯನ್ನು ವೇಗದಿಂದ ಪ್ರಯೋಗಿಸಿ ಅವನನ್ನು ಬೀಳಿಸಿದನು.

೫. ನಂದೀಶ್ವರನು ಶರಸಮೂಹಗಳಿಂದ ಕಾಲನೇಮಿಯನ್ನು ಹೊಡೆದನು. ಏಳು ಬಾಣಗಳಿಂದ ಕುದುರೆಗಳನ್ನೂ ಧ್ವಜವನ್ನೂ ಮೂರು ಬಾಣಗಳಿಂದ ಸಾರಥಿಯನ್ನೂ ಛೇದಿಸಿದನು.

ಕಾಲನೇಮಿಸ್ತು ಸಂಕ್ರುದ್ಧೋ ಧನುಶ್ಚಿಚ್ಛೇದ ನಂದಿನಃ ।
ತದಪಾಸ್ಯ ಸ ಶೂಲೇನ ತಂ ವಕ್ಷಸ್ಯಹನದ್ಬಲೀ ॥ ೬ ॥
ಸ ಶೂಲೀಭಿನ್ನಹೃದಯೋ ಹತಾಶ್ವೋ ಹತಸಾರಥಿಃ ।
ಅದ್ರೇಶ್ಶಿಖರಮಾಮುಚ್ಯ ಶೈಲಾದಿಂ ಸೋಽಸ್ಯಪಾತಯತ್ ॥ ೭ ॥
ಅಥ ಶುಂಭೋ ಗಣೇಶಶ್ಚ ರಥಮೂಷಕವಾಹನೌ ।
ಯುಧ್ಯಮಾನೌ ಶರವ್ರಾತೈಃ ಪರಸ್ಪರಮವಿಧ್ಯತಾಂ ॥ ೮ ॥
ಗಣೇಶಸ್ತು ತದಾ ಶುಂಭಂ ಹೃದಿ ವಿವ್ಯಾಧ ಪತ್ರಿಣಾ ।
ಸಾರಥಿಂ ಚ ತ್ರಿಭಿರ್ಬಾಣೈಃ ಪಾತಯಾಮಾಸ ಭೂತಲೇ ॥ ೯ ॥
ತತೋಽತಿಕೃದ್ಧಃ ಶುಂಭೋಽಪಿ ಬಾಣಷಷ್ಟ್ಯಾ ಗಣಾಧಿಪಂ ।
ಮೂಷಕಂ ಚ ತ್ರಿಭಿರ್ವಿದ್ಧ್ವಾ ನನಾದ ಜಲದಸ್ವನಃ ॥ ೧೦ ॥
ಮೂಷಕಶ್ಶರಭಿನ್ನಾಂಗಃ ಚಚಾಲ ದೃಢವೇದನಃ ।
ಲಂಬೋದರಶ್ಚ ಪತಿತಃ ಪದಾತಿರಭವನ್ನೃಪ ॥ ೧೧ ॥
ತತೋ ಲಂಬೋದರಃ ಶುಂಭಂ ಹತ್ವಾ ಪರಶುನಾ ಹೃದಿ ।
ಅಪಾತಯತ್ತದಾ ಭೂಮೌ ಮೂಷಕಂ ಚಾರುಹತ್ಪುನಃ ॥ ೧೨ ॥

---

೬. ಕಾಲನೇಮಿಯು ಕ್ರುದ್ಧನಾಗಿ ನಂದಿಯ ಧನುಸ್ಸನ್ನು ಖಂಡಿಸಿದನು. ಬಲಶಾಲಿಯಾದ ಆ ನಂದಿಯು ಅದನ್ನು ಬಿಸುಟು ಶೂಲದಿಂದ ಅವನ ಎದೆಗೆ ಹೊಡೆದನು.

೭. ಆ ಕಾಲನೇಮಿಯು ಶೂಲದಿಂದ ಭಿನ್ನವಾದ ಹೃದಯವುಳ್ಳವನಾಗಿ ಕುದುರೆಗಳೂ ಸಾರಥಿಯೂ ಹತರಾಗಿರಲು ಪರ್ವತದ ಶಿಖರವನ್ನು ಕಿತ್ತು ಕೊಂಡು ನಂದಿಯನ್ನು ಹೊಡೆದು ಕೆಡವಿದನು.

೮. ಇತ್ತ ಶುಂಭನೂ ಗಣೇಶನೂ ರಥ ಮತ್ತು ಮೂಷಕವಾಹನರಾಗಿ ಯುದ್ಧಮಾಡುತ್ತ ಶರಸಮೂಹಗಳಿಂದ ಪರಸ್ಪರವಾಗಿ ಹೊಡೆಯುತ್ತಿದ್ದರು.

೯. ಆಗ ಗಣೇಶನು ಶುಂಭನನ್ನು ಬಾಣದಿಂದ ಎದೆಗೆ ಹೊಡೆದನು. ಮೂರು ಬಾಣಗಳಿಂದ ಸಾರಥಿಯನ್ನು ನೆಲಕ್ಕೆ ಬೀಳಿಸಿದನು.

೧೦. ಬಳಿಕ ಶುಂಭನು ಕೂಡ ಅತಿಕ್ರುದ್ಧನಾಗಿ ಬಾಣವೃಷ್ಟಿಯಿಂದ ಗಣಾಧಿಪತಿಯನ್ನೂ ಮೂರು ಬಾಣಗಳಿಂದ ಮೂಷಕವನ್ನೂ ಹೊಡೆದು ಗುಡುಗಿ ನಂತೆ ಗರ್ಜಿಸಿದನು.

೧೧. ಅಂಗವು ಭಿನ್ನವಾಗಿ ಬಹುವೇದನೆಯನ್ನನುಭವಿಸುತ್ತಾ ಮೂಷಕವು ಓಡಿತು. ಲಂಬೋದರನು ಕೆಳಗೆ ಬಿದ್ದು ಪದಾತಿಯಾದನು.

೧೨. ಬಳಿಕ ಲಂಬೋದರನು ಶುಂಭನ ಹೃದಯಕ್ಕೆ ಪರಶುವಿನಿಂದ ಹೊಡೆದು ನೆಲಕ್ಕೆ ಕೆಡವಿ ಮತ್ತೆ ಮೂಷಕವನ್ನು ಆರೋಹಿಸಿದನು.

ಕಾಲನೇಮಿರ್ನಿಶುಂಭಶ್ಚಾಽಪ್ಯುಭೌ ಲಂಬೋದರಂ ಶರೈಃ ।
ಯುಗಪಜ್ಜಘ್ನತುಃ ಕ್ರೋಧಾತ್ ತೋತ್ರೈರಿವ ಮಹಾದ್ವಿಪಂ ॥ ೧೩ ॥
ತಂ ಪೀಡ್ಯಮಾನಮಾಲೋಕ್ಯ ವೀರಭದ್ರೋ ಮಹಾಬಲಃ ।
ಅಭ್ಯಧಾವತ ವೇಗೇನ ಭೂತಕೋಟಿಯುತಸ್ತದಾ ॥ ೧೪ ॥
ಕೂಷ್ಮಾಂಡಭೈರವಾಶ್ಚಾಪಿ ವೇತಾಲಾ ಯೋಗಿನೀಗಣಾಃ ।
ಪಿಶಾಚಯೋಗಿನೀಸಂಘಾಃ ಗಣಾಶ್ಚಾಪಿ ತಮನ್ವಯುಃ ॥ ೧೫ ॥
ತತಃ ಕಿಲಕಿಲಾಶಬ್ದೈಃ ಸಿಂಹನಾದೈಃ ಸುಘರ್ಘರೈಃ ।
ಭೇರೀತಾಲಮೃದಂಗೈಶ್ಚ ಪೃಥಿವೀ ಸಮಕಂಪತ ॥ ೧೬ ॥
ತತೋ ಭೂತಾನ್ಯಧಾವಂತ ಭಕ್ಷಯಂತಿ ಸ್ಮ ದಾನವಾನ್ ।
ಉತ್ಪತಂತ್ಯಾಪತಂತಿ ಸ್ಮ ನನೃತುಶ್ಚ ರಣಾಂಗಣೇ ॥ ೧೭ ॥
ನಂದೀ ಚ ಕಾರ್ತಿಕೇಯಶ್ಚ ಸಮಾಶ್ವಸ್ಯ ತ್ವರಾನ್ವಿತೌ ।
ನಿಜಘ್ನತೂ ರಣೇ ದೈತ್ಯಾನ್ನಿರಂತರಶರವ್ರಜೈಃ ॥ ೧೮ ॥
ಛಿನ್ನಭಿನ್ನಾಹತೈರ್ದೈತ್ಯೈಃ ಪತಿತೈರ್ಭಕ್ಷಿತೈಸ್ತದಾ ।
ವ್ಯಾಕುಲಾ ಸಾಽಭವತ್ಸೇನಾ ವಿಷಣ್ಣವದನಾ ತದಾ ॥ ೧೯ ॥

---

೧೩–೧೪. ಕಾಲನೇಮಿ, ನಿಶುಂಭ ಈ ಇಬ್ಬರೂ ಒಮ್ಮೆಯೇ ಕ್ರೋಧದಿಂದ ಲಂಬೋದರನನ್ನು ದೊಡ್ಡ ಸಲಗವನ್ನು ಚಾವಟಿಯಿಂದ ಹೊಡೆಯುವಂತೆ ಬಾಣಗಳಿಂದ ಹೊಡೆದರು. ಅವರಿಬ್ಬರಿಂದಲೂ ಪೀಡಿಸಲ್ಪಡುತ್ತಿದ್ದ ಅವನನ್ನು ಕಂಡು ಮಹಾಬಲನಾದ ವೀರಭದ್ರನು ಭೂತಕೋಟಿಗಳಿಂದೊಡಗೂಡಿ ವೇಗವಾಗಿ ನುಗ್ಗಿಬಂದನು.

೧೫. ಕೂಷ್ಮಾಂಡರು, ಭೈರವರು, ವೇತಾಲರು, ಯೋಗಿನೀಗಣಗಳು, ಪಿಶಾಚಯೋಗಿನೀ ಸಂಘಗಳು, ಇತರ ಗಣಗಳು—ಎಲ್ಲರೂ ಅವನನ್ನು ಅನುಸರಿಸಿ ನಡೆದರು.

೧೬. ಬಳಿಕ, ಕಿಲಕಿಲ ಧ್ವನಿಯಿಂದಲೂ, ಸಿಂಹನಾದಗಳಿಂದಲೂ, ಘರ್ಘರಗಳಿಂದಲೂ, ಭೇರಿ ತಾಲ ಮೃದಂಗಗಳಿಂದಲೂ ಪೃಥ್ವಿಯು ನಡುಗಿತು.

೧೭. ಭೂತಗಳು ಓಡಾಡಿದುವು. ದಾನವರನ್ನು ಭಕ್ಷಿಸಿದುವು; ಹಾರಿ ಕುಪ್ಪಳಿಸಿದುವು; ರಣಾಂಗಣದಲ್ಲಿ ನರ್ತಿಸಿದುವು.

೧೮. ನಂದಿಯೂ ಕಾರ್ತಿಕೇಯನೂ ಸಮಾಧಾನಮಾಡಿಕೊಂಡು ತ್ವರೆಯಿಂದ ನುಗ್ಗಿ ರಣದಲ್ಲಿ ಎಡೆಬಿಡದೆ ಬಾಣಬಿಡುತ್ತಾ ದೈತ್ಯರನ್ನು ಸಂಹರಿಸಿದರು.

೧೯. ದೈತ್ಯಸೇನೆಯು ಛಿನ್ನಭಿನ್ನವಾಯಿತು. ದೈತ್ಯರು ಹತರಾದರು, ಭಕ್ಷಿತರಾದರು, ಬಿದ್ದೊರಗಿದರು. ಆಗ ಆ ಸೇನೆ ವ್ಯಾಕುಲವನ್ನು ಹೊಂದಿ ಬಹು ವಿಷಣ್ಣವಾಯಿತು.

ಪ್ರವಿಧ್ವಸ್ತಾಂ ತದಾ ಸೇನಾಂ ದೃಷ್ಟ್ವಾ ಸಾಗರನಂದನಃ ।
ರಥೇನಾತಿಪತಾಕೇನ ಗಣಾನಭಿಯಯೌ ಬಲೀ ॥ ೨೦ ॥
ಹಸ್ತ್ಯಶ್ವರಥಸಂಹ್ರಾದಾಃ ಶಂಖಭೇರೀಸ್ವನಾಸ್ತಥಾ ।
ಅಭವನ್ ಸಿಂಹನಾದಾಶ್ಚ ಸೇನಯೋರುಭಯೋಸ್ತದಾ ॥ ೨೧ ॥
ಜಲಂಧರಶರವ್ರಾತೈಃ ನೀಹಾರಪಟಲೈರಿವ ।
ದ್ಯಾವಾಪೃಥಿವ್ಯೋರಚ್ಛಿನ್ನಂ ಅಂತರಂ ಸಮಪದ್ಯತ ॥ ೨೨ ॥
ಗಣೇಶಂ ಪಂಚಭಿರ್ವಿದ್ಧ್ವಾ ಶೈಲಾದಿಂ ನವಭಿಶ್ಶರೈಃ ।
ವೀರಭದ್ರಂ ಚ ವಿಂಶತ್ಯಾ ನನಾದ ಜಲದಸ್ವನಃ ॥ ೨೩ ॥
ಕಾರ್ತಿಕೇಯಸ್ತದಾ ದೈತ್ಯಂ ಶಕ್ತ್ಯಾ ವಿವ್ಯಾಧ ಸತ್ವರಃ ।
ಯುಯುಧೇ ಶಕ್ತಿನಿರ್ಭಿನ್ನಃ ಕಿಂಚಿದ್ವ್ಯಾಕುಲಮಾನಸಃ ॥ ೨೪ ॥
ತತಃ ಕ್ರೋಧಪರೀತಾಕ್ಷಃ ಕಾರ್ತಿಕೇಯಂ ಜಲಂಧರಃ ।
ಗದಯಾ ತಾಡಯಾಮಾಸ ಸ ಚ ಭೂಮಿತಲೇಽಪತತ್ ॥ ೨೫ ॥
ತಥೈವ ನಂದಿನಂ ವೇಗಾತ್ ಅಪಾತಯತ ಭೂತಲೇ ।
ತತೋ ಗಣೇಶ್ವರಃ ಕ್ರುದ್ಧೋ ಗದಾಂ ಪರಶುನಾಽಹನತ್ ॥ ೨೬ ॥
ವೀರಭದ್ರಸ್ತ್ರಿಭಿರ್ಬಾಣೈಃ ಹೃದಿ ವಿವ್ಯಾಧ ದಾನವಂ ।
ಸಪ್ತಭಿಶ್ಚ ಹಯಾನ್ಕೇತುಂ ಧನುಶ್ಛತ್ರಂ ಚ ಚಿಚ್ಛಿದೇ ॥ ೨೭ ॥

---

೨೦–೨೧. ತನ್ನ ಸೇನೆಯು ಬಹಳ ಧ್ವಂಸವಾದದ್ದನ್ನು ಕಂಡು ಸಾಗರನಂದನನಾದ ಜಲಂಧರನು ಎತ್ತಿಕಟ್ಟಿದ ಪತಾಕೆಯುಳ್ಳ ರಥವನ್ನೇರಿ ಗಣಗಳಿಗಿದಿರಾಗಿ ನುಗ್ಗಿದನು. ಆಗ ಉಭಯಸೇನೆಗಳಲ್ಲಿಯೂ ಆನೆ ಕುದುರೆ ರಥಗಳ ಚೀತ್ಕಾರಗಳೂ, ಶಂಖ ಭೇರಿ ಮೊದಲಾದವುಗಳ ಧ್ವನಿಗಳೂ, ಸಿಂಹನಾದಗಳೂ ಉಂಟಾದವು.

೨೨. ಭೂಮ್ಯಾಕಾಶಗಳ ನಡುವಣ ಅಂತರವು ಜಲಂಧರನ ಶರಸಮೂಹಗಳಿಂದ ಹಿಮದ ತುಂತುರುಗಳಿಂದ ತುಂಬಿದಂತಾಯಿತು.

೨೩. ಗಣೇಶನನ್ನು ಐದು ಬಾಣಗಳಿಂದಲೂ, ನಂದಿಯನ್ನು ಒಂಬತ್ತು ಕಣೆಗಳಿಂದಲೂ, ವೀರಭದ್ರನನ್ನು ಇಪ್ಪತ್ತು ಶರಗಳಿಂದಲೂ ಹೊಡೆದು ಮೇಘಧ್ವನಿಯಿಂದ ಸಿಂಹನಾದವನ್ನು ಮಾಡಿದನು.

೨೪–೨೭. ಆಗ ಕಾರ್ತಿಕೇಯನು ಶಕ್ತಿಯಿಂದ ದೈತ್ಯನನ್ನು ವೇಗವಾಗಿ ಪ್ರಹರಿಸಿದನು. ಅವನು ಶಕ್ತಿಯಿಂದ ಮೈಯೊಡೆದು ಸ್ವಲ್ಪಮಾತ್ರ ಮನಸ್ಸು ವ್ಯಾಕುಲಹೊಂದಿ ಯುದ್ಧಮಾಡಿದನು. ಬಳಿಕ ಜಲಂಧರನು ಕಣ್ಣುಗಳಲ್ಲಿ ಕ್ರೋಧವನ್ನು ಕಾರುತ್ತಾ ಕಾರ್ತಿಕೇಯನನ್ನು ಗದೆಯಿಂದ ಅಪ್ಪಳಿಸಿದನು. ಅವನು (ಆ ಏಟನಿಂದ) ಭೂಮಿಯಮೇಲೆ ಬಿದ್ದನು. ಅದೇ ರೀತಿಯಲ್ಲಿ ನಂದಿಯನ್ನು ವೇಗದಿಂದ ಭೂತಲದಮೇಲೆ ಕೆಡವಿದನು. ಬಳಿಕ ಗಣೇಶ್ವರನು ಕ್ರುದ್ಧನಾಗಿ ಆ ಗದೆಯನ್ನು ಪರಶುವಿನಿಂದ ಹೊಡೆದನು. ವೀರಭದ್ರನು

ತತೋಽತಿಕ್ರುದ್ಧೋ ದೈತ್ಯೇಂದ್ರಃ ಶಕ್ತಿಮುದ್ಯಮ್ಯ ದಾರುಣಾಂ ।
ಗಣೇಶಂ ಪಾತಯಾಮಾಸ ರಥಂ ಚಾನ್ಯಮಥಾಽಽರುಹತ್ ॥ ೨೮ ॥
ಅಭ್ಯಯಾದಥ ವೇಗೇನ ವೀರಭದ್ರಂ ರುಷಾನ್ವಿತಃ ।
ತತಸ್ತೌ ಸೂರ್ಯಸಂಕಾಶೌ ಯುಯುಧಾತೇ ಪರಸ್ಪರಂ ॥ ೨೯ ॥
ವೀರಭದ್ರೋ ಪುನಸ್ತಸ್ಯ ಹಯಾನ್ ಬಾಣೈರಪಾತಯತ್ ।
ಧನುಶ್ಚಿಚ್ಛೇದ ದೈತ್ಯೇಂದ್ರಃ ಪುಪ್ಲುವೇ ಪರಿಘಾಯುಧಃ ॥ ೩೦ ॥
ಸ ವೀರಭದ್ರಂ ತ್ವರಯಾಽಭಿಗಮ್ಯ
ಜಘಾನ ದೈತ್ಯಃ ಪರಿಘೇಣ ಮೂರ್ಧ್ನಿ ।
ಸ ಚಾಪಿ ವೀರಃ ಪ್ರವಿಭಿನ್ನಮೂರ್ಧಾ
ಪಪಾತ ಭೂಮೌ ರುಧಿರಂ ಸಮುದ್ಗಿರನ್ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಜಲಂಧರೋಪಾಖ್ಯಾನೇ ವೀರಭದ್ರಪತನಂ" ನಾಮ ಏಕೋನವಿಂಶೋಽಧ್ಯಾಯಃ

---

ಮೂರು ಬಾಣಗಳಿಂದ ದಾನವನ ಹೃದಯಕ್ಕೆ ಹೊಡೆದನು. ಕುದುರೆಗಳು, ಪತಾಕೆ, ಧನುಸ್ಸು, ಛತ್ರ—ಇವನ್ನು ಏಳು ಬಾಣಗಳಿಂದ ಕತ್ತರಿಸಿದನು.

೨೮. ಬಳಿಕ ಅತಿಕ್ರುದ್ಧನಾಗಿ ದೈತ್ಯೇಂದ್ರನು ದಾರುಣವಾದ ಶಕ್ತಿಯನ್ನೆತ್ತಿ ಬಿಗಿಹಿಡಿದು ಬಡಿದು ಗಣೇಶನನ್ನು ಕೆಳಕ್ಕೆ ಕೆಡವಿದನು. ತಾನೂ ಬೇರೊಂದು ರಥವನ್ನು ಹತ್ತಿದನು.

೨೯. ಬಳಿಕ ಅವನು ರೋಷಾನ್ವಿತನಾಗಿ ವೀರಭದ್ರನಿಗೆ ಅಭಿಮುಖವಾಗಿ ವೇಗದಿಂದ ನುಗ್ಗಿದನು. ಸೂರ್ಯಸಮಾನರಾದ ಅವರಿಬ್ಬರೂ ಪರಸ್ಪರವಾಗಿ ಯುದ್ಧಮಾಡಿದರು.

೩೦. ವೀರಭದ್ರನು ಮತ್ತೊಮ್ಮೆ ಅವನ ಕುದುರೆಗಳನ್ನು ಬಾಣಗಳಿಂದ ಹೊಡೆದು ಕೆಡವಿದನು. ದೈತ್ಯೇಂದ್ರನು (ವೀರಭದ್ರನ) ಧನುಸ್ಸನ್ನು ಕತ್ತರಿಸಿದನು. ಆಮೇಲೆ ಪರಿಘವನ್ನು ಹಿಡಿದುಕೊಂಡು ಕುಪ್ಪಳಿಸಿದನು.

೩೧. ಅವನು ತ್ವರೆಯಿಂದ ನುಗ್ಗಿ ವೀರಭದ್ರನಮೇಲೆ ಬಿದ್ದು ಪರಿಘದಿಂದ ಅವನ ತಲೆಗೆ ಪ್ರಹಾರಮಾಡಿದನು. ಆ ವೀರಭದ್ರನು ತಲೆಯೊಡೆದು ರಕ್ತವನ್ನು ಕಾರುತ್ತಾ ನೆಲದಮೇಲೆ ಬಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದ ಜಲಂಧರೋಪಾಖ್ಯಾನದಲ್ಲಿ "ವೀರಭದ್ರಪತನವರ್ಣನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶೋಽಧ್ಯಾಯಃ

### ಜಲಂಧರೋಪಾಖ್ಯಾನೇ ಶಿವ ಜಲಂಧರ ಯುದ್ಧ ವರ್ಣನಂ

ನಾರದ ಉವಾಚ :—

ಪತಿತಂ ವೀರಭದ್ರಂ ತು ದೃಷ್ಟ್ವಾ ರುದ್ರಗಣಾ ಭಯಾತ್ ।
ಆಗಮಂಸ್ತೇ ರಣಂ ಹಿತ್ವಾ ಕ್ರೋಶಮಾನಾ ಮಹೇಶ್ವರಂ ॥ ೧ ॥
ಅಥ ಕೋಲಾಹಲಂ ಶ್ರುತ್ವಾ ಗಣಾನಾಂ ಚಂದ್ರಶೇಖರಃ ।
ಅಭ್ಯಯಾದ್ವೃಷಭಾರೂಢಃ ಸಂಗ್ರಾಮಂ ಪ್ರಹಸನ್ನಿವ ॥ ೨ ॥
ರುದ್ರಮಾಯಾಂತಮಾಲೋಕ್ಯ ಸಿಂಹನಾದೈರ್ಗಣಾಃ ಪುನಃ ।
ನಿವೃತ್ತಾಃ ಸಂಗರೇ ದೈತ್ಯಾನ್ ನಿರ್ಜಘ್ನುಃ ಶರವೃಷ್ಟಿಭಿಃ ॥ ೩ ॥
ದೈತ್ಯಾಶ್ಚ ಭೀಷಣಂ ದೃಷ್ಟ್ವಾ ಸರ್ವೇ ಚೈವ ವಿದುದ್ರುವುಃ ।
ಕಾರ್ತಿಕವ್ರತಿನಂ ದೃಷ್ಟ್ವಾ ಪಾತಕಾನೀವ ತದ್ಭಯಾತ್ ॥ ೪ ॥
ಜಲಂಧರೋಽಥ ತಾನ್ ದೈತ್ಯಾನ್ ನಿವೃತ್ತಾನ್ ಪ್ರೇಕ್ಷ್ಯ ಸಂಗರೇ ।
ರೋಷಾದಧಾವಚ್ಚಂಡೀಶಂ ಮುಂಚನ್ ಬಾಣಾನ್ಸಹಸ್ರಶಃ ॥ ೫ ॥

---

### ಕನ್ನಡದ ಅನುವಾದ

#### ಶಿವಜಲಂಧರರ ಯುದ್ಧ ವರ್ಣನ

೧. ನಾರದನಿಂತೆಂದನು :—ವೀರಭದ್ರನು ಬಿದ್ದುದನ್ನು ಕಂಡು ರುದ್ರಗಣಗಳು ಭಯದಿಂದ ರಣವನ್ನು ತೊರೆದು ಕೂಗಿಕೊಳ್ಳುತ್ತಾ ಮಹೇಶ್ವರನ ಬಳಿಗೆ ಓಡಿಹೋದರು.

೨. ಗಣಗಳ ಆ ಕೋಲಾಹಲವನ್ನಾಲಿಸಿ ಚಂದ್ರಶೇಖರನು ವೃಷಭಾರೂಢನಾಗಿ ನಸುನಗುತ್ತ ಸಂಗ್ರಾಮಕ್ಕೆ ನಡೆದನು.

೩. ರುದ್ರನು ಬರುತ್ತಿರುವುದನ್ನು ಕಂಡು ಗಣಗಳು ಸಿಂಹನಾದವನ್ನು ಮಾಡುತ್ತಾ ರಣಭೂಮಿಗೆ ಮತ್ತೆ ಹಿಂದಿರುಗಿ ಶರವರ್ಷಗಳಿಂದ ದೈತ್ಯರನ್ನು ಕೊಲ್ಲತೊಡಗಿದರು.

೪. ದೈತ್ಯರೂ ಆ ಭೀಷಣ ಗಣಗಳನ್ನು ಕಂಡು ಭಯಗೊಂಡು ಕಾರ್ತಿಕವ್ರತಿಯನ್ನು ಕಂಡ ಪಾತಕಗಳಂತೆ ಓಡಿಹೋದರು.

೫. ಜಲಂಧರನು ಯುದ್ಧದಲ್ಲಿ ಬೆಂಗೊಟ್ಟು ಬರುತ್ತಿದ್ದ ಆ ದೈತ್ಯರನ್ನು ಕಂಡು ಸಾವಿರಗಟ್ಟಳೆ ಬಾಣಗಳನ್ನು ಬಿಡುತ್ತಾ ರೋಷದಿಂದ ಚಂಡೀಶನಮೇಲೆ ನುಗ್ಗಿ ನಡೆದನು.

ಶುಂಭೋ ನಿಶುಂಭೋಽಶ್ವಮುಖಃ ಕಾಲನೇಮಿರ್ಬಲಾಹಕಃ ।
ಖಡ್ಗರೋಮಾ ಪ್ರಚಂಡಶ್ಚ ಘಸ್ಮರಾದ್ಯಾಃ ಶಿವಂ ಯಯುಃ ॥ ೬ ॥
ಬಾಣಾಂಧಕಾರಸಂಛನ್ನಂ ದೃಷ್ಟ್ವಾ ಗಣಬಲಂ ಶಿವಃ ।
ಬಾಣಜಾಲಮಪಾಚ್ಛಿದ್ಯ ಸ್ವಬಾಣೈರಾವೃಣೋನ್ನಭಃ ॥ ೭ ॥
ದೈತ್ಯಾಂಶ್ಚ ಬಾಣವಾತ್ಯಾಭಿಃ ಪೀಡಿತಾನಕರೋತ್ತದಾ ।
ಪ್ರಚಂಡಬಾಣಜಾಲೌಘೈಃ ಅಪಾತಯತ ಭೂತಲೇ ॥ ೮ ॥
ಖಡ್ಗರೋಮ್ಣಃ ಶಿರಃ ಕಾಯಾತ್ ತದಾ ಪರಶುನಾಽಚ್ಛಿನತ್ ।
ಬಲಾಹಕಸ್ಯ ಚ ಶಿರಃ ಖಟ್ವಾಂಗೇನಾಕರೋದ್ದ್ವಿಧಾ ॥ ೯ ॥
ಬದ್ಧ್ವಾ ಚ ಘಸ್ಮರಂ ದೈತ್ಯಂ ಪಾಶೇನಾಭ್ಯಹನದ್ಭುವಿ ।
ವೃಷಭೇಣ ಹತಾಃ ಕೇಚಿತ್ ಕೇಚಿದ್ಬಾಣೈರ್ನಿಪಾತಿತಾಃ ॥ ೧೦ ॥
ನ ಶೇಕುರಸುರಾಃ ಸ್ಥಾತುಂ ಗಜಾಃ ಸಿಂಹಾರ್ದಿತಾ ಇವ ।
ತತಃ ಕ್ರೋಧಪರೀತಾತ್ಮಾ ವೇಗಾದ್ರುದ್ರಂ ಜಲಂಧರಃ ॥ ೧೧ ॥
ಆಹ್ವಯಾಮಾಸ ಸಮರೇ ತೀವ್ರಾಶನಿಸಮಸ್ವನಃ ।

ಜಲಂಧರ ಉವಾಚ :—

ಯುಧ್ಯಸ್ವ ಚ ಮಯಾ ಸಾರ್ಧಂ ಕಿಮೇಭಿರ್ನಿಹತೈಸ್ತವ ॥ ೧೨ ॥

---

೬. ಶುಂಭ, ನಿಶುಂಭ, ಅಶ್ವಮುಖ, ಕಾಲನೇಮಿ, ಬಲಾಹಕ, ಖಡ್ಗರೋಮ, ಪ್ರಚಂಡ, ಘಸ್ಮರ—ಇವರೇ ಮೊದಲಾದವರು ಶಿವನಮೇಲೆ ದಾಳಿ ಮಾಡಿದರು.

೭. ಗಣಬಲವು ಬಾಣಾಂಧಕಾರದಿಂದ ಕವಿದುಹೋದುದನ್ನು ಕಂಡು ಶಿವನು ಆ ಬಾಣಜಾಲವನ್ನು ಕತ್ತರಿಸಿಹಾಕಿ ತನ್ನ ಬಾಣಗಳಿಂದ ಆಕಾಶವನ್ನು ಮುಚ್ಚಿದನು.

೮. ಬಾಣದ ಬಿರುಗಾಳಿಗಳಿಂದ ದೈತ್ಯರನ್ನು ಪೀಡಿತರನ್ನಾಗಿ ಮಾಡಿದನು. ಪ್ರಚಂಡ ಬಾಣಸಮೂಹಗಳ ಪರಂಪರೆಯಿಂದ ಅವರನ್ನು ಭೂತಲದಲ್ಲಿ ಬೀಳಿಸಿದನು.

೯. ಖಡ್ಗರೋಮನ ಶಿರಸ್ಸನ್ನು ಪರಶುವಿನಿಂದ ಹೊಡೆದು ದೇಹದಿಂದ ಬೇರ್ಪಡಿಸಿದನು. ಬಲಾಹಕನ ತಲೆಯನ್ನು ಖಟ್ವಾಂಗದಿಂದ ಇಕ್ಕಡಿಮಾಡಿದನು.

೧೦. ಘಸ್ಮರ ದೈತ್ಯನನ್ನು ಪಾಶದಿಂದ ಕಟ್ಟಿ ನೆಲಕ್ಕೆ ಅಪ್ಪಳಿಸಿದನು. ವೃಷಭದಿಂದ ಕೆಲವರು ಹತರಾದರು. ಕೆಲವರು ಬಾಣಗಳಿಂದ ನಿಪಾತ ಹೊಂದಿದರು.

೧೧–೧೩. ಸಿಂಹದಿಂದ ಪೀಡಿತಗಳಾದ ಆನೆಗಳಂತೆ ಅಸುರರು ಅಲ್ಲಿ ನಿಲ್ಲಲು ಶಕ್ತರಾಗಲಿಲ್ಲ. ಬಳಿಕ ಕ್ರೋಧಾವಿಷ್ಟನಾಗಿ ಜಲಂಧರನು ಬರಸಿಡಿಲಿ

ಯಚ್ಚ ಕಿಂಚಿದ್ಬಲಂ ತೇಽಸ್ತಿ ತದ್ದರ್ಶಯ ಜಟಾಧರ ।
ಇತ್ಯುಕ್ತ್ವಾ ಬಾಣಸಪ್ತತ್ಯಾ ಜಘಾನ ವೃಷಭಧ್ವಜಂ ॥ ೧೩ ॥
ತಾನ್ ಪ್ರಾಪ್ತಾನ್ನಿಶಿತೈರ್ಬಾಣೈಃ ಚಿಚ್ಛೇದ ಪ್ರಹಸನ್ನಿವ ।
ತತೋ ಹಯಾನ್ ಧ್ವಜಂ ಛತ್ರಂ ಧನುಶ್ಚಿಚ್ಛೇದ ಶಕ್ತಿಭಿಃ ॥ ೧೪ ॥
ಸ ಚ್ಛಿನ್ನಧನ್ವಾ ವಿರಥೋ ಗದಾಮುದ್ಯಮ್ಯ ವೇಗವಾನ್ ।
ಅಭ್ಯಧಾವಚ್ಛಿವಸ್ತಾವತ್ ಗದಾಂ ಬಾಣೈರ್ದ್ವಿಧಾಽಚ್ಛಿನತ್ ॥ ೧೫ ॥
ತಥಾಪಿ ಮುಷ್ಟಿಮುದ್ಯಮ್ಯ ಯಯೌ ರುದ್ರಂ ಜಿಘಾಂಸಯಾ ।
ತಾವಚ್ಛಿವೇನ ಬಾಣೌಘೈಃ ಕ್ರೋಶಮಾತ್ರಮುಪಾಕೃತಃ ॥ ೧೬ ॥
ತತೋ ಜಲಂಧರೋ ದೈತ್ಯೋ ಮತ್ವಾ ರುದ್ರಂ ಬಲಾಧಿಕಂ ।
ಸಸರ್ಜ ಮಾಯಾಂ ಗಾಂಧರ್ವೀಂ ಅದ್ಭುತಾಂ ರುದ್ರಮೋಹಿನೀಂ ॥ ೧೭ ॥
ತತೋ ಜಗುಶ್ಚ ನನೃತುಃ ಗಂಧರ್ವಾಪ್ಸರಸಾಂ ಗಣಾಃ ।
ತಾಲವೇಣುಮೃದಂಗಾದ್ಯಾನ್ ವಾದಯಂತಿ ಸ್ಮ ಚಾಽಪರೇ ॥ ೧೮ ॥

---

ನಂತೆ ಧ್ವನಿಯಿಂದ ರುದ್ರನನ್ನು ಕದನಕ್ಕೆ ಕರೆದನು. ಜಲಂಧರನಿಂತೆಂದನು:— "ನನ್ನೊಡನೆ ಯುದ್ಧಮಾಡು. ಇವರನ್ನು ನೀನು ಕೊಂದುದರಿಂದ ಬಂದದ್ದೇನು? ಜಟಾಧರಾ! ನಿನಗೆ ಅಲ್ಪಸ್ವಲ್ಪ ಬಲವೇನಾದರೂ ಇರುವ ಪಕ್ಷದಲ್ಲಿ ಅದನ್ನು ನನಗೆ ತೋರಿಸು" ಎಂದು ನುಡಿದು ಎಪ್ಪತ್ತು ಬಾಣಗಳಿಂದ ವೃಷಭಧ್ವಜನನ್ನು ಪ್ರಹರಿಸಿದನು.

೧೪. ತನ್ನಮೇಲೆ ಬಂದ ಆ ಬಾಣಗಳನ್ನು ಶಿವನು ಹರಿತವಾದ ಬಾಣಗಳಿಂದ ನಗುಮುಖದಿಂದಲೆ ಕಡಿದುಹಾಕಿದನು. ಬಳಿಕ ಅವನ ಕುದುರೆಗಳನ್ನೂ ಧ್ವಜವನ್ನೂ ಛತ್ರವನ್ನೂ ಶಕ್ತಿಗಳಿಂದ ಕತ್ತರಿಸಿದನು.

೧೫. ಆ ಜಲಂಧರನು ಬಿಲ್ಲು ಕತ್ತರಿಸಿ ರಥವಿಲ್ಲದೆಹೋಗಲು ಗದೆಯನ್ನು ಹಿಡಿದು ವೇಗದಿಂದ ಶಿವನಮೇಲೆ ಓಡಿ ನುಗ್ಗಿದನು. ಅಷ್ಟರಲ್ಲಿ ಶಿವನು ಬಾಣಗಳಿಂದ ಗದೆಯನ್ನು ಎರಡು ಪಾಲು ಮಾಡಿದನು.

೧೬. ಹಾಗಾದರೂ ಅಸುರನು ಮುಷ್ಟಿಯನ್ನು ಬಿಗಿದು ರುದ್ರನನ್ನು ಕೊಲ್ಲುವ ಮನಸ್ಸಿನಿಂದ ಮೇಲೆ ನುಗ್ಗಿದನು. ನುಗ್ಗುವಷ್ಟರಲ್ಲೆ ಶಿವನು ಬಾಣಪಂಕ್ತಿಗಳಿಂದ ಒಂದು ಕ್ರೋಶದ ದೂರ ಅವನನ್ನು ದೂರಸರಿಸಿದನು.

೧೭. ಆ ಬಳಿಕ ಜಲಂಧರ ದೈತ್ಯನು ರುದ್ರನು ಬಲಾಧಿಕನೆಂದರಿತು ರುದ್ರನನ್ನು ಮೋಹಿಸುವಂತಹ ಅದ್ಭುತವಾದ ಗಾಂಧರ್ವ ಮಾಯೆಯನ್ನು ಸೃಷ್ಟಿಸಿದನು.

೧೮. ಆಗ ಗಂಧರ್ವರ ಮತ್ತು ಅಪ್ಸರೆಯರ ಗಣಗಳು ಗಾನಮಾಡಿದುವು;

ತದ್ದೃಷ್ಟ್ವಾ ಮಹದಾಶ್ಚರ್ಯಂ ರುದ್ರೋ ನಾದವಿಮೋಹಿತಃ ।
ಪತಿತಾನ್ಯಪಿ ಶಸ್ತ್ರಾಣಿ ಕರೇಭ್ಯೋ ನ ವಿವೇದ ಸಃ ॥ ೧೯ ॥
ಏಕಾಗ್ರೀಭೂತಮಾಲೋಕ್ಯ ರುದ್ರಂ ದೈತ್ಯೋ ಜಲಂಧರಃ ।
ಕಾಮಾರ್ತಃ ಸ ಜಗಾಮಾಽಶು ಯತ್ರ ಗೌರೀ ಸ್ಥಿತಾಽಭವತ್ ॥ ೨೦ ॥
ಯುದ್ಧೇ ಶುಂಭ ನಿಶುಂಭಾಖ್ಯೌ ಸ್ಥಾಪಯಿತ್ವಾ ಮಹಾಬಲೌ ।
ದಶದೋರ್ದಂಡಪಂಚಾಸ್ಯಃ ತ್ರಿನೇತ್ರಶ್ಚ ಜಟಾಧರಃ ॥ ೨೧ ॥
ಮಹಾವೃಷಭಮಾರೂಢಃ ಸ ಬಭೂವ ಜಲಂಧರಃ ।
ಅಥೋ ರುದ್ರಂ ಸಮಾಯಾಂತಂ ಆಲೋಕ್ಯ ಭವವಲ್ಲಭಾ ॥ ೨೨ ॥
ಅಭ್ಯಾಯಯೌ ಸಖೀಮಧ್ಯಾತ್ ತದ್ದರ್ಶನಪಥೇಽಭವತ್ ।
ಯಾವದ್ದದರ್ಶ ಚಾರ್ವಂಗೀಂ ಪಾರ್ವತೀಂ ದನುಜೇಶ್ವರಃ ॥ ೨೩ ॥
ತಾವತ್ಸ್ವವೀರ್ಯಂ ಮುಮುಚೇ ಜಡಾಂಗಶ್ಚಾಽಭವತ್ತದಾ ।
ಅಥ ಜ್ಞಾತ್ವಾ ತದಾ ಗೌರೀ ದಾನವಂ ಭಯವಿಹ್ವಲಾ ॥ ೨೪ ॥
ಜಗಾಮಾಂತರ್ಹಿತಾ ವೇಗಾತ್ ಸಾ ತದೋತ್ತರಮಾನಸೇ ।
ತಾಮದೃಷ್ಟ್ವಾ ತತೋ ದೈತ್ಯಃ ಕ್ಷಣಾದ್ವಿದ್ಯುಲ್ಲತಾಮಿವ ॥ ೨೫ ॥

---

ನರ್ತಿಸಿದುವು; ಬೇರೆ ಕೆಲವರು ತಾಳ, ವೇಣು (ಕೊಳಲು), ಮೃದಂಗ ಮೊದಲಾದ ವಾದ್ಯಗಳನ್ನು ಬಾರಿಸಿದರು.

೧೯. ಆ ಮಹದಾಶ್ಚರ್ಯವನ್ನು ಕಂಡು ರುದ್ರನು ನಾದಮೋಹಿತನಾಗಿ, ಕೈಗಳಿಂದ ಶಸ್ತ್ರಗಳು ಕೆಳಕ್ಕೆ ಬಿದ್ದುಹೋಗಿದ್ದರೂ ಅದನ್ನು ಅರಿಯಲೇ ಇಲ್ಲ.

೨೦. ರುದ್ರನು ಏಕಾಗ್ರಮನಸ್ಸುಳ್ಳವನಾದುದನ್ನು ಕಂಡು ಕಾಮಾರ್ತನಾದ ಆ ದೈತ್ಯ ಜಲಂಧರನು ಗೌರಿಯು ಎಲ್ಲಿದ್ದಳೋ ಅಲ್ಲಿಗೆ ವೇಗದಿಂದ ನಡೆದನು.

೨೧–೨೬. ಮಹಾಬಲಶಾಲಿಗಳಾದ ಶುಂಭ ನಿಶುಂಭರೆಂಬುವರನ್ನು ಯುದ್ಧದಲ್ಲಿ ನಿಲ್ಲಿಸಿ, ಆ ಜಲಂಧರನು ಹತ್ತು ತೋಳುಗಳುಳ್ಳವನೂ, ಪಂಚಮುಖನೂ, ತ್ರಿನೇತ್ರನೂ, ಜಟಾಧರನೂ, ವೃಷಭಾರೂಢನೂ ಆದನು. ಅನಂತರದಲ್ಲಿ ರುದ್ರನು ಬರುತ್ತಿರುವುದನ್ನು ಕಂಡು ಭವವಲ್ಲಭೆಯು ಸಖೀಜನರ ನಡುವಿನಿಂದ ಎದ್ದು ಎದುರು ಬಂದು ಅವನಿಗೆ ಕಾಣಿಸಿಕೊಂಡಳು. ಮನೋಹರಾಂಗಿಯಾದ ಪಾರ್ವತಿಯನ್ನು ನೋಡಿದಕೂಡಲೇ ದನುಜೇಶ್ವರನು ತನ್ನ ವೀರ್ಯವನ್ನು ಬಿಟ್ಟುಬಿಟ್ಟನು. ಆಗ ಜಡವಾದ ಅಂಗಗಳುಳ್ಳವನೂ ಆದನು. ಅವನು ದಾನವನೆಂದರಿತು ಭಯವಿಹ್ವಲಳಾಗಿ ಗೌರಿಯು ಅಂತರ್ಧಾನಹೊಂದಿ ವೇಗದಿಂದ ಉತ್ತರಮಾನಸದಲ್ಲಿ ಹೋಗಿ ಸೇರಿದಳು. ವಿದ್ಯುಲ್ಲತೆಯು ಹೇಗೋ ಹಾಗೆ

ಜವೇನಾಽಽಗಾತ್ಪುನರ್ಯುದ್ಧಂ ಯತ್ರ ದೇವೋ ವೃಷಧ್ವಜಃ ।
ಪಾರ್ವತ್ಯಪಿ ಭಯಾದ್ವಿಷ್ಣುಂ ಸಸ್ಮಾರ ಮನಸಾ ತದಾ ॥ ೨೬ ॥
ತಾವದ್ದದರ್ಶ ತಂ ದೇವಂ ಸೂಪವಿಷ್ಟಂ ಸಮೀಪಗಂ ।

ಪಾರ್ವತ್ಯುವಾಚ :—

ವಿಷ್ಣೋ ಜಲಂಧರೋ ದೈತ್ಯಃ ಕೃತವಾನ್ ಪರಮಾದ್ಭುತಂ ॥ ೨೭ ॥
ತತ್ಕಿಂ ನ ವಿದಿತಂ ತೇಽಸ್ತಿ ಚೇಷ್ಟಿತಂ ತಸ್ಯ ದುರ್ಮತೇಃ ।

ವಿಷ್ಣುರುವಾಚ :—

ತೇನೈವ ದರ್ಶಿತಃ ಪಂಥಾಃ ವಯಮಪ್ಯನ್ವಯಾಮಹೇ ॥ ೨೮ ॥
ನಾಽನ್ಯಥಾ ಸ ಭವೇದ್ವಧ್ಯಃ ಪಾತಿವ್ರತ್ಯಸುರಕ್ಷಿತಃ ।

ನಾರದ ಉವಾಚ :—

ಜಗಾಮ ವಿಷ್ಣುರಿತ್ಯುಕ್ತ್ವಾ ಪುನರ್ಜಾಲಂಧರಂ ಪುರಂ ॥ ೨೯ ॥
ಅಥ ರುದ್ರಶ್ಚ ಗಂಧರ್ವಾನುಗತಃ ಸಂಗರೇ ಸ್ಥಿತಃ ।
ಅಂತರ್ಧಾನಂ ಗತಾಂ ಮಾಯಾಂ ದೃಷ್ಟ್ವಾ ಸ ಬುಬುಧೇ ತದಾ ॥ ೩೦ ॥

---

ಕ್ಷಣಮಾತ್ರದಲ್ಲಿ ಅವಳು ಮರೆಯಾಗಲು ಅವಳನ್ನು ಕಾಣದೆ ದೈತ್ಯನು ದೇವನಾದ ವೃಷಭಧ್ವಜನಿದ್ದ ಯುದ್ಧರಂಗಕ್ಕೇ ಮತ್ತೆ ವೇಗದಿಂದ ಹೊರಟು ಹೋದನು. ಪಾರ್ವತಿಯು ಕೂಡ ಭಯದಿಂದ ವಿಷ್ಣುವನ್ನು ಸ್ಮರಿಸಿದಳು.

೨೭. ನೆನೆದಕೂಡಲೇ ಸಮೀಪದಲ್ಲಿಯೇ ಕುಳಿತಿದ್ದ ಆ ದೇವನನ್ನು ಕಂಡಳು. ಅವನನ್ನು ಕುರಿತು ಪಾರ್ವತಿಯು, "ಎಲೈ ವಿಷ್ಣುವೇ, ಜಲಂಧರ ದೈತ್ಯನು ಪರಮ ಅದ್ಭುತವಾದ ಕಾರ್ಯವನ್ನು ಮಾಡಿದ್ದಾನೆ.

೨೮. ದುರ್ಮತಿಯಾದ ಅವನು ಮಾಡಿರುವ ಚೇಷ್ಟೆಗಳೆಲ್ಲ ನಿನಗೆ ತಿಳಿಯದಿರುವುದೇ?" ಎಂದು ನುಡಿದಳು. ಆ ಮಾತುಕೇಳಿ ವಿಷ್ಣುವು, "ಅವನೇ ದಾರಿತೋರಿಸಿದ್ದಾನೆ. ನಾವು ಕೂಡ ಅವನನ್ನೇ ಅನುಸರಿಸುತ್ತೇವೆ.

೨೯. ಹಾಗಲ್ಲವಾದರೆ ಅವನು ವಧ್ಯನಾಗುವುದಿಲ್ಲ. ಈಗ ಅವನು ಪಾತಿವ್ರತ್ಯದಿಂದ ಸುರಕ್ಷಿತನಾಗಿದ್ದಾನೆ" ಎಂದನು. ನಾರದನು ಈ ರೀತಿ ಮುಂದುವರಿಸಿದನು :—ಹೀಗೆಂದು ನುಡಿದು ವಿಷ್ಣುವು ಮತ್ತೆ ಜಲಂಧರನ ಪಟ್ಟಣಕ್ಕೇ ಮರಳಿದನು.

೩೦. ಇತ್ತ ರುದ್ರನೂ ಕೂಡ ಗಂಧರ್ವರಿಂದ ಹಿಂಬಾಲಿಸಲ್ಪಟ್ಟು ಯುದ್ಧಭೂಮಿಯಲ್ಲಿದ್ದವನು ಮಾಯೆಯು ಅಂತರ್ಧಾನಹೊಂದಿದುದನ್ನು ಕಂಡು ಆಗ ಎಚ್ಚತ್ತುಕೊಂಡನು.

ತತೋ ಭರ್ವೋ ವಿಸ್ಮಿತಮಾನಸಃ ಪುನಃ
ಜಗಾಮ ಯುದ್ಧಾಯ ಜಲಂಧರೇ ರುಷಾ ।
ಸ ಚಾಪಿ ದೈತ್ಯಃ ಪುನರಾಗತಂ ಶಿವಂ
ದೃಷ್ಟ್ವಾ ಶರೌಘೈಃ ಸಮವಾಕಿರದ್ರಣೇ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ ಜಲಂಧರೋಪಾಖ್ಯಾನೇ
"ಶಿವ ಜಲಂಧರ ಯುದ್ಧವರ್ಣನಂ"ನಾಮ ವಿಂಶೋಽಧ್ಯಾಯಃ

---

೩೧. ಬಳಿಕ ಭವನು ವಿಸ್ಮಿತನಾಗಿ ಕೋಪದಿಂದ ಜಲಂಧರನೊಡನೆ ಪುನಃ ಯುದ್ಧಮಾಡಲು ನಡೆದನು. ಆ ದೈತ್ಯನು ಕೂಡ ಮತ್ತೆ ಬಂದ ಶಿವನನ್ನು ಕಂಡು ರಣದಲ್ಲಿ ಬಾಣಪ್ರವಾಹಗಳಿಂದ ಅವನನ್ನು ಮುತ್ತಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದ
ಜಲಂಧರೋಪಾಖ್ಯಾನದಲ್ಲಿ "ಶಿವಜಲಂಧರರ ಯುದ್ಧವರ್ಣನ"ವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಏಕವಿಂಶೋಽಧ್ಯಾಯಃ

### ಜಲಂಧರೋಪಾಖ್ಯಾನೇ ವೃಂದಾಗ್ನಿಪ್ರವೇಶವರ್ಣನಂ

**ನಾರದ ಉವಾಚ :—**

**ವಿಷ್ಣುರ್ಜಾಲಂಧರಂ ಗತ್ವಾ ತದ್ದೈತ್ಯಪುಟಭೇದನಂ ।**
**ಪಾತಿವ್ರತ್ಯಸ್ಯ ಭಂಗಾಯ ವೃಂದಾಯಾಶ್ಚಾಕರೋನ್ಮತಿಂ ॥ ೧ ॥**
**ಅಥ ವೃಂದಾರಕಾ ದೇವೀ ಸ್ವಪ್ನಮಧ್ಯೇ ದದರ್ಶ ಹ ।**
**ಭರ್ತಾರಂ ಮಹಿಷಾರೂಢಂ ತೈಲಾಭ್ಯಕ್ತಂ ದಿಗಂಬರಂ ॥ ೨ ॥**
**ಕೃಷ್ಣಪ್ರಸೂನಭೂಷಾಢ್ಯಂ ಕ್ರವ್ಯಾದಗಣಸೇವಿತಂ ।**
**ದಕ್ಷಿಣಾಶಾಗತಂ ಮುಂಡಂ ತಮಸಾಪ್ಯಾವೃತಂ ತದಾ ॥ ೩ ॥**
**ಸ್ವಪುರಂ ಸಾಗರೇ ಮಗ್ನಂ ಸಹಸೈವಾತ್ಮನಾ ಸಹ ।**
**ತತಃ ಪ್ರಬುದ್ಧಾ ಸಾ ಬಾಲಾ ತತ್ಸ್ವಪ್ನಂ ಪ್ರವಿಚಿನ್ವತೀ ॥ ೪ ॥**
**ದದರ್ಶೋದಿತಮಾದಿತ್ಯಂ ಸಚ್ಛಿದ್ರಂ ನಿಷ್ಪ್ರಭಂ ಮುಹುಃ ।**
**ತದನಿಷ್ಟಮಿತಿ ಜ್ಞಾತ್ವಾ ರುದತೀ ಭಯವಿಹ್ವಲಾ ॥ ೫ ॥**

---

### ಕನ್ನಡದ ಅನುವಾದ

#### ವೃಂದೆಯು ಅಗ್ನಿಪ್ರವೇಶವನ್ನು ಮಾಡಿದುದು

೧. ನಾರದನಿಂತೆಂದನು :—ವಿಷ್ಣುವು ಜಲಂಧರನ ಪಟ್ಟಣಕ್ಕೆ ಹೋಗಿ ವೃಂದೆಯ ಪಾತಿವ್ರತ್ಯವನ್ನು ಭಂಗಮಾಡಬೇಕೆಂದು ಮನಸ್ಸುಮಾಡಿದನು.

೨. ಬಳಿಕ ವೃಂದಾದೇವಿಯು ಸ್ವಪ್ನಮಧ್ಯದಲ್ಲಿ ಕೋಣನಮೇಲೆ ಕುಳಿತು, ಎಣ್ಣೆಯನ್ನು ಬಳಿದುಕೊಂಡು, ದಿಗಂಬರನಾಗಿರುವ ತನ್ನ ಗಂಡನನ್ನು ಕಂಡಳು.

೩. ಅವನು ಮುಂಡನಮಾಡಿಸಿಕೊಂಡು, ಕಪ್ಪು ಹೂಗಳನ್ನೂ, ಕಪ್ಪು ಭೂಷಣಗಳನ್ನೂ ಧರಿಸಿ, ಪಿಶಾಚಿಗಳಿಂದ ಸೇವಿಸಲ್ಪಡುತ್ತ ಕತ್ತಲೆಯಲ್ಲಿ ಆವರಿಸಲ್ಪಟ್ಟು ದಕ್ಷಿಣದಿಕ್ಕಿಗೆ ಪ್ರಯಾಣಮಾಡುತ್ತಿದ್ದುದಾಗಿ ಕಂಡಳು.

೪. ತಮ್ಮ ಪಟ್ಟಣವೂ ತನ್ನೊಡನೆಯೇ ತಟ್ಟನೆ ಸಾಗರದಲ್ಲಿ ಮುಳುಗಿ ಹೋದಂತೆಯೂ ಕಂಡಳು. ಕಂಡು ಆ ಬಾಲೆಯು ಆ ಸ್ವಪ್ನವನ್ನೇ ಚಿಂತಿಸುತ್ತಾ ಎಚ್ಚತ್ತಳು.

೫. ಉದಿಸುತ್ತಿರುವ ಸೂರ್ಯನು ಕಾಂತಿಹೀನನಾಗಿಯೂ ಛಿದ್ರವುಳ್ಳವನಾಗಿಯೂ ಇರುವುದನ್ನು ಕಂಡಳು. ಅದು ಅನಿಷ್ಟವೆಂದು ತಿಳಿದು ಭಯವಿಹ್ವಲೆಯಾಗಿ ಅಳತೊಡಗಿದಳು.

ಕುತ್ರಚಿನ್ನಾಲಭಚ್ಛರ್ಮ ಗೋಪುರಾಟ್ಟಾಲಭೂಮಿಷು ।
ತತಃ ಸಖೀದ್ವಯಯುತಾ ನಗರೋದ್ಯಾನಮಾಗಮತ್ ॥ ೬ ॥
ತತ್ರಾಽಪಿ ಸಾಽಭ್ರಮದ್ಬಾಲಾ ನಾಽಲಭತ್ಕುತ್ರಚಿತ್ಸುಖಂ ।
ವನಾದ್ವನಾಂತರಂ ಯಾತಾ ನೈವ ವೇದಾತ್ಮನಸ್ತದಾ ॥ ೭ ॥
ತತಃ ಸಾ ಭ್ರಮತೀ ಬಾಲಾ ದದರ್ಶಾತೀವ ಭೀಷಣೌ ।
ರಾಕ್ಷಸೌ ಸಿಂಹವದನೌ ದಂಷ್ಟ್ರಾನನವಿಭೀಷಣೌ ॥ ೮ ॥
ತೌ ದೃಷ್ಟ್ವಾ ವಿಹ್ವಲಾಽತೀವ ಪಲಾಯನಪರಾಽಭವತ್ ।
ದದರ್ಶ ತಾಪಸಂ ಶಾಂತಂ ಸಶಿಷ್ಯಂ ಮೌನಮಾಸ್ಥಿತಂ ॥ ೯ ॥
ತತಸ್ತತ್ಕಂಠಮಾವೃತ್ಯ ನಿಜಾಂ ಬಾಹುಲತಾಂ ಭಯಾತ್ ।
ಮುನೇ ಮಾಂ ರಕ್ಷ ಶರಣಂ ಆಗತಾಸ್ಮೀತ್ಯಭಾಷತ ॥ ೧೦ ॥
ಮುನಿಸ್ತಾಂ ವಿಹ್ವಲಾಂ ದೃಷ್ಟ್ವಾ ರಾಕ್ಷಸಾಽನುಗತಾಂ ತದಾ ।
ಹುಂಕಾರೇಣೈವ ತೌ ಘೋರೌ ಚಕಾರ ವಿಮುಖೌ ರುಷಾ ॥ ೧೧ ॥

---

೬. ಗೋಪುರ, ಮೇಲ್ಕೋಣೆ, ಮೊದಲಾದ ಯಾವೆಡೆಯಲ್ಲಿಯೂ ಅವಳಿಗೆ ಸಮಾಧಾನವಾಗಲಿಲ್ಲ. ಬಳಿಕ ಇಬ್ಬರು ಸಖಿಯರೊಡನೆ ನಗರದ ಉದ್ಯಾನಕ್ಕೆ ಹೋದಳು.

೭. ಅಲ್ಲಿ ಕೂಡ ಆ ಬಾಲೆಯು ಸುತ್ತಾಡುತ್ತಾ ಎಲ್ಲಿಯೂ ಸುಖವನ್ನು ಕಾಣಲಿಲ್ಲ. ವನದಿಂದ ವನಕ್ಕೆ ಹೋಗುತ್ತಿದ್ದಳು. ಆಗ ಅವಳು ತನ್ನ ಮನಸ್ಸನ್ನೇ ತಾನು ಅರಿಯದವಳಾಗಿದ್ದಳು.

೮. ಹಾಗೆಯೇ ಸುತ್ತಾಡುತ್ತಿದ್ದ ಆ ಬಾಲೆಯು ಕೋರೆದಾಡೆಯಿಂದ ಭಯಂಕರವಾದ ಬಾಯಿಂದ ಕೂಡಿ ಸಿಂಹಮುಖವುಳ್ಳವರಾಗಿ ಅತಿ ಭೀಷಣ ರಾಗಿದ್ದ ಇಬ್ಬರು ರಾಕ್ಷಸರನ್ನು ಕಂಡಳು.

೯. ಅವರನ್ನು ಕಂಡು ಬಹಳ ಹೆದರಿ ಪಲಾಯನ ಮಾಡತೊಡಗಿದಳು. ಆಗ ಅಲ್ಲಿ ಶಾಂತನಾಗಿ ಮೌನವನ್ನು ಧರಿಸಿದ್ದ ಶಿಷ್ಯಸಮೇತನಾದ ತಾಪಸ ನೊಬ್ಬನನ್ನು ಕಂಡಳು.

೧೦. ಆಗ ಭಯದಿಂದ ತನ್ನ ಬಾಹುಲತೆಯನ್ನು ಅವನ ಕೊರಳ ಸುತ್ತ ಸುತ್ತಿ, 'ಮುನಿಯೇ, ನನ್ನನ್ನು ರಕ್ಷಿಸು. ನಾನು ಶರಣಾಗತಳಾಗಿದ್ದೇನೆ' ಎಂದು ನುಡಿದಳು.

೧೧. ಮುನಿಯು ಅವಳು ರಾಕ್ಷಸರಿಂದ ಹಿಂಬಾಲಿಸಲ್ಪಟ್ಟು ಭಯವಿಹ್ವಲ ಳಾಗಿರುವುದನ್ನು ಕಂಡು ಕೋಪದಿಂದ ಹುಂಕಾರಮಾಡಿ, ಆ ಹುಂಕಾರ ಮಾತ್ರ ದಿಂದಲೇ ಆ ಘೋರ ರಾಕ್ಷಸರಿಬ್ಬರನ್ನೂ ವಿಮುಖರಾಗಿಸಿದನು.

ತೌ ಹುಂಕಾರಭಯತ್ರಸ್ತೌ ದೃಷ್ಟ್ವಾ ಚ ವಿಮುಖೌ ಗತೌ ।
ಪ್ರಣಮ್ಯ ದಂಡವದ್ಭೂಮೌ ವೃಂದಾ ವಚನಮಬ್ರವೀತ್ ॥ ೧೨ ॥

ವೃಂದೋವಾಚ :—

ರಕ್ಷಿತಾಽಹಂ ತ್ವಯಾ ಘೋರಾತ್ ಭಯಾದಸ್ಮಾತ್ಕೃಪಾನಿಧೇ ।
ಕಿಂಚಿದ್ವಿಜ್ಞಪ್ತುಮಿಚ್ಛಾಮಿ ಕೃಪಯಾ ತನ್ನಿಶಾಮಯ ॥ ೧೩ ॥
ಜಲಂಧರೋ ಹಿ ಮದ್ಭರ್ತಾ ರುದ್ರಂ ಯೋದ್ಧುಂ ಗತಃ ಪ್ರಭೋ ।
ಸ ತತ್ರಾಸ್ತೇ ಕಥಂ ಯುದ್ಧೇ ತನ್ಮೇ ಕಥಯ ಸುವ್ರತ ॥ ೧೪ ॥

ನಾರದ ಉವಾಚ :—

ಮುನಿಸ್ತದ್ವಾಕ್ಯಮಾಕರ್ಣ್ಯ ಕೃಪಯೋರ್ಧ್ವಮವೈಕ್ಷತ ।
ತಾವತ್ಕಪೀ ಸಮಾಯಾತೌ ಪ್ರಣಮ್ಯಾಗ್ರತಃ ಸ್ಥಿತೌ ॥ ೧೫ ॥
ತತಸ್ತದ್ಭ್ರೂಲತಾಸಂಜ್ಞಾನಿಯುಕ್ತೌ ಗಗನಂ ಗತೌ ।
ಗತ್ವಾ ಕ್ಷಣಾರ್ಧಾದಾಗತ್ಯ ಪ್ರಣತಾವಗ್ರತಃ ಸ್ಥಿತೌ ॥ ೧೬ ॥
ಶಿರಃ ಕಬಂಧೇ ಹಸ್ತೌ ಚ ದೃಷ್ಟ್ವಾಬ್ಧಿತನಯಸ್ಯ ಸಾ ।
ಪಪಾತ ಮೂರ್ಛಿತಾ ಭೂಮೌ ಭರ್ತೃವ್ಯಸನದುಃಖಿತಾ ॥ ೧೭ ॥

---

೧೨. ಅವರಿಬ್ಬರೂ ಹುಂಕಾರಕ್ಕೆ ಭಯಪಟ್ಟು ನಡುಗಿ ಹಿಂದಿರುಗಿಹೋದುದನ್ನು ಕಂಡು ವೃಂದೆಯು ನೆಲದಮೇಲೆ ದಂಡವತ್ತಾಗಿ ಪ್ರಣಾಮವನ್ನು ಮಾಡಿ, ಹೀಗೆಂದು ನುಡಿದಳು :—

೧೩. ವೃಂದೆಯಿಂತೆಂದಳು :— "ಎಲೈ ಕೃಪಾನಿಧಿಯೇ! ಈ ಘೋರ ಭಯದಿಂದ ನೀನು ನನ್ನನ್ನು ರಕ್ಷಿಸಿದೆ. ಸ್ವಲ್ಪ ವಿಜ್ಞಾಪಿಸಿಕೊಳ್ಳಲಿಚ್ಛಿಸಿದ್ದೇನೆ. ಕೃಪೆಯಿಟ್ಟು ಅದನ್ನು ಆಲಿಸು.

೧೪. ಜಲಂಧರನು ನನ್ನ ಗಂಡನು. ಪ್ರಭುವೇ! ಅವನು ರುದ್ರನೊಡನೆ ಯುದ್ಧಮಾಡಲು ಹೋದನು. ಅವನು ಯುದ್ಧದಲ್ಲಿ ಹೇಗಿದ್ದಾನೆ? ಎಲೈ ಸುವ್ರತನೇ, ಅದನ್ನು ನನಗೆ ತಿಳಿಸಬೇಕು" ಎಂದು ಕೇಳಿಕೊಂಡಳು.

೧೫. ನಾರದನು ಮುಂದುವರಿಸಿದನು:—ಮುನಿಯು ಆ ವಾಕ್ಯವನ್ನಾಲಿಸಿ ಕೃಪೆಯಿಂದ ಮೇಲುಗಡೆ ನೋಡಿದನು. ಅಷ್ಟರಲ್ಲಿ ಎರಡು ಕಪಿಗಳು ಹತ್ತಿರಕ್ಕೆ ಬಂದವು. ಪ್ರಣಾಮವನ್ನು ಮಾಡಿ ಎದುರಿಗೆ ನಿಂತುಕೊಂಡವು.

೧೬. ಬಳಿಕ ಅವನ ಹುಬ್ಬಿನ ಸಂಜ್ಞೆಯಿಂದ ಆಜ್ಞೆಯನ್ನು ಹೊಂದಿ ಆಕಾಶಕ್ಕೆ ಹಾರಿಹೋದುವು. ಹೋಗಿ ಕ್ಷಣಾರ್ಧದಲ್ಲಿ ಹಿಂದಿರುಗಿ ಬಂದು ಪ್ರಣಾಮಮಾಡಿ ಎದುರಿಗ್ಗೆ ನಿಂತವು. ತಲೆ, ತಲೆಯಿಲ್ಲದ ದೇಹ ಮತ್ತು ಕೈಗಳನ್ನು ತೆಗೆದುಕೊಂಡು ಬಂದಿದ್ದುವು.

೧೭. ಸಮುದ್ರತನಯನಾದ ಜಲಂಧರನ ತಲೆ, ಅಟ್ಟೆ ಮತ್ತು ಕೈಗಳನ್ನು

ಕಮಂಡಲೂದಕೈಃ ಸಿಕ್ತ್ವಾ ಮುನಿನಾಶ್ವಾಸಿತಾ ತದಾ ।
ಸ್ವಭರ್ತೃರ್ಭಾಲೇ ಸಾ ಭಾಲಂ ಕೃತ್ವಾ ದೀನಾ ರುರೋದ ಹ ॥ ೧೮ ॥

ವೃಂದೋವಾಚ :—

ಯಃ ಪುರಾ ಸುಖಸಂವಾದೇ ವಿನೋದಯಸಿ ಮಾಂ ಪ್ರಭೋ ।
ಸ ಕಥಂ ನ ವದಸ್ಯದ್ಯ ವಲ್ಲಭಾಂ ಮಾಮನಾಗಸಾಂ ॥ ೧೯ ॥
ಯೇನ ದೇವಾ ಸಗಂಧರ್ವಾ ನಿರ್ಜಿತಾ ವಿಷ್ಣುನಾ ಸಹ ।
ಸ ಕಥಂ ತಾಪಸೇನಾಽದ್ಯ ತ್ರೈಲೋಕ್ಯವಿಜಯೀ ಹತಃ ॥ ೨೦ ॥

ನಾರದ ಉವಾಚ :—

ರುದಿತ್ವೇತಿ ತದಾ ವೃಂದಾ ತಂ ಮುನಿಂ ವಾಕ್ಯಮಬ್ರವೀತ್ ।

ವೃಂದೋವಾಚ :—

ಕೃಪಾನಿಧೇ ಮುನಿಶ್ರೇಷ್ಠ ಜೀವಯೈನಂ ಮಮ ಪ್ರಿಯಂ ॥ ೨೧ ॥
ತ್ವಮೇವಾಸ್ಯ ಮುನೇ ಶಕ್ತೋ ಜೀವನಾಯ ಮತೋ ಮಮ ।

ನಾರದ ಉವಾಚ :—

ಇತಿ ತದ್ವಾಕ್ಯಮಾಕರ್ಣ್ಯ ಪ್ರಹಸನ್ಮುನಿರಬ್ರವೀತ್ ॥ ೨೨ ॥

---

ಕಂಡು ಅವಳು ಪತಿವ್ಯಸನದಿಂದ ದುಃಖಿತಳಾಗಿ ಮೂರ್ಛೆಹೊಂದಿ ಭೂಮಿಯಲ್ಲಿ ಬಿದ್ದಳು.

೧೮. ಮುನಿಯು ಕಮಂಡಲುವಿನ ಉದಕವನ್ನು ಚುಮುಕಿಸಿ ಎಚ್ಚರಗೊಳಿಸಿದನು. ಆಗ ಅವಳು ಗಂಡನ ಹಣೆಗೆ ತನ್ನ ಹಣೆಯನ್ನು ಒತ್ತಿಕೊಂಡು ದೀನಳಾಗಿ ರೋದನ ಮಾಡಿದಳು.

೧೯. ವೃಂದೆಯೆಂದಳು :—"ಪ್ರಭುವೇ! ಹಿಂದೆ ನೀನು ಸುಖಸಂವಾದದಲ್ಲಿ ನನ್ನನ್ನು ವಿನೋದಮಾಡುತ್ತಿದ್ದೆಯಲ್ಲಾ. ಈಗೇಕೆ, ಯಾವ ಪಾಪವನ್ನೂ ಮಾಡದ ವಲ್ಲಭೆಯಾದ ನನ್ನನ್ನು ಮಾತಾಡಿಸದೆ ಇರುವೆ?

೨೦. ವಿಷ್ಣುವಿನಿಂದೊಡಗೂಡಿದ ಗಂಧರ್ವಾದಿ ಸಮೇತರಾದ ದೇವತೆಗಳನ್ನು ನೀನು ಸೋಲಿಸಿದೆ. ಅಂತಹ ತ್ರಿಲೋಕವಿಜಯಿಯಾದ ನೀನು ಈಗ ತಾಪಸನಿಂದ ಅದು ಹೇಗೆ ಹತನಾದೆ?" ಎಂದು ಹಂಬಲಿಸಿದಳು.

೨೧. ನಾರದನಿಂತೆಂದನು :—ಈರೀತಿ ರೋದಿಸಿ ವೃಂದೆಯು ಮುನಿಯನ್ನು ಕುರಿತು, "ಕೃಪಾನಿಧೀ, ಮುನಿಶ್ರೇಷ್ಠಾ, ನನ್ನ ಪ್ರಿಯನಾದ ಇವನನ್ನು ಬದುಕಿಸು.

೨೨. ಇವನನ್ನು ಬದುಕಿಸಲು ನೀನೇ ಶಕ್ತನೆಂದು ನನ್ನ ನಂಬಿಕೆ"ಎಂದು ಕೇಳಿಕೊಂಡಳು. ನಾರದನಿಂತೆಂದನು :—ಹೀಗೆ ನುಡಿದ ಆ ವೃಂದೆಯ ಮಾತನ್ನು ಕೇಳಿ ನಸುನಗುತ್ತ ಆ ಮುನಿಯು ಮರುನುಡಿದನು.

ಮುನಿರುವಾಚ :—

ನಾಽಯಂ ಜೀವಯಿತುಂ ಶಕ್ಯೋ ರುದ್ರೇಣ ನಿಹತೋ ಯುಧಿ ।
ತಥಾಽಪಿ ತ್ವತ್ಕೃಪಾವಿಷ್ಟಃ ಏನಂ ಸಂಜೀವಯಾಮ್ಯಹಂ ॥ ೨೩ ॥

ನಾರದ ಉವಾಚ :—

ಇತ್ಯುಕ್ತ್ವಾಂತರ್ದಧೇ ವಿಪ್ರಃ ತಾವತ್ಸಾಗರನಂದನಃ ।
ವೃಂದಾಮಾಲಿಂಗ್ಯ ತದ್ವಕ್ತ್ರಂ ಚುಚುಂಬ ಪ್ರೀತಮಾನಸಃ ॥ ೨೪ ॥
ಅಥ ವೃಂದಾಽಪಿ ಭರ್ತಾರಂ ದೃಷ್ಟ್ವಾ ಹರ್ಷಿತಮಾನಸಾ ।
ರೇಮೇ ತದ್ವನಮಧ್ಯಸ್ಥಾ ತದ್ಯುಕ್ತಾ ಬಹುವಾಸರಂ ॥ ೨೫ ॥
ಕದಾಚಿತ್ಸುರತಸ್ಯಾಂತೇ ದೃಷ್ಟ್ವಾ ವಿಷ್ಣುಂ ತಮೇವ ಚ ।
ನಿರ್ಭರ್ತ್ಸ್ಯ ಕ್ರೋಧಸಂಯುಕ್ತಾ ವೃಂದಾ ವಚನಮಬ್ರವೀತ್ ॥ ೨೬ ॥

ವೃಂದೋವಾಚ :—

ಧಿಕ್ ತ್ವದೀಯಂ ಹರೇ ಶೀಲಂ ಪರದಾರಾಭಿಗಾಮಿನಃ ।
ಜ್ಞಾತೋಽಸಿ ತ್ವಂ ಮಯಾ ಸಮ್ಯಕ್ ಮಾಯಾಪ್ರಚ್ಛನ್ನತಾಪಸಃ ॥ ೨೭ ॥
ಯೌ ತ್ವಯಾ ಮಾಯಯಾ ದ್ವಾಃಸ್ಥೌ ಸ್ವಕೀಯೌ ದರ್ಶಿತೌ ಮಮ ।
ತಾವೇವ ರಾಕ್ಷಸೌ ಭೂತ್ವಾ ಭಾರ್ಯಾಂ ತವ ಹರಿಷ್ಯತಃ ॥ ೨೮ ॥

---

೨೩. ಮುನಿಯಿಂತೆಂದನು :—"ರುದ್ರನಿಂದ ಹತನಾದ ಇವನನ್ನು ಬದುಕಿಸಲಾಗುವುದಿಲ್ಲ. ಆದರೂ ನಿನ್ನಲ್ಲಿ ಕೃಪಾವಿಷ್ಟನಾಗಿ ಇವನನ್ನು ಮತ್ತೆ ಜೀವಿಸುವಂತೆ ಮಾಡುತ್ತೇನೆ" ಎಂದನು.

೨೪. ನಾರದನಿಂತೆಂದನು :—ಹೀಗೆಂದು ನುಡಿದು ವಿಪ್ರನು ಅಂತರ್ಧಾನ ಹೊಂದಿದನು. ಅಷ್ಟರಲ್ಲಿಯೇ ಸಾಗರನಂದನನು ವೃಂದೆಯನ್ನಾಲಿಂಗಿಸಿ ಪ್ರೀತಮಾನಸನಾಗಿ ಅವಳ ಮುಖವನ್ನು ಚುಂಬಿಸಿದನು.

೨೫. ಆಗ ವೃಂದೆಯೂ ಕೂಡ ಗಂಡನನ್ನು ಕಂಡು ಮನಸ್ಸಿನ ತುಂಬ ಹರ್ಷಗೊಂಡಳು. ಅವನೊಡನೆ ಆ ವನದ ಮಧ್ಯದಲ್ಲಿಯೇ ನೆಲಸಿ ಬಹುದಿನಗಳವರೆಗೆ ಕ್ರೀಡಿಸಿದಳು.

೨೬. ಯಾವಾಗಲೋ ಒಂದು ಸಲ ಸುರತದ ಕೊನೆಯಲ್ಲಿ ಅವನನ್ನು ವಿಷ್ಣುವೇ ಎಂದು ಕಂಡುಕೊಂಡಳು. ಆಗ ವೃಂದೆಯು ಕ್ರೋಧಯುಕ್ತಳಾಗಿ ಜರೆದು ಅವನನ್ನು ಕುರಿತು ಈ ಮಾತಾಡಿದಳು.

೨೭. ವೃಂದೆಯಿಂತೆಂದಳು :—"ಹರಿಯೇ! ನಿನ್ನ ಶೀಲಕ್ಕೆ ಧಿಕ್ಕಾರ! ನೀನು ಪರದಾರಗಮನಮಾಡಿದೆಯಲ್ಲಾ! ನೀನು ಯಾರೆಂಬುದನ್ನು ನಾನು ತಿಳಿದುಕೊಂಡೆ. ಮಾಯೆಯಿಂದ ಪ್ರಚ್ಛನ್ನನಾಗಿದ್ದ ತಾಪಸನೇ ನೀನು.

೨೮. ನೀನು ಮಾಯೆಯಿಂದ ಯಾವ ಇಬ್ಬರು ದ್ವಾರಪಾಲಕರನ್ನು ನನಗೆ

ತ್ವಂ ಚಾಪಿ ಭಾರ್ಯಾದುಃಖಾರ್ತೋ ವನೇ ಕಪಿಸಹಾಯವಾನ್ ।
ಭ್ರಮ ಸರ್ಪೇಶ್ವರೇಣಾಯಂ ಯಸ್ತೇ ಶಿಷ್ಯತ್ವಮಾಗತಃ ॥ ೨೯ ॥
ಇತ್ಯುಕ್ತ್ವಾ ಸಾ ತದಾ ವೃಂದಾ ಪ್ರವಿಶದ್ಧವ್ಯವಾಹನಂ ।
ವಿಷ್ಣುನಾ ವಾರ್ಯಮಾಣಾಪಿ ತಸ್ಯಾಮಾಸಕ್ತಚೇತಸಾ ॥ ೩೦ ॥
ತತೋ ಹರಿಸ್ತಾಮನುಸಂಸ್ಮರನ್ ಮುಹುಃ
ವೃಂದಾನ್ವಿತೋ ಭಸ್ಮರಜೋಽವಗುಂಠಿತಃ ।
ತತ್ರೈವ ತಸ್ಥೌ ಸುರಸಿದ್ಧಸಂಘೈಃ
ಪ್ರಬೋಧ್ಯಮಾನೋಽಪಿ ಯಯೌ ನ ಶಾಂತಿಂ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ ಜಲಂಧರೋಪಾಖ್ಯಾನೇ "ವೃಂದಾಗ್ನಿಪ್ರವೇಶವರ್ಣನಂ"ನಾಮ ಏಕವಿಂಶೋಽಧ್ಯಾಯಃ

---

ತೋರಿಸಿದೆಯೋ ಅವರೇ ರಾಕ್ಷಸರಾಗಿ ಹುಟ್ಟಿ ನಿನ್ನ ಹೆಂಡತಿಯನ್ನು ಹರಣ ಮಾಡುತ್ತಾರೆ.

೨೯. ನೀನು ಕೂಡ ಹೆಂಡತಿಯನ್ನು ಕಳೆದುಕೊಂಡು ದುಃಖಪಡುತ್ತಾ ನಿನಗೆ ಶಿಷ್ಯತ್ವವನ್ನು ವಹಿಸಿ ಬಂದ ಈ ಆದಿಶೇಷನೊಡಗೂಡಿ ಕಾಡಿನಲ್ಲಿ ಕಪಿಗಳ ಸಹಾಯವನ್ನು ಪಡೆದು ತೊಳಲುತ್ತೀರು" ಎಂದಳು.

೩೦. ಆ ವೃಂದೆಯು ಹೀಗೆಂದು ನುಡಿದು ಅವಳಲ್ಲಿಯೇ ಮನಸ್ಸು ನೆಟ್ಟಿದ್ದ ವಿಷ್ಣುವು ತಡೆಯುತ್ತಿದ್ದರೂ ಲಕ್ಷಿಸದೆ ಅಗ್ನಿಯನ್ನು ಪ್ರವೇಶಿಸಿದಳು.

೩೧. ಬಳಿಕ ಹರಿಯು ಅವಳನ್ನೇ ಮತ್ತೆ ಮತ್ತೆ ಸ್ಮರಿಸುತ್ತಾ ವೃಂದೆಯ ಚಿತಿಯ ಬೂದಿಯನ್ನು ಬಳಿದುಕೊಂಡು ಅಲ್ಲಿಯೇ ನಿಂತನು. ಸುರಸಿದ್ಧ ಸಂಘಗಳು ಎಷ್ಟೆಷ್ಟು ಬೋಧಿಸಿದರೂ ಶಾಂತಿಯನ್ನು ಪಡೆಯಲಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದ ಜಲಂಧರೋಪಾಖ್ಯಾನದಲ್ಲಿ "ವೃಂದಾಗ್ನಿಪ್ರವೇಶವರ್ಣನ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾವಿಂಶೋಽಧ್ಯಾಯಃ

### ಜಲಂಧರ ಮುಕ್ತಿ ಕಥನಂ

ನಾರದ ಉವಾಚ :—

**ತತೋ ಜಲಂಧರೋ ದೃಷ್ಟ್ವಾ ರುದ್ರಮುದ್ಭುತವಿಕ್ರಮಂ ।**
**ಚಕಾರ ಮಾಯಯಾ ಗೌರೀಂ ತ್ರ್ಯಂಬಕಂ ಮೋಹಯನ್ನಿವ ॥ ೧ ॥**
**ರಥೋಪರಿ ಚ ತಾಂ ಬದ್ಧಾಂ ರುದತೀಂ ಪಾರ್ವತೀಂ ಶಿವಃ ।**
**ನಿಶುಂಭಪ್ರಮುಖಾದ್ಯೈಶ್ಚ ವಧ್ಯಮಾನಾಂ ದದರ್ಶ ಸಃ ॥ ೨ ॥**
**ಗೌರೀಂ ತಥಾವಿಧಾಂ ದೃಷ್ಟ್ವಾ ಶಿವೋಽಪ್ಯುದ್ವಿಗ್ನಮಾನಸಃ ।**
**ಅವಾಙ್ಮುಖಃ ಸ್ಥಿತಸ್ತೂಷ್ಣೀಂ ವಿಸ್ಮೃತ್ಯ ಸ್ವಪರಾಕ್ರಮಂ ॥ ೩ ॥**
**ತತೋ ಜಲಂಧರೋ ವೇಗಾತ್ ತ್ರಿಭಿರ್ವಿವ್ಯಾಧ ಸಾಯಕೈಃ ।**
**ಆಪುಂಖಮಗ್ನೈಸ್ತಂ ರುದ್ರಂ ಶಿರಸ್ಯುರಸಿ ಚೋದರೇ ॥ ೪ ॥**
**ತತೋ ಜಜ್ಞೇ ಸ ತಾಂ ಮಾಯಾಂ ವಿಷ್ಣುನಾ ಚ ಪ್ರಬೋಧಿತಃ ।**
**ರೌದ್ರರೂಪಧರೋ ಜಾತೋ ಜ್ವಾಲಾಮಾಲಾತಿಭೀಷಣಃ ॥ ೫ ॥**

---

### ಕನ್ನಡದ ಅನುವಾದ

#### ಜಲಂಧರನ ಮೋಕ್ಷಪ್ರಾಪ್ತಿಯು

೧. ನಾರದನಿಂತೆಂದನು :—ಬಳಿಕ ಜಲಂಧರನು ಅದ್ಭುತ ಪರಾಕ್ರಮಿಯಾದ ರುದ್ರನನ್ನು ಕಂಡು ತ್ರ್ಯಂಬಕನನ್ನು ಮೋಹಗೊಳಿಸಲೆಂಬಂತೆ ಮಾಯೆಯಿಂದ ಗೌರಿಯನ್ನು ನಿರ್ಮಿಸಿದನು.

೨. ಆ ಶಿವನು ಜಲಂಧರನ ರಥದ ಮೇಲೆ ಬದ್ಧಳಾಗಿ ರೋದನಮಾಡುತ್ತಿದ್ದ ಪಾರ್ವತಿಯನ್ನು ಕಂಡನು. ನಿಶುಂಭನೇ ಮೊದಲಾದವರು ಅವಳನ್ನು ಬಾಧಿಸುತ್ತಿದ್ದರು.

೩. ಈ ಪರಿಯಾಗಿದ್ದ ಗೌರಿಯನ್ನು ಕಂಡು ಶಿವನು ಕೂಡ ಉದ್ವಿಗ್ನಮಾನಸನಾಗಿ, ತನ್ನ ಪರಾಕ್ರಮವನ್ನು ಮರೆತು ಮುಖತಗ್ಗಿಸಿ ಸುಮ್ಮನೆ ನಿಂತುಬಿಟ್ಟನು.

೪. ಆಗ ಜಲಂಧರನು ಬೇಗಬೇಗ ಮೂರು ಬಾಣಗಳಿಂದ ಶಿವನ ತಲೆಗೂ ಎದೆಗೂ ಹೊಟ್ಟೆಗೂ ಪುಂಖದವರೆಗೂ ನೆಡುವಂತೆ ಹೊಡೆದನು.

೫. ಬಳಿಕ ಶಿವನು ವಿಷ್ಣುವಿನಿಂದ ಎಚ್ಚರಿಸಲ್ಪಟ್ಟವನಾಗಿ ಆ ಮಾಯೆಯನ್ನು ತಿಳಿದು ಧ್ವಂಸಮಾಡಿದನು. ಉರಿಮಾಲೆಗಳಿಂದ ಅತಿ ಭೀಷಣನಾಗಿ ರೌದ್ರರೂಪವನ್ನು ಧರಿಸಿ ನಿಂತನು.

ತಸ್ಯಾತೀವ ಮಹಾರೌದ್ರಂ ರೂಪಂ ದೃಷ್ಟ್ವಾ ಮಹಾಸುರಾಃ ।
ನ ಶೇಕುಃ ಸಂಮುಖೇ ಸ್ಥಾತುಂ ಭೇಜಿರೇ ತೇ ದಿಶೋ ದಶ ॥ ೬ ॥
ತತಃ ಶಾಪಂ ದದೌ ರುದ್ರಃ ತಯೋಃ ಶುಂಭನಿಶುಂಭಯೋಃ ।
ಮಮ ಯುದ್ಧಾದಪಕ್ರಾಂತೌ ಗೌರ್ಯಾ ವಧ್ಯೌ ಭವಿಷ್ಯಥಃ ॥ ೭ ॥
ಪುನರ್ಜಲಂಧರೋ ವೇಗಾತ್ ವವರ್ಷ ನಿಶಿತೈಃ ಶರೈಃ ।
ಬಾಣಾಂಧಕಾರೈಃ ಸಂಛನ್ನಂ ತದಾ ಭೂಮಿತಲಂ ಮಹತ್ ॥ ೮ ॥
ಯಾವದ್ರುದ್ರಶ್ಚಿಚ್ಛೇದ ತಸ್ಯ ಬಾಣಗಣಂ ಜವಾತ್ ।
ತಾವತ್ಸ ಪರಿಘೇಣಾಽಽಶು ಜಘಾನ ವೃಷಭಂ ಬಲೀ ॥ ೯ ॥
ವೃಷಸ್ತೇನ ಪ್ರಹಾರೇಣ ಪರಾವೃತ್ತೋ ರಣಾಂಗಣಾತ್ ।
ರುದ್ರೇಣಾಕೃಷ್ಯಮಾಣೋಽಽಪಿ ನ ತಸ್ಥೌ ರಣಭೂಮಿಷು ॥ ೧೦ ॥
ತತಃ ಪರಮಸಂಕ್ರುದ್ಧೋ ರುದ್ರೋ ರೌದ್ರವಪುರ್ಧರಃ ।
ಚಕ್ರಂ ಸುದರ್ಶನಂ ವೇಗಾತ್ ಚಿಕ್ಷೇಪಾದಿತ್ಯವರ್ಚಸಂ ॥ ೧೧ ॥
ಪ್ರದಹದ್ರೋದಸೀ ವೇಗಾತ್ ಪಪಾತ ವಸುಧಾತಲೇ ।
ಜಹಾರ ತಚ್ಛಿರಃ ಕಾಯಾನ್ಮಹದಾಯತಲೋಚನಂ ॥ ೧೨ ॥

---

೬. ಅವನ ಅತ್ಯಂತ ಮಹಾರೌದ್ರವಾದ ಆ ರೂಪವನ್ನು ನೋಡಿ ಮಹಾಸುರರೂ ಅವನೆದುರಿಗೆ ನಿಲ್ಲಲು ಶಕ್ತರಾಗಲಿಲ್ಲ. ಅವರು ಹತ್ತು ದಿಕ್ಕುಗಳಿಗೂ ಓಡಿಹೋದರು.

೭. ಬಳಿಕ ರುದ್ರನು ಆ ಶುಂಭ ನಿಶುಂಭರಿಬ್ಬರಿಗೂ 'ನನ್ನ ಯುದ್ಧದಿಂದ ಹಿಮ್ಮೆಟ್ಟಿ ನೀವು ಗೌರಿಯಿಂದ ವಧ್ಯರಾಗುವಿರಿ' ಎಂದು ಶಾಪವನ್ನು ಕೊಟ್ಟನು.

೮. ಜಲಂಧರನು ಮತ್ತೆ ವೇಗದಿಂದ ಹರಿತವಾದ ಬಾಣದ ಮಳೆಯನ್ನು ಸುರಿಸಿದನು. ಆಗ ಈ ಮಹತ್ತಾದ ಭೂಮಂಡಲವೆಲ್ಲ ಬಾಣಾಂಧಕಾರದಲ್ಲಿ ಮುಳುಗಿಹೋಯಿತು.

೯–೧೦. ರುದ್ರನು ಅವನ ಬಾಣಗಣವನ್ನು ವೇಗದಿಂದ ಕತ್ತರಿಸಿಹಾಕಿದನು. ಆ ಕೂಡಲೆ, ಬಲವಂತನಾದ ಅವನು ಪರಿಘದಿಂದ ಶಿವನ ವೃಷಭವನ್ನು ಬಡಿದನು. ಆ ಏಟಿನಿಂದ ವೃಷಭವು ರಣಾಂಗಣದಿಂದ ಹಿಮ್ಮೆಟ್ಟಿತು. ರುದ್ರನಿಂದ ಎಳೆಯಿಸಲ್ಪಡುತ್ತಿದ್ದರೂ ಯುದ್ಧಭೂಮಿಯಲ್ಲಿ ನಿಲ್ಲಲೇ ಇಲ್ಲ.

೧೧. ಬಳಿಕ ರುದ್ರನು ಅತ್ಯಂತ ಕ್ರುದ್ಧನಾಗಿ ರೌದ್ರ ಶರೀರವನ್ನು ಧರಿಸಿ ಸೂರ್ಯ ತೇಜಸ್ಸಿನಿಂದ ಬೆಳಗುವ ಸುದರ್ಶನ ಚಕ್ರವನ್ನು ವೇಗದಿಂದೆಸೆದನು.

೧೨. ಆ ಚಕ್ರವು ದಿಕ್ಕುಗಳನ್ನು ದಹಿಸುತ್ತಾ ವೇಗದಿಂದ ಮೇಲೆಬಿದ್ದು ಅಗಲವಾದ ಕಣ್ಣುಗಳುಳ್ಳ ಮಹತ್ತಾದ ಆ ಶಿರಸ್ಸನ್ನು ಶರೀರದಿಂದ ಬೇರ್ಪಡಿಸಿ ಭೂಮಿಯಲ್ಲಿ ಕೆಡವಿತು.

ರಥಾತ್ಕಾಯಃ ಪಪಾತಾಸ್ಯ ನಾದಯನ್ವಸುಧಾತಲಂ ।
ತೇಜಶ್ಚ ನಿರ್ಗತಂ ದೇಹಾತ್ ತದ್ರುದ್ರೇ ಲಯಮಾಗಮತ್ ॥ ೧೩ ॥
ವೃಂದಾದೇಹೋದ್ಭವಂ ತೇಜಃ ತದ್ಗೌರ್ಯಾಂ ವಿಲಯಂ ಗತಂ ।
ಅಥ ಬ್ರಹ್ಮಾದಯೋ ದೇವಾ ಹರ್ಷಾದುತ್ಫುಲ್ಲಲೋಚನಾಃ ॥ ೧೪ ॥
ಪ್ರಣಮ್ಯ ಶಿರಸಾ ರುದ್ರಂ ಶಶಂಸುರ್ವಿಷ್ಣುಚೇಷ್ಟಿತಂ ।

ದೇವಾ ಊಚುಃ :—

ಮಹಾದೇವ ತ್ವಯಾ ದೇವಾ ರಕ್ಷಿತಾಃ ಶತ್ರುಜಾದ್ಭಯಾತ್ ॥ ೧೫ ॥
ಕಿಂಚಿದನ್ಯತ್ಸಮುದ್ಭೂತಂ ತತ್ರ ಕಿಂ ಕರವಾಮಹೇ ।
ವೃಂದಾಲಾವಣ್ಯಸಂಭ್ರಾಂತೋ ವಿಷ್ಣುಸ್ತಿಷ್ಠತಿ ಮೋಹಿತಃ ॥ ೧೬ ॥

ಈಶ್ವರ ಉವಾಚ :—

ಗಚ್ಛಧ್ವಂ ಶರಣಂ ದೇವಾ ವಿಷ್ಣೋರ್ಮೋಹಾಪನುತ್ತಯೇ ।
ಶರಣ್ಯಾಂ ಮೋಹಿನೀಂ ಮಾಯಾಂ ಸಾ ವಃ ಕಾರ್ಯಂ ಕರಿಷ್ಯತಿ ॥ ೧೭ ॥

ನಾರದ ಉವಾಚ :—

ಇತ್ಯುಕ್ತ್ವಾಂತರ್ದಧೇ ದೇವಃ ಸರ್ವಭೂತಗಣೈಸ್ತದಾ ।
ದೇವಾಶ್ಚ ತುಷ್ಟುವುರ್ಮೂಲಪ್ರಕೃತಿಂ ಭಕ್ತವತ್ಸಲಾಂ ॥ ೧೮ ॥

---

೧೩. ಅವನ ಶರೀರವು ರಥದ ಮೇಲಿನಿಂದ ಕೆಳಕ್ಕೆ ಬಿದ್ದು ನೆಲವನ್ನೆಲ್ಲ ನಾದದಿಂದ ತುಂಬಿಸಿತು. ಆ ದೇಹದಿಂದ ತೇಜಸ್ಸು ಹೊರಹೊರಟು ರುದ್ರನಲ್ಲಿ ಲಯವನ್ನು ಹೊಂದಿತು.

೧೪–೧೫. ವೃಂದೆಯ ದೇಹದಿಂದ ಉದ್ಭವಿಸಿದ ತೇಜಸ್ಸು ಗೌರಿಯಲ್ಲಿ ಹೊಕ್ಕು ಲಯವಾಯಿತು. ಬಳಿಕ ಬ್ರಹ್ಮಾದಿದೇವತೆಗಳು ಹರ್ಷದಿಂದ ಕಣ್ಣರಳಿಸಿ ಕೊಂಡು, ತಲೆಬಗ್ಗಿ ರುದ್ರನಿಗೆ ಪ್ರಣಾಮಮಾಡಿ, ವಿಷ್ಣುವಿನ ನಡವಳಿಕೆಯನ್ನು ಅರಿಕೆಮಾಡಿದರು. ದೇವತೆಗಳಿಂತೆಂದರು :—"ಮಹಾದೇವಾ! ನೀನು ದೇವತೆ ಗಳನ್ನು ಶತ್ರುಭಯದಿಂದ ಕಾಪಾಡಿದೆ.

೧೬. ಇನ್ನೇನೋ ಒಂದು ಸ್ವಲ್ಪ ತೊಂದರೆಯುಂಟಾಗಿದೆ. ಅದಕ್ಕೇನು ಮಾಡೋಣ? ವೃಂದೆಯ ಲಾವಣ್ಯದಿಂದ ಭ್ರಾಂತನಾದ ವಿಷ್ಣುವು ಮೋಹಿತ ನಾಗಿದ್ದಾನೆ" ಎಂದರು.

೧೭. ಆ ಮಾತಿಗೆ ಈಶ್ವರನು, "ಎಲೈ ದೇವತೆಗಳೇ! ವಿಷ್ಣುವಿನ ಮೋಹ ವನ್ನು ಪರಿಹಾರಮಾಡುವುದಕ್ಕಾಗಿ ಮೋಹಿನೀ ಮಾಯೆಯ ಮರೆಹೋಗಿರಿ. ಆ ಮಾಯೆಯು ನಿಮ್ಮ ಕಾರ್ಯವನ್ನು ನೆರವೇರಿಸುತ್ತಾಳೆ" ಎಂದು ಉತ್ತರ ಕೊಟ್ಟನು.

೧೮. ನಾರದನು ಮುಂದುವರಿಸಿದನು :— ಹೀಗೆ ನುಡಿದು ಆ ದೇವನು

ದೇವಾ ಊಚುಃ:—

ಯದುದ್ಭವಾ ಸತ್ವರಜಸ್ತಮೋಗುಣಾಃ
ಸರ್ಗಸ್ಥಿತಿಧ್ವಂಸನಿದಾನಕಾರಿಣಃ ।
ಯದಿಚ್ಛಯಾ ವಿಶ್ವಮಿದಂ ಭವಾಭವೌ
ತನೋತಿ ಮೂಲಪ್ರಕೃತಿಂ ನತಾಃ ಸ್ಮ ತಾಂ ॥ ೧೯ ॥
ಯಾ ಹಿ ತ್ರಯೋವಿಂಶತಿಭೇದಶಬ್ದಿತಾ
ಜಗತ್ಯಶೇಷೇ ಸಮಧಿಷ್ಠಿತಾ ಪರಾ ।
ಯದ್ರೂಪಕರ್ಮಾಣಿ ಜಡಾಸ್ತ್ರಯೋಽಪಿ
ದೇವಾ ನ ವಿದ್ಯುಃ ಪ್ರಕೃತಿಂ ನತಾಃ ಸ್ಮ ತಾಂ ॥ ೨೦ ॥
ಯದ್ಭಕ್ತಿಯುಕ್ತಾಃ ಪುರುಷಾಸ್ತು ನಿತ್ಯಂ
ದಾರಿದ್ರ್ಯಭೀಮೋಹಪರಾಭವಾದೀನ್ ।
ನ ಪ್ರಾಪ್ನುವಂತ್ಯೇವ ಹಿ ಭಕ್ತವತ್ಸಲಾಂ
ಸದೈವ ಮೂಲಪ್ರಕೃತಿಂ ನತಾಃ ಸ್ಮ ತಾಂ ॥ ೨೧ ॥

ನಾರದ ಉವಾಚ:—

ಸ್ತೋತ್ರಮೇತತ್ ತ್ರಿಸಂಧ್ಯಂ ಯಃ ಪಠೇದೇಕಾಗ್ರಮಾನಸಃ ।
ದಾರಿದ್ರ್ಯಮೋಹದುಃಖಾನಿ ನ ಕದಾಚಿತ್ ಸ್ಪೃಶಂತಿ ತಂ ॥ ೨೨ ॥

---

ಸರ್ವಭೂತಗಣಗಳಿಂದೊಡಗೂಡಿ ಅಂತರ್ಧಾನ ಹೊಂದಿದನು. ದೇವತೆಗಳು ಕೂಡ ಭಕ್ತವತ್ಸಲೆಯಾದ ಮೂಲಪ್ರಕೃತಿಯನ್ನು ಸ್ತುತಿಸತೊಡಗಿದರು.

೧೯. ದೇವತೆಗಳಿಂತೆಂದರು:—"ಸೃಷ್ಟಿಸ್ಥಿತಿಲಯಗಳಿಗೆ ಕಾರಣಗಳಾದ ಸತ್ವರಜಸ್ತಮೋಗುಣಗಳು ಯಾರಿಂದ ಉದ್ಭವಿಸಿದುವೋ, ಯಾರ ಇಚ್ಛೆಯಿಂದ ಸಂಸಾರ ಮೋಕ್ಷಗಳೆಲ್ಲವೂ ಉಂಟಾಗುವುವೋ ಆ ಮೂಲಪ್ರಕೃತಿಗೆ ನಾವು ಶಿರಬಾಗಿ ನಮಸ್ಕರಿಸುತ್ತೇವೆ.

೨೦. ಯಾವಳು ಮಹದಾದಿ ಇಪ್ಪತ್ತುಮೂರು ವಿಕಾರಗಳುಳ್ಳವಳಾಗಿ ಅಶೇಷ ಜಗತ್ತಿನಲ್ಲೆಲ್ಲ ಪರಾಸ್ವರೂಪಿಯಾಗಿ ನೆಲಸಿರುವಳೋ, ಯಾರ ರೂಪವನ್ನೂ ಕರ್ಮಗಳನ್ನೂ ಜಡರಾದ ತ್ರಿಮೂರ್ತಿಗಳೂ ಅರಿಯರೊ, ಆ ಪ್ರಕೃತಿಯನ್ನು ಶಿರಬಾಗಿ ವಂದಿಸುತ್ತೇವೆ.

೨೧. ಯಾರಲ್ಲಿ ಭಕ್ತಿಯಿಟ್ಟಿರುವ ಪುರುಷರು ನಿತ್ಯವೂ ದಾರಿದ್ರ್ಯ, ಬುದ್ಧಿಮೋಹ, ಪರಾಭವ ಮೊದಲಾದುವನ್ನು ಪಡೆಯುವುದೇ ಇಲ್ಲವೋ ಆ ಭಕ್ತವತ್ಸಲೆಯಾದ ಮೂಲಪ್ರಕೃತಿಯನ್ನು ನಾವು ಸದಾ ತಲೆಬಾಗಿ ವಂದಿಸುತ್ತೇವೆ."

೨೨. ನಾರದನು ಹೇಳತೊಡಗಿದನು:—ಯಾವನು ಈ ಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿಯೂ ಏಕಾಗ್ರವಾದ ಮನಸ್ಸಿನಿಂದ ಪಠಿಸುವನೋ ಅವನನ್ನು ದಾರಿದ್ರ್ಯ, ಮೋಹ, ದುಃಖಗಳು ಎಂದೆಂದೂ ಮುಟ್ಟುವುದಿಲ್ಲ.

ಇತ್ಥಂ ಸ್ತುವಂತಸ್ತೇ ದೇವಾಃ ತೇಜೋಮಂಡಲಮಾಸ್ಥಿತಂ ।
ದದೃಶುರ್ಗಗನಂ ತತ್ರ ಜ್ವಾಲಾವ್ಯಾಪ್ತದಿಗಂತರಂ ॥ ೨೩ ॥
ತನ್ಮಧ್ಯಾದ್ಭಾರತೀಂ ಸರ್ವೇ ಶಶ್ರುವುರ್ವ್ಯೋಮಚಾರಿಣೀಂ ।
ಶಕ್ತಿರುವಾಚ :—
ಅಹಮೇವ ತ್ರಿಧಾ ಭಿನ್ನಾ ತಿಷ್ಠಾಮಿ ತ್ರಿವಿಧೈರ್ಗುಣೈಃ ॥ ೨೪ ॥
ಗೌರೀ ಲಕ್ಷ್ಮೀ ಸ್ವರಾಚೇತಿ ರಜಃಸತ್ವತಮೋಗುಣೈಃ ।
ತತ್ರ ಗಚ್ಛತ ತಾಃ ಕಾರ್ಯಂ ವಿಧಾಸ್ಯಂತಿ ಚ ವಃ ಸುರಾಃ ॥ ೨೫ ॥
ನಾರದ ಉವಾಚ :—
ಶೃಣ್ವತಾಮಿತಿ ತಾಂ ವಾಚಂ ಅತರ್ಧಾನಮಗಾನ್ಮಹಃ ।
ದೇವಾನಾಂ ವಿಸ್ಮಯೋತ್ಫುಲ್ಲನೇತ್ರಾಣಾಂ ತತ್ತದಾ ನೃಪ ॥ ೨೬ ॥
ತತಃ ಸರ್ವೇಽಪಿ ತೇ ದೇವಾ ಗತ್ವಾ ತದ್ವಾಕ್ಯಸೋದಿತಾಃ ।
ಗೌರೀಂ ಲಕ್ಷ್ಮೀಂ ಸ್ವರಾಂ ಚೈವ ಪ್ರಣೇಮುರ್ಭಕ್ತಿತತ್ಪರಾಃ ॥ ೨೭ ॥
ತತಸ್ತಾಸ್ತಾನ್ಸುರಾನ್ ದೃಷ್ಟ್ವಾ ಪ್ರಣತಾನ್ಭಕ್ತವತ್ಸಲಾಃ ।
ಬೀಜಾನಿ ಪ್ರದದುಸ್ತೇಭ್ಯೋ ವಾಕ್ಯಾನ್ಯೂಚುಶ್ಚ ಭೂಮಿಪ ॥ ೨೮ ॥

---

೨೩. ಈ ರೀತಿಯಾಗಿ ಸ್ತುತಿಸುತ್ತಾ ಆ ದೇವತೆಗಳು ದಿಗಂತರಗಳನ್ನೆಲ್ಲ ವ್ಯಾಪಿಸಿ ಜ್ವಾಲೆಯಿಂದ ಬೆಳಗುತ್ತ ಗಗನದಲ್ಲಿ ಮೂಡಿಬಂದ ತೇಜೋಮಂಡಲವನ್ನು ಕಂಡರು.

೨೪. ಆ ಮಂಡಲದ ಮಧ್ಯದಿಂದೆದ್ದು ಬಂದ ಆಕಾಶಚಾರಿಣಿಯಾದ ವಾಣಿಯನ್ನು ಅವರೆಲ್ಲರೂ ಆಲಿಸಿದರು. ಶಕ್ತಿಯಿಂತೆಂದಳು :—“ ನಾನೇ ಮೂರು ಬಗೆಯ ಗುಣಗಳಿಂದ ಮೂರಾಗಿ ಒಡೆದು ನಿಂತಿದ್ದೇನೆ.

೨೫. ರಜಸ್, ಸತ್ವ ಮತ್ತು ತಮೋಗುಣಗಳಿಂದ ಗೌರಿ, ಲಕ್ಷ್ಮಿ, ಸರಸ್ವತಿ ಎಂದು ಮೂರು ರೂಪಗಳಾಗಿದ್ದೇನೆ. ದೇವತೆಗಳೇ! ಅಲ್ಲಿ ಹೋಗಿರಿ. ಅವರು ನಿಮ್ಮ ಕಾರ್ಯವನ್ನು ನೆರವೇರಿಸುತ್ತಾರೆ” ಎಂದಳು.

೨೬–೨೭. ನಾರದನಿಂತೆಂದನು:—ಎಲೈ ರಾಜನೇ! ದೇವತೆಗಳು ವಿಸ್ಮಯದಿಂದ ಕಣ್ಣರಳಿಸಿ ಆ ವಾಣಿಯನ್ನು ಆಲಿಸುತ್ತಿರುವಾಗಲೇ ಆ ತೇಜಸ್ಸು ಅಂತರ್ಧಾನವಾಯಿತು. ಬಳಿಕ ಆ ದೇವತೆಗಳೆಲ್ಲರೂ ಆ ವಾಕ್ಯದಿಂದ ಪ್ರೇರಿಸಲ್ಪಟ್ಟು ಗೌರಿ, ಲಕ್ಷ್ಮಿ ಮತ್ತು ಸರಸ್ವತಿಯರ ಬಳಿಗೆ ಹೋಗಿ ಭಕ್ತಿಯಿಂದ ಅವರಿಗೆ ಪ್ರಣಾಮಮಾಡಿದರು.

೨೮. ಬಳಿಕ ಭಕ್ತವತ್ಸಲೆಯರಾದ ಅವರು ಪ್ರಣಾಮಮಾಡಿದ ಆ ದೇವತೆಗಳನ್ನು ನೋಡಿ, ಅವರಿಗೆ ಬೀಜಗಳನ್ನು ಕೊಟ್ಟರು. ಎಲೈ ಭೂಪತಿಯೇ, ಹೀಗೆ ಮಾತುಗಳನ್ನೂ ಆಡಿದರು.

ದೇವ್ಯ ಊಚುಃ :—

ಇಮಾನಿ ತತ್ರ ಬೀಜಾನಿ ವಿಷ್ಣುರ್ಯತ್ರಾವತಿಷ್ಠತೇ ।
ನಿರ್ವಪಧ್ವಂ ತತಃ ಕಾರ್ಯಂ ಭವತಾಂ ಸಿದ್ಧಿಮೇಷ್ಯತಿ ॥ ೨೯ ॥

ನಾರದ ಉವಾಚ :—

ತತಸ್ತು ಹೃಷ್ಟಾಸ್ಸುರಸಿದ್ಧಸಂಘಾಃ
ಪ್ರಗೃಹ್ಯ ಬೀಜಾನಿ ವಿಚಿಕ್ಷಿಪುಸ್ತೇ ।
ವೃಂದಾನ್ವಿತೋ ಭೂಮಿತಲೇ ಸ ಯತ್ರ
ವಿಷ್ಣುಃ ಸದಾ ತಿಷ್ಠತಿ ಸೌಖ್ಯಹೀನಃ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಜಲಂಧರ ಮುಕ್ತಿ ಕಥನಂ" ನಾಮ ದ್ವಾವಿಂಶೋಽಧ್ಯಾಯಃ

---

೨೯. ದೇವಿಯರಿಂತೆಂದರು :—"ವಿಷ್ಣುವು ಎಲ್ಲಿದ್ದಾನೋ ಅಲ್ಲಿ ಈ ಬೀಜಗಳನ್ನು ಬಿತ್ತಿರಿ. ಅದರಿಂದ ನಿಮ್ಮ ಕಾರ್ಯವು ಸಿದ್ಧಿಸುತ್ತದೆ."

೩೦. ನಾರದನಿಂತೆಂದನು :—ಬಳಿಕ ದೇವತೆಗಳೂ ಸಿದ್ಧಸಂಘಗಳೂ ಹರ್ಷಹೊಂದಿದವರಾಗಿ ಆ ಬೀಜಗಳನ್ನು ತೆಗೆದುಕೊಂಡುಹೋಗಿ ಆ ವಿಷ್ಣುವು ಎಲ್ಲಿ ವೃಂದಾಸಮೇತನಾಗಿ ಸೌಖ್ಯಹೀನನಾಗಿ ನೆಲಸಿದ್ದನೋ ಆ ನೆಲದಲ್ಲಿ ಹಾಕಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸ ಮಾಹಾತ್ಮ್ಯದಲ್ಲಿ "ಜಲಂಧರ ಮುಕ್ತಿಕಥನ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋವಿಂಶೋಽಧ್ಯಾಯಃ

## ಧಾತ್ರೀತುಲಸ್ಯುತ್ಪತ್ತಿವರ್ಣನಂ

ನಾರದ ಉವಾಚ :—

ಕ್ಷಿಪ್ತೇಭ್ಯಸ್ತತ್ರ ಬೀಜೇಭ್ಯೋ ವನಸ್ಪತ್ಯಸ್ತ್ರಯೋಽಭವನ್ ।
ಧಾತ್ರೀ ಚ ಮಾಲತೀ ಚೈವ ತುಲಸೀ ಚ ನೃಪೋತ್ತಮ ॥ ೧ ॥
ಧಾತ್ರ್ಯುದ್ಭವಾ ಸ್ಮೃತಾ ಧಾತ್ರೀ ಮಾಭವಾ ಮಾಲತೀ ಸ್ಮೃತಾ ।
ಗೌರೀಭವಾ ಚ ತುಲಸೀ ತಮಃಸತ್ವರಜೋಗುಣಾಃ ॥ ೨ ॥
ಸ್ತ್ರೀರೂಪಿಣ್ಯೋ ವನಸ್ಪತ್ಯೋ ದೃಷ್ಟ್ವಾ ವಿಷ್ಣುಸ್ತದಾ ನೃಪ ।
ಉತ್ತಸ್ಥೌ ಸಂಭ್ರಮಾದ್ವೃಂದಾರೂಪಾತಿಶಯವಿಭ್ರಮಃ ॥ ೩ ॥
ದೃಷ್ಟ್ವಾ ಚ ಯಾಚತೇ ಮೋಹಾತ್ ಕಾಮಾಸಕ್ತೇನ ಚೇತಸಾ ।
ತಂ ಚಾಪಿ ತುಲಸೀ ಧಾತ್ರ್ಯೌ ರಾಗೇಣೈವ ವ್ಯಲೋಕತಾಂ ॥ ೪ ॥
ಯಚ್ಚ ಲಕ್ಷ್ಮ್ಯಾ ಪುರಾ ಬೀಜಂ ಈರ್ಷ್ಯಯೈವ ಸಮರ್ಪಿತಂ ।
ತಸ್ಮಾತ್ತದುದ್ಭವಾ ನಾರೀ ತಸ್ಮಿನ್ನೀರ್ಷ್ಯಾಪರಾಭವತ್ ॥ ೫ ॥

---

## ಕನ್ನಡದ ಅನುವಾದ

### ಧಾತ್ರೀತುಲಸ್ಯುತ್ಪತ್ತಿ ವರ್ಣನ

೧. ನಾರದನಿಂತೆಂದನು :—ನೃಪಶ್ರೇಷ್ಠನೇ! ಅಲ್ಲಿಟ್ಟ ಆ ಬೀಜಗಳಿಂದ ಧಾತ್ರೀ, ಮಾಲತೀ, ತುಲಸೀ—ಎಂಬ ಈ ಮೂರು ವನಸ್ಪತಿಗಳು ಹುಟ್ಟಿದುವು.

೨. ಧಾತ್ರಿಯು ಸರಸ್ವತಿಯಿಂದುದಿಸಿದ್ದೆಂದು ಹೇಳಲ್ಪಡುತ್ತದೆ. ಮಾಲತಿಯು ಲಕ್ಷ್ಮಿಯಿಂದುದಿಸಿದ್ದೆನ್ನುತ್ತಾರೆ. ತುಲಸಿಯನ್ನು ಗೌರಿಯು ಮಾಡಿದಳೆಂದು ಭಾವಿಸಲ್ಪಟ್ಟಿದೆ. ಇವು ತಮಸ್, ಸತ್ವ ಮತ್ತು ರಜೋಗುಣಗಳಿಂದಾದುವು.

೩. ಎಲೆ ನೃಪನೇ! ಸ್ತ್ರೀರೂಪಧಾರಿಗಳಾದ ಆ ವನಸ್ಪತಿಗಳನ್ನು ಕಂಡು ವೃಂದೆಯ ರೂಪಾತಿಶಯದಿಂದ ಭ್ರಾಂತನಾದ ವಿಷ್ಣುವು ಸಂಭ್ರಮದಿಂದ ಎದ್ದು ನಿಂತನು.

೪. ಅವರನ್ನು ನೋಡಿ ಕಾಮಾಸಕ್ತನಾಗಿ ಮೋಹದಿಂದ ಯಾಚಿಸಿದನು. ಆವನನ್ನು ಕೂಡ ತುಲಸೀ ಧಾತ್ರಿಗಳು ಪ್ರೀತಿಯಿಂದಲೇ ನೋಡಿದರು.

೫. ಹಿಂದೆ ಲಕ್ಷ್ಮಿಯು ಈರ್ಷ್ಯೆಯಿಂದಲೇ ಬೀಜವನ್ನು ಕೊಟ್ಟಿದ್ದರಿಂದ ಅದರಿಂದುದ್ಭವಿಸಿದ ನಾರಿಯು ಅವನಲ್ಲಿ ಈರ್ಷ್ಯೆಯುಳ್ಳವಳೇ ಆದಳು.

ಅತಃ ಸಾ ಬರ್ಬರೀತ್ಯಾಖ್ಯಾಮವಾಪಾಽಥ ವಿಗರ್ಹಿತಾಂ ।
ಧಾತ್ರೀತುಲಸ್ಯೌ ತದ್ರಾಗಾತ್ ತಸ್ಯ ಪ್ರೀತಿಪ್ರದೇ ಸದಾ ॥ ೬ ॥
ತತೋ ವಿಸ್ಮೃತದುಃಖೋಽಸೌ ವಿಷ್ಣುಸ್ತಾಭ್ಯಾಂ ಸಹೈವ ತು ।
ವೈಕುಂಠಮಗಮದ್ಧೃಷ್ಟಃ ಸರ್ವದೇವನಮಸ್ಕೃತಃ ॥ ೭ ॥
ಕಾರ್ತಿಕೋದ್ಯಾಪನೇ ವಿಷ್ಣೋಃ ತಸ್ಮಾತ್ಪೂಜಾ ವಿಧೀಯತೇ ।
ತುಲಸೀಮೂಲದೇಶೇಽಸ್ಯ ಪ್ರೀತಿದಾ ಸಾ ಯತಃ ಸ್ಮೃತಾ ॥ ೮ ॥
ತುಲಸೀಕಾನನಂ ರಾಜನ್ ಗೃಹೇ ಯಸ್ಯಾವತಿಷ್ಠತೇ ।
ತದ್ಗೃಹಂ ತೀರ್ಥರೂಪಂ ತು ನಾಽಽಯಾಂತಿ ಯಮಕಿಂಕರಾಃ ॥ ೯ ॥
ಸರ್ವಪಾಪಾಪಹಂ ನಿತ್ಯಂ ಕಾಮದಂ ತುಲಸೀವನಂ ।
ರೋಪಯಂತಿ ನರಾಃ ಶ್ರೇಷ್ಠಾಃ ತೇ ನ ಪಶ್ಯಂತಿ ಭಾಸ್ಕರಿಂ ॥ ೧೦ ॥
ದರ್ಶನಂ ನರ್ಮದಾಯಾಸ್ತು ಗಂಗಾಸ್ನಾನಂ ತಥೈವ ಚ ।
ತುಲಸೀವನಸಂಸರ್ಗಃ ಸಮಮೇವ ತ್ರಯಂ ಸ್ಮೃತಂ ॥ ೧೧ ॥
ರೋಪಣಾತ್ಪಾಲನಾತ್ಸೇಕಾತ್ ದರ್ಶನಾತ್ಸ್ಪರ್ಶನಾನ್ನೃಣಾಂ ।
ತುಲಸೀ ದಹತೇ ಪಾಪಂ ವಾಙ್ಮನಃಕಾಯಸಂಚಿತಂ ॥ ೧೨ ॥

---

೬. ಆದುದರಿಂದ ಅವಳು ಬರ್ಬರೀ ಎಂಬ ನಿಂದ್ಯವಾದ ಹೆಸರನ್ನು ಪಡೆದಳು. ಧಾತ್ರಿಯೂ ತುಲಸಿಯೂ ಅವನಲ್ಲಿ ಪ್ರೀತಿಯಿಟ್ಟಿದ್ದರಿಂದ ಸದಾ ಅವನಿಗೆ ಪ್ರೀತಿಪ್ರದೆಯರಾದರು.

೭. ಬಳಿಕ ವಿಷ್ಣುವು ದುಃಖವನ್ನು ಮರೆತು ಅವರಿಬ್ಬರೊಡಗೂಡಿ ಹರ್ಷಗೊಂಡು ಸರ್ವದೇವತೆಗಳಿಂದಲೂ ನಮಸ್ಕೃತನಾಗಿ ವೈಕುಂಠಕ್ಕೆ ಹೋದನು.

೮. ವಿಷ್ಣುವಿಗೆ ಪ್ರೀತಿಯುಂಟುಮಾಡುವುದು ತುಲಸಿಯಾದ್ದರಿಂದ ಕಾರ್ತಿಕವ್ರತದ ಉದ್ಯಾಪನೆಯಲ್ಲಿ ವಿಷ್ಣುವಿಗೆ ತುಲಸಿಯ ಭೂಪ್ರದೇಶದಲ್ಲಿ ಪೂಜೆ ಮಾಡಬೇಕೆಂದು ವಿಧಿಸಲಾಗಿದೆ.

೯. ರಾಜಾ! ಯಾವನ ಮನೆಯಲ್ಲಿ ತುಲಸೀವನವಿರುವುದೋ ಅವನ ಮನೆಯು ತೀರ್ಥಸ್ವರೂಪವಾದುದು. ಅಲ್ಲಿಗೆ ಯಮದೂತರು ಬರುವುದಿಲ್ಲ.

೧೦. ಸರ್ವಪಾಪಪರಿಹಾರಕವೂ ಇಷ್ಟಾರ್ಥದಾಯಕವೂ ಆದ ತುಲಸೀವನವನ್ನು ನಿತ್ಯವೂ ಯಾವ ನರರು ನೆಡುತ್ತಾರೋ ಅವರೇ ಶ್ರೇಷ್ಠರು. ಅವರು ಯಮನನ್ನು ಕಾಣುವುದೇ ಇಲ್ಲ.

೧೧. ನರ್ಮದೆಯ ದರ್ಶನ, ಗಂಗಾಸ್ನಾನ, ತುಲಸೀವನ ಸಂಗ—ಇವು ಮೂರು ಸಮವೆಂದು ಭಾವಿಸಲ್ಪಟ್ಟಿವೆ.

೧೨. ನೆಡುವುದರಿಂದ, ಕಾಪಾಡುವುದರಿಂದ, ನೀರೆರೆಯುವುದರಿಂದ, ದರ್ಶನದಿಂದ ಮತ್ತು ಸ್ಪರ್ಶನದಿಂದ ತುಲಸಿಯು ನರರ ಮಾತು, ಮನಸ್ಸು ಮತ್ತು ಶರೀರಗಳಿಂದುಂಟಾಗುವ ಪಾಪಗಳನ್ನೆಲ್ಲ ದಹಿಸಿಬಿಡುತ್ತದೆ.

ತುಲಸೀಮಂಜರೀಭಿರ್ಯಃ ಕುರ್ಯಾದ್ಧರಿಹರಾರ್ಚನಂ ।
ನ ಸ ಗರ್ಭಗೃಹಂ ಯಾತಿ ಮುಕ್ತಿಭಾಗೀ ನ ಸಂಶಯಃ ॥ ೧೩ ॥
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ವಾಸುದೇವಾದಯೋ ದೇವಾಃ ತಿಷ್ಠಂತಿ ತುಲಸೀದಲೇ ॥ ೧೪ ॥
ತುಲಸೀಮಂಜರೀಯುಕ್ತೋ ಯಸ್ತು ಪ್ರಾಣಾನ್ವಿಮುಂಚತಿ ।
ಯಮೋಽಪಿ ನೇಕ್ಷಿತುಂ ಶಕ್ತೋ ಯುಕ್ತಂ ಪಾಪಶತೈರಪಿ ॥ ೧೫ ॥
ವಿಷ್ಣೋಃ ಸಾಯುಜ್ಯಮಾಪ್ನೋತಿ ಸತ್ಯಂ ಸತ್ಯಂ ನೃಪೋತ್ತಮ ।
ತುಲಸೀಕಾಷ್ಠಜಂ ಯಸ್ತು ಚಂದನಂ ಧಾರಯೇನ್ನರಃ ॥ ೧೬ ॥
ತದ್ದೇಹಂ ನ ಸ್ಪೃಶೇತ್ಪಾಪಂ ಕ್ರಿಯಮಾಣಮಪೀಹ ಯತ್ ।
ತುಲಸೀವಿಪಿನಚ್ಛಾಯಾ ಯತ್ರ ಯತ್ರ ಭವೇನ್ನೃಪ ॥ ೧೭ ॥
ತತ್ರ ಶ್ರಾದ್ಧಂ ಪ್ರಕರ್ತವ್ಯಂ ಪಿತೄಣಾಂ ದತ್ತಮಕ್ಷಯಂ ।
ಧಾತ್ರೀಫಲವಿಮಿಶ್ರೈಶ್ಚ ತುಲಸೀಪತ್ರಮಿಶ್ರಿತೈಃ ॥ ೧೮ ॥
ಜಲೈಃ ಸ್ನಾತಿ ನರಸ್ತಸ್ಯ ಗಂಗಾಸ್ನಾನಫಲಂ ಸ್ಮೃತಂ ।
ದೇವಾರ್ಚನಂ ನರಃ ಕುರ್ಯಾತ್ ಧಾತ್ರೀಪತ್ರೈಃ ಫಲೈಸ್ತಥಾ ॥ ೧೯ ॥

---

೧೩. ತುಲಸಿಯ ದಳಗಳಿಂದ ಯಾವನು ಹರಿಹರರಿಗೆ ಅರ್ಚನೆಮಾಡುತ್ತಾನೋ ಅವನು ಗರ್ಭವೆಂಬ ಗೃಹಕ್ಕೆ ಮತ್ತೆ ಪ್ರವೇಶಿಸುವುದಿಲ್ಲ. ಮುಕ್ತಿಭಾಗಿಯಾಗುತ್ತಾನೆ. ಸಂಶಯವಿಲ್ಲ.

೧೪–೧೫. ಪುಷ್ಕರಾದಿ ತೀರ್ಥಗಳೂ, ಗಂಗಾದಿ ನದಿಗಳೂ, ವಾಸುದೇವಾದಿ ದೇವತೆಗಳೂ ತುಲಸೀದಲದಲ್ಲಿ ನೆಲಸಿರುವರು. ಯಾವನು ತುಲಸಿಯ ದಳವನ್ನು ಧರಿಸಿ ಪ್ರಾಣಬಿಡುವನೋ ಅವನು ನೂರಾರು ಪಾಪಗಳನ್ನು ಮಾಡಿದವನಾದರೂ ಅವನನ್ನು ಯಮನು ಕೂಡ ನೋಡಲು ಶಕ್ತನಾಗುವುದಿಲ್ಲ.

೧೬. ತುಲಸೀಕಾಷ್ಠದಿಂದಾದ ಚಂದನವನ್ನು ಯಾವ ನರನು ಧರಿಸುತ್ತಾನೋ ಅವನು ವಿಷ್ಣುವಿನ ಸಾಯುಜ್ಯವನ್ನು ಪಡೆಯುತ್ತಾನೆ. ನೃಪೋತ್ತಮನೇ! ಇದು ಸತ್ಯ, ಇದು ಸತ್ಯ.

೧೭. ತುಲಸೀಚಂದನವನ್ನು ಧರಿಸಿದ ಆ ದೇಹಕ್ಕೆ ಎಂತಹ ಪಾಪವನ್ನೇ ಮಾಡುತ್ತಿದ್ದರೂ ಆ ಪಾಪದ ಸ್ಪರ್ಶವಾಗುವುದಿಲ್ಲ. ಎಲೈ ನೃಪನೇ! ತುಲಸೀ ಛಾಯೆಯು ಎಲ್ಲೆಲ್ಲಿರುವುದೋ ಅಲ್ಲಿ ಪಿತೃಗಳಿಗೆ ಶ್ರಾದ್ಧಮಾಡತಕ್ಕುದು. ಅಲ್ಲಿ ಪಿತೃಗಳಿಗೆ ಕೊಟ್ಟದ್ದು ಅಕ್ಷಯವಾಗುವುದು.

೧೮–೨೨. ಧಾತ್ರೀಫಲಗಳಿಂದಲೂ ತುಲಸೀಪತ್ರಗಳಿಂದಲೂ ಮಿಶ್ರವಾದ ಜಲಗಳಿಂದ ಯಾವನು ಸ್ನಾನವನ್ನು ಮಾಡುವನೋ ಆ ನರನಿಗೆ ಗಂಗಾಸ್ನಾನದ ಫಲವೆಂದು ತಿಳಿಯುವುದು. ಯಾವ ನರನು ಧಾತ್ರೀಪತ್ರಗಳಿಂದಲೂ ಧಾತ್ರೀ

ಸುವರ್ಣಮಣಿಮುಕ್ತಾಢ್ಯೈಃ ಅರ್ಚನಸ್ಯಾಪ್ನುಯಾತ್ಫಲಂ ।
ತೀರ್ಥಾನಿ ಮುನಯೋ ದೇವಾ ಯಜ್ಞಾಃ ಸರ್ವೇಽಪಿ ಕಾರ್ತಿಕೇ ॥ ೨೦ ॥
ನಿತ್ಯಂ ಧಾತ್ರೀಂ ಸಮಾಶ್ರಿತ್ಯ ತಿಷ್ಠಂತ್ಯರ್ಕೇ ತುಲಾಸ್ಥಿತೇ ।
ದ್ವಾದಶ್ಯಾಂ ತುಲಸೀಪತ್ರಂ ಧಾತ್ರೀಪತ್ರಂ ತು ಕಾರ್ತಿಕೇ ॥ ೨೧ ॥
ಲುನಾತಿ ಸ ನರೋ ಗಚ್ಛೇತ್ ನಿರಯಾನತಿಗರ್ಹಿತಾನ್ ।
ಧಾತ್ರೀತುಲಸ್ಯೋರ್ಮಾಹಾತ್ಮ್ಯಂ ಅಪಿ ದೇವಶ್ಚತುರ್ಮುಖಃ ।
ನ ಸಮರ್ಥೋ ಭವೇದ್ವಕ್ತುಂ ಯಥಾ ದೇವಸ್ಯ ಶಾರ್ಙ್ಗಿಣಃ ॥ ೨೨ ॥
ಧಾತ್ರೀತುಲಸ್ಯುದ್ಭವಕಾರಣಂ ಯಃ
ಶೃಣೋತಿ ಯಃ ಶ್ರಾವಯತೇ ಚ ಭಕ್ತ್ಯಾ ।
ವಿಧೂತಪಾಪ್ಮಾ ಸಹ ಪೂರ್ವಜೈಃ ಸ್ವೈಃ
ಸ್ವರ್ಗಂ ವ್ರಜತ್ಯಗ್ರ್ಯವಿಮಾನಸಂಸ್ಥಃ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಧಾತ್ರೀತುಲಸ್ಯುತ್ಪತ್ತಿವರ್ಣನಂ" ನಾಮ ತ್ರಯೋವಿಂಶೋಽಧ್ಯಾಯಃ

---

ಫಲಗಳಿಂದಲೂ ದೇವಾರ್ಚನೆ ಮಾಡುವನೋ ಅವನು ಸುವರ್ಣ, ಮಣಿ ಮತ್ತು ಮುತ್ತುಗಳಿಂದ ಪೂಜಿಸಿದ ಫಲವನ್ನು ಪಡೆಯುತ್ತಾನೆ. ತೀರ್ಥಗಳು, ಮುನಿಗಳು, ದೇವತೆಗಳು, ಯಜ್ಞಗಳು— ಇವೆಲ್ಲವೂ ಕಾರ್ತಿಕದಲ್ಲಿ ಸೂರ್ಯನು ತುಲಾರಾಶಿಯಲ್ಲಿರುವಾಗ ನಿತ್ಯವೂ ಧಾತ್ರಿಯನ್ನಾಶ್ರಯಿಸಿ ನೆಲಸಿರುತ್ತವೆ. ಕಾರ್ತಿಕಮಾಸದಲ್ಲಿ ದ್ವಾದಶೀದಿನ ತುಲಸೀಪತ್ರವನ್ನೂ ಧಾತ್ರೀಪತ್ರವನ್ನೂ ಯಾವ ನರನು ಕೊಯ್ಯುತ್ತಾನೋ ಅವನು ಅತಿಗರ್ಹಿತಗಳಾದ ನರಕಗಳಿಗೆ ಹೋಗುತ್ತಾನೆ. ಶಾರ್ಙ್ಗಪಾಣಿಯಾದ ದೇವನ ಮಹಿಮೆಯಂತೆಯೇ, ಧಾತ್ರೀತುಲಸಿಗಳ ಮಾಹಾತ್ಮ್ಯವನ್ನು ಕೂಡ ವರ್ಣಿಸಲು ಚತುರ್ಮುಖನಾದ ಬ್ರಹ್ಮದೇವನೂ ಸಮರ್ಥನಲ್ಲ.

೨೩. ಧಾತ್ರೀತುಲಸಿಗಳ ಉದ್ಭವದ ಕಾರಣವನ್ನು ಯಾವನು ಭಕ್ತಿಯಿಂದ ಕೇಳುತ್ತಾನೋ, ಕೇಳಿಸುತ್ತಾನೋ ಅವನ ಪಾಪಗಳೆಲ್ಲ ಪರಿಹಾರವಾಗಿ ಶ್ರೇಷ್ಠವಿಮಾನಗಳನ್ನೇರಿದ ತನ್ನ ಪೂರ್ವಜರಿಂದೊಡಗೂಡಿ ಸ್ವರ್ಗಕ್ಕೆ ಹೋಗಿ ಸೇರುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸ ಮಾಹಾತ್ಮ್ಯದಲ್ಲಿ "ಧಾತ್ರೀತುಲಸ್ಯುತ್ಪತ್ತಿವರ್ಣನ"ವೆಂಬ ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

### ಧರ್ಮದತ್ತೇತಿಹಾಸಕಥನಂ

ಪೃಥುರುವಾಚ :—

ಯದೂರ್ಜವ್ರತಿನಃ ಪುಂಸಃ ಫಲಂ ಮಹದುದಾಹೃತಂ ।
ತತ್ಪುನರ್ಬ್ರೂಹಿ ಮಾಹಾತ್ಮ್ಯಂ ಕೇನ ಚೀರ್ಣಮಿದಂ ಶುಭಂ ॥ ೧ ॥

ನಾರದ ಉವಾಚ :—

ಆಸೀತ್ಸಹ್ಯಾದ್ರಿವಿಷಯೇ ಕರವೀರಪುರೇ ಪುರಾ ।
ಬ್ರಾಹ್ಮಣೋ ಧರ್ಮವಿತ್ಕಶ್ಚಿತ್ ಧರ್ಮದತ್ತೇತಿ ವಿಶ್ರುತಃ ॥ ೨ ॥
ವಿಷ್ಣುವ್ರತಕರಃ ಸಮ್ಯಕ್ ವಿಷ್ಣುಪೂಜಾರತಃ ಸದಾ ।
ಕದಾಚಿತ್ಕಾರ್ತಿಕೇ ಮಾಸಿ ಹರಿಜಾಗರಣಾಯ ಸಃ ॥ ೩ ॥
ರಾತ್ರ್ಯಾಂ ತುರ್ಯಾವಶೇಷಾಯಾಂ ಜಗಾಮ ಹರಿಮಂದಿರಂ ।
ಹರಿಪೂಜೋಪಕರಣಾನ್ ಪ್ರಗೃಹ್ಯ ವ್ರಜತಾ ತದಾ ॥ ೪ ॥
ತೇನ ದೃಷ್ಟ್ವಾ ಸಮಾಯಾತಾ ರಾಕ್ಷಸೀ ಭೀಮದರ್ಶನಾ ।
ತಾಂ ದೃಷ್ಟ್ವಾ ಭಯವಿತ್ರಸ್ತಃ ಕಂಪಿತಾವಯವಸ್ತದಾ ॥ ೫ ॥

---

### ಕನ್ನಡದ ಅನುವಾದ

#### ಧರ್ಮದತ್ತನ ಇತಿಹಾಸವು

೧. ಪೃಥುವು ನಾರದನನ್ನು ಕುರಿತು "ಕಾರ್ತಿಕವ್ರತವನ್ನು ಮಾಡುವ ಪುರುಷನಿಗೆ ಮಹತ್ಫಲವುಂಟಾಗುವುದೆಂದು ತಿಳಿಸಿದಿರಲ್ಲಾ; ಆ ಮಹಾತ್ಮ್ಯವನ್ನು ಮತ್ತೆ ಹೇಳಬೇಕು. ಈ ಶುಭ ವ್ರತವನ್ನು ಯಾರು ಮಾಡಿದರು?" ಎಂದು ಪ್ರಶ್ನೆಮಾಡಿದನು.

೨. ಪೃಥುವಿನ ಪ್ರಶ್ನೆಗೆ ನಾರದನು ಇಂತು ಮರುನುಡಿದನು. ಪೂರ್ವದಲ್ಲಿ ಸಹ್ಯಾದ್ರಿವಿಷಯದಲ್ಲಿನ ಕರವೀರಪುರದಲ್ಲಿ ಧರ್ಮದತ್ತನೆಂದು ಹೆಸರಾದ ಧರ್ಮಜ್ಞನಾದ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು.

೩–೪. ಅವನು ವಿಷ್ಣುವ್ರತಗಳನ್ನಾಚರಿಸುತ್ತಿದ್ದನು. ಸದಾ ಚೆನ್ನಾಗಿ ವಿಷ್ಣುಪೂಜೆಯನ್ನು ಮಾಡುವುದರಲ್ಲೇ ಆಸಕ್ತನಾಗಿದ್ದನು. ಯಾವುದೋ ಒಂದು ಸಲ ಕಾರ್ತಿಕಮಾಸದಲ್ಲಿ ಹರಿಜಾಗರಣೆಗಾಗಿ ಅವನು ರಾತ್ರಿಯಲ್ಲಿ ನಾಲ್ಕನೆಯ ಯಾಮವು ಉಳಿದಿರುವಾಗ ಹರಿಪೂಜೆಯ ಉಪಕರಣಗಳನ್ನು ತೆಗೆದುಕೊಂಡು ಹರಿಮಂದಿರಕ್ಕೆ ಹೋದನು.

೫. ಹಾಗೆ ಹೋಗುತ್ತಾ ಇರಲು ಅಲ್ಲಿ ಬಂದಿದ್ದ ನೋಟಕ್ಕೆ ಭಯಂಕರಳಾದ

ಪೂಜೋಪಕರಣೈಃ ಸರ್ವೈಃ ಪಯೋಭಿಶ್ಚಾಹನದ್ಭಯಾತ್ ।
ಸಂಸ್ಮೃತ್ಯ ತದ್ಧರೇರ್ನಾಮ ತುಲಸೀಯುಕ್ತವಾರಿಣಾ ।
ತೇನ ವೈ ಹತಮಾತ್ರೇ ತು ಪಾಪಂ ತಸ್ಯಾ ಹ್ಯಗಾಲ್ಲಯಂ ॥ ೬ ॥
ಅಥ ಸಂಸ್ಮೃತ್ಯ ಸಾ ಪೂರ್ವಜನ್ಮಕರ್ಮವಿಪಾಕಜಾಂ ।
ಸ್ವಾಂ ದಶಾಮಾಬ್ರವೀದ್ವಿಪ್ರಂ ದಂಡವಚ್ಚ ಪ್ರಣಮ್ಯ ವೈ ॥ ೭ ॥

ಕಲಹೋವಾಚ :—

ಪೂರ್ವಕರ್ಮವಿಪಾಕೇನ ದಶಾಮೇತಾಂ ಗತಾಸ್ಮ್ಯಹಂ ।
ತತ್ಕಥಂ ನು ಪುನರ್ವಿಪ್ರ ಪ್ರಯಾಸ್ಯಾಮ್ಯುತ್ತಮಾಂ ಗತಿಂ ॥ ೮ ॥

ನಾರದ ಉವಾಚ :—

ತಾಂ ದೃಷ್ಟ್ವಾ ಪ್ರಣತಾಂ ಸಮ್ಯಕ್ ವದಮಾನಾಂ ಸ್ವಕರ್ಮ ತತ್ ।
ಅತೀವ ವಿಸ್ಮಿತೋ ವಿಪ್ರಃ ತದಾ ವಚನಮಬ್ರವೀತ್ ॥ ೯ ॥

ಧರ್ಮದತ್ತ ಉವಾಚ :—

ಕೇನ ಕರ್ಮವಿಪಾಕೇನ ತ್ವಂ ದಶಾಮೀದೃಶೀಂ ಗತಾ ।
ಕುತ್ರತ್ಯಾ ಕಾ ಚ ಕಿಂಶೀಲಾ ತತ್ಸರ್ವಂ ಕಥಯಸ್ವ ಮೇ ॥ ೧೦ ॥

---

ಒಬ್ಬ ರಾಕ್ಷಸಿಯು ಅವನಿಗೆ ಕಾಣಿಸಿದಳು. ಅವಳನ್ನು ಕಂಡು ಭಯದಿಂದ ಅವನ ಅವಯವಗಳು ನಡುಗತೊಡಗಿದವು.

೬–೭. ಹೆದರಿ ಎಲ್ಲ ಪೂಜೋಪಕರಣಗಳಿಂದಲೂ ನೀರು ಹಾಲುಗಳಿಂದಲೂ ಅವಳನ್ನು ಹೊಡೆದನು. ಹರಿನಾಮವನ್ನು ಸ್ಮರಿಸಿ ತುಲಸೀದಳವು ಸೇರಿದ್ದ ನೀರಿನಿಂದ ಅವಳನ್ನು ಹೊಡೆದನು. ಅದರಿಂದ ಹೊಡೆದ ಮಾತ್ರದಿಂದಲೇ ಅವಳ ಪಾಪವು ಲಯವಾಗಿಹೋಯಿತು. ಆಗ ಅವಳು ತನ್ನ ಪೂರ್ವಜನ್ಮದ ಕರ್ಮಗಳ ವಿಪಾಕದಿಂದ ತನಗೆ ಆ ಅವಸ್ಥೆಯು ಬಂದಿತೆಂಬುದನ್ನು ಸ್ಮರಿಸಿ, ಆ ಬ್ರಾಹ್ಮಣನಿಗೆ ದಂಡಪ್ರಣಾಮವನ್ನು ಮಾಡಿ ಬಿನ್ನವಿಸಿದಳು.

೮. ಕಲಹೆಯು "ಪೂರ್ವಕರ್ಮಗಳ ವಿಪಾಕದಿಂದ ನಾನು ಈ ದಶೆಯನ್ನು ಪಡೆದೆನು. ಎಲೈ ವಿಪ್ರನೇ! ಆದ್ದರಿಂದ ನಾನು ಮತ್ತೆ ಉತ್ತಮಗತಿಯನ್ನು ಹೊಂದುವುದು ಹೇಗೆ?" ಎಂದು ಕೇಳಿಕೊಂಡಳು.

೯. ನಾರದನಿಂತು ಮುಂದುವರಿಸಿದನು. ಪ್ರಣಾಮವನ್ನು ಮಾಡಿ ತನ್ನ ಕರ್ಮವನ್ನು ಹೇಳಿಕೊಳ್ಳುತ್ತಿದ್ದ ಅವಳನ್ನು ಕಂಡು ಆ ವಿಪ್ರನು ಅತಿವಿಸ್ಮಿತನಾಗಿ ಅವಳನ್ನು ಕುರಿತು ಮಾತನಾಡಿದನು.

೧೦. ಧರ್ಮದತ್ತನಿಂತೆಂದನು :—"ಯಾವ ಕರ್ಮವಿಪಾಕದಿಂದ ನೀನು ಈ ಗತಿಗೆ ಬಂದೆ? ನೀನು ಯಾರು? ಎಲ್ಲಿಯವಳು? ನಿನ್ನ ಶೀಲವೇನು? ಅದನ್ನೆಲ್ಲ ನನಗೆ ತಿಳಿಸು."

ಕಲಹೋವಾಚ :—

ಸೌರಾಷ್ಟ್ರನಗರೇ ಬ್ರಹ್ಮನ್ ಭಿಕ್ಷುರ್ನಾಮಾಭವದ್ದ್ವಿಜಃ ।
ತಸ್ಯಾಹಂ ಗೃಹಿಣೀ ಪೂರ್ವಂ ಕಲಹಾಖ್ಯಾಽತಿನಿಷ್ಠುರಾ ॥ ೧೧ ॥
ನ ಕದಾಚಿನ್ಮಯಾ ಭರ್ತುಃ ವಚಸಾಽಪಿ ಶುಭಂ ಕೃತಂ ।
ನಾರ್ಪಿತಂ ತಸ್ಯ ಮಿಷ್ಟಾನ್ನಂ ಭರ್ತುರ್ವಚನಶೀಲಯಾ ॥ ೧೨ ॥
ಕಲಹಪ್ರಿಯಯಾ ನಿತ್ಯಂ ಮಯೋದ್ವಿಗ್ನಮನಾ ಯದಾ ।
ಪರಿಣೇತುಂ ಯದಾನ್ಯಾಂ ಸ ಮತಿಂ ಚಕ್ರೇ ಪತಿರ್ಮಮ ॥ ೧೩ ॥
ತತೋ ಗರಂ ಸಮಾದಾಯ ಪ್ರಾಣಾಸ್ತ್ಯಕ್ತಾ ಮಯಾ ದ್ವಿಜ ।
ಅಥ ಬದ್ಧ್ವಾ ವಧ್ಯಮಾನಾಂ ಮಾಂ ನಿನ್ಯುರ್ಯಮಕಿಂಕರಾಃ ॥ ೧೪ ॥
ಯಮಶ್ಚ ಮಾಂ ತದಾ ದೃಷ್ಟ್ವಾ ಚಿತ್ರಗುಪ್ತಮಪೃಚ್ಛತ ॥ ೧೫ ॥

ಯಮ ಉವಾಚ :—

ಅನಯಾ ಕಿಂ ಕೃತಂ ಕರ್ಮ ಚಿತ್ರಗುಪ್ತ ವಿಲೋಕಯ ।
ಪ್ರಾಪ್ನೋತ್ವೇಷಾ ಚ ತತ್ಕರ್ಮ ಶುಭಂ ವಾ ಯದಿ ವಾಽಶುಭಂ ॥ ೧೬ ॥

ಕಲಹೋವಾಚ :—

ಚಿತ್ರಗುಪ್ತಸ್ತದಾ ವಾಕ್ಯಂ ಭರ್ತ್ಸಯನ್ಮಾಮುವಾಚ ಸಃ ।

ಚಿತ್ರಗುಪ್ತ ಉವಾಚ :—

ಅನಯಾ ತು ಕೃತಂ ಕರ್ಮ ಶುಭಂ ಕಿಂಚಿನ್ನ ವಿದ್ಯತೇ ॥ ೧೭ ॥

---

೧೧. ಆದಕ್ಕೆ ಕಲಹೆಯು ಇಂತು ಉತ್ತರವನ್ನು ಹೇಳಿದಳು:—"ಅಯ್ಯಾ ಬ್ರಾಹ್ಮಣಾ! ಪೂರ್ವದಲ್ಲಿ ಸೌರಾಷ್ಟ್ರನಗರದಲ್ಲಿ ಭಿಕ್ಷುವೆಂಬ ಬ್ರಾಹ್ಮಣನಿದ್ದನು. ನಾನು ಅವನಿಗೆ ಗೃಹಿಣಿಯು. ನನಗೆ ಕಲಹೆಯೆಂದು ಹೆಸರು. ನಾನು ಅತಿ ನಿಷ್ಠುರೆಯಾಗಿದ್ದೆನು.

೧೨–೧೫. ಎಂದೂ ನಾನು ಗಂಡನಿಗೆ ಮಾತಿನಲ್ಲಿ ಕೂಡ ಶುಭವನ್ನು ಮಾಡಲಿಲ್ಲ. ಗಂಡನ ಮಾತು ಕೇಳುವವಳಾಗಿ ಅವನಿಗೆ ಒಂದು ಸಲವೂ ಮೃಷ್ಟಾನ್ನವನ್ನು ನೀಡಲಿಲ್ಲ. ಕಲಹಪ್ರಿಯೆಯಾದ ನನ್ನಿಂದ ನಿತ್ಯವೂ ಉದ್ವಿಗ್ನವಾದ ಮನಸ್ಸುಳ್ಳವನಾಗಿ ಆ ನನ್ನ ಪತಿಯು ಮತ್ತೊಬ್ಬಳನ್ನು ಪರಿಣಯಮಾಡಿಕೊಳ್ಳಲು ಮನಸ್ಸು ಮಾಡಿದನು. ಆಗ ನಾನು ವಿಷವನ್ನು ತೆಗೆದುಕೊಂಡು ಪ್ರಾಣಬಿಟ್ಟೆನು. ಎಲೈ ದ್ವಿಜನೇ! ಬಳಿಕ ಯಮಕಿಂಕರರು ನನ್ನನ್ನು ಬಂಧಿಸಿ ಪೀಡಿಸುತ್ತಾ ತೆಗೆದುಕೊಂಡು ಹೋದರು. ಯಮನು ನನ್ನನ್ನು ಕಂಡು ಚಿತ್ರಗುಪ್ತನನ್ನು ಪ್ರಶ್ನೆಮಾಡಿದನು.

೧೬. ಯಮನು 'ಚಿತ್ರಗುಪ್ತಾ! ಇವಳು ಏನು ಕರ್ಮವನ್ನು ಮಾಡಿದ್ದಾಳೆ, ನೋಡು. ಅದು ಶುಭವೋ ಅಶುಭವೋ ಅದರ ಫಲವನ್ನು ಇವಳು ಪಡೆಯುತ್ತಾಳೆ' ಎಂದನು.

೧೭. ಕಲಹೆಯು ಮತ್ತು ಹೀಗೆ ಮುಂದುವರಿಸಿದಳು. ಚಿತ್ರಗುಪ್ತನು

ಮಿಷ್ಟಾನ್ನಂ ಭುಂಜಮಾನೇಯಂ ನ ಭರ್ತರಿ ತದರ್ಪಿತಂ ।
ಅತಶ್ಚ ವಲ್ಗುಲೀಯೋನ್ಯಾಂ ಸ್ವವಿಷ್ಠಾದಾಽವತಿಷ್ಠತು ॥ ೧೮ ॥
ಭರ್ತುರ್ದ್ವೇಷಾತ್ತದಾಪ್ಯೇಷಾ ನಿತ್ಯಂ ಕಲಹಕಾರಿಣೀ ।
ವಿಷ್ಠಾದಾಂ ಸೂಕರೀಂ ಯೋನಿಂ ತಸ್ಮಾತ್ತಿಷ್ಠತ್ವಿಯಂ ಹರೇ ॥ ೧೯ ॥
ಪಾಕಭಾಂಡೇ ಸದಾ ಭುಂಕ್ತೇ ಭುಂಕ್ತೇ ಚೈಕಾ ಯತಸ್ತತಃ ।
ತಸ್ಮಾದೇಷಾ ಬಿಡಾಲ್ಯಸ್ತು ಸ್ವಜಾತಾಪತ್ಯಭಕ್ಷಿಣೀ ॥ ೨೦ ॥
ಭರ್ತಾರಮನುಪಿಚೋದ್ದಿಶ್ಯ ಹ್ಯಾತ್ಮಘಾತಃ ಕೃತೋಽನಯಾ ।
ತಸ್ಮಾತ್ಪ್ರೇತಶರೀರೇಽಪಿ ತಿಷ್ಠತ್ವೇಕಾಽತಿನಿಂದಿತಾ ॥ ೨೧ ॥
ಅತಶ್ಚೈಷಾ ಮರುದ್ದೇಶಂ ಪ್ರಾಪಿತವ್ಯಾ ಭಟೈರಿಯಂ ।
ತತ್ರ ಪ್ರೇತಶರೀರಸ್ಥಾ ಚಿರಂ ತಿಷ್ಠತ್ವಿಯಂ ತತಃ ॥ ೨೨ ॥
ಊರ್ಧ್ವಂ ಯೋನಿತ್ರಯಂ ಚೈಷಾ ಭುನಕ್ತ್ವಶುಭಕಾರಿಣೀ ॥ ೨೩ ॥

ಕಲಹೋವಾಚ :—

ಸಾಹಂ ಪಂಚಶತಾಬ್ದಾನಿ ಪ್ರೇತದೇಹೇ ಸ್ಥಿತಾ ಕಿಲ ।
ಕ್ಷುತ್ತೃಡ್ಭ್ಯಾಂ ಪೀಡಿತಾವಿಶ್ಯ ಶರೀರಂ ವಣಿಜಸ್ಯ ಚ ।
ಆಯಾತಾ ದಕ್ಷಿಣಂ ದೇಶಂ ಕೃಷ್ಣಾವೇಣ್ಯೋಶ್ಚ ಸಂಗಮಂ ॥ ೨೪ ॥

---

ನನ್ನನ್ನು ಬೆದರಿಸುತ್ತಾ ಈ ಮಾತು ನುಡಿದನು. ಚಿತ್ರಗುಪ್ತನಿಂತೆಂದನು :— 'ಇವಳು ಮಾಡಿದ ಶುಭ ಕರ್ಮವು ಒಂದು ಸ್ವಲ್ಪವೂ ಇಲ್ಲ.

೧೮. ಇವಳು ತಾನು ಮೃಷ್ಟಾನ್ನವನ್ನು ತಿನ್ನುತ್ತಾ ಅದನ್ನು ಗಂಡನಿಗೆ ಕೊಡಲಿಲ್ಲ. ಅದರಿಂದ ವಲ್ಗುಲೀ ಜನ್ಮದಲ್ಲಿ ಬಂದು ತನ್ನ ಮಲವನ್ನೇ ತಿನ್ನತಕ್ಕವಳಾಗಲಿ.

೧೯–೨೦. ಎಲೈ ಹರಿಯೇ! ಇವಳು ಗಂಡನಲ್ಲಿ ದ್ವೇಷವುಳ್ಳವಳಾಗಿ ನಿತ್ಯವೂ ಕಲಹಮಾಡುತ್ತಿದ್ದಳಾದ್ದರಿಂದ ಮಲವನ್ನು ತಿನ್ನುವ ಹಂದಿಯ ಜನ್ಮದಲ್ಲಿ ಹುಟ್ಟಲಿ. ಇವಳು ಅಡಿಗೆಯ ಪಾತ್ರೆಯಲ್ಲೇ ಸದಾ ತಿನ್ನುವವಳೂ, ಒಂಟಿಯಾಗಿ ಊಟಮಾಡುವವಳೂ ಆಗಿದ್ದುದರಿಂದ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೇ ತಿನ್ನುವ ಬೆಕ್ಕಾಗಿ ಹುಟ್ಟಲಿ.

೨೧–೨೩. ಗಂಡನನ್ನುದ್ದೇಶಿಸಿ ಇವಳು ಆತ್ಮಹತ್ಯವನ್ನು ಮಾಡಿಕೊಂಡಳು. ಆದ್ದರಿಂದ ಇವಳು ಪ್ರೇತಶರೀರದಲ್ಲಿಕೂಡ ಅತಿನಿಂದಿತಳಾಗಿ ಏಕಾಕಿನಿಯಾಗಿರಲಿ. ಆದ್ದರಿಂದ ಇವಳನ್ನು ಭಟರ ಮೂಲಕ ಮರಳುಕಾಡಿಗೆ ಕಳಿಸಿಬಿಡಬೇಕು. ಅಲ್ಲಿ ಪ್ರೇತಶರೀರದಲ್ಲಿ ನೆಲಸಿ ಚಿರಕಾಲ ಇರಲಿ. ಆ ಬಳಿಕ ಈ ಅಶುಭಕಾರಿಣಿಯು ಮೇಲಿನ ಮೂರು ಜನ್ಮಗಳನ್ನೂ ಅನುಭವಿಸಲಿ' ಎಂದನು.

೨೪. ಕಲಹೆಯಿಂತೆಂದಳು :—ಆ ನಾನು ಐನೂರು ವರ್ಷಗಳವರೆಗೆ ಪ್ರೇತ

ತತ್ತೀರಂ ಸಂಶ್ರಿತಾ ಯಾವತ್ ತಾವತ್ತಸ್ಯ ಶರೀರತಃ ।
ಶಿವವಿಷ್ಣುಗಣೈರ್ದೂರಂ ಅಪಕೃಷ್ಟಾ ಬಲಾದಹಂ ॥ ೨೫ ॥
ತತಃ ಕ್ಷುತ್‌ಕ್ಷಾಮಯಾ ದೃಷ್ಟೋ ಮಯಾ ಹಿ ತ್ವಂ ದ್ವಿಜೋತ್ತಮ ।
ತ್ವದ್ಧಸ್ತತುಲಸೀವಾರಿಸಂಸರ್ಗಗತಪಾಪಯಾ ॥ ೨೬ ॥
ತತ್ಕೃತ್ಯಂ ಕುರು ವಿಪ್ರೇಂದ್ರ ಕಥಂ ಮುಕ್ತಿಮಿಯಾಮ್ಯಹಂ ।
ಯೋನಿತ್ರಯಾದಗ್ರಭವಾತ್ ಅಸ್ಮಾಚ್ಚ ಪ್ರೇತದೇಹತಃ ॥ ೨೭ ॥
ಇತ್ಥಂ ವಿಚಿಂತ್ಯ ಕಲಹಾವಚನಂ ದ್ವಿಜಾಗ್ರ್ಯಃ
ತತ್ಕರ್ಮಪಾಕಭಯವಿಸ್ಮಯದುಃಖಯುಕ್ತಃ ।
ತದ್‌ಗ್ಲಾನಿದರ್ಶನಕೃಪಾಚ್ಚಲಚಿತ್ತವೃತ್ತಿಃ
ಧ್ಯಾತ್ವಾ ಚಿರಂ ಸ ವಚನಂ ನಿಜಗಾದ ದುಃಖಾತ್ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಧರ್ಮದತ್ತೇತಿಹಾಸ ಕಥನಂ" ನಾಮ ಚತುರ್ವಿಂಶೋऽಧ್ಯಾಯಃ

---

ಶರೀರದಲ್ಲಿದ್ದೆನು. ಹಸಿವು ಬಾಯಾರಿಕೆಗಳಿಂದ ಪೀಡಿತಳಾಗಿ ವರ್ತಕನೊಬ್ಬನ ಶರೀರದಲ್ಲಿ ಪ್ರವೇಶನ್ನು ಹೊಂದಿ ದಕ್ಷಿಣದೇಶದ ಕೃಷ್ಣಾವೇಣೀಸಂಗಮ ಪ್ರದೇಶಕ್ಕೆ ಬಂದೆನು.

೨೫. ಆ ತೀರವನ್ನು ಸೇರಿದೆನೊ ಇಲ್ಲವೋ ಅಷ್ಟರಲ್ಲೇ ಶಿವ ಮತ್ತು ವಿಷ್ಣುಗಣಗಳು ನನ್ನನ್ನು ಅವನ ಶರೀರದಿಂದ ಬಲಾತ್ಕಾರವಾಗಿ ಎಳೆದುತಂದು ದೂರಹಾಕಿಬಿಟ್ಟರು.

೨೬. ಎಲೈ ದ್ವಿಜೋತ್ತಮನೇ! ಆಗ ಹಸಿವಿನಿಂದ ಬಡವಾಗಿ ಸೊರಗಿದ್ದ ನಾನು ನಿನ್ನನ್ನು ಕಂಡೆನು. ನಿನ್ನ ಕೈಯಲ್ಲಿದ್ದ ತುಲಸೀಜಲದ ಸಂಪರ್ಕದಿಂದ ನನ್ನ ಪಾಪಗಳು ಪರಿಹಾರವಾದುವು.

೨೭. ಎಲೈ ವಿಪ್ರಶ್ರೇಷ್ಠನೇ! ಈ ಪ್ರೇತದೇಹದಿಂದಲೂ, ಮುಂದೆ ಬರುವ ಮೂರು ಜನ್ಮಗಳಿಂದಲೂ ನನಗೆ ಹೇಗೆ ಮುಕ್ತಿಯಾದೀತೋ ಅಂತಹ ಕೃತ್ಯವನ್ನು ನಡೆಸು."

೨೮. ಈ ರೀತಿ ನುಡಿದ ಕಲಹೆಯ ವಚನವನ್ನು ಕೇಳಿ ಚಿಂತಿಸಿ, ಆ ದ್ವಿಜಶ್ರೇಷ್ಠನು ಅವಳ ಕರ್ಮಪಾಕದಿಂದ ಭಯ ವಿಸ್ಮಯ ದುಃಖಗಳನ್ನನುಭವಿಸುವವನಾಗಿ ಅವಳ ಬಳಲಿಕೆಯನ್ನು ಕಂಡು ಕೃಪೆಯಿಂದ ಮನಸ್ಸುಮರುಗಿ ಬಹು ಹೊತ್ತು ಧ್ಯಾನಿಸಿ ದುಃಖದಿಂದ ಅವಳಿಗೆ ಈ ಮಾತು ಹೇಳಿದನು.

ಇಲ್ಲಿಗೆ ಎಂಬತ್ತೊಂಬತ್ತು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಧರ್ಮದತ್ತೇತಿಹಾಸಕಥನ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

### ಕಲಹಾಮೋಕ್ಷಕಥನಂ

ಧರ್ಮದತ್ತ ಉವಾಚ :—

ವಿಲಯಂ ಯಾಂತಿ ಪಾಪಾನಿ ತೀರ್ಥೇ ದಾನವ್ರತಾದಿಭಿಃ ।
ಪ್ರೇತದೇಹಸ್ಥಿತಾಯಾಸ್ತೇ ತೇಷು ನೈವಾಧಿಕಾರಿತಾ ॥ ೧ ॥
ತ್ವದ್ಗ್ಲಾನಿದರ್ಶನಾದಸ್ಮಾತ್ ಖಿನ್ನಂ ಚ ಮಮ ಮಾನಸಂ ।
ನ ವೈ ನಿರ್ವೃತಿಮಾಯಾತಿ ತ್ವಾಮನುದ್ಧೃತ್ಯ ದುಃಖಿತಾಂ ॥ ೨ ॥
ತಸ್ಮಾದಾಜನ್ಮಚರಿತಂ ಯನ್ಮಯಾ ಕಾರ್ತಿಕವ್ರತಂ ।
ತತ್ಪುಣ್ಯಸ್ಯಾರ್ಧಭಾಗೇನ ಸದ್ಗತಿಂ ತ್ವಮವಾಪ್ನುಹಿ ॥ ೩ ॥

ನಾರದ ಉವಾಚ :—

ಇತ್ಯುಕ್ತ್ವಾ ಧರ್ಮದತ್ತೋಽಸೌ ಯಾವತ್ತಾಮಭ್ಯಷೇಚಯತ್ ।
ತುಲಸೀಮಿಶ್ರತೋಯೇನ ಶ್ರಾವಯನ್ ದ್ವಾದಶಾಕ್ಷರಂ ॥ ೪ ॥
ತಾವತ್ಪ್ರೇತತ್ವನಿರ್ಮುಕ್ತಾ ಜ್ವಲದಗ್ನಿಶಿಖೋಪಮಾ ।
ದಿವ್ಯರೂಪಧರಾ ಜಾತಾ ಲಾವಣ್ಯೇನ ಯಥೇಂದಿರಾ ॥ ೫ ॥

---

### ಕನ್ನಡದ ಅನುವಾದ

#### ಕಲಹೆಯು ಮೋಕ್ಷವನ್ನು ಪಡೆದುದು

೧. ಧರ್ಮದತ್ತನಿಂತೆಂದನು :—"ತೀರ್ಥಗಳಲ್ಲಿ ದಾನ ವ್ರತಾದಿಗಳನ್ನು ಮಾಡುವುದರಿಂದ ಪಾಪಗಳು ನಾಶವಾಗುತ್ತವೆ. ಪ್ರೇತ ದೇಹದಲ್ಲಿರುವ ನಿನಗೆ ಅವುಗಳಲ್ಲಿ ಅಧಿಕಾರವಿಲ್ಲ.

೨. ನಿನ್ನ ಈ ಸಂಕಟವನ್ನು ಕಂಡು ನನ್ನ ಮನಸ್ಸು ಖಿನ್ನವಾಗಿದೆ. ದುಃಖಿತಳಾದ ನಿನ್ನನ್ನು ಉದ್ಧಾರಮಾಡಿದಲ್ಲದೆ ನನ್ನ ಮನಸ್ಸಿಗೆ ಸುಖವಾಗುವುದಿಲ್ಲ.

೩. ಆದುದರಿಂದ ನಾನು ಹುಟ್ಟಿದಂದಿನಿಂದ ಮಾಡಿರುವ ಕಾರ್ತಿಕವ್ರತದ ಯಾವ ಪುಣ್ಯವಾಗಿರುವುದೋ ಆ ಪುಣ್ಯದ ಅರ್ಧಭಾಗದಿಂದ ನೀನು ಸದ್ಗತಿಯನ್ನು ಹೊಂದು."

೪. ಬಳಿಕ ನಾರದನು ಹೀಗೆ ಹೇಳತೊಡಗಿದನು :—ಹೀಗೆಂದು ನುಡಿದು ಆ ಧರ್ಮದತ್ತನು ದ್ವಾದಶಾಕ್ಷರ ಮಂತ್ರವನ್ನು ಕೇಳಿಸುತ್ತಾ ತುಲಸೀಮಿಶ್ರಿತವಾದ ಜಲದಿಂದ ಅವಳಿಗೆ ಸ್ನಾನಮಾಡಿಸಿದನು.

೫. ಆ ಕ್ಷಣವೇ ಅವಳು ಪ್ರೇತತ್ವದಿಂದ ಬಿಡುಗಡೆಹೊಂದಿ ಜ್ವಲಿಸುತ್ತಿರುವ

ತತಃ ಸಾ ದಂಡವದ್ಭೂಮೌ ಪ್ರಣಾಮಾಥ ತಂ ದ್ವಿಜಂ ।
ಉವಾಚ ಸಾ ತದಾ ವಾಕ್ಯೈಃ ಹರ್ಷಗದ್ಗದಭಾಷಿಣೀ ॥ ೬ ॥

ಕಲಹೋವಾಚ :—

ತ್ವತ್ಪ್ರಸಾದಾದ್ದ್ವಿಜಶ್ರೇಷ್ಠ ವಿಮುಕ್ತಾ ನಿರಯಾದಹಂ ।
ಪಾಪಾಬ್ಧೌ ಮಜ್ಜಮಾನಾಯಾಃ ತ್ವಂ ನೌಭೂತೋಽಸಿ ಮೇ ಧ್ರುವಂ ॥ ೭ ॥

ನಾರದ ಉವಾಚ :—

ಇತ್ಥಂ ವದಂತೀ ಸಾ ವಿಪ್ರಂ ದದರ್ಶಾಽಽಯಾತಮಂಬರಾತ್ ।
ವಿಮಾನಂ ಭಾಸ್ವರಂ ಯುಕ್ತಂ ವಿಷ್ಣುರೂಪಧರೈರ್ಗಣೈಃ ॥ ೮ ॥
ಅಥ ಸಾ ತದ್ವಿಮಾನಾಗ್ರ್ಯಂ ದ್ವಾಃಸ್ಥಾಭ್ಯಾಮವರೋಪಿತಾ ।
ಪುಣ್ಯಶೀಲಸುಶೀಲಾಭ್ಯಾಂ ಅಪ್ಸರೋಗಣಸೇವಿತಾ ॥ ೯ ॥
ತದ್ವಿಮಾನಂ ತದಾಽಪಶ್ಯತ್ ಧರ್ಮದತ್ತಃ ಸವಿಸ್ಮಯಃ ।
ಪಪಾತ ದಂಡವತ್ ಭೂಮೌ ದೃಷ್ಟ್ವಾ ತೌ ವಿಷ್ಣುರೂಪಿಣೌ ॥ ೧೦ ॥

---

ಅಗ್ನಿ ಶಿಖೆಯಂತೆ ಹೊಳೆಯುವ ದಿವ್ಯರೂಪವನ್ನು ಧರಿಸಿ ಲಾವಣ್ಯದಲ್ಲಿ ಇಂದಿರೆಯಂತಾದಳು.

೬. ಬಳಿಕ ಅವಳು ಆ ದ್ವಿಜನಿಗೆ ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡಿದಳು. ಆಗ ಅವಳು ಹರ್ಷದಿಂದ ಗದ್ಗದ ಧ್ವನಿಯುಳ್ಳವಳಾಗಿ ಈ ಮಾತುಗಳನ್ನಾಡಿದಳು.

೭. ಕಲಹೆಯಿಂತೆಂದಳು :—"ಎಲೈ ದ್ವಿಜಶ್ರೇಷ್ಠಾ! ನಿನ್ನ ಅನುಗ್ರಹದಿಂದ ಈ ನಾನು ನರಕದಿಂದ ವಿಮೋಚನೆ ಹೊಂದಿದೆನು. ಪಾಪಸಮುದ್ರದಲ್ಲಿ ಮುಳುಗಿ ಹೋಗುತ್ತಿದ್ದ ನನಗೆ ನೀನು ನಿಜವಾಗಿಯೂ ನೌಕೆಯಾದೆ."

೮. ನಾರದನಿಂತೆಂದನು :—ವಿಪ್ರನನ್ನು ಕುರಿತು ಹೀಗೆ ನುಡಿಯುತ್ತಿದ್ದ ಆಕೆಯು ವಿಷ್ಣುರೂಪಧಾರಿಗಳಾದ ಗಣಗಳಿಂದ ಕೂಡಿ ಹೊಳೆಹೊಳೆಯುತ್ತ ಆಕಾಶದಿಂದಿಳಿದು ಬರುತ್ತಿದ್ದ ವಿಮಾನವನ್ನು ಕಂಡಳು.

೯. ಬಳಿಕ ಆಕೆಯನ್ನು ದ್ವಾರಪಾಲಕರಾದ ಪುಣ್ಯಶೀಲಸುಶೀಲರೆಂಬವರಿಬ್ಬರು ಆ ವಿಮಾನದ ಮೇಲಕ್ಕೆ ಹತ್ತಿಸಿದರು. ಅಪ್ಸರೆಯರ ಗಣವು ಆಕೆಯನ್ನು ಸೇವಿಸತೊಡಗಿತು.

೧೦. ಆಗ ಧರ್ಮದತ್ತನು ಆ ವಿಮಾನವನ್ನು ಕಂಡನು. ಕಂಡು ವಿಸ್ಮಿತನಾದನು. ವಿಷ್ಣುರೂಪಿಗಳಾದ ದ್ವಾರಪಾಲಕರನ್ನು ಕಂಡು ಭೂಮಿಯ ಮೇಲೆ ದಂಡದಂತೆ ಅಡ್ಡಬಿದ್ದನು.

ಪುಣ್ಯಶೀಲಸುಶೀಲೌ ಚ ತಮುತ್ಥಾಪ್ಯಾಽಽನತಂ ದ್ವಿಜಂ ।
ಅಭಿನಂದ್ಯ ತತೋ ವಾಕ್ಯಮೂಚತುಃ ಧರ್ಮಸಂಯುತಂ ॥ ೧೧ ॥

ಗಣೌ ಊಚತುಃ :—

ಸಾಧು ಸಾಧು ದ್ವಿಜಶ್ರೇಷ್ಠ ಯಸ್ತ್ವಂ ವಿಷ್ಣುರತಸ್ಸದಾ ।
ದೀನಾನುಕಂಪೀ ಸರ್ವಜ್ಞೋ ವಿಷ್ಣುವ್ರತಪರಾಯಣಃ ॥ ೧೨ ॥
ಆಬಾಲತ್ವಾಚ್ಛುಭಂ ತ್ವೇತತ್ ಯತ್ತ್ವಯಾ ಕಾರ್ತಿಕವ್ರತಂ ।
ಕೃತಂ ತಸ್ಯಾರ್ಧದಾನೇನ ಪುಣ್ಯಂ ದ್ವೈಗುಣ್ಯಮಾಗಮತ್ ॥ ೧೩ ॥
ಜನ್ಮಾಂತರಶತೋದ್ಭೂತಂ ಪಾಪಂ ತದ್ವಿಲಯಂ ಗತಂ ।
ಸ್ನಾನೈರೇವ ಗತಂ ಪಾಪಂ ಯದಸ್ಯಾಃ ಪೂರ್ವಕರ್ಮಜಂ ॥ ೧೪ ॥
ಹರಿಜಾಗರಣಾದ್ಯೈಶ್ಚ ವಿಮಾನಮಿದಮಾಸ್ಥಿತಾ ।
ವೈಕುಂಠಂ ನೀಯತೇ ಸಾಧೋ ನಾನಾಭೋಗಯುತಾ ತ್ವಿಯಂ ॥ ೧೫ ॥
ದೀಪದಾನಭವೈಃ ಪುಣ್ಯೈಃ ತೇಜಃಸಾರೂಪ್ಯಮಾಸ್ಥಿತಾ ।
ತುಲಸೀಪೂಜನಾದ್ಯೈಶ್ಚ ಕಾರ್ತಿಕವ್ರತಕೈಃ ಶುಭೈಃ ।
ವಿಷ್ಣುಸಾನ್ನಿಧ್ಯಗಾ ಜಾತಾ ತ್ವಯಾ ದತ್ತೈಃ ಕೃಪಾನಿಧೇ ॥ ೧೬ ॥

---

೧೧. ಬಗ್ಗಿ ನಮಸ್ಕರಿಸಿದ ಆ ದ್ವಿಜನನ್ನು ಪುಣ್ಯಶೀಲಸುಶೀಲರಿಬ್ಬರೂ ಮೇಲಕ್ಕೆಬ್ಬಿಸಿ ಅಭಿನಂದಿಸಿ, ಧರ್ಮಯುಕ್ತವಾದ ಈ ಮಾತನ್ನು ಹೇಳಿದರು.

೧೨. ಗಣಗಳಿಂತೆಂದರು :—"ದ್ವಿಜಶ್ರೇಷ್ಠಾ, ಸಾಧು, ಸಾಧು. ನೀನು ಸದಾವಿಷ್ಣುವಿನಲ್ಲೇ ಆಸಕ್ತನಾಗಿ ದೀನರಲ್ಲಿ ಅನುಕಂಪೆಯುಳ್ಳವನಾಗಿ ಎಲ್ಲವನ್ನೂ ಅರಿತು ವಿಷ್ಣುವ್ರತಪರಾಯಣನಾಗಿರುವುದು ಬಹು ಸಾಧುವಾದುದು.

೧೩. ಬಾಲ್ಯದಿಂದಲೂ ನೀನು ಶುಭವಾದ ಈ ಕಾರ್ತಿಕ ವ್ರತವನ್ನುಮಾಡಿ ಅದರಿಂದ ದೊರೆಯುವ ಪುಣ್ಯದ ಅರ್ಧಭಾಗವನ್ನು ದಾನಮಾಡಿದೆಯಲ್ಲವೆ. ಆ ದಾನದಿಂದ ಪುಣ್ಯವು ಇಮ್ಮಡಿಯಾಯಿತು.

೧೪. ನೂರಾರು ಜನ್ಮಾಂತರಗಳಲ್ಲಿ ಮಾಡಿದ ಪಾಪವೆಲ್ಲ ಪೂರ್ತಿಯಾಗಿ ಲಯವಾಯಿತು. ಇವಳ ಪೂರ್ವಕರ್ಮಧಿಂದುಂಟಾದ ಪಾಪವೆಲ್ಲ ಸ್ನಾನಗಳಿಂದಲೇ ಪರಿಹಾರವಾಯಿತು.

೧೫–೧೬. ಎಲೈ ಸಾಧುವೇ ! ಹರಿಜಾಗರಣಾದಿಗಳಿಂದ ಇವಳು ಈ ವಿಮಾನವನ್ನೇರಿ, ನಾನಾ ಭೋಗಗಳನ್ನನುಭವಿಸುವವಳಾಗಿ ವೈಕುಂಠಕ್ಕೆ ಒಯ್ಯಲ್ಪಡುತ್ತಾಳೆ. ದೀಪದಾನದಿಂದುಂಟಾದ ಪುಣ್ಯಗಳಿಂದ ತೇಜಸ್ಸ್ವರೂಪವನ್ನು ಪಡೆದಿದ್ದಾಳೆ. ತುಲಸೀಪೂಜೆ ಮೊದಲಾದುವುಗಳಿಂದಲೂ ಶುಭವಾದ ಕಾರ್ತಿಕವ್ರತಗಳಿಂದಲೂ ವಿಷ್ಣುಸಾನ್ನಿಧ್ಯಕ್ಕೆ ಹೋಗುವವಳಾದಳು. ಎಲೈ ಕೃಪಾನಿಧಿಯೇ, ಇದೆಲ್ಲ ನೀನು ಕೊಟ್ಟ ಪುಣ್ಯಗಳಿಂದುಂಟಾಯಿತು.

ತ್ವಮುಷ್ಯಸ್ಯ ಭವಸ್ಯಾಂತೇ ಭಾರ್ಯಾಭ್ಯಾಂ ಸಹ ಯಾಸ್ಯಸಿ ।
ವೈಕುಂಠಭುವನಂ ವಿಷ್ಣೋಃ ಸಾನ್ನಿಧ್ಯಂ ಚ ಸರೂಪತಾಂ ॥ ೧೭ ॥
ತೇ ಧನ್ಯಾಃ ಕೃತಕೃತ್ಯಾಸ್ತೇ ತೇಷಾಂ ಚ ಸಫಲೋ ಭವಃ ।
ಯೈರ್ಭಕ್ತ್ಯಾರಾಧಿತೋ ವಿಷ್ಣುಃ ಧರ್ಮದತ್ತ ಯಥಾ ತ್ವಯಾ ॥ ೧೮ ॥
ಸಮ್ಯಗಾರಾಧಿತೋ ವಿಷ್ಣುಃ ಕಿಂ ನ ಯಚ್ಛತಿ ದೇಹಿನಾಂ ।
ಔತ್ತಾನಚರಣಿರ್ಯೇನ ಧ್ರುವತ್ವೇ ಸ್ಥಾಪಿತಃ ಪುರಾ ॥ ೧೯ ॥
ಯನ್ನಾಮಸ್ಮರಣಾದೇವ ದೇಹಿನೋ ಯಾಂತಿ ಸದ್ಗತಿಂ ॥ ೨೦ ॥
ಗ್ರಾಹಗ್ರಸ್ತೋ ಹಿ ನಾಗೇಂದ್ರೋ ಯನ್ನಾಮಸ್ಮರಣಾತ್ಪುರಾ ।
ವಿಮುಕ್ತಸ್ಸನ್ನಿಧಿಂ ಪ್ರಾಪ್ತೋ ಜಾತೋಽಯಂ ಜಯಸಂಜ್ಞಕಃ ॥ ೨೧ ॥
ಯತಸ್ತ್ವಯಾರ್ಚಿತೋ ವಿಷ್ಣುಃ ತತ್ಸಾನ್ನಿಧ್ಯಂ ಪ್ರಯಾಸ್ಯಸಿ ।
ಬಹೂನ್ಯಬ್ದಸಹಸ್ರಾಣಿ ಭಾರ್ಯಾದ್ವಯಯುತಃ ಕಿಲ ॥ ೨೨ ॥
ತತಃ ಪುಣ್ಯಕ್ಷಯೇ ಜಾತೇ ಯದಾ ಯಾಸ್ಯಸಿ ಭೂತಲಂ ।
ಸೂರ್ಯವಂಶೋದ್ಭವೋ ರಾಜಾ ವಿಖ್ಯಾತಸ್ತ್ವಂ ಭವಿಷ್ಯಸಿ ॥ ೨೩ ॥

---

೧೭. ನೀನು ಕೂಡ ಈ ಜನ್ಮದ ಕೊನೆಯಲ್ಲಿ ಇಬ್ಬರು ಭಾರ್ಯೆಯರಿಂದಲೂ ಕೂಡಿ ವೈಕುಂಠಲೋಕಕ್ಕೆ ಹೋಗುತ್ತೀಯೆ. ವಿಷ್ಣುವಿನ ಸಾನ್ನಿಧ್ಯವನ್ನೂ ಸರೂಪತೆಯನ್ನೂ ಪಡೆಯುತ್ತೀಯೆ.

೧೮. ಅಯ್ಯಾ ಧರ್ಮದತ್ತಾ! ನಿನ್ನಂತೆ ಯಾರು ಭಕ್ತಿಯಿಂದ ವಿಷ್ಣುವನ್ನು ಆರಾಧಿಸುತ್ತಾರೋ ಅವರು ಧನ್ಯರು. ಅವರೇ ಕೃತಕೃತ್ಯರು. ಅವರ ಜನ್ಮವು ಸಫಲವಾಗುವುದು.

೧೯. ಚೆನ್ನಾಗಿ ವಿಷ್ಣುವನ್ನಾರಾಧಿಸಿದರೆ ದೇಹಿಗಳಿಗೆ ಅವನು ಏನುತಾನೇ ಕೊಡದಿರುವನು? ಪೂರ್ವದಲ್ಲಿ ಉತ್ತಾನಪಾದನ ಮಗನನ್ನು ಅವನು ಧ್ರುವತ್ವದಲ್ಲಿ ಸ್ಥಾಪಿಸಿದನಲ್ಲವೆ?

೨೦. ಆ ವಿಷ್ಣುವಿನ ನಾಮವನ್ನು ಸ್ಮರಿಸಿದ ಮಾತ್ರದಿಂದಲೇ ದೇಹಿಗಳು ಸದ್ಗತಿಯನ್ನು ಹೊಂದುತ್ತಾರೆ.

೨೧. ಮೊಸಳೆಯಿಂದ ಹಿಡಿಯಲ್ಪಟ್ಟ ಗಜೇಂದ್ರನು ಅವನ ನಾಮಸ್ಮರಣೆಯನ್ನು ಮಾಡಿದ್ದರಿಂದಲೇ ಮುಕ್ತನಾಗಿ ದೇವನ ಸನ್ನಿಧಿಗೆ ಹೋದನು. ಈಗ ಜಯನೆಂಬುವನಾದನು.

೨೨. ನೀನು ವಿಷ್ಣುವನ್ನು ಅರ್ಚಿಸಿದ್ದರಿಂದ ಅವನ ಸನ್ನಿಧಿಗೆ ಹೋಗಿ ಸೇರುತ್ತೀಯೆ. ಹೆಂಡತಿಯರಿಬ್ಬರಿಂದಲೂ ಕೂಡಿ ಬಹು ಸಹಸ್ರವರ್ಷಗಳಕಾಲ ಆ ಸನ್ನಿಧಿಯಲ್ಲಿರುತ್ತೀಯೆ.

೨೩–೨೪. ಬಳಿಕ ಪುಣ್ಯಕ್ಷಯವಾಗಿ ಯಾವಾಗ ನೀನು ಭೂತಲಕ್ಕೆ

ನಾಮ್ನಾ ದಶರಥಸ್ತತ್ರ ಭಾರ್ಯಾದ್ವಯಯುತಃ ಪುನಃ ।
ತೃತೀಯಯಾಽನಯಾ ಚಾಪಿ ಯಾ ತೇ ಪುಣ್ಯಾರ್ಧಭಾಗಿನೀ ॥ ೨೪ ॥
ತತ್ರಾಪಿ ತವ ಸಾನ್ನಿಧ್ಯಂ ವಿಷ್ಣುರ್ಯಾಸ್ಯತಿ ಭೂತಲೇ ।
ಆತ್ಮಾನಂ ತವ ಪುತ್ರತ್ವೇ ಪ್ರಕಲ್ಪ್ಯಾಽಮರಕಾರ್ಯಕೃತ್ ॥ ೨೫ ॥
ತವ ಜನ್ಮವ್ರತಾದಸ್ಮಾತ್ ವಿಷ್ಣುಸಂತುಷ್ಟಿಕಾರಕಾತ್ ।
ನ ಯಜ್ಞಾ ನ ಚ ದಾನಾನಿ ನ ತೀರ್ಥಾನ್ಯಧಿಕಾನಿ ವೈ ॥ ೨೬ ॥
ಧನ್ಯೋಽಸಿ ವಿಪ್ರಾಗ್ರ್ಯ ಯತಸ್ತ್ವಯೈತತ್
ವ್ರತಂ ಕೃತಂ ತುಷ್ಟಿಕರಂ ಜಗದ್ಗುರೋಃ ।
ಯದ್ಧರ್ಮಭಾಗಾತ್ಸಫಲಾ ಮುರಾರೇಃ
ಪ್ರಣೀಯತೇಽಸ್ಮಾಭಿರಿಯಂ ಸಲೋಕತಾಂ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಧರ್ಮದತ್ತೋಪಾಖ್ಯಾನೇ ಕಲಹಾಮೋಕ್ಷಕಥನಂ" ನಾಮ ಪಂಚವಿಂಶೋಽಧ್ಯಾಯಃ

---

ಹೋಗುವೆಯೋ ಆಗ ನೀನು ಸೂರ್ಯವಂಶದಲ್ಲಿ ಹುಟ್ಟಿ, ದಶರಥನೆಂಬ ಹೆಸರಿನಿಂದ ಪ್ರಖ್ಯಾತನಾದ ರಾಜನಾಗುತ್ತೀಯೆ. ಆಗ ಮತ್ತೆ ಅದೇ ಇಬ್ಬರು ಹೆಂಡಿರಿಂದಲೂ ಮೂರನೆಯವಳಾಗಿ ನಿನ್ನ ಪುಣ್ಯದಲ್ಲಿ ಅರ್ಧಕ್ಕೆ ಭಾಗಿನಿಯಾಗಿರುವ ಇವಳಿಂದಲೂ ಒಡಗೂಡಿರುತ್ತೀಯೆ.

೨೫. ಅಲ್ಲಿ ಕೂಡ ಭೂತಲದಲ್ಲಿ ವಿಷ್ಣುವು ನಿನಗೆ ಸಾನ್ನಿಧ್ಯವನ್ನು ಕೊಡುತ್ತಾನೆ. ತಾನೇ ನಿನ್ನ ಮಗನಾಗಿ ಬಂದು ದೇವತೆಗಳ ಕಾರ್ಯವನ್ನು ಸಾಧಿಸುತ್ತಾನೆ.

೨೬. ವಿಷ್ಣುವಿಗೆ ಸಂತುಷ್ಟಿಮಾಡುವಂತಹ ನಿನ್ನ ಈ ಜನ್ಮವ್ರತಕ್ಕಿಂತ ಯಜ್ಞಗಳೇ ಆಗಲಿ, ದಾನಗಳೇ ಆಗಲಿ, ತೀರ್ಥಗಳೇ ಆಗಲಿ ಅಧಿಕವಲ್ಲ.

೨೭. ಎಲೈ ವಿಪ್ರಾಗ್ರಗಣ್ಯನೇ! ನೀನೇ ಧನ್ಯನು. ಏಕೆಂದರೆ, ಜಗದ್ಗುರುವಿಗೆ ಸಂತುಷ್ಟಿಕರವಾದ ಈ ವ್ರತವನ್ನು ನೀನು ಮಾಡಿದ್ದೀಯೆ. ಮತ್ತು ಇವಳು ನಿನ್ನ ವ್ರತಪುಣ್ಯದ ಅರ್ಧಭಾಗದಿಂದಲೇ ಸಫಲಳಾಗಿ ಮುರಾರಿಯ ಸಾಲೋಕ್ಯವನ್ನು ಪಡೆದು ಅಲ್ಲಿಗೆ ನಮ್ಮಿಂದ ಕರೆದುಕೊಂಡು ಹೋಗಲ್ಪಡುತ್ತಿದ್ದಾಳೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದ ಧರ್ಮದತ್ತೋಪಾಖ್ಯಾನದಲ್ಲಿ "ಕಲಹಾ ಮೋಕ್ಷಕಥನ"ವೆಂಬ ಇಪ್ಪತ್ತೈದನೆಯ ಅಧ್ಯಾಯವು-ಮುಗಿದುದು

॥ ಶ್ರೀಃ ॥

# ಅಥ ಷಡ್ತ್ರಿಂಶೋಽಧ್ಯಾಯಃ

## ಚೋಲರಾಜ ವಿಷ್ಣುದಾಸ ಬ್ರಾಹ್ಮಣವಿವಾದಕಥನಂ

ನಾರದ ಉವಾಚ :—

ಇತ್ಥಂ ತದ್ವಚನಂ ಶ್ರುತ್ವಾ ಧರ್ಮದತ್ತಸ್ಸವಿಸ್ಮಯಃ ।
ಪ್ರಣಮ್ಯ ದಂಡವದ್ಭೂಮೌ ವಾಕ್ಯಮೇತದುವಾಚ ಹ ॥ ೧ ॥

ಧರ್ಮದತ್ತ ಉವಾಚ :—

ಆರಾಧಯಂತಿ ಸರ್ವೇಽಪಿ ವಿಷ್ಣುಂ ಭಕ್ತಾರ್ತಿನಾಶನಂ ।
ಯಜ್ಞೈರ್ದಾನೈರ್ವ್ರತೈಃ ತೀರ್ಥೈಃ ತಪೋಭಿಶ್ಚ ಯಥಾವಿಧಿ ॥ ೨ ॥
ವಿಷ್ಣುಪ್ರೀತಿಕರಂ ತೇಷಾಂ ಕಿಂಚಿತ್ಸಾನ್ನಿಧ್ಯಕಾರಕಂ ।
ಯತ್ಕೃತ್ವಾ ತಾನಿ ಚೀರ್ಣಾನಿ ಸರ್ವಾಣ್ಯಪಿಭವಂತಿ ಹಿ ॥ ೩ ॥

ಗಣಾವೂಚತುಃ :—

ಸಾಧು ಪೃಷ್ಟಂ ತ್ವಯಾ ವಿಪ್ರ ಶೃಣುಷ್ವೈಕಾಗ್ರಮಾನಸಃ ।
ಸೇತಿಹಾಸಕಥಾಂ ಪುಣ್ಯಾಂ ಕಥ್ಯಮಾನಾಂ ಪುರಾಭವಾಂ ॥ ೪ ॥

---

## ಕನ್ನಡದ ಅನುವಾದ

### ಚೋಳರಾಜ ವಿಷ್ಣುದಾಸ ಬ್ರಾಹ್ಮಣವಿವಾದವು

೧. ನಾರದನಿಂತೆಂದನು :—ಈ ರೀತಿಯಾಗಿ ನುಡಿದ ಆ ವಿಷ್ಣುದೂತನ ಮಾತುಗಳನ್ನು ಕೇಳಿ ಧರ್ಮದತ್ತನು ವಿಸ್ಮಯವನ್ನು ಹೊಂದಿ ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡಿ ಈ ಮಾತುಗಳನ್ನಾಡಿದನು.

೨. ಧರ್ಮದತ್ತನಿಂತೆಂದನು :—"ಭಕ್ತರ ಸಂಕಟಗಳನ್ನು ನಾಶಮಾಡುವವನಾದ ವಿಷ್ಣುವನ್ನು ಯಜ್ಞಗಳಿಂದಲೂ, ದಾನಗಳಿಂದಲೂ, ವ್ರತಗಳಿಂದಲೂ, ತೀರ್ಥಗಳಿಂದಲೂ, ತಪಸ್ಸುಗಳಿಂದಲೂ ಯಥಾವಿಧಿಯಾಗಿ ಸರ್ವರೂ ಆರಾಧಿಸುತ್ತಾರೆ.

೩. ಅವುಗಳಲ್ಲಿ ವಿಷ್ಣುಪ್ರೀತಿಕರವಾಗಿ ಅವನ ಸಾನ್ನಿಧ್ಯವುಂಟುಮಾಡುವಂತಹುದು ಯಾವುದು? ಯಾವುದನ್ನು ಮಾಡಿದರೆ ಆ ಸರ್ವವನ್ನೂ ಮಾಡಿದಂತಾಗುತ್ತದೆ?" ಎಂದು ಕೇಳಿದನು.

೪. ಬ್ರಾಹ್ಮಣನ ಪ್ರಶ್ನೆಗೆ ಗಣಗಳು ಹೀಗೆ ಉತ್ತರ ಕೊಟ್ಟರು:—"ಅಯ್ಯಾ ವಿಪ್ರಾ! ನೀನು ಸರಿಯಾಗಿ ಪ್ರಶ್ನೆಮಾಡಿದ್ದೀಯೆ. ನಾವು ಹೇಳಲಿರುವ ಪುಣ್ಯಕರವಾದ ಹಿಂದೆ ನಡೆದ ಇತಿಹಾಸಕಥೆಯನ್ನು ಒಮ್ಮನಸ್ಸಿನಿಂದ ಲಾಲಿಸು.

ಕಾಂಚಿಪುರ್ಯಾಂ ಪುರಾ ಚೋಲಃ ಚಕ್ರವರ್ತೀ ನೃಪೋಽಭವತ್ ।
ಯಸ್ಯಾಖ್ಯಯೈವ ತೇ ದೇಶಾಃ ಚೋಲಾ ಇತಿ ಪ್ರಥಾಂ ಗತಾಃ ॥ ೫ ॥
ಯಸ್ಮಿನ್ ಶಾಸತಿ ಭೂಚಕ್ರಂ ದರಿದ್ರೋ ವಾಪಿ ದುಃಖಿತಃ ।
ಪಾಪಬುದ್ಧಿಸ್ಸರುಗ್ವಾಪಿ ನೈವ ಕಶ್ಚಿದಭೂನ್ನರಃ ॥ ೬ ॥
ಯಸ್ಯಾಪ್ಯುನ್ನತಯಜ್ಞಸ್ಯ ತಾಮ್ರಪರ್ಣ್ಯಾಸ್ತಟಾವುಭೌ ।
ಸುವರ್ಣಯೂಪೈಶ್ಶೋಭಾಢ್ಯಾವಾಸ್ತಾಂ ಚೈತ್ರರಥೋಪಮೌ ॥ ೭ ॥
ಸ ಕದಾಚಿದಗಾದ್ರಾಜಾ ಹ್ಯನಂತಶಯನಂ ದ್ವಿಜ ।
ಯತ್ರಾಸೌ ಜಗತಾಂ ನಾಥೋ ಯೋಗನಿದ್ರಾಮುಪಾಶ್ರಿತಃ ॥ ೮ ॥
ತತ್ರ ಶ್ರೀರಮಣಂ ದೇವಂ ಸಂಪೂಜ್ಯ ವಿಧಿವನ್ನೃಪಃ ।
ಮಣಿಮುಕ್ತಾಫಲೈರ್ದಿವ್ಯೈಃ ಸ್ವರ್ಣಪುಷ್ಪೈಶ್ಚ ಶೋಭನೈಃ ॥ ೯ ॥
ಪ್ರಣಮ್ಯ ದಂಡವತ್ ಭೂಮಾವುಪವಿಷ್ಟಸ್ಸ ತತ್ರ ವೈ ।
ತಾವತ್ ಬ್ರಾಹ್ಮಣಮಾಯಾತಂ ಅಪಶ್ಯದ್ದೇವಸನ್ನಿಧೌ ॥ ೧೦ ॥
ದೇವಾರ್ಚನಾರ್ಥಂ ಪಾಣೌ ತು ತುಲಸ್ಯುದಕಧಾರಿಣಂ ।
ಸ್ವಪುರೀವಾಸಿನಂ ತತ್ರ ವಿಷ್ಣುದಾಸಾಹ್ವಯಂ ದ್ವಿಜಂ ॥ ೧೧ ॥

---

೫. ಪೂರ್ವದಲ್ಲಿ ಕಾಂಚೀಪುರದಲ್ಲಿ ಚೋಲರಾಜನೆಂಬ ಚಕ್ರವರ್ತಿಯಿದ್ದನು. ಆತನ ಹೆಸರಿನಿಂದಲೇ ಆ ದೇಶವು ಚೋಲದೇಶವೆಂದು ಪ್ರಸಿದ್ಧವಾಗಿರುವುದು.

೬. ಅವನು ಭೂಮಂಡಲವನ್ನಾಳುತ್ತಿದ್ದಾಗ ಯಾವನೊಬ್ಬಮನುಷ್ಯನೂ ದರಿದ್ರನಾಗಲಿ, ದುಃಖಿತನಾಗಲಿ, ಪಾಪಬುದ್ಧಿಯಾಗಲಿ, ರೋಗಿಯಾಗಲಿ ಆಗಿರಲಿಲ್ಲ.

೭. ತಾಮ್ರಪರ್ಣಿಯ ಎರಡುದಡಗಳೂ ಅವನ ಶ್ರೇಷ್ಠಯಜ್ಞಗಳ ಸುವರ್ಣಯೂಪಗಳಿಂದ ಚೈತ್ರರಥವನದಂತೆ ಕಾಂತಿಯುಕ್ತಗಳಾಗಿದ್ದುವು.

೮. ಅಯ್ಯಾ ದ್ವಿಜನೇ ! ಯಾವೆಡೆಯಲ್ಲಿ ಜಗನ್ನಾಥನು ಯೋಗನಿದ್ರೆಯನ್ನಾಶ್ರಯಿಸಿರುವನೊ ಆ ಅನಂತಶಯನಕ್ಕೆ ಒಮ್ಮೆ ಆ ರಾಜನು ಹೋದನು.

೯–೧೦. ಆ ರಾಜನು ವಿಧಿವತ್ತಾಗಿ ದೇವದೇವನಾದ ಶ್ರೀರಮಣನನ್ನು ದಿವ್ಯವಾದ ಮಣಿಗಳಿಂದಲೂ ಮುಕ್ತಾಫಲಗಳಿಂದಲೂ ಶೋಭನಗಳಾದ ಸ್ವರ್ಣಪುಷ್ಪಗಳಿಂದಲೂ ಪೂಜಿಸಿ ದಂಡಪ್ರಣಾಮವನ್ನು ಮಾಡಿ ನೆಲದಮೇಲೆ ಕುಳಿತುಕೊಂಡನು. ಅಷ್ಟರಲ್ಲಿ ದೇವಸನ್ನಿಧಿಗೆ ಬಂದ ಒಬ್ಬ ಬ್ರಾಹ್ಮಣನನ್ನು ಕಂಡನು.

೧೧. ಅವನು ದೇವಾರ್ಚನೆಗಾಗಿ ತುಲಸಿಯನ್ನೂ ಉದಕವನ್ನೂ ಕೈಯಲ್ಲಿ ಹಿಡಿದಿದ್ದನು. ತನ್ನ ಪಟ್ಟಣದ ನಿವಾಸಿಯಾದ ವಿಷ್ಣುದಾಸನೆಂಬ ಆ ಬ್ರಾಹ್ಮಣನನ್ನು ದೊರೆಯು ಕಂಡನು.

ಸ ತತ್ರಾಭ್ಯೇತ್ಯ ವಿಪ್ರರ್ಷಿಃ ದೇವದೇವಮಪೂಜಯತ್ ।
ವಿಷ್ಣುಸೂಕ್ತೇನ ಸಂಸ್ನಾಪ್ಯ ತುಲಸೀಮಂಜರೀದಳೈಃ ॥ ೧೨ ॥
ತುಲಸೀ ಪೂಜಯಾ ತಸ್ಯ ರತ್ನಪೂಜಾಂ ಪುರಾ ಕೃತಾಂ ।
ಆಚ್ಛಾದಿತಂ ಸಮಾಲೋಕ್ಯ ರಾಜಾ ಕೃದ್ಧೋಽಬ್ರವೀದಿದಂ ॥ ೧೩ ॥

ಚೋಲ ಉವಾಚ :—

ಮಾಣಿಕ್ಯಸ್ವರ್ಣಪೂಜಾತ್ರ ಶೋಭಾಢ್ಯಾ ಯಾ ಕೃತಾ ಮಯಾ ।
ವಿಷ್ಣುದಾಸ ಕಥಂ ಸೇಯಮಾಚ್ಛನ್ನಾ ತುಲಸೀದಳೈಃ ॥ ೧೪ ॥
ವಿಷ್ಣುಭಕ್ತಿಂ ನ ಜಾನಾಸಿ ವರಾಕೋಽಸಿ ಮತೋ ಮಮ ।
ಯಸ್ತ್ವಿಮಾಂ ಅತಿಶೋಭಾಢ್ಯಾಂ ಪೂಜಾಮಾಚ್ಛಾದಯಸ್ಯಹೋ॥ ೧೫ ॥
ಇತಿ ತದ್ವಚನಂ ಶ್ರುತ್ವಾ ಸಕ್ರೋಧಸ್ತದ್ದ್ವಿಜೋತ್ತಮಃ ।
ರಾಜ್ಞೋ ಗೌರವಮುಲ್ಲಂಘ್ಯ ಜಗಾದ ವಚನಂ ತದಾ ॥ ೧೬ ॥

ವಿಷ್ಣುದಾಸ ಉವಾಚ :—

ರಾಜನ್ ಭಕ್ತಿಂ ನ ಜಾನಾಸಿ ಗರ್ವಿತೋಽಸಿ ನೃಪಶ್ರಿಯಾ ।
ಕಿಯದ್ವಿಷ್ಣುವ್ರತಂ ಪೂರ್ವಂ ತ್ವಯಾ ಚೀರ್ಣಂ ವದಸ್ವ ಯತ್ ॥ ೧೭ ॥

---

೧೨. ಆ ವಿಪ್ರರ್ಷಿಯು ಅಲ್ಲಿ ಬಂದು ಆ ದೇವದೇವನನ್ನು ವಿಷ್ಣುಸೂಕ್ತದಿಂದ ಅಭಿಷೇಕಮಾಡಿ ತುಲಸಿಯ ಗೊಂಚಲ ದಳಗಳಿಂದ ಪೂಜೆಮಾಡಿದನು.

೧೩. ತಾನು ಮೊದಲು ಮೊದಲು ಮಾಡಿದ್ದ ರತ್ನಪೂಜೆಯು ಅವನ ತುಲಸೀಪೂಜೆಯಿಂದ ಮುಚ್ಚಿಹೋದುದನ್ನು ಕಂಡು ಕ್ರುದ್ಧನಾಗಿ ರಾಜನು ಹೀಗೆ ಹೇಳಿದನು.

೧೪. ಚೋಲನಿಂತೆಂದನು :—'ಮಾಣಿಕ್ಯ ರತ್ನಗಳಿಂದಲೂ ಸ್ವರ್ಣಗಳಿಂದಲೂ ಶೋಭಾಪೂರ್ಣವಾಗಿರುವಂತೆ ನಾನು ಮೊದಲು ಪೂಜೆಮಾಡಿದ್ದೆನಷ್ಟೆ. ಅಯ್ಯಾ ವಿಷ್ಣುದಾಸ! ಈ ಪೂಜೆಯನ್ನು ತುಲಸೀದಲಗಳಿಂದ ಹೇಗೆ ಮುಚ್ಚಿ ಮರೆಮಾಡಿದೆ?

೧೫. ಅತಿ ಶೋಭಾವಂತವಾಗಿರುವ ಈ ಪೂಜೆಯನ್ನು ಮುಚ್ಚುತ್ತಿರುವೆಯಾದ್ದರಿಂದ, ನೀನು ವಿಷ್ಣುಭಕ್ತಿಯನ್ನು ಅರಿಯೆಯೆಂದೂ ನೀಚನಾಗಿದ್ದೀಯೆಂದೂ ನನ್ನ ಭಾವನೆ.'

೧೬. ಇಂತೆಂದು ನುಡಿದ ಮಾತನ್ನಾಲಿಸಿ ಆ ದ್ವಿಜೋತ್ತಮನು ಕೋಪಗೊಂಡು ರಾಜನ ಗೌರವವನ್ನು ಉಲ್ಲಂಘಿಸಿ ಈ ಮಾತನ್ನು ಹೇಳಿದನು.

೧೭. ವಿಷ್ಣುದಾಸನಿಂತೆಂದನು. 'ರಾಜಾ, ನೀನು ಭಕ್ತಿಯನ್ನರಿಯೆ; ದೊರೆತನದ ಸಿರಿಯಿಂದ ಸೊಕ್ಕಿದ್ದೀಯೆ. ಪೂರ್ವದಲ್ಲಿ ನೀನು ಎಷ್ಟುಮಟ್ಟಿಗೆ ವಿಷ್ಣುವ್ರತವನ್ನು ನಡೆಸಿದ್ದೀಯೊ ಅದನ್ನು ಹೇಳು' ಎಂದು ಪ್ರಶ್ನೆಮಾಡಿದನು.

ಗಣಾವೂಚತುಃ :—

ತದ್ಬ್ರಾಹ್ಮಣವಚಃ ಶೃತ್ವಾ ಪ್ರಹಸ್ಯ ಚ ನೃಪೋತ್ತಮಃ ।
ವಿಷ್ಣುದಾಸಂ ತದಾ ಗರ್ವಾತ್ ಉವಾಚ ವಚನಂ ದ್ವಿಜಂ ॥ ೧೮ ॥

ರಾಜೋವಾಚ :—

ಇತ್ಥಂ ಚೇದ್ವದಸೇ ವಿಪ್ರ ವಿಷ್ಣುಭಕ್ತ್ಯಾತಿಗರ್ವಿತಃ ।
ಭಕ್ತಿಸ್ತೇ ಕಿಯತೀ ವಿಷ್ಣೋಃ ದರಿದ್ರಸ್ಯಾಧನಸ್ಯ ಚ ॥ ೧೯ ॥
ಯಜ್ಞದಾನಾದಿಕಂ ನೈವ ವಿಷ್ಣೋಸ್ತುಷ್ಟಿಕರಂ ಕೃತಂ ।
ನಾಪಿ ದೇವಾಲಯಂ ಪೂರ್ವಂ ಕೃತಂ ವಿಪ್ರ ತ್ವಯಾ ಕ್ವಚಿತ್ ॥ ೨೦ ॥
ಈದೃಶಸ್ಯಾಪಿ ತೇ ಗರ್ವ ಏಷ ತಿಷ್ಠತಿ ಭಕ್ತಿತಃ ।
ತಚ್ಛೃಣ್ವಂತು ವಚೋ ಮೇಽದ್ಯ ಸರ್ವೇಪ್ಯೇತೇ ದ್ವಿಜಾತಯಃ ॥ ೨೧ ॥
ಸಾಕ್ಷಾತ್ಕಾರಮಹಂ ವಿಷ್ಣೋಃ ಏಷ ವಾದೌ ಗಮಿಷ್ಯತಿ ।
ಪಶ್ಯಂತು ಸರ್ವೇಽಪಿ ತತೋ ಭಕ್ತಿಂ ಜ್ಞಾಸ್ಯಂತಿ ಚಾವಯೋಃ ॥ ೨೨ ॥

ಗಣಾವೂಚತುಃ :—

ಇತ್ಯುಕ್ತ್ವಾ ಸ ನೃಪೋಽಗಚ್ಛತ್ ನಿಜರಾಜಗೃಹಂ ತದಾ ।
ಆರಭದ್ವೈಷ್ಣವಂ ಸತ್ರಂ ಕೃತ್ವಾಚಾರ್ಯಂ ತು ಮುದ್ಗಲಂ ॥ ೨೩ ॥

---

೧೮. ಗಣಗಳು ಹೀಗೆ ಹೇಳತೊಡಗಿದರು. ಬ್ರಾಹ್ಮಣನ ಆ ಮಾತನ್ನು ಕೇಳಿ ಆ ನೃಪೋತ್ತಮನು ನಕ್ಕುಬಿಟ್ಟನು. ಬ್ರಾಹ್ಮಣನಾದ ವಿಷ್ಣುದಾಸನನ್ನು ಕುರಿತು ಗರ್ವದಿಂದ ಈ ವಚನವನ್ನಾಡಿದನು.

೧೯. ರಾಜನೆಂದನು :— 'ಅಯ್ಯಾ ವಿಪ್ರಾ, ವಿಷ್ಣುಭಕ್ತಿಯಿಂದ ಅತಿ ಗರ್ವಿತನಾಗಿ ನೀನು ಹೀಗೆ ಹೇಳುತ್ತಿರುವೆಯಾದರೆ, ದರಿದ್ರನೂ ಧನಹೀನನೂ ಆದ ನಿನಗೆ ವಿಷ್ಣುಭಕ್ತಿಯೆಷ್ಟುತಾನೇ ಇದ್ದೀತು?

೨೦. ವಿಷ್ಣುವಿಗೆ ಸಂತೋಷವುಂಟುಮಾಡುವ ಯಜ್ಞದಾನಾದಿಗಳನ್ನು ನೀನು ಮಾಡಿಯೇ ಇಲ್ಲ. ವಿಪ್ರಾ! ಹಿಂದೆಂದೂ ನಿನೆಲ್ಲಿಯೂ ದೇವಾಲಯವನ್ನೂ ನಿರ್ಮಿಸಿಲ್ಲ.

೨೧. ಹೀಗಿರುವವನಾದರೂ ನಿನಗೆ ಭಕ್ತಿಯಿಂದ ಇಷ್ಟು ಗರ್ವವಿದೆಯಲ್ಲಾ! ಆದ್ದರಿಂದ (ಇಲ್ಲಿ ಈಗ ನೆರೆದಿರುವ) ಈ ಬ್ರಾಹ್ಮಣರೆಲ್ಲಾ ನನ್ನ ಮಾತನ್ನು ಕೇಳಲಿ.

೨೨. ವಿಷ್ಣುವಿನ ಸಾಕ್ಷಾತ್ಕಾರವನ್ನು ನಾನೋ ಅಥವಾ ಇವನೋ, ಯಾರು ಮೊದಲು ಪಡೆಯುತ್ತಾರೆ ಎಂಬುದನ್ನು ಎಲ್ಲರೂ ಕಾಣಲಿ. ಅದರಿಂದ ನಮ್ಮ ಭಕ್ತಿಯನ್ನು ತಿಳಿಯಬಹುದು.'

೨೩. ಗಣಗಳಿಂತು ಮುಂದುವರಿಸಿದರು :—ಹೀಗೆಂದು ನುಡಿದು ಆ

ಋಷಿಸಂಘಸಮಂ ಜುಷ್ಟಂ ಬಹ್ವನ್ನಂ ಬಹುದಕ್ಷಿಣಂ ।
ಯಚ್ಚ ಬ್ರಹ್ಮಕೃತಂ ಪೂರ್ವಂ ಗಯಾಕ್ಷೇತ್ರೇ ಸಮೃದ್ಧಿಮತ್ ॥ ೨೪ ॥
ವಿಷ್ಣುದಾಸೋಽಪಿ ತತ್ರೈವ ತಸ್ಥೌ ದೇವಾಲಯೇ ವ್ರತೀ ।
ಯಥೋಕ್ತನಿಯಮಾನ್ ಕುರ್ವನ್ ವಿಷ್ಣೋಸ್ತುಷ್ಟಿಕರಾನ್ ತದಾ॥೨೫॥
ಮಾಘೋರ್ಜಯೋರ್ವ್ರತಂ ಸಮ್ಯಕ್ ತುಲಸೀವನಪಾಲನಂ ।
ಏಕಾದಶ್ಯಾಂ ಹರೇರ್ಜಾಪ್ಯಂ ದ್ವಾದಶಾಕ್ಷರವಿದ್ಯಯಾ ॥ ೨೬ ॥
ಉಪಚಾರೈಷ್ಷೋಡಶಭಿಃ ನೃತ್ಯಗೀತಾದಿಮಂಗಲೈಃ ।
ನಿತ್ಯಂ ವಿಷ್ಣೋಸ್ತಥಾ ಪೂಜಾಂ ವ್ರತಾನ್ಯೇತಾನಿ ಸೋಽಕರೋತ್॥ ೨೭ ॥
ನಿತ್ಯಂ ಸಂಸ್ಮರಣಂ ವಿಷ್ಣೋಃ ಗಚ್ಛನ್ ಭುವಿ ಸ್ವಪನ್ನಪಿ ।
ಸರ್ವಭೂತಸ್ಥಿತಂ ವಿಷ್ಣುಂ ಅಪಶ್ಯತ್ಸಮದರ್ಶನಃ ॥ ೨೮ ॥
ಮಾಘಕಾರ್ತಿಕಯೋರ್ನಿತ್ಯಂ ವಿಶೇಷನಿಯಮಾನಪಿ ।
ಅಕರೋದ್ವಿಷ್ಣುತುಷ್ಟ್ಯರ್ಥಂ ಸೋದ್ಯಾಪನವಿಧಿಂ ತಥಾ ॥ ೨೯ ॥

---

ರಾಜನು ತನ್ನ ಅರಮನೆಗೆ ಹೋದನು. ಹೋಗಿ ಮುದ್ಗಲನನ್ನು ಆಚಾರ್ಯನನ್ನಾಗಿ ಮಾಡಿಕೊಂಡು ವೈಷ್ಣವಸತ್ರವನ್ನು ಪ್ರಾರಂಭ ಮಾಡಿದನು.

೨೪. ಋಷಿಸಂಘಗಳನ್ನು ಬರಮಾಡಿಕೊಂಡು ಬಹು ಅನ್ನ ಬಹು ದಕ್ಷಿಣೆಗಳನ್ನು ಕೊಡ ತೊಡಗಿದನು. ಪೂರ್ವದಲ್ಲಿ ಬ್ರಹ್ಮನು ಆ ಸತ್ರವನ್ನು ಬಹು ಸಮೃದ್ಧಿಯಿಂದ ಪ್ರಯಾಗಕ್ಷೇತ್ರದಲ್ಲಿ ನೆರವೇರಿಸಿದ್ದನು.

೨೫. ವಿಷ್ಣುದಾಸನೂ ಕೂಡ ಆ ದೇವಾಲಯದಲ್ಲೇ ವ್ರತವನ್ನು ಕೈಕೊಂಡು ನಿಂತನು. ಅವನು ವಿಷ್ಣುವಿಗೆ ತುಷ್ಟಿಕರಗಳಾದ ನಿಯಮಗಳನ್ನು ಶಾಸ್ತ್ರೋಕ್ತರೀತಿಯಿಂದ ಸದಾ ಆಚರಿಸುತ್ತಿದ್ದನು.

೨೬–೨೭. ಮಾಘವ್ರತ ಮತ್ತು ಕಾರ್ತಿಕವ್ರತಗಳು, ತುಲಸೀವನದ ಪಾಲನೆ, ಏಕಾದಶಿಯಲ್ಲಿ ದ್ವಾದಶಾಕ್ಷರ ವಿದ್ಯೆಯಿಂದ ಹರಿಯ ಜಪ, ನಿತ್ಯವೂ ವಿಷ್ಣುವಿಗೆ ನೃತ್ತಗೀತಾದಿ ಮಂಗಳಗಳಿಂದೊಡಗೂಡಿದ ಷೋಡಶೋಪಚಾರ ಪೂಜೆ—ಈ ವ್ರತಗಳನ್ನು ಅವನು ಮಾಡಿದನು.

೨೮. ನಡೆಯುತ್ತಿರುವಾಗಲೂ ನೆಲದಮೇಲೆ ಮಲಗಿರುವಾಗಲೂ ವಿಷ್ಣುವಿನ ಸ್ಮರಣೆಯನ್ನು ತಪ್ಪದೆ ಮಾಡುತ್ತಿದ್ದನು. ಸಮದರ್ಶನವುಳ್ಳವನಾಗಿ ಸರ್ವಭೂತಗಳಲ್ಲಿಯೂ ಇರುವ ವಿಷ್ಣುವನ್ನು ಕಾಣುತ್ತಿದ್ದನು.

೨೯. ಮಾಘ ಕಾರ್ತಿಕವ್ರತಗಳ ವಿಶೇಷನಿಯಮಗಳನ್ನೂ ನಡೆಸುತ್ತಿದ್ದನು. ವಿಷ್ಣುವಿನ ಸಂತುಷ್ಟಿಗಾಗಿ ಉದ್ಯಾಪನ ವಿಧಿಯನ್ನು ನೆರವೇರಿಸಿದನು.

ಏವಂ ಸಮಾರಾಧಯತೋಃ ಶ್ರಿಯಃಪತಿಂ
ತಯೋಶ್ಚ ಚೋಳೇಶ್ವರವಿಷ್ಣುದಾಸಯೋಃ ।
ಅಗಾದ್ಧಿ ಕಾಲಸ್ಸುಮಹಾನ್ ವ್ರತಸ್ಥಯೋಃ
ತನ್ನಿಷ್ಠಸರ್ವೇಂದ್ರಿಯಕರ್ಮಣೋಸ್ತದಾ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಚೋಳರಾಜ ವಿಷ್ಣುದಾಸ ಬ್ರಾಹ್ಮಣವಿವಾದಕಥನಂ" ನಾಮ ಷಡ್ವಿಂಶೋಽಧ್ಯಾಯಃ

---

೩೦. ಆ ಚೋಳೇಶ್ವರ ವಿಷ್ಣುದಾಸರಿಬ್ಬರೂ ಈ ರೀತಿಯಾಗಿ ಲಕ್ಷ್ಮೀಪತಿಯನ್ನಾರಾಧಿಸುತ್ತಾ ಅವನಲ್ಲೇ ಸರ್ವೇಂದ್ರಿಯ ಕರ್ಮಗಳನ್ನೂ ನೆಲೆಗೊಳಿಸಿ ವ್ರತಸ್ಥರಾಗಿರಲಾಗಿ ಬಹುಕಾಲವು ಕಳೆದುಹೋಯಿತು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ಚೋಳರಾಜ ವಿಷ್ಣುದಾಸ ಬ್ರಾಹ್ಮಣ ವಿವಾದ ಕಥನ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶೋಽಧ್ಯಾಯಃ

## ಚೋಲರಾಜ ವಿಷ್ಣುದಾಸ ಮುಕ್ತಿಕಥನಂ

**ನಾರದ ಉವಾಚ :—**

**ಕದಾಚಿದ್ವಿಷ್ಣುದಾಸೋಽಥ ಕೃತ್ವಾ ನಿತ್ಯವಿಧಿಂ ದ್ವಿಜ ।**
**ಸ ಪಾಕಮಕರೋತ್ತಾವತ್ ಅಹರತ್ಕೋಽಪ್ಯಲಕ್ಷಿತಃ ॥ ೧ ॥**
**ತಮದೃಷ್ಟ್ವಾಪ್ಯಸೌ ಪಾಕಂ ಪುನರ್ನೈವಾಕರೋತ್ತದಾ ।**
**ಸಾಯಂಕಾಲಾರ್ಚನಸ್ಯಾಸೌ ವ್ರತಭಂಗಭಯಾದ್ದ್ವಿಜಃ ॥ ೨ ॥**
**ದ್ವಿತೀಯೇಽಹ್ನಿ ಪುನಃ ಪಾಕಂ ಕೃತ್ವಾ ಯಾವತ್ಸ ವಿಷ್ಣವೇ ।**
**ಉಪಹಾರಾರ್ಪಣಂ ಕರ್ತುಂ ಗತಃ ಕೋಽಪ್ಯಹರತ್ಪುನಃ ॥ ೩ ॥**
**ಏವಂ ಸಪ್ತದಿನಂ ತಸ್ಯ ಪಾಕಂ ಕೋಽಪ್ಯಹರನ್ನೃಪ ।**
**ತತಸ್ಸವಿಸ್ಮಯಶ್ಚಾಥ ಮನಸ್ಯೇವಮಧಾರಯತ್ ॥ ೪ ॥**
**ಅಹೋ ನಿತ್ಯಂ ಸಮಭ್ಯೇತ್ಯ ಕಃ ಪಾಕಂ ಹರತೇ ಮಮ ।**
**ಕ್ಷೇತ್ರಸನ್ನ್ಯಾಸಿನಃ ಸ್ಥಾನಂ ನ ತ್ಯಾಜ್ಯಂ ಮಮ ಸರ್ವಥಾ ॥ ೫ ॥**

---

## ಕನ್ನಡದ ಅನುವಾದ

### ಚೋಲರಾಜ ವಿಷ್ಣುದಾಸರ ಮೋಕ್ಷಪ್ರಾಪ್ತಿಯು

೧. ನಾರದನಿಂತೆಂದನು :—ಬಳಿಕ ಒಂದಾನೊಂದು ದಿನ ವಿಷ್ಣುದಾಸನು ನಿತ್ಯ ವಿಧಿಯನ್ನು ನೆರವೇರಿಸಿ ಅಡಿಗೆ ಮಾಡಿಕೊಂಡನು. ಅಷ್ಟರಲ್ಲಿ ಯಾವನೋ ಒಬ್ಬನು ಕಾಣಿಸಿಕೊಳ್ಳದೆಯೇ ಅದನ್ನು ಅಪಹರಿಸಿಕೊಂಡು ಹೋದನು.

೨. ಹಾಗೆ ಅಡಿಗೆಯನ್ನು ತೆಗೆದುಕೊಂಡು ಹೋದವನನ್ನು ಕಾಣದಿದ್ದರೂ ಆ ಬ್ರಾಹ್ಮಣನು ಮತ್ತೆ ಪಾಕವನ್ನು ಮಾಡಲೇ ಇಲ್ಲ. ಸಾಯಂಕಾಲದ ಅರ್ಚನೆಗೆ ಅದರಿಂದ ಕಾಲಭಂಗವಾದೀತೆಂದು ಆ ದ್ವಿಜನು ಭಯಪಟ್ಟನು.

೩. ಎರಡನೆಯ ದಿನ ಪುನಃ ಪಾಕವನ್ನು ಮಾಡಿ ವಿಷ್ಣುವಿಗೆ ನೈವೇದ್ಯಾರ್ಪಣೆ ಮಾಡಲು ಹೋದನು. ಹೋಗುವಷ್ಟರಲ್ಲಿಯೇ ಅದನ್ನು ಯಾವನೋ ಮತ್ತೆ ತೆಗೆದುಕೊಂಡುಬಿಟ್ಟನು.

೪. ಎಲೈ ರಾಜನೇ! ಹೀಗೆ ಏಳುದಿನಗಳವರೆಗೂ ಅವನ ಅಡಿಗೆಯನ್ನು ಯಾವನೋ ತೆಗೆದುಕೊಂಡು ಬಿಡುತ್ತಿದ್ದನು. ಬಳಿಕ ವಿಸ್ಮಯ ಹೊಂದಿದವನಾಗಿ ಅವನು ಮನಸ್ಸಿನಲ್ಲಿ ಹೀಗೆಂದುಕೊಂಡನು.

೫. "ಆಹಾ! ನಿತ್ಯವೂ ಕ್ಷೇತ್ರ ಸನ್ನ್ಯಾಸಿಯಾದ ನನ್ನ ಪಾಕವನ್ನು ಯಾವನು ತೆಗೆದುಕೊಂಡು ಹೋಗುತ್ತಿದ್ದಾನೆ? ಏನೇ ಆದರೂ ಈ ಸ್ಥಾನವನ್ನು ನಾನು ಬಿಡಬಾರದು.

ಪುನಃ ಪಾಕಂ ವಿಧಾಯಾತ್ರ ಭುಜ್ಯತೇ ಯದಿ ಚೇನ್ಮಯಾ ।
ಸಾಯಂಕಾಲಾರ್ಚನಂ ಚೈವ ಪರಿತ್ಯಾಜ್ಯಂ ಕಥಂ ಭವೇತ್ ॥ ೬ ॥
ಯದಿ ಪಾಕಂ ವಿಧಾಯೈವ ಭೋಕ್ತವ್ಯಂ ತು ಮಯಾ ನ ತತ್ ।
ಅನಿವೇದ್ಯ ಹರೌ ಸರ್ವಂ ವೈಷ್ಣವೈರ್ನೈವ ಭುಜ್ಯತೇ ॥ ೭ ॥
ಉಪೋಷಿತೋಽಹಂ ಸಪ್ತಾಹಂ ತಿಷ್ಠಾಮ್ಯತ್ರ ವ್ರತಸ್ಥಿತಃ ।
ಅದ್ಯ ಸಂರಕ್ಷಣಂ ಸಮ್ಯಕ್ ಪಾಕಸ್ಯಾತ್ರ ಕರೋಮ್ಯಹಂ ॥ ೮ ॥
ಇತಿ ಪಾಕಂ ವಿಧಾಯಾಸೌ ತತ್ರೈವಾಲಕ್ಷಿತಃ ಸ್ಥಿತಃ ।
ತಾವದ್ದದರ್ಶ ಚಾಂಡಾಲಂ ಪಾಕಾನ್ನಹರಣೇ ಸ್ಥಿತಂ ॥ ೯ ॥
ಕ್ಷುತ್ಕ್ಷಾಮಂ ದೀನವದನಂ ಅಸ್ಥಿಚರ್ಮಾವಶೇಷಿತಂ ।
ತಮಾಲೋಕ್ಯ ದ್ವಿಜಾಗ್ರ್ಯೋಽಭೂತ್ ಕೃಪಯಾನ್ವಿತಮಾನಸಃ ॥ ೧೦ ॥
ವಿಲೋಕ್ಯಾನ್ನಹರಂ ವಿಪ್ರಃ ತಿಷ್ಠ ತಿಷ್ಠೇತ್ಯಭಾಷತ ।
ಕಥಮಶ್ನಾಸಿ ತದ್ರೂಕ್ಷಂ ಘೃತಮೇತದ್ಗೃಹಾಣ ಭೋಃ ॥ ೧೧ ॥
ಇತ್ಥಂ ವದಂತಂ ವಿಪ್ರಾಗ್ರ್ಯಂ ಆಯಾಂತಂ ಸ ವಿಲೋಕ್ಯ ಚ ।
ವೇಗಾದಧಾವತ್ತದ್ಭೀತ್ಯಾ ಮೂರ್ಛಿತಶ್ಚ ಪಪಾತ ಹ ॥ ೧೨ ॥

---

೬. ಇಲ್ಲಿ ಮತ್ತೆ ಅಡಿಗೆಮಾಡಿ ಭೋಜನಮಾಡುವುದಾದರೆ ಸಾಯಂಕಾಲದ ಅರ್ಚನೆಯನ್ನೂ ಬಿಡಬೇಕಾಗುತ್ತದೆ. ಅದು ಹೇಗಾದೀತು?

೭. ಅಡಿಗೆಯನ್ನು ಮಾಡಿ ಹಾಗೆಯೇ ಊಟಮಾಡೋಣವೆಂದರೆ, ಅದು ಸರಿಯಲ್ಲ. ವೈಷ್ಣವರು ಸರ್ವವನ್ನೂ ಹರಿಗೆ ನಿವೇದನಮಾಡದೆ ಭೋಜನ ಮಾಡುವುದಿಲ್ಲ.

೮. ಏಳುದಿನ ನಾನು ಉಪವಾಸಮಾಡಿದ್ದೇನೆ. ಇಲ್ಲಿ ವ್ರತಸ್ಥನಾಗಿದ್ದೇನೆ. ಇವತ್ತು ಅಡಿಗೆಯ ರಕ್ಷಣೆಯನ್ನು ಬಹು ಎಚ್ಚರಿಕೆಯಿಂದ ಮಾಡುತ್ತೇನೆ.

೯. ಹೀಗೆಂದು ಯೋಚಿಸಿ ಪಾಕಮಾಡಿ ಅಲ್ಲಿಯೇ ಯಾರಿಗೂ ಕಾಣದಂತೆ ನಿಂತುಕೊಂಡಿದ್ದನು. ಆಗ ಆ ಪಾಕಾನ್ನವನ್ನು ಹರಣಮಾಡುತ್ತಿರುವ ಚಂಡಾಲನನ್ನು ಕಂಡನು.

೧೦. ಅವನು ಹಸಿವಿನಿಂದ ಬಳಲಿ ಸೊರಗಿಹೋಗಿದ್ದನು. ಮುಖವು ತುಂಬ ದೀನವಾಗಿತ್ತು. ಮೈಯಲ್ಲಿ ಚರ್ಮ ಮೂಳೆ ಮಾತ್ರ ಉಳಿದಿತ್ತು. ಅವನನ್ನು ನೋಡಿ ದ್ವಿಜಶ್ರೇಷ್ಠನು ಮನಸ್ಸಿನಲ್ಲಿ ಕೃಪೆಯುಳ್ಳವನಾದನು.

೧೧. ಅನ್ನವನ್ನು ತೆಗೆದುಕೊಂಡು ಹೋಗುತ್ತಿದ್ದವನನ್ನು ಕಂಡು, "ನಿಲ್ಲು ನಿಲ್ಲು" ಎಂದು ಕೂಗಿದನು. "ಅಯ್ಯಾ! ಒರಟಾದ ಆ ಅನ್ನವನ್ನು ಹೇಗೆ ತಿನ್ನುತ್ತೀಯೆ? ಈ ತುಪ್ಪವನ್ನು ತೆಗೆದುಕೋ" ಎಂದನು.

೧೨. ಹೀಗೆ ನುಡಿಯುತ್ತ ತನ್ನೆಡೆಗೆ ಬರುತ್ತಿದ್ದ ಆ ವಿಪ್ರಶ್ರೇಷ್ಠನನ್ನು

ಭೀತಂ ಸಂಮೂರ್ಛಿತಂ ದೃಷ್ಟ್ವಾ ಚಂಡಾಲಂ ಸ ದ್ವಿಜಾಗ್ರಣೀಃ ।
ವೇಗಾದಭ್ಯೇತ್ಯ ಕೃಪಯಾ ಸ್ವವಸ್ತ್ರಾಂತೈರವೀಜಯತ್ ॥ ೧೩ ॥
ಅಥೋತ್ಥಿತಂ ತಮೇನಾಸೌ ವಿಷ್ಣುದಾಸೋ ವ್ಯಲೋಕಯತ್ ।
ಸಾಕ್ಷಾನ್ನಾರಾಯಣಂ ದೇವಂ ಶಂಖಚಕ್ರಗದಾಧರಂ ॥ ೧೪ ॥
ತಂ ದೃಷ್ಟ್ವಾ ಸಾತ್ವಿಕೈರ್ಭಾವೈರಾವೃತೋ ದ್ವಿಜಸತ್ತಮಃ ।
ಸ್ತೋತುಂ ಚೈವ ನಮಸ್ಕರ್ತುಂ ತದಾ ನಾಲಂಬಭೂವ ಸಃ ॥ ೧೫ ॥
ಅಥ ಶಕ್ರಾದಯೋ ದೇವಾಸ್ತತ್ರೈವಾಭ್ಯಾಯಯುಸ್ತದಾ ।
ಗಂಧರ್ವಾಪ್ಸರಸಶ್ಚಾಪಿ ಜಗುಶ್ಚ ನನೃತುರ್ಮುದಾ ॥ ೧೬ ॥
ವಿಮಾನಶತಸಂಕೀರ್ಣಂ ದೇವರ್ಷಿಶತಸಂಕುಲಂ ।
ಗೀತವಾದಿತ್ರನಿರ್ಘೋಷಂ ಸ್ಥಾನಂ ತದಭವತ್ತದಾ ॥ ೧೭ ॥
ತತೋ ವಿಷ್ಣುಸ್ಸಮಾಲಿಂಗ್ಯ ಸ್ವಭಕ್ತಂ ಸಾತ್ವಿಕವ್ರತಂ ।
ಸಾರೂಪ್ಯಮಾತ್ಮನೋ ದತ್ವಾಽನಯದ್ವೈಕುಂಠಮಂದಿರಂ ॥ ೧೮ ॥

---

ಕಂಡು ಅವನು ಭಯದಿಂದ ವೇಗವಾಗಿ ಓಡಿದನು. ಓಡುತ್ತ ಅಲ್ಲಿಯೆ ಮೂರ್ಛಿತನಾಗಿ ಬಿದ್ದುಬಿಟ್ಟನು.

೧೩. ಹೀಗೆ ಹೆದರಿ ಮೂರ್ಛಿತನಾಗಿ ಬಿದ್ದ ಆ ಚಂಡಾಲನನ್ನು ಕಂಡು ಆ ದ್ವಿಜಶ್ರೇಷ್ಠನಾದ ವಿಷ್ಣುದಾಸನು ಬೇಗಬೇಗನೆ ಅವನ ಹತ್ತಿರಕ್ಕೆ ಬಂದು ಕೃಪೆಯಿಂದ ತನ್ನ ಬಟ್ಟೆಯ ಸೆರಗಿನಿಂದ ಬೀಸಿದನು.

೧೪. ಆಗ ಅವನೆದ್ದನು. ಏಳಲು ಅವನೇ ಶಂಖಚಕ್ರಗದಾಧರನೂ ದೇವ ದೇವನೂ ಆದ ನಾರಾಯಣನೆಂಬುದನ್ನು ವಿಷ್ಣುದಾಸನು ಕಂಡುಕೊಂಡನು.

೧೫. ಅವನನ್ನು ಕಂಡು ಆ ದ್ವಿಜಶ್ರೇಷ್ಠನು ಸಾತ್ವಿಕಭಾವಗಳಿಂದ ಆವೃತ ನಾಗಿ ಆ ನಾರಾಯಣನನ್ನು ಸ್ತುತಿಸುವುದಕ್ಕಾಗಲಿ ನಮಸ್ಕರಿಸುವುದಕ್ಕಾಗಲಿ ಶಕ್ತನಾಗಲಿಲ್ಲವು.

೧೬. ಆಗ ಇಂದ್ರಾದಿದೇವತೆಗಳೂ ಅಲ್ಲಿಗೇ ಬಂದು ಸೇರಿದರು. ಗಂಧರ್ವರೂ ಅಪ್ಸರೆಯರೂ ಸಂತೋಷದಿಂದ ಹಾಡಿ ನರ್ತಿಸಿದರು.

೧೭. ಆ ಸ್ಥಳವು ನೂರಾರು ವಿಮಾನಗಳಿಂದ ತುಂಬಿತು. ನೂರಾರು ಮಂದಿ ದೇವರ್ಷಿಗಳು ಸಂದಣಿಸಿದರು. ಗೀತವಾದ್ಯಗಳ ಘೋಷವು ಅಲ್ಲೆಲ್ಲ ತುಂಬಿಹೋಯಿತು.

೧೮. ಬಳಿಕ ವಿಷ್ಣುವು ಸಾತ್ವಿಕ ವ್ರತಗಳನ್ನು ನಡೆಸಿದ ಆ ತನ್ನ ಭಕ್ತನನ್ನು ಆಲಿಂಗಿಸಿ ಅವನಿಗೆ ತನ್ನ ಸಾರೂಪ್ಯವನ್ನಿತ್ತು ಅವನನ್ನು ತನ್ನ ವೈಕುಂಠ ಮಂದಿರಕ್ಕೆ ಕರೆದುಕೊಂಡುಹೋದನು.

ವಿಮಾನವರಸಂಸ್ಥಂ ತಂ ಗಚ್ಛಂತಂ ವಿಷ್ಣುಸನ್ನಿಧಿಂ ।
ದೀಕ್ಷಿತಶ್ಚೋಲನೃಪತಿರ್ವಿಷ್ಣುದಾಸಂ ದದರ್ಶ ಸಃ ॥ ೧೯ ॥
ವೈಕುಂಠಭುವನಂ ಯಾಂತಂ ವಿಷ್ಣುದಾಸಂ ವಿಲೋಕ್ಯ ಸಃ ।
ಸ್ವಗುರುಂ ಮುದ್ಗಲಂ ವೇಗಾದಾಹೂಯೇತ್ಥಂ ವಚೋಽಬ್ರವೀತ್ ॥ ೨೦ ॥

ಚೋಲ ಉವಾಚ :—

ಯತ್ಸ್ಪರ್ಧಯಾ ಮಯಾ ಚೈವ ಯಜ್ಞದಾನಾದಿಕಂ ಕೃತಂ ।
ಸ ವಿಷ್ಣುರೂಪಧೃಗ್ವಿಪ್ರೋ ಯಾತಿ ವೈಕುಂಠಮಂದಿರಂ ॥ ೨೧ ॥
ದೀಕ್ಷಿತೇನ ಮಯಾ ಸಮ್ಯಕ್ ಸತ್ರೇಽಸ್ಮಿನ್ವೈಷ್ಣವೇ ತ್ವಯಾ ।
ಹುತಮಗ್ನೌ ಕೃತಾ ವಿಪ್ರಾ ದಾನಾದ್ಯೈಃ ಪೂರ್ಣಮಾನಸಾಃ ॥ ೨೨ ॥
ನೈವಾದ್ಯಾಪಿ ಸ ಮೇ ದೇವಃ ಪ್ರಸನ್ನೋ ಜಾಯತೇ ಧ್ರುವಂ ।
ವಿಷ್ಣುದಾಸಸ್ಯ ಭಕ್ತ್ಯೈವ ಸಾಕ್ಷಾತ್ಕಾರಂ ದದೌ ಹರಿಃ ॥ ೨೩ ॥
ತಸ್ಮಾದ್ದಾನೈಶ್ಚ ಯಜ್ಞೈಶ್ಚ ನೈವ ವಿಷ್ಣುಃ ಪ್ರಸೀದತಿ ।
ಭಕ್ತಿರೇವ ಪರಂ ತಸ್ಯ ನಿದಾನಂ ದರ್ಶನೇ ವಿಭೋಃ ॥ ೨೪ ॥

ಗಣಾವೂಚತುಃ :—

ಇತ್ಯುಕ್ತ್ವಾ ಭಾಗಿನೇಯಂ ಸ್ವಮಭ್ಯಷಿಂಚನ್ನೃಪಾಸನೇ ।
ಆಬಾಲ್ಯಾದ್ದೀಕ್ಷಿತೋ ಯಜ್ಞೇ ಹ್ಯಪುತ್ರತ್ವಮಗಾದ್ಯತಃ ॥ ೨೫ ॥

---

೧೯. ಶ್ರೇಷ್ಠವಾದ ವಿಮಾನದ ಮೇಲೇರಿ ವಿಷ್ಣುಸನ್ನಿಧಿಗೆ ಹೋಗುತ್ತಿದ್ದ ಆ ವಿಷ್ಣುದಾಸನನ್ನು ದೀಕ್ಷಿತನಾಗಿದ್ದ ಚೋಲರಾಜನು ನೋಡಿದನು.

೨೦. ವಿಷ್ಣುದಾಸನು ವೈಕುಂಠಲೋಕಕ್ಕೆ ಹೋದುದನ್ನು ಕಂಡು ಅವನು ತನ್ನ ಗುರುವಾದ ಮುದ್ಗಲನನ್ನು ಬೇಗನೆ ಕರೆಸಿಕೊಂಡು ಈ ಮಾತನ್ನು ಹೇಳಿದನು.

೨೧. ಚೋಲನು ಹೇಳುತ್ತಾನೆ:— ನಾನು ಯಾವನಲ್ಲಿ ಸ್ಪರ್ಧೆಯಿಂದ ಯಜ್ಞದಾನಾದಿಗಳನ್ನು ಮಾಡಿದೆನೋ, ಆ ವಿಪ್ರನು ವಿಷ್ಣುರೂಪಧಾರಿಯಾಗಿ ವೈಕುಂಠಲೋಕಕ್ಕೆ ಹೋಗುತ್ತಿದ್ದಾನೆ.

೨೨. ಈ ವೈಷ್ಣವವ್ರತದಲ್ಲಿ ದೀಕ್ಷಿತನಾಗಿ ನಾನು ನಿನ್ನ ಮೂಲಕ ಅಗ್ನಿಯಲ್ಲಿ ಹೋಮಮಾಡಿದೆನು; ದಾನಾದಿಗಳಿಂದ ವಿಪ್ರರ ಮನೋರಥಗಳನ್ನು ಪರಿಪೂರ್ಣಮಾಡಿದೆನು.

೨೩–೨೪. ಆ ದೇವನು ಇನ್ನೂ ನನಗೆ ಪ್ರಸನ್ನನಾಗಲಿಲ್ಲ. ವಿಷ್ಣುದಾಸನ ಭಕ್ತಿಯಿಂದಲೇ ಹರಿಯು ಅವನಿಗೆ ಸಾಕ್ಷಾತ್ಕಾರವನ್ನು ದಯೆಪಾಲಿಸಿದನು. ಆದುದರಿಂದ ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ ವಿಷ್ಣುವು ಪ್ರಸನ್ನನಾಗುವುದೇ ಇಲ್ಲ. ಆ ಪ್ರಭುವಿನ ದರ್ಶನಮಾಡಲು ಭಕ್ತಿಯೊಂದೇ ಸಾಧನವು.

೨೫. ಗಣಗಳು ಹೇಳುತ್ತಾರೆ:— ಹೀಗೆ ನುಡಿದು, ತನ್ನ ತಂಗಿಯ ಮಗ

ತಸ್ಮಾದದ್ಯಾಪಿ ತದ್ದೇಶೇ ಸದಾ ರಾಜ್ಯಾಂಶಭಾಗಿನಃ ।
ಸ್ವಸ್ರಿಯಾ ಏವ ಜಾಯಂತೇ ತತ್ಕೃತಾವಧಿವರ್ತಿನಃ ॥ ೨೬ ॥
ಯಜ್ಞವಾಟಂ ತತೋಽಭ್ಯೇತ್ಯ ಯಜ್ಞಕುಂಡಾಗ್ರತಃಸ್ಥಿತಃ ।
ತ್ರಿರುಚ್ಚೈರ್ವ್ಯಾಜಹಾರಾಶು ವಿಷ್ಣುಂ ಸಂಬೋಧಯಂಸ್ತದಾ ॥ ೨೭ ॥
ವಿಷ್ಣೋ ಭಕ್ತಿಂ ಸ್ಥಿರಾಂ ದೇಹಿ ಮನೋವಾಕ್ಕಾಯಕರ್ಮಭಿಃ ।
ಇತ್ಯುಕ್ತ್ವಾ ಸೋಽಪತದ್ವಹ್ನೌ ಸರ್ವೇಷಾಮೇವ ಪಶ್ಯತಾಂ ॥ ೨೮ ॥
ಮುದ್ಗಲಸ್ತು ತದಾ ಕ್ರೋಧಾಚ್ಛಿಖಾಮುತ್ಪಾಟಯತ್ಸ್ವಕಾಂ ।
ತತಸ್ತ್ವದ್ಯಾಪಿ ತದ್ಗೋತ್ರೇ ಮುದ್ಗಲಾ ವಿಶಿಖಾ ಬಭುಃ ॥ ೨೯ ॥
ತಾವದಾವಿರಭೂದ್ವಿಷ್ಣುಃ ಕುಂಡಾಗ್ನೌ ಭಕ್ತವತ್ಸಲಃ ।
ತಮಾಲಿಂಗ್ಯ ವಿಮಾನಾಗ್ರ್ಯಂ ಸಮಾರೋಹಯದಚ್ಯುತಃ ॥ ೩೦ ॥
ತಮಾಲಿಂಗ್ಯಾಽತ್ಮಸಾರೂಪ್ಯಂ ದತ್ವಾ ವೈಕುಂಠಮಂದಿರಂ ।
ತೇನೈವ ಸಹ ದೇವೇಶೋ ಜಗಾಮ ತ್ರಿದಶೈರ್ವೃತಃ ॥ ೩೧ ॥

---

ನನ್ನು ನೃಪಾಸನದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಿದನು. ಆ ರಾಜನು ಬಾಲ್ಯದಿಂದಲೂ ಯಜ್ಞದಲ್ಲಿಯೆ ದೀಕ್ಷಿತನಾಗಿದ್ದುದರಿಂದ ಅವನಿಗೆ ಮಕ್ಕಳಿರಲಿಲ್ಲವು.

೨೬. ಆದ್ದರಿಂದ ಈಗಲೂ ಕೂಡ ಆ ರಾಜ್ಯದಲ್ಲಿ ಆ ರಾಜನು ಮಾಡಿದ ನಿಯಮವನ್ನೇ ಅನುಸರಿಸಿ ಸೋದರಿಯ ಮಕ್ಕಳೇ ರಾಜ್ಯಾಂಶಕ್ಕೆ ಭಾಗಿಗಳಾಗುತ್ತಾರೆ.

೨೭-೨೮. ಬಳಿಕ ಅವನು ಯಜ್ಞವಾಟಕ್ಕೆ ಹೋಗಿ ಯಜ್ಞಕುಂಡದ ಮುಂದೆ ನಿಂತು ವಿಷ್ಣುವನ್ನು ಸಂಬೋಧಿಸುತ್ತಾ 'ಎಲೈ ವಿಷ್ಣುವೆ! ಮನೋವಾಕ್ಕಾಯ ಕರ್ಮಗಳಲ್ಲಿ ನನಗೆ ಸ್ಥಿರವಾದ ಭಕ್ತಿಯನ್ನು ದಯೆಪಾಲಿಸು' ಎಂದು ಮೂರುಸಾರಿ ಬೇಗಬೇಗ ಗಟ್ಟಿಯಾಗಿ ನುಡಿದು ಎಲ್ಲರೂ ನೋಡುತ್ತಿರಲು ಅವರೆದುರಿಗೆ ಬೆಂಕಿಯಲ್ಲಿ ಹಾರಿದನು.

೨೯. ಆಗ ಮುದ್ಗಲನು ಕ್ರೋಧದಿಂದ ತನ್ನ ಶಿಖೆಯನ್ನು ಕಿತ್ತುಹಾಕಿದನು. ಆದ್ದರಿಂದ ಇಂದಿಗೂ ಕೂಡ ಆ ಗೋತ್ರದವರಾದ ಮುದ್ಗಲರು ಶಿಖೆಯಿಲ್ಲದವರಾದರು.

೩೦. ಅಷ್ಟರಲ್ಲಿ ಭಕ್ತವತ್ಸಲನಾದ ವಿಷ್ಣುವು ಕುಂಡಾಗ್ನಿಯಲ್ಲಿ ಕಾಣಿಸಿಕೊಂಡನು. ಆ ರಾಜನನ್ನು ಆಲಿಂಗಿಸಿ ಆ ಅಚ್ಯುತನು ಅವನನ್ನು ವಿಮಾನದ ಮೇಲೇರಿಸಿಕೊಂಡನು.

೩೧. ಅವನನ್ನು ಆಲಿಂಗಿಸಿಕೊಂಡು ತನ್ನ ಸಾರೂಪ್ಯವನ್ನು ದಯೆಪಾಲಿಸಿ ಆ ದೇವೇಶನು ದೇವತೆಗಳಿಂದ ಪರಿವೃತನಾಗಿ ಅವನನ್ನು ಸಂಗಡ ಕರೆದುಕೊಂಡು ಹೊರಟುಹೋದನು.

ನಾರದ ಉವಾಚ :—

ಯೋ ವಿಷ್ಣುದಾಸಸ್ಸ ತು ಪುಣ್ಯಶೀಲೋ
ಯಶ್ಚೋಲಭೂಪಸ್ಸ ಸುಶೀಲನಾಮಾ ।
ಏತಾವುಭೌ ತತ್ಸಮರೂಪಭಾಜೌ
ದ್ವಾಃಸ್ಥೌ ಕೃತೌ ತೇನ ರಮಾಪ್ರಿಯೇಣ ॥ ೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಚೋಲ ವಿಷ್ಣುದಾಸ ಮುಕ್ತಿಕಥನಂ" ನಾಮ ಸಪ್ತವಿಂಶೋಽಧ್ಯಾಯಃ

---

೩೨. ನಾರದನು ಹೇಳುತ್ತಾನೆ:—ಯಾವನು ವಿಷ್ಣುದಾಸನಾಗಿದ್ದನೋ ಅವನೇ ಪುಣ್ಯಶೀಲನು. ಯಾವನು ಚೋಲರಾಜನಾಗಿದ್ದನೋ ಅವನೇ ಸುಶೀಲನೆಂಬವನು. ಅವನಿಗೆ ಸಮಾನವಾದ ರೂಪವುಳ್ಳವರಾದ ಇವರಿಬ್ಬರನ್ನೂ ಆ ರಮಾಪ್ರಿಯನು ದ್ವಾರಪಾಲಕರನ್ನಾಗಿ ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಚೋಲ ವಿಷ್ಣುದಾಸರ ಮುಕ್ತಿಕಥನ"ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟವಿಂಶೋಽಧ್ಯಾಯಃ

## ಧರ್ಮದತ್ತಮೋಕ್ಷಪ್ರಾಪ್ತಿಕಥನಂ

ಧರ್ಮದತ್ತ ಉವಾಚ :—

ಜಯಶ್ಚ ವಿಜಯಶ್ಚೈವ ವಿಷ್ಣೋರ್ದ್ವಾಃಸ್ಥೌ ಶ್ರುತೌ ಮಯಾ ।
ಕಿಂ ನು ತಾಭ್ಯಾಂ ಪುರಾ ಚೀರ್ಣಂ ತಸ್ಮಾತ್ತದ್ರೂಪಧಾರಿಣೌ ॥ ೧ ॥

ಗಣಾವೂಚತುಃ :—

ತೃಣಬಿಂದೋಸ್ತು ಕನ್ಯಾಯಾಂ ದೇವಹೂತ್ಯಾಂ ಪುರಾ ದ್ವಿಜ ।
ಕರ್ದಮಸ್ಯ ತು ದೃಷ್ಟ್ಯೈವ ಪುತ್ರೌ ದ್ವೌ ಸಂಬಭೂವತುಃ ॥ ೨ ॥
ಜ್ಯೇಷ್ಠೋ ಜಯಃ ಕನಿಷ್ಠೋಽಭೂತ್ ವಿಜಯಶ್ಚೈವ ನಾಮತಃ ।
ತಸ್ಯಾಮೇವಾಭವತ್ಪಶ್ಚಾತ್ಕಪಿಲೋ ಯೋಗಧರ್ಮವಿತ್ ॥ ೩ ॥
ಜಯಶ್ಚ ವಿಜಯಶ್ಚೈವ ವಿಷ್ಣುಭಕ್ತಿರತೌ ಸದಾ ।
ತೌ ತನ್ನಿಷ್ಠೇಂದ್ರಿಯಗ್ರಾಮೌ ಧರ್ಮಶೀಲೌ ಬಭೂವತುಃ ॥ ೪ ॥
ನಿತ್ಯಮಷ್ಟಾಕ್ಷರೀಜಪ್ಯೌ ವಿಷ್ಣುವ್ರತಕರಾವುಭೌ ।
ಸಾಕ್ಷಾತ್ಕಾರಂ ದದೌ ವಿಷ್ಣುಸ್ತಯೋರ್ನಿತ್ಯಾರ್ಚನೇ ಸದಾ ॥ ೫ ॥

---

## ಕನ್ನಡದ ಅನುವಾದ

### ಧರ್ಮದತ್ತಮೋಕ್ಷಪ್ರಾಪ್ತಿಕಥನ

೧. ಧರ್ಮದತ್ತನು ಹೇಳುತ್ತಾನೆ:— ಜಯ ವಿಜಯರು ವಿಷ್ಣುವಿನ ದ್ವಾರಪಾಲಕರೆಂದು ಕೇಳಿದ್ದೇನೆ. ಅವರು ಪೂರ್ವದಲ್ಲಿ ಏನುಮಾಡಿ ವಿಷ್ಣುರೂಪ ಧಾರಿಗಳಾದರು?"

೨. ಗಣಗಳು ಹೇಳುತ್ತಾರೆ:—ಎಲೈ ದ್ವಿಜನೇ! ಪೂರ್ವದಲ್ಲಿ ತೃಣಬಿಂದುವಿನ ಮಗಳಾದ ದೇವಹೂತಿಯಲ್ಲಿ ಕರ್ದಮಮುನಿಯ ದೃಷ್ಟಿಮಾತ್ರದಿಂದಲೇ ಇಬ್ಬರು ಪುತ್ರರು ಸಂಭವಿಸಿದರು.

೩. ಹಿರಿಯುವನು ಜಯನೆಂದೂ, ಕಿರಿಯುವನು ವಿಜಯನೆಂದೂ ಹೆಸರುಗಳನ್ನು ಪಡೆದರು. ಆ ಬಳಿಕ ಅವಳಲ್ಲಿಯೇ ಯೋಗಧರ್ಮಜ್ಞನಾದ ಕಪಿಲನೂ ಹುಟ್ಟಿದನು.

೪. ಜಯನೂ, ವಿಜಯನೂ ಸದಾಕಾಲವೂ ವಿಷ್ಣುಭಕ್ತಿಯಲ್ಲಿಯೇ ಆಸಕ್ತರಾಗಿದ್ದರು. ಅವರಿಬ್ಬರೂ ಅವನಲ್ಲಿಯೇ ನೆಟ್ಟ ಇಂದ್ರಿಯಸಮೂಹವುಳ್ಳವರಾಗಿ ಧರ್ಮಶೀಲರಾದರು.

೫. ಇಬ್ಬರೂ ನಿತ್ಯವೂ ಅಷ್ಟಾಕ್ಷರಿಯನ್ನು ಜಪಿಸುತ್ತಾ ವಿಷ್ಣುವ್ರತಗಳನ್ನು

ಮರುತ್ತೇನ ಕದಾಚಿತ್ತಾವಾಹೂತೌ ಯಜ್ಞಕರ್ಮಣಿ ।
ಜಗ್ಮತುರ್ಯಜ್ಞಕುಶಲೌ ದೇವರ್ಷಿಗಣಪೂಜಿತೌ ॥ ೬ ॥
ಜಯಸ್ತತ್ರಾಭವದ್ಬ್ರಹ್ಮಾ ಯಾಜಕೋ ವಿಜಯೋಽಭವತ್ ।
ತತೋ ಯಜ್ಞವಿಧಿಂ ಕೃತ್ಸ್ನಂ ಪರಿಪೂರ್ಣಂ ಚ ಚಕ್ರತುಃ ॥ ೭ ॥
ಮರುತ್ತೋಽವಭೃಥಸ್ನಾತಸ್ತಾಭ್ಯಾಂ ವಿತ್ತಂ ದದೌ ಬಹು ।
ತತ್ಸಮಾದಾಯ ತೌ ವಿತ್ತಂ ಜಗ್ಮತುಸ್ಸ್ವಾಶ್ರಮಂ ಪ್ರತಿ ॥ ೮ ॥
ಯಜನಾಯ ಪೃಥಗ್ವಿಷ್ಣೋಸ್ತುಷ್ಟ್ಯರ್ಥಂ ತೌ ತತೋ ಮುನೀ ।
ತದ್ಧನಂ ವಿಭಜಂತೌ ತು ಪಸ್ಪರ್ಧಾತೇ ಪರಸ್ಪರಂ ॥ ೯ ॥
ಜಯೋಽಬ್ರವೀತ್ಸಮೋ ಭಾಗಃ ಕ್ರಿಯತಾಮಿತಿ ತತ್ರ ಸಃ ।
ವಿಜಯಶ್ಚಾಬ್ರವೀನ್ನೈತದ್ಯಲ್ಲಬ್ಧಂ ಯೇನ ತಸ್ಯ ತತ್ ॥ ೧೦ ॥
ತತೋಽಶಪಜ್ಜಯಃ ಕ್ರೋಧಾದ್ವಿಜಯಂ ಲುಬ್ಧಮಾನಸಂ ।
ಗೃಹೀತ್ವಾ ನ ದದಾಸ್ಯೇತತ್ತಸ್ಮಾದ್ಗ್ರಾಹೋ ಭವೇತಿ ತಂ ॥ ೧೧ ॥

---

ನಡೆಸುತ್ತಿದ್ದರು. ಅವರಿಬ್ಬರಿಗೂ ನಿತ್ಯಾರ್ಚನೆಯಲ್ಲಿ ಹರಿಯು ಸಾಕ್ಷಾತ್ಕಾರವನ್ನು ಕೊಡುತ್ತಿದ್ದನು.

೬. ಒಂದಾನೊಂದು ಸಲ ಮರುತ್ತನು ಅವರನ್ನು ಯಜ್ಞಕರ್ಮಕ್ಕೆ ಆಹ್ವಾನಿಸಿದನು. ಯಜ್ಞಕುಶಲರೂ ದೇವರ್ಷಿಗಣಪೂಜಿತರೂ ಆಗಿ ಅವರು ಯಜ್ಞಕ್ಕೆ ಹೋದರು.

೭. ಆ ಯಜ್ಞದಲ್ಲಿ ಜಯನು ಬ್ರಹ್ಮನಾದನು; ವಿಜಯನು ಯಾಜಕನಾದನು. ಅವರು ಯಜ್ಞವಿಧಿಯೆಲ್ಲವನ್ನೂ ಪರಿಪೂರ್ಣವಾಗಿ ಮಾಡಿ ಮುಗಿಸಿದರು.

೮. ಮರುತ್ತನು ಅವಭೃಥಸ್ನಾನಮಾಡಿ ಅವರಿಬ್ಬರಿಗೂ ಬಹುಧನವನ್ನು ಕೊಟ್ಟನು. ಆ ಧನವನ್ನು ತೆಗೆದುಕೊಂಡು ಅವರು ತಮ್ಮ ಆಶ್ರಮಕ್ಕೆ ಹೊರಟುಹೋದರು.

೯. ಬಳಿಕ ಆ ಇಬ್ಬರು ಮುನಿಗಳೂ ಯಜ್ಞಕ್ಕೂ ವಿಷ್ಣುವಿನ ಸಂತುಷ್ಟಿಗೂ ಆ ಹಣವನ್ನು ಹಂಚತೊಡಗಿ ಒಬ್ಬರೊಡನೊಬ್ಬರು ಸ್ಪರ್ಧಿಸಲು ಮೊದಲು ಮಾಡಿದರು.

೧೦. "ಸಮಭಾಗ ಮಾಡಬೇಕು" ಎಂದು ಜಯನು ಹೇಳಿದನು. ವಿಜಯನು "ಹಾಗಲ್ಲ; ಯಾವುದರಿಂದ ಯಾವುದು ದೊರೆಯಿತೋ ಅದು ಅದಕ್ಕೆ ಸೇರಬೇಕು" ಎಂದನು.

೧೧. ಆಗ ಜಯನು ವಿಜಯನನ್ನು ಲುಬ್ಧಮನಸ್ಸಿನವನೆಂದೆಣಿಸಿ, "ಹಣವನ್ನೆಲ್ಲ ತೆಗೆದುಕೊಂಡು, ಕೊಡುವುದಿಲ್ಲ ಎಂದು ಹೇಳುವೆಯಾದುದರಿಂದ ಮೊಸಳೆಯಾಗು" ಎಂದು ಶಪಿಸಿದನು.

ವಿಜಯಸ್ತಸ್ಯ ತಂ ಶಾಪಂ ಶ್ರುತ್ವಾ ಸೋಽಪ್ಯಶಪಚ್ಚ ತಂ ।
ಮದಭ್ರಾಂತೋಽಶಪಸ್ತ್ವಂ ಮಾಂ ತಸ್ಮಾನ್ಮಾತಂಗತಾಂ ವ್ರಜ ॥ ೧೨ ॥
ತತ್ತದಾಚಖ್ಯತುರ್ವಿಷ್ಣುಂ ದೃಷ್ಟ್ವಾ ನಿತ್ಯಾರ್ಚನೇ ವಿಭುಂ ।
ಶಾಪಯೋಶ್ಚ ನಿವೃತ್ತಿಂ ತೌ ಯಯಾಚಾತೇ ರಮಾಪತಿಂ ॥ ೧೩ ॥

ಜಯವಿಜಯಾವೂಚತುಃ :—

ಭಕ್ತಾವಾವಾಂ ಕಥಂ ದೇವ ಗ್ರಾಹಮಾತಾಂಗಯೋನಿನೌ ।
ಭವಿಷ್ಯಾವಃ ಕೃಪಾಸಿಂಧೋ ತಚ್ಛಾಪೋ ವಿನಿವರ್ತ್ಯತಾಂ ॥ ೧೪ ॥

ಶ್ರೀ ಭಗವಾನುವಾಚ :—

ಮದ್ಭಕ್ತಯೋರ್ವಚೋಽಸತ್ಯಂ ನ ಕದಾಚಿದ್ಭವಿಷ್ಯತಿ ।
ಮಯಾಪಿ ನಾನ್ಯಥಾ ಕರ್ತುಂ ಶಕ್ಯತೇ ತತ್ಕದಾಚನ ॥ ೧೫ ॥
ಪ್ರಹ್ಲಾದವಚಸಾ ಸ್ತಂಭೇಽಪ್ಯಾವಿರ್ಭೂತೋ ಹ್ಯಹಂ ಪುರಾ ।
ತಥಾಂಬರೀಷ ವಾಕ್ಯೇನ ಜಾತೋ ಗರ್ಭೇ ಸ್ವಯಂ ಕಿಲ ॥ ೧೬ ॥
ತಸ್ಮಾದ್ಯುವಾಮಿಮೌ ಶಾಪಾವನುಭೂಯ ಸ್ವಯಂ ಕೃತೌ ।
ಲಭೇಥಾಂ ಮತ್ಪದಂ ನಿತ್ಯಂ ಇತ್ಯುಕ್ತ್ವಾಂತರ್ದಧೇ ಹರಿಃ ॥ ೧೭ ॥

---

೧೨. ವಿಜಯನು ಆ ಶಾಪವನ್ನಾಲಿಸಿ, 'ಮದಭ್ರಾಂತನಾಗಿ ನೀನು ನನ್ನನ್ನು ಶಪಿಸಿದೆ. ಆದುದರಿಂದ ನೀನು ಆನೆಯಾಗು' ಎಂದು ತಾನೂ ಅವನನ್ನು ಶಪಿಸಿದನು.

೧೩. ಇಬ್ಬರೂ ನಿತ್ಯಾರ್ಚನೆಯಲ್ಲಿ ವಿಭುವಾದ ವಿಷ್ಣುವನ್ನು ಕಂಡು ಆ ಸಂಗತಿಯನ್ನು ಅರಿಕೆಮಾಡಿಕೊಂಡರು. ತಮ್ಮ ಶಾಪಕ್ಕೆ ವಿಮೋಚನೆಯನ್ನು ಕೊಡಬೇಕೆಂದೂ ಆ ರಮಾಪತಿಯನ್ನು ಇಬ್ಬರೂ ಬೇಡಿಕೊಂಡರು.

೧೪. ಜಯ ವಿಜಯರು ಹೇಳುತ್ತಾರೆ:—"ದೇವಾ! ನಾವಿಬ್ಬರೂ ನಿನ್ನ ಭಕ್ತರು. ಆನೆ ಮೊಸಳೆಗಳ ಜಾತಿಗಳಲ್ಲಿ ಹುಟ್ಟುವುದು ಹೇಗೆ? ಕೃಪಾಸಿಂಧುವೇ! ಆ ಶಾಪವು ನಿವಾರಣೆಯಾಗಲಿ" ಎಂದು ಪ್ರಾರ್ಥಿಸಿದರು.

೧೫. ಶ್ರೀಭಗವಂತನು ಹೇಳುತ್ತಾನೆ:—"ನನ್ನ ಭಕ್ತರ ಮಾತು ಎಂದಿಗೂ ಸುಳ್ಳಾಗುವುದಿಲ್ಲ. ಅದನ್ನು ಬದಲಿಸಿ ಬೇರೆಮಾಡುವುದಕ್ಕೆ ನನ್ನಿಂದ ಯಾವಾಗಲೂ ಶಕ್ಯವಿಲ್ಲ.

೧೬–೧೭. ನಾನು ಪೂರ್ವದಲ್ಲಿ ಪ್ರಹ್ಲಾದನ ಮಾತಿನಿಂದ ಕಂಬದಲ್ಲಿ ಕೂಡ ಹುಟ್ಟಿ ಬಂದೆನು. ಹಾಗೆಯೇ ಅಂಬರೀಷನ ಮಾತಿನಪ್ರಕಾರ ಅವನ ಗರ್ಭದಲ್ಲಿ ನಾನೇ ಹುಟ್ಟಿದೆನು. ಆದುದರಿಂದ ನೀವು ಸ್ವಯಂಕೃತವಾದ ಈ ಶಾಪಗಳನ್ನು ಅನುಭವಿಸಿ ಆ ಬಳಿಕ ಶಾಶ್ವತವಾದ ನನ್ನ ಪದವಿಯನ್ನು ಪಡೆಯಿರಿ" ಎಂದು ನುಡಿದು ಶ್ರೀಹರಿಯು ಅಂತರ್ಧಾನಹೊಂದಿದನು.

ಗಣಾವೂಚತುಃ:—

ತತಸ್ತೌ ಗ್ರಾಹಮಾತಂಗಾವಭೂತಾಂ ಗಂಡಕೀತಟೇ ।
ಜಾತಿಸ್ಮರೌ ತು ತದ್ಯೋನ್ಯಾಮಪಿ ವಿಷ್ಣುವ್ರತೇ ಸ್ಥಿತೌ ॥ ೧೮ ॥
ಕದಾಚಿತ್ಸ ಗಜಃ ಸ್ನಾತುಂ ಕಾರ್ತಿಕೇ ಗಂಡಕೀಂ ಗತಃ ।
ತಾವಜ್ಜಗ್ರಾಹ ತಂ ಗ್ರಾಹಸ್ಸಂಸ್ಮರನ್ ಶಾಪಕಾರಣಂ ॥ ೧೯ ॥
ಗ್ರಾಹಗ್ರಸ್ತೋ ಹ್ಯಸೌ ನಾಗಸ್ಸಸ್ಮಾರ ಶ್ರೀಪತಿಂ ತದಾ ।
ತಾವದಾವಿರಭೂದ್ವಿಷ್ಣುಶ್ಚಕ್ರಶಂಖಗದಾಧರಃ ॥ ೨೦ ॥
ತತಸ್ತೌ ಗ್ರಾಹಮಾತಂಗೌ ಚಕ್ರಂ ಕ್ಷಿಪ್ತ್ವಾ ಸಮುದ್ಧೃತೌ ।
ದತ್ತ್ವೈವ ನಿಜಸಾರೂಪ್ಯಂ ವೈಕುಂಠಮನಯದ್ವಿಭುಃ ॥ ೨೧ ॥
ತತಃ ಪ್ರಭೃತಿ ತತ್ಸ್ಥಾನಂ ಹರಿಕ್ಷೇತ್ರಮಿತಿ ಸ್ಮೃತಂ ।
ಚಕ್ರಸಂಘರ್ಷಣಾದಸ್ಮಿನ್ಗ್ರಾವಾಣೋಽಪಿ ಹಿ ಲಾಂಛಿತಾಃ ॥ ೨೨ ॥
ತಾವುಭೌ ವಿಶ್ರುತೌ ಲೋಕೇ ಜಯಶ್ಚ ವಿಜಯಸ್ತಥಾ ।
ನಿತ್ಯಂ ವಿಷ್ಣುಪ್ರಿಯೌ ದ್ವಾಃಸ್ಥೌ ಪೃಷ್ಟೌ ಯೌ ಹಿ ತ್ವಯಾ ದ್ವಿಜ ॥ ೨೩ ॥
ಅತಸ್ತ್ವಮಪಿ ಧರ್ಮಜ್ಞ ನಿತ್ಯಂ ವಿಷ್ಣುವ್ರತೇ ಸ್ಥಿತಃ ।
ತ್ಯಕ್ತಮಾತ್ಸರ್ಯದಂಭೋಽಪಿ ಭವಸ್ವ ಸಮದರ್ಶನಃ ॥ ೨೪ ॥

---

೧೮. ಗಣಗಳು ಹೇಳುತ್ತಾರೆ:—ಬಳಿಕ ಅವರಿಬ್ಬರೂ ಗಂಡಕೀ ತೀರದಲ್ಲಿ ಆನೆ ಮೊಸಳೆಗಳಾಗಿ ಹುಟ್ಟಿದರು. ಆ ಜನ್ಮದಲ್ಲಿ ಕೂಡ ಅವರು ಪೂರ್ವಜನ್ಮದ ಸ್ಮರಣೆಯುಳ್ಳವರಾಗಿ ವಿಷ್ಣುವ್ರತದಲ್ಲಿ ತೊಡಗಿದ್ದರು.

೧೯–೨೨. ಹೀಗಿರಲು ಒಂದಾನೊಂದು ದಿನ ಕಾರ್ತಿಕಮಾಸದಲ್ಲಿ ಆ ಆನೆಯು ಸ್ನಾನಮಾಡಲು ಗಂಡಕೀ ನದಿಗೆ ಹೋಯಿತು. ಮೊಸಳೆಯು ಆ ಶಾಪಕಾರಣವನ್ನು ಸ್ಮರಿಸಿ ಅದನ್ನು ಹಿಡಿದುಕೊಂಡಿತು. ಮೊಸಳೆಯು ಹಿಡಿದ ಆ ಸಮಯದಲ್ಲಿ ಆನೆಯು ಶ್ರೀಪತಿಯನ್ನು ಸ್ಮರಿಸಿತು. ಆ ಕ್ಷಣವೆ ವಿಷ್ಣುವು ಶಂಖಚಕ್ರಗದಾಧಾರಿಯಾಗಿ ಅಲ್ಲಿಯೆ ಆವಿರ್ಭವಿಸಿದನು. ಬಳಿಕ ಆ ಆನೆ ಮೊಸಳೆಗಳನ್ನು ಚಕ್ರವನ್ನೆಸೆದು ಮೇಲೆತ್ತಿ ಉದ್ಧರಿಸಿ ತನ್ನ ಸಾರೂಪ್ಯವನ್ನು ಕೊಟ್ಟು ಆ ವಿಭುವು ಅವರನ್ನು ವೈಕುಂಠಕ್ಕೆ ಕರೆದುಕೊಂಡುಹೋದನು. ಅಂದು ಮೊದಲುಗೊಂಡು ಆ ಸ್ಥಾನವು ಹರಿಕ್ಷೇತ್ರವೆಂದು ಹೆಸರನ್ನು ಹೊಂದಿತು. ಚಕ್ರದ ಸಂಘರ್ಷಣದಿಂದ ಅಲ್ಲಿನ ಕಲ್ಲುಗಳಲ್ಲಿ ಕೂಡ ಚಕ್ರಲಾಂಛನವುಂಟಾಯಿತು.

೨೩. ಆ ಇಬ್ಬರೂ ಲೋಕದಲ್ಲಿ ಜಯನೆಂದೂ, ವಿಜಯನೆಂದೂ ಪ್ರಸಿದ್ಧರಾದರು. ಅವರು ಸದಾ ವಿಷ್ಣುವಿಗೆ ಪ್ರಿಯರಾದ ದ್ವಾರಪಾಲಕರಾದರು. ಎಲೈ ದ್ವಿಜನೇ! ಅವರನ್ನು ಕುರಿತಲ್ಲವೇ ನೀನು ಪ್ರಶ್ನೆಮಾಡಿದ್ದು.

೨೪. ಎಲೈ ಧರ್ಮಜ್ಞನೇ! ಆದುದರಿಂದ ನೀನು ಕೂಡ ನಿತ್ಯವೂ ವಿಷ್ಣುವ್ರತ

ತುಲಾಮಕರಮೇಷೇಷು ಪ್ರಾತಃಸ್ನಾಯೀ ಸದಾ ಭವ ।
ಏಕಾದಶೀವ್ರತೇ ತಿಷ್ಠ ತುಲಸೀವನಪಾಲಕಃ ॥ ೨೫ ॥
ಬ್ರಾಹ್ಮಣಾನಥ ಗಾಶ್ಚಾಪಿ ವೈಷ್ಣವಾಂಶ್ಚ ಸದಾ ಭಜ ।
ಮಸೂರಿಕಾಮಾರನಾಲಂ ವೃಂತಾಕಾನ್ಯಪಿ ಖಾದ ಮಾ ॥ ೨೬ ॥
ಏವಂ ತ್ವಮಪಿ ದೇಹಾಂತೇ ತದ್ವಿಷ್ಣೋಃ ಪರಮಂ ಪದಂ ।
ಪ್ರಾಪ್ಸ್ಯೋಷಿ ಧರ್ಮದತ್ತ ತ್ವಂ ತದ್ಭಕ್ತ್ಯೈವ ಯಥಾ ವಯಂ ॥ ೨೭ ॥
ತಾವಜ್ಜನ್ಮವ್ರತಾದಸ್ಮಾತ್ ವಿಷ್ಣುಸಂತುಷ್ಟಿಕಾರಕಾತ್ ।
ನ ಯಜ್ಞಾ ನ ಚ ದಾನಾನಿ ನ ತೀರ್ಥಾನ್ಯಧಿಕಾನಿ ವೈ ॥ ೨೮ ॥
ಧನ್ಯೋಽಸಿ ವಿಪ್ರಾಗ್ರ್ಯ ಯತಸ್ತ್ವಯೈತ
ದ್ವ್ರತಂ ಕೃತಂ ತುಷ್ಟಿಕರಂ ಜಗದ್ಗುರೋಃ ।
ಯದರ್ಧಭಾಗಾಪ್ತಫಲಾ ಮುರಾರೇಃ
ಪ್ರಣೀಯತೇಽಸ್ಮಾಭಿರಿಯಂ ಸಲೋಕತಾಂ ॥ ೨೯ ॥

---

ದಲ್ಲಿ ನೆಲಸಿದವನೂ, ಮಾತ್ಸರ್ಯವನ್ನೂ, ದಂಭವನ್ನೂ ತೊರೆದವನೂ ಸಮದೃಷ್ಟಿಯುಳ್ಳವನೂ ಆಗಿರು.

೨೫. ತುಲಾ, ಮಕರ ಮತ್ತು ಮೇಷ ಮಾಸಗಳಲ್ಲಿ ಯಾವಾಗಲೂ ಪ್ರಾತಃ ಸ್ನಾನವನ್ನು ಮಾಡುವವನಾಗು. ಏಕಾದಶೀ ವ್ರತದಲ್ಲಿ ತೊಡಗಿರು. ತುಲಸಿಯನ್ನು ಬೆಳಸಿ ಪಾಲನಮಾಡು.

೨೬. ಬ್ರಾಹ್ಮಣರನ್ನೂ ಗೋವುಗಳನ್ನೂ ವೈಷ್ಣವರನ್ನೂ ಸದಾ ಸೇವಿಸುತ್ತಿರು. ಮಸೂರಿಕಾ (ಮಸೂರಿಕೆ ಕಾಳು), ಆರನಾಲ (ಆರನಾಲದ ಗೆಡ್ಡೆ), ಬದನೆಕಾಯಿ— ಇವನ್ನು ತಿನ್ನಬೇಡ.

೨೭. ಎಲೈ ಧರ್ಮದತ್ತನೇ! ಹೀಗಿದ್ದು, ನೀನು ಕೂಡ ದೇಹಾಂತ್ಯದಲ್ಲಿ, ನಮ್ಮಂತೆಯೇ ವಿಷ್ಣುವಿನ ಆ ಪರಮಪದವನ್ನು ಪಡೆಯುತ್ತೀಯೆ.

೨೮. ವಿಷ್ಣುವಿಗೆ ಸಂತುಷ್ಟಿಯನ್ನುಂಟುಮಾಡುವುದಾದ ಈ ಆಜನ್ಮವ್ರತಕ್ಕಿಂತಲೂ ಯಜ್ಞಗಳೇ ಆಗಲಿ, ದಾನಗಳೇ ಆಗಲಿ ತೀರ್ಥಗಳೇ ಆಗಲಿ— ಯಾವುವೂ ಹೆಚ್ಚಲ್ಲ.

೨೯. ಎಲೈ ವಿಪ್ರಶ್ರೇಷ್ಠನೇ! ಆ ಜಗದ್ಗುರುವಿಗೆ ಸಂತೋಷಕರವಾದ ಈ ವ್ರತವನ್ನು ಮಾಡಿದುದರಿಂದ ನೀನು ಧನ್ಯನಾಗಿದ್ದೀಯೆ. ನಿನ್ನ ಆ ವ್ರತದ ಫಲದಲ್ಲಿ ಅರ್ಧವನ್ನು ಪಡೆದ ಇವಳನ್ನು ಮುರಾರಿಯ ಲೋಕಕ್ಕೇ ಕರೆದುಕೊಂಡು ಹೋಗುತ್ತಿದ್ದೇವೆ.

ನಾರದ ಉವಾಚ :—

ಇತ್ಥಂ ತೌ ಧರ್ಮದತ್ತಂ ತಮುಪದಿಶ್ಯ ವಿಮಾನಗೌ ।
ತಯಾ ಕಲಹಯಾ ಸಾರ್ಧಂ ವೈಕುಂಠಭವನಂ ಗತೌ ॥ ೩೦ ॥
ಧರ್ಮದತ್ತೋ ಹ್ಯಸೌ ಜಾತಪ್ರತ್ಯಯಸ್ತದ್ವ್ರತೇ ಸ್ಥಿತಃ ।
ದೇಹಾಂತೇ ತದ್ವಿಭೋಃ ಸ್ಥಾನಂಭಾರ್ಯಾಭ್ಯಾಂಸಂಯುತೋಽಭಯಾತ್॥
ಇತಿಹಾಸಮಿಮಂ ಪುರಾಭವಂ
ಶೃಣುತೇ ಶ್ರಾವಯತೇ ಚ ಯಃ ಪುಮಾನ್ ।
ಹರಿ ಸಂನಿಧಿಕಾರಿಣೀಂ ಮತಿಂ
ಲಭತೇಽಸೌ ಕೃಪಯಾ ಜಗದ್ಗುರೋಃ ॥ ೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಧರ್ಮದತ್ತ ಮೋಕ್ಷ ಪ್ರಾಪ್ತಿಕಥನಂ" ನಾಮಾಷ್ಟವಿಂಶೋಽಧ್ಯಾಯಃ

---

೩೦. ನಾರದನಿಂತೆಂದನು :—ಈ ರೀತಿ ಅವರಿಬ್ಬರೂ ಆ ಧರ್ಮದತ್ತನಿಗೆ ಉಪದೇಶಮಾಡಿ ವಿಮಾನವನ್ನೇರಿ ಆ ಕಲಹೆಯೊಡಗೂಡಿ ವೈಕುಂಠಲೋಕಕ್ಕೆ ಹೋದರು.

೩೧. ಧರ್ಮದತ್ತನಾದರೋ, ಚೆನ್ನಾಗಿ ನಂಬಿಕೆ ಹುಟ್ಟಿ ಆ ವ್ರತದಲ್ಲಿಯೇ ನೆಲೆಯಾಗಿ ನಿಂತನು. ದೇಹಾವಸಾನದಲ್ಲಿ ತನ್ನ ಇಬ್ಬರು ಹೆಂಡತಿಯರಿಂದಲೂ ಕೂಡಿದವನಾಗಿ ಆ ವಿಭುವಿನ ಸ್ಥಾನಕ್ಕೆ ಹೋದನು.

೩೨. ಪೂರ್ವದಲ್ಲಿ ನಡೆದ ಈ ಇತಿಹಾಸವನ್ನು ಯಾವ ಮನುಷ್ಯನು ಕೇಳುವನೋ ಮತ್ತು ಕೇಳಿಸುವನೋ ಅವನು ಜಗದ್ಗುರುವಾದ ಮಹಾವಿಷ್ಣುವಿನ ಕೃಪೆಯಿಂದ ಆತನ ಸನ್ನಿಧಿಯನ್ನು ಸೇರಲು ಕಾರಣವಾದ ಬುದ್ಧಿಯನ್ನು ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ಧರ್ಮದತ್ತ ಮೋಕ್ಷಪ್ರಾಪ್ತಿಕಥನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನತ್ರಿಂಶೋಽಧ್ಯಾಯಃ

## ಧನೇಶ್ವರ ಯಕ್ಷಜನ್ಮಪ್ರಾಪ್ತಿವರ್ಣನಂ

ಶ್ರೀ ಕೃಷ್ಣ ಉವಾಚ:—

ಇತಿ ತದ್ವಚನಂ ಶ್ರುತ್ವಾ ಪೃಥುರ್ವಿಸ್ಮಿತಮಾನಸಃ ।
ಸಂಪೂಜ್ಯ ನಾರದಂ ಸಮ್ಯಗ್ವಿಸಸರ್ಜ ತದಾ ಪ್ರಿಯೇ ॥ ೧ ॥
ಪುರಾಽವಂತೀಪುರೇ ಕಶ್ಚಿದ್ವಿಪ್ರ ಆಸೀದ್ಧನೇಶ್ವರಃ ।
ಬ್ರಹ್ಮಕರ್ಮಪರಿಭ್ರಷ್ಟಃ ಪಾಪಕರ್ಮಾ ಸುದುರ್ಮತಿಃ ॥ ೨ ॥
ದೇಶಾದ್ದೇಶಾಂತರಂ ಗಚ್ಛನ್ ಕ್ರಯವಿಕ್ರಯಕಾರಣಾತ್ ।
ಮಾಹಿಷ್ಮತೀಂ ಪುರೀಮಾಗಾತ್ಕದಾಚಿತ್ಸ ಧನೇಶ್ವರಃ ॥ ೩ ॥
ಮಹಿಷೇಣ ಕೃತಾ ಪೂರ್ವಂ ತಸ್ಮಾನ್ಮಾಹಿಷ್ಮತೀತಿ ಸಾ ।
ಯಸ್ಯಾ ವಪ್ರಗತಾ ಭಾತಿ ನರ್ಮದಾ ಪಾಪನಾಶಿನೀ ॥ ೪ ॥
ಕಾರ್ತಿಕವ್ರತಿನಸ್ತತ್ರ ನಾನಾದೇಶಾಗತಾನ್ನರಾನ್ ।
ಸ ದೃಷ್ಟ್ವಾ ವಿಕ್ರಯಂ ಕುರ್ವನ್ಮಾಸಮೇಕಮುವಾಸ ಸಃ ॥ ೫ ॥

---

## ಕನ್ನಡದ ಅನುವಾದ

### ಧನೇಶ್ವರ ಯಕ್ಷಜನ್ಮಪ್ರಾಪ್ತಿವರ್ಣನ

೧. ಶ್ರೀಕೃಷ್ಣನಿಂತೆಂದನು:—"ಈ ರೀತಿಯಾಗಿ ಆ ಮಾತುಗಳನ್ನಾಲಿಸಿ ಪೃಥುವು ಮನಸ್ಸಿನಲ್ಲಿ ಬಹಳ ವಿಸ್ಮಯಗೊಂಡನು. ಎಲೌ ಪ್ರಿಯಳೆ! ಆಗ ಆತನು ನಾರದನನ್ನು ಚೆನ್ನಾಗಿ ಅರ್ಚಿಸಿ ಕಳುಹಿಸಿಕೊಟ್ಟನು.

೨. ಪೂರ್ವದಲ್ಲಿ ಅವಂತೀಪುರದಲ್ಲಿ ಬಹು ಧನವಂತನಾದ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು. ಅವನು ಬ್ರಾಹ್ಮಣ ಕರ್ಮಗಳನ್ನೆಲ್ಲ ಕೈಬಿಟ್ಟು ಪಾಪಕರ್ಮಗಳಲ್ಲಿ ತೊಡಗಿ ಬಹು ದುರ್ಮತಿಯಾಗಿದ್ದನು.

೩. ಕ್ರಯವಿಕ್ರಯ ಮಾಡುವುದಕ್ಕಾಗಿ ದೇಶದೇಶಾಂತರಗಳನ್ನಲೆಯುತ್ತಾ ಒಂದಾನೊಂದು ಸಲ ಆ ಧನೇಶ್ವರನು ಮಾಹಿಷ್ಮತೀ ಪಟ್ಟಣಕ್ಕೆ ಹೋದನು.

೪. ಅದು ಪೂರ್ವದಲ್ಲಿ ಮಹಿಷನಿಂದ ನಿರ್ಮಿಸಲ್ಪಟ್ಟುದುದು. ಆದುದರಿಂದಲೇ ಅದಕ್ಕೆ ಮಾಹಿಷ್ಮತೀಯೆಂಬ ಹೆಸರು ಬಂದಿತು. ಅದರ ಕೋಟೆಯ ಪಕ್ಕದಲ್ಲೇ ಪಾಪನಾಶಿನಿಯಾದ ನರ್ಮದಾನದಿಯು ಹರಿಯುತ್ತಿದ್ದಿತು.

೫. ನಾನಾ ದೇಶಗಳಿಂದ ಕಾರ್ತಿಕವ್ರತಿಗಳಾದ ಜನರು ಅಲ್ಲಿಗೆ ಬಂದು ಸೇರಿದ್ದರು. ಆ ಧನಿಕ ಬ್ರಾಹ್ಮಣನು ಅವರನ್ನು ಕಂಡು, ವಿಕ್ರಯಮಾಡುತ್ತಾ ಒಂದು ತಿಂಗಳವರೆವಿಗೂ ಅಲ್ಲಿಯೇ ವಾಸಮಾಡಿದನು.

ಸ ನಿತ್ಯಂ ನರ್ಮದಾತೀರೇ ಭ್ರಮನ್ವಿಕ್ರಯಕಾರಣಾತ್ ।
ದದರ್ಶ ಬ್ರಾಹ್ಮಣಾನ್ ಸ್ನಾನಜಪದೇವಾರ್ಚನೇ ಸ್ಥಿತಾನ್ ॥ ೬ ॥
ಕಾಂಶ್ಚಿತ್ಪುರಾಣಂ ಪಠತಃ ಕಾಂಶ್ಚಿಚ್ಚ ಶ್ರವಣೇ ರತಾನ್ ।
ನೃತ್ಯಗಾಯನವಾದಿತ್ರವಿಷ್ಣುಶ್ರವಣತತ್ಪರಾನ್ ॥ ೭ ॥
ಉದ್ಯಾಪನವಿಧೌ ಸಕ್ತಾನ್ಕಾಂಶ್ಚಿಜ್ಜಾಗರಣೇ ರತಾನ್ ।
ವಿಪ್ರಗೋಪೂಜನರತಾನ್ ದೀಪದಾನರತಾಂಸ್ತಥಾ ॥ ೮ ॥
ದದರ್ಶ ಕೌತುಕಾವಿಷ್ಟಸ್ತತ್ರ ತತ್ರ ಧನೇಶ್ವರಃ ।
ನಿತ್ಯಂ ಪರಿಭ್ರಮಂಸ್ತತ್ರ ದರ್ಶನಸ್ಪರ್ಶಭಾಷಣಾತ್ ॥ ೯ ॥
ವೈಷ್ಣವಾನಾಂ ತಥಾ ವಿಷ್ಣೋರ್ನಾಮಶ್ರಾವಾದಿ ಸೋಽಲಭತ್ ।
ಏವಂ ಮಾಸಂ ಸ್ಥಿತಸ್ತಸ್ಯ ನರ್ಮದಾಯಾಸ್ತಟೇ ದ್ವಿಜಃ ॥ ೧೦ ॥
ತಾವತ್ಕೃಷ್ಣಾಹಿನಾ ದಷ್ಟೋ ವಿಹ್ವಲಸ್ಸ ಪಪಾತ ಹ ।
ಅಥ ದೇಹಪರಿತ್ಯಕ್ತಂ ತಂ ಬದ್ಧ್ವಾ ಯಮಕಿಂಕರಾಃ ॥ ೧೧ ॥
ಯಮಾಜ್ಞಯಾ ಕುಂಭಿಪಾಕೇ ಚಿಕ್ಷಿಪುಸ್ತಂ ಧನೇಶ್ವರಂ ।
ಯಾವತ್ಕ್ಷಿಪ್ತಶ್ಚ ತತ್ರಾಸೌ ತಾವಚ್ಛೀತಲತಾಂ ಯಯೌ ॥ ೧೨ ॥

---

೬–೭. ಅವನು ದಿನದಿನವೂ ವಿಕ್ರಯಮಾಡುವುದಕ್ಕಾಗಿ ನರ್ಮದಾತೀರದಲ್ಲಿ ಸುತ್ತುತ್ತಾ, ಸ್ನಾನ, ಜಪ, ದೇವತಾರ್ಚನೆಗಳಲ್ಲಿ ನಿರತರಾಗಿದ್ದ ಬ್ರಾಹ್ಮಣರನ್ನು ಕಾಣುತ್ತಿದ್ದನು. ಕೆಲವರು ಬ್ರಾಹ್ಮಣರು ಪುರಾಣವನ್ನು ಪಠಿಸುತ್ತಿದ್ದರು. ಕೆಲವರು ಅದನ್ನು ಆಸಕ್ತಿಯಿಂದ ಕೇಳುತ್ತಿದ್ದರು. ಕೆಲವರು ನೃತ್ಯ, ಗಾಯನ, ವಾದ್ಯವಾದನ, ವಿಷ್ಣುನಾಮಸ್ಮರಣೆ—ಇವುಗಳಲ್ಲಿ ಆಸಕ್ತರಾಗಿದ್ದರು.

೮. ಕೆಲವರು ಉದ್ಯಾಪನೆ ಮಾಡುತ್ತಿದ್ದರು. ಮತ್ತೆ ಕೆಲವರು ಜಾಗರಣೆಯಲ್ಲಿ ನಿರತರಾಗಿದ್ದರು. ಕೆಲವರು ಗೋಬ್ರಾಹ್ಮಣ ಪೂಜೆಗಳಲ್ಲಿ ತೊಡಗಿದ್ದರು. ಮತ್ತೆ ಕೆಲವರು ದೀಪದಾನದಲ್ಲಿ ನಿರತರಾಗಿದ್ದರು.

೯–೧೦. ಹೀಗೆ ವ್ರತನಡೆಸುತ್ತಿದ್ದವರನ್ನು ಅಲ್ಲಲ್ಲೆ ಕಂಡು ಆ ಧನೇಶ್ವರನು ಕೌತುಕಗೊಂಡನು. ನಿತ್ಯವೂ ಅಲ್ಲಿ ಸುತ್ತಾಡುತ್ತಾ ವ್ರತಧಾರಿಗಳಾದ ವೈಷ್ಣವರ ದರ್ಶನಸ್ಪರ್ಶಗಳನ್ನು ಪಡೆದನು. ಅವರ ಭಾಷಣಗಳನ್ನಾಲಿಸಿದನು. ಅದರಿಂದ ಅವನು ವಿಷ್ಣುನಾಮಶ್ರವಣ ಮೊದಲಾದುವನ್ನೂ ಪಡೆದನು. ಈ ರೀತಿ ಆ ಬ್ರಾಹ್ಮಣನು ನರ್ಮದಾತೀರದಲ್ಲಿ ಒಂದು ತಿಂಗಳವರೆವಿಗೂ ನಿಂತನು.

೧೧. ತಿಂಗಳು ತುಂಬುವಷ್ಟರಲ್ಲಿ ಕೃಷ್ಣಸರ್ಪದಿಂದ ಕಡಿಯಲ್ಪಟ್ಟು ಅವನು ವಿಹ್ವಲನಾಗಿ ಬಿದ್ದುಬಿಟ್ಟನು, ಬಳಿಕ ದೇಹಪರಿತ್ಯಾಗ ಮಾಡಿದ ಅವನನ್ನು ಯಮಕಿಂಕರರು ಬಂಧಿಸಿದರು.

೧೨. ಈ ರೀತಿ ಬಂಧಿಸಿದ ಬಳಿಕ ಅವರು ಯಮನ ಆಜ್ಞೆಯ ಪ್ರಕಾರ

ಕುಂಭೀಪಾಕೇ ಯಥಾ ವಹ್ನಿಃ ಪ್ರಹ್ಲಾದಕ್ಷೇಪಣಾತ್ಪುರಾ ।
ಯಮಸ್ತು ಕೌತುಕಂ ದೃಷ್ಟ್ವಾ ಪಪ್ರಚ್ಛಾನೀಯ ತಂ ತತಃ ॥ ೧೩ ॥
ತಾವದಭ್ಯಾಗತಸ್ತತ್ರ ನಾರದಃ ಪ್ರಾಹ ಸತ್ವರಂ ।

ನಾರದ ಉವಾಚ:—

ನೈವಾಯಂ ನಿರಯಾನ್ಭೋಕ್ತುಮರ್ಹೋ ಹ್ಯರುಣನಂದನ ॥ ೧೪ ॥
ಯಸ್ಮಾದಂತೇಽಸ್ಯ ಸಂಜಾತಂ ಕರ್ಮ ಯನ್ನಿರಯಾಪಹಂ ।
ಯಃ ಪುಣ್ಯಕರ್ಮಿಣಾಂ ಕುರ್ಯಾದ್ದರ್ಶನಸ್ಪರ್ಶಭಾಷಣಂ ॥ ೧೫ ॥
ತತಷ್ಷಡಂಶಮಾಪ್ನೋತಿ ಪುಣ್ಯಸ್ಯ ನಿಯತಂ ನರಃ ।
ಸಖ್ಯಂ ತು ತೈಸ್ತು ಸಂಸರ್ಗಂ ಕೃತವಾನ್ಸ್ವೈ ಧನೇಶ್ವರಃ ॥ ೧೬ ॥
ಕಾರ್ತಿಕವ್ರತಿಭಿರ್ಮಾಸಂ ತೇಷಾಂ ಪುಣ್ಯಾಂಶಭಾಗಯಂ ॥ ೧೭ ॥
ತಸ್ಮಾದಕಾಮಪುಣ್ಯೋ ಹಿ ಯಕ್ಷಯೋನಿಸ್ಥಿತೋ ಹ್ಯಯಂ ।
ವಿಲೋಕ್ಯ ನಿರಯಾನ್ಸರ್ವಾನ್ ಪಾಪಭೋಗಪ್ರದರ್ಶಕಾನ್ ॥ ೧೮ ॥

---

ವಾಗಿ ಆ ಧನೇಶ್ವರನನ್ನು ಕುಂಭೀಪಾಕವೆಂಬ ನರಕಕ್ಕೆ ಎಸೆದರು. ಅವನನ್ನು ಅಲ್ಲಿ ಎಸೆದೊಡನೆಯೇ ಅವನಿಗೆ ಅದು ಶೀತಲವಾಯಿತು.

೧೩. ಪೂರ್ವದಲ್ಲಿ ಪ್ರಹ್ಲಾದನನ್ನೆಸೆದ ಬೆಂಕಿಯು ತಣ್ಣಗಾದಂತೆ ಆ ಕುಂಭೀಪಾಕವು ಶೀತಲವಾಯಿತು. ಯಮನು ಆ ಕೌತುಕವನ್ನು ಕಂಡು, ಬಳಿಕ ಅವನನ್ನು ಕರೆಸಿ ಕೇಳಿದನು.

೧೪. ಅಷ್ಟರಲ್ಲಿ ಅಲ್ಲಿಗೆ ಬಂದ ನಾರದನು ಬೇಗ ಉತ್ತರ ಕೊಟ್ಟನು. ನಾರದನು ಹೇಳುತ್ತಾನೆ:— “ಎಲೈ ಅರುಣನಂದನನೇ! ಇವನು ನರಕಗಳನ್ನನುಭವಿಸಲು ಅರ್ಹನಲ್ಲವೇ ಅಲ್ಲವು.

೧೫–೧೭. ಯಾವುದು ನರಕಗಳನ್ನು ನಿವಾರಣೆಮಾಡುವುದೋ ಅಂತಹ ಕರ್ಮವು ಇವನಿಗೆ ಅಂತ್ಯಕಾಲದಲ್ಲಿ ಉಂಟಾಗಿದೆ. ಯಾವನು ಪುಣ್ಯಕರ್ಮಗಳನ್ನು ಮಾಡುವವರ ದರ್ಶನಸ್ಪರ್ಶನ ಭಾಷಣಗಳನ್ನು ಮಾಡುವನೋ ಅವನು ಆ ಪುಣ್ಯದ ಆರನೆಯ ಒಂದು ಭಾಗವನ್ನು ಪಡೆಯುತ್ತಾನೆ. ಇದು ಸತ್ಯವು. ಈ ಧನೇಶ್ವರನಾದರೋ ಕಾರ್ತಿಕವ್ರತಧಾರಿಗಳಾದ ಅವರೊಡನೆ ಒಂದು ತಿಂಗಳ ಕಾಲ ಸಹವಾಸವನ್ನೂ ಸಖ್ಯವನ್ನೂ ಪಡೆದಿರುವನಷ್ಟೆ. ಅವರಿಗೆ ದೊರೆಯುವ ಪುಣ್ಯದ ಒಂದು ಅಂಶಕ್ಕೆ ಇವನು ಭಾಗಿಯಾಗಿದ್ದಾನೆ.

೧೮. ಆದುದರಿಂದ ಬಯಸದೆಯೆ ಪುಣ್ಯವನ್ನು ಪಡೆದ ಇವನು ಪಾಪಭೋಗಪ್ರದರ್ಶಕಗಳಾದ ನರಕಗಳೆಲ್ಲವನ್ನೂ ನೋಡಿ ಯಕ್ಷಜನ್ಮದಲ್ಲಿ ನಿಲ್ಲತಕ್ಕವನು” ಎಂದನು.

ಶ್ರೀ ಕೃಷ್ಣ ಉವಾಚ :—

ಇತ್ಯುಕ್ತ್ವಾ ಗತವತಿ ನಾರದೇ ಸ ಸೌರಿ
ಸ್ತದ್ವಾಕ್ಯಶ್ರವಣವಿಬುದ್ಧತತ್ಸುಕರ್ಮಾ ।
ತಂ ವಿಪ್ರಂ ಪುನರನಯತ್ಸ್ವಕಿಂಕರೇಣ
ತಾನ್ಸರ್ವಾನ್ನಿರಯಗಣಾನ್ಪ್ರದರ್ಶಯಿಷ್ಯನ್ ॥ ೧೯ ॥

ತತೋ ಧನೇಶ್ವರಂ ನೀತ್ವಾ ನಿರಯಾನ್ಪ್ರೇತಪೋಽಬ್ರವೀತ್ ।
ದರ್ಶಯಿಷ್ಯಂಸ್ತು ತಾನ್ಸರ್ವಾನ್ಯಮಾನುಜ್ಞಾಕರಸ್ತದಾ ॥ ೨೦ ॥

ಪ್ರೇತಪ ಉವಾಚ :—

ಪಶ್ಯೇಮಾನ್ನಿರಯಾನ್ಘೋರಾನ್ ಧನೇಶ್ವರ ಮಹಾಭಯಾನ್ ।
ಏಷು ಪಾಪಕರಾ ನಿತ್ಯಂ ಪಚ್ಯಂತೇ ಯಮಕಿಂಕರೈಃ ॥ ೨೧ ॥
ಅಕಾಮಾತ್ಪಾತಕಂ ಶುಷ್ಕಂ ಕಾಮಾದಾರ್ದ್ರಮುದಾಹೃತಂ ।
ಆರ್ದ್ರಶುಷ್ಕಾದಿಭಿಃ ಪಾಪೈರ್ದ್ವಿಪ್ರಕಾರಾನವಸ್ಥಿತಾನ್ ॥ ೨೨ ॥
ಚತುರಾಶೀತಿಸಂಖ್ಯಾಕೈಃ ಪೃಥಗ್ಭೇದೈರವಸ್ಥಿತಾನ್ ।
ಯತ್ಪ್ರಕೀರ್ಣಮಪಾಂಕ್ತೇಯಂ ಮಲಿನೀಕರಣಂ ತಥಾ ॥ ೨೩ ॥

---

೧೯. ಶ್ರೀಕೃಷ್ಣನು ಹೇಳುತ್ತಾನೆ:—ಹೀಗೆ ನುಡಿದು ನಾರದನು ಹೊರಟು ಹೋಗಲು, ಆ ಸೂರ್ಯಪುತ್ರನಾದ ಯಮನು ಆ ವಾಕ್ಯಗಳಿಂದ ಆ ಬ್ರಾಹ್ಮಣನ ಸತ್ಕರ್ಮಗಳನ್ನರಿತುಕೊಂಡನು. ಆ ವಿಪ್ರನಿಗೆ ಸಮಸ್ತ ನರಕಸಮೂಹಗಳನ್ನೂ ತೋರಿಸುವುದಕ್ಕಾಗಿ ತನ್ನ ಕಿಂಕರನ ಸಂಗಡ ಅವನನ್ನು ಮತ್ತೆ ಕಳುಹಿಸಿದನು.

೨೦. ಬಳಿಕ ಧನೇಶ್ವರನನ್ನು ಕರೆದುಕೊಂಡುಹೋಗಿ ಅವನಿಗೆ ಆ ನರಕಗಳನ್ನೆಲ್ಲ ತೋರಿಸುತ್ತಾ ಯಮನ ಆಜ್ಞಾಪಾಲಕನಾದ ಪ್ರೇತಪತಿಯು ಅವನಿಗೆ ಹೀಗೆ ಹೇಳಿದನು.

೨೧. ಪ್ರೇತಪತಿಯು ಹೇಳುತ್ತಾನೆ:—“ ಎಲೈ ಧನೇಶ್ವರನೇ! ಮಹಾಭಯಂಕರಗಳಾದ ಈ ಘೋರ ನರಕಗಳನ್ನು ನೋಡು. ಇವುಗಳಲ್ಲಿ ಪಾಪಮಾಡಿದವರು ನಿತ್ಯವೂ ಯಮಕಿಂಕರರಿಂದ ಬೇಯಿಸಲ್ಪಡುತ್ತಾರೆ.

೨೨. ಅಕಾಮದಿಂದ (ಎಂದರೆ ಬಯಸದೆಯೆ ಮಾಡುವುದರಿಂದ) ಪಾತಕವು ‘ಶುಷ್ಕ’ (ಒಣಕಲು) ಎನಿಸುತ್ತದೆ. ಕಾಮದಿಂದ (ಬೇಕೆಂದು ಮಾಡುವುದರಿಂದ) ‘ಆರ್ದ್ರ’ (ಒದ್ದೆ) ಎನ್ನಲ್ಪಡುವುದು. ಆರ್ದ್ರ, ಶುಷ್ಕಗಳೆಂಬ ಭೇದಗಳುಳ್ಳ ಪಾಪಗಳಿಂದ ನರಕಗಳು ಎರಡು ಪ್ರಕಾರವಾಗಿವೆ.

೨೩–೨೪. ಎಂಬತ್ತನಾಲ್ಕುಸಾವಿರ ಸಂಖ್ಯೆಯ ಈ ನರಕಗಳು ಹಲವು ಭೇದಗಳುಳ್ಳವಾಗಿ ಬೇರೆ ಬೇರೆಯಾಗಿವೆ. ಪ್ರಕೀರ್ಣ, ಅಪಾಂಕ್ತೇಯ, ಮಲಿನೀ

ಜಾತಿಭ್ರಂಶಕರಂ ತದ್ವತ್ ಉಪಪಾತಕಸಂಜ್ಞಕಂ ।
ಅತಿಪಾಪಂ ಮಹಾಪಾಪಂ ಸಪ್ತಧಾ ಪಾತಕಂ ಸ್ಮೃತಂ ॥ ೨೪ ॥
ಏಭಿಸ್ಸಪ್ತಸು ಪಚ್ಯಂತೇ ನಿರಯೇಷು ಯಥಾಕ್ರಮಂ ।
ಕಾರ್ತಿಕವ್ರತಿಭಿರ್ಯಸ್ಮಾತ್ ತ್ಸಂಸರ್ಗೋ ಹ್ಯಭವತ್ತವ ॥ ೨೫ ॥
ತತ್ಪುಣ್ಯೋಪಚಯಾದೇತೇ ನಿರ್ಹೃತಾ ನಿರಯಾಃ ಖಲು ।

ಶ್ರೀಕೃಷ್ಣ ಉವಾಚ:—

ದರ್ಶಯಿತ್ವೇತಿ ನಿರಯಾನ್ಪ್ರೇತಪಸ್ತಮಥಾಹರತ್ ॥ ೨೬ ॥
ಧನೇಶ್ವರಂ ಯಕ್ಷಲೋಕಂ ಯಕ್ಷಶ್ಚಾಭೂತ್ಸ ತತ್ರ ಹಿ ।
ಧನದಸ್ಯಾನುಗಸ್ಸೋಽಯಂ ಧನಯಕ್ಷೇತಿ ವಿಶ್ರುತಃ ॥ ೨೭ ॥

ಸೂತ ಉವಾಚ:—

ಇತ್ಯುಕ್ತ್ವಾ ವಾಸುದೇವೋಽಸೌ ಸತ್ಯಭಾಮಾಮತಿಪ್ರಿಯಾಂ ।
ಸಾಯಂಸಂಧ್ಯಾವಿಧಿಂ ಕರ್ತುಂ ಜಗಾಮ ಜನನೀಗೃಹಂ ॥ ೨೮ ॥

ಬ್ರಹ್ಮೋವಾಚ:—

ಏವಂ ಪ್ರಭಾವಃ ಖಲು ಕಾರ್ತಿಕೋಽಯಂ
ಮುಕ್ತಿಪ್ರದೋ ಭಕ್ತಿಕರಶ್ಚ ಯಸ್ಮಾತ್ ।

---

ಕರಣ, ಜಾತಿಭ್ರಂಶಕರ, ಉಪಪಾತಕ, ಅತಿಪಾಪ, ಮಹಾಪಾಪ—ಎಂದು ಪಾತಕವು ಏಳುಬಗೆಯಾಗಿದೆ.

೨೫–೨೭. ಈ ಪಾಪಗಳಿಂದ ಕ್ರಮವಾಗಿ ಏಳು ನರಕಗಳಲ್ಲಿಯೂ ಪಾಪಿಗಳು ಪಕ್ವಮಾಡಲ್ಪಡುತ್ತಾರೆ. ನಿನಗೆ ಕಾರ್ತಿಕವ್ರತಿಗಳೊಡನೆ ಸಂಪರ್ಕವುಂಟಾಯಿತಷ್ಟೆ; ಆ ಪುಣ್ಯದ ಕೂಡುವಿಕೆಯಿಂದ ಈ ನರಕಗಳೆಲ್ಲ ನಿನಗೆ ಪರಿಹಾರವಾಗಿ ಹೋದುವು'' ಎಂದನು. ಶ್ರೀಕೃಷ್ಣನೆಂದನು:—ಹೀಗೆ ನರಕಗಳನ್ನು ತೋರಿಸಿ ಆ ಬಳಿಕ ಆ ಧನೇಶ್ವರನನ್ನು ಪ್ರೇತಪತಿಯು ಯಕ್ಷಲೋಕಕ್ಕೆ ಕರೆದುಕೊಂಡು ಹೋದನು. ಅವನು ಅಲ್ಲಿ ಯಕ್ಷನಾದನು. ಅವನು ಕುಬೇರನ ಅನುಚರನಾಗಿ ಧನಯಕ್ಷನೆಂದು ಪ್ರಸಿದ್ಧನಾದನು.

೨೮. ಸೂತಪುರಾಣಿಕನು ಹೇಳುತ್ತಾನೆ:—ವಾಸುದೇವನು ನಲ್ಲೆಯಾದ ಸತ್ಯಭಾಮೆಯನ್ನು ಕುರಿತು ಈ ರೀತಿ ನುಡಿದು, ಸಾಯಂಸಂಧ್ಯೆಯನ್ನು ಮಾಡುವುದಕ್ಕಾಗಿ ತಾಯಿಯ ಮನೆಗೆ ಹೋದನು.

೨೯. ಬ್ರಹ್ಮನಿಂತೆಂದನು:— ಈ ಕಾರ್ತಿಕಮಾಸವು ಇಷ್ಟು ಪ್ರಭಾವವುಳ್ಳದ್ದು; ಇದು ಮುಕ್ತಿಪ್ರದವೂ ಭಕ್ತಿಯನ್ನು ಕೊಡತಕ್ಕದ್ದೂ ಆಗಿರುವುದು.

ಪ್ರಯಾಂತ್ಯನೇಕಾರ್ಜಿತಪಾತಕಾನಿ
ವ್ರತಸ್ಯ ಸಂದರ್ಶನತೋಽಪಿ ಮುಕ್ತಿಂ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಧನೇಶ್ವರ ಯಕ್ಷಜನ್ಮ ಪ್ರಾಪ್ತಿ ವರ್ಣನಂ" ನಾಮೈಕೋನತ್ರಿಂಶೋಽಧ್ಯಾಯಃ

---

ಅನೇಕ ಬಗೆಯಾಗಿ ಆರ್ಜಿಸಿರುವ ಪಾತಕಗಳೆಲ್ಲವೂ ಇದರಿಂದ ಪರಿಹಾರವಾಗಿ ಹೋಗುತ್ತವೆ. ಈ ವ್ರತವನ್ನು ನೋಡುವವನಿಗೂ ಕೂಡ ಮುಕ್ತಿಯು ದೊರಕುವುದರಲ್ಲಿ ಸಂಶಯವಿಲ್ಲವು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಧನೇಶ್ವರ ಯಕ್ಷಜನ್ಮಪ್ರಾಪ್ತಿವರ್ಣನ"ವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಂಶೋಽಧ್ಯಾಯಃ

### ದತ್ತಪುಣ್ಯಾಪಾಪಫಲಪ್ರಾಪ್ತಿವರ್ಣನಪೂರ್ವಕ ಮಾಸೋಪವಾಸವ್ರತವಿಧಿಕಥನಂ

ನಾರದ ಉವಾಚ :—

ಅದ್ಭುತೋಽಯಂ ತ್ವಯಾ ಪ್ರೋಕ್ತೋ ಮಹಿಮಾ ಕಾರ್ತಿಕಸ್ಯ ತು ।
ಸ್ವಸ್ಯ ಕರ್ತುರಸಾಮರ್ಥ್ಯಂ ಕಥಮೇತತ್ಕೃತಂ ಭವೇತ್ ॥ ೧ ॥

ಬ್ರಹ್ಮೋವಾಚ :—

ನಾಸ್ತಿ ಕರ್ತುಂ ಸ್ವಸಾಮರ್ಥ್ಯಮುಪಾಯಾತ್ಪ್ರಾಪ್ಯತೇ ಫಲಂ ।
ದ್ರವ್ಯಂ ದತ್ವಾ ಬ್ರಾಹ್ಮಣಾಯ ಗೃಹ್ಣೀಯಾತ್ಫಲಮುತ್ತಮಂ ॥ ೨ ॥
ಶಿಷ್ಯಾದ್ವಾ ಭೃತ್ಯವರ್ಗಾದ್ವಾ ಸ್ತ್ರೀಭ್ಯೋ ವಾಪ್ತಾಚ್ಚ ಕಾರಯೇತ್ ।
ತಸ್ಮಾದಪಿ ಫಲಂ ಗೃಹ್ಣನ್ಫಲಭಾಗ್ಜಾಯತೇ ನರಃ ॥ ೩ ॥

ನಾರದ ಉವಾಚ :—

ಅದತ್ತಾನ್ಯಪಿ ಪುಣ್ಯಾನಿ ಪ್ರಾಪ್ಯಂತೇ ಕೇನಚಿತ್ಕ್ವಚಿತ್ ।
ಏತದಿಚ್ಛಾಮ್ಯಹಂ ಶ್ರೋತುಂ ಕೌತುಕಂ ಮಮ ವರ್ತತೇ ॥ ೪ ॥

---

### ಕನ್ನಡದ ಅನುವಾದ

#### ದತ್ತಪುಣ್ಯಾಪಾಪಫಲಪ್ರಾಪ್ತಿವರ್ಣನಪೂರ್ವಕ ಮಾಸೋಪವಾಸವ್ರತವಿಧಿಕಥನ

೧. ನಾರದನು ಹೇಳುತ್ತಾನೆ:—"ನೀನು ಹೇಳಿದ ಈ ಕಾರ್ತಿಕದ ಮಹಿಮೆಯು ಅದ್ಭುತವಾಗಿರುವುದು. ತಾನು ಸ್ವಂತವಾಗಿ ಮಾಡಲು ಅಸಾಮರ್ಥ್ಯವಿರುವುದಾದರೆ, ಇದನ್ನು ನಡೆಸುವುದು ಹೇಗೆ?" ಎಂದು ಕೇಳಿದನು.

೨. ಬ್ರಹ್ಮನು ಹೇಳುತ್ತಾನೆ:—"ತಾನೇ ಮಾಡಲು ಸಾಮರ್ಥ್ಯವಿಲ್ಲದಾಗ ಉಪಾಯದಿಂದ ಆ ಫಲವನ್ನು ಪಡೆಯಬಹುದು. ಬ್ರಾಹ್ಮಣನಿಗೆ ದ್ರವ್ಯವನ್ನು ಕೊಟ್ಟು ಉತ್ತಮವಾದ ಫಲವನ್ನು ಪರಿಗ್ರಹಿಸಬೇಕು.

೩. ಶಿಷ್ಯನಿಂದಲೊ, ಭೃತ್ಯವರ್ಗದಿಂದಲೊ, ಸ್ತ್ರೀಯರಿಂದಲೋ, ಆಪ್ತರಿಂದಲೋ ವ್ರತವನ್ನು ಮಾಡಿಸಬೇಕು. ಅವರಿಂದ ಕೂಡ ಫಲವನ್ನು ಪರಿಗ್ರಹಿಸುವುದರಿಂದ ನರನು ಫಲಕ್ಕೆ ಭಾಗಿಯಾಗುತ್ತಾನೆ."

೪. ನಾರದನು ಹೇಳುತ್ತಾನೆ:—"ಯಾರು ದಾನಮಾಡಿ ಕೊಡದೆ ಇದ್ದರೂ ಎಲ್ಲಾದರೂ ಒಮ್ಮೆ ಯಾವನಾದರೊಬ್ಬನು ಪುಣ್ಯಗಳನ್ನು ಪಡೆಯುವನಲ್ಲವೆ? ಇದನ್ನು ಕೇಳಲು ನಾನು ಇಚ್ಛಿಸುತ್ತೇನೆ. ಇದರಲ್ಲಿ ನನಗೆ ಕುತೂಹಲವಿದೆ."

ಬ್ರಹ್ಮೋವಾಚ :—

ಅದತ್ತಾನ್ಯಪಿ ಪುಣ್ಯಾನಿ ಲಭಂತೇ ಪಾತಕಾನ್ಯಪಿ ।
ಯೇನೋಪಾಯೇನ ತದ್ವಚ್ಮಿ ಶೃಣುಷ್ವೈಕಮನಾ ದ್ವಿಜ ॥ ೫ ॥
ಸುಕೃತಂ ವಾ ದುಷ್ಕೃತಂ ವಾ ಕೃತಮೇಕೇನ ಯತ್ಕೃತೇ ।
ಜಾಯತೇ ತಸ್ಯ ತದ್ರಾಷ್ಟ್ರೇ ತ್ರೇತಾಯಾಂ ತು ಪುರೋ ಭವೇತ್ ॥ ೬ ॥
ದ್ವಾಪರೇ ವಂಶಮಧ್ಯೇ ತು ಕಲೌ ಕರ್ತೈವ ಕೇವಲಂ ।
ಅಜ್ಞಾನಾದ್ಯತ್ಕೃತಂ ಕರ್ಮ ಬಾಲ್ಯೇ ಸ್ವಪ್ನೇ ತು ತತ್ಫಲಂ ॥ ೭ ॥
ಅಜ್ಞಾನಾದ್ಯಚ್ಚ ತಾರುಣ್ಯೇ ಬಾಲ್ಯೇ ತಸ್ಯ ಫಲಂ ಭವೇತ್ ।
ಜ್ಞಾನಪೂರ್ವಂ ಕೃತಂ ಕರ್ಮ ಆಜನ್ಮಾಂತಂ ಚ ತತ್ಫಲಂ ॥ ೮ ॥
ಷಣ್ಮಾಸಂ ಪಾಪಿಸಂಗೇನ ನರಃ ಪಾಪೀ ಪ್ರಜಾಯತೇ ।
ಪಾಪಿನಾಂ ವಾ ಧರ್ಮಿಣಾಂ ವಾ ಸಂಸರ್ಗಾದ್ದಶಮಾಸಿಕಂ ॥ ೯ ॥
ಭೋಜನಾದೇಕಪಙ್ಕ್ತೌ ಚ ವಿಂಶಾಂಶಃ ಪುಣ್ಯಪಾಪಯೋಃ ।
ಏಕಾಸನೇ ದ್ವಯೋರ್ವಾಸಾತ್ಸಹಸ್ರಾಂಶೇನ ಲಿಪ್ಯತೇ ॥ ೧೦ ॥

---

೫. ಆ ನುಡಿಯನ್ನಾಲಿಸಿ ಬ್ರಹ್ಮನಿಂತೆಂದನು :—'' ದಾನವಾಗಿ ಕೊಡದಿರುವುದಾದರೂ ಪುಣ್ಯಗಳನ್ನು, ಹಾಗೆಯೇ ಪಾಪಗಳನ್ನು ಕೂಡ, ಯಾವ ಉಪಾಯದಿಂದ ಪಡೆಯಬಹುದೋ ಅದನ್ನು ಹೇಳುತ್ತೇನೆ. ಎಲೈ ದ್ವಿಜನೇ! ಒಮ್ಮನದಿಂದ ಕೇಳು.

೬. ಒಬ್ಬನು ಪುಣ್ಯವನ್ನೇ ಆಗಲಿ ಪಾಪವನ್ನೇ ಆಗಲಿ ಮಾಡಿದರೆ ಅದರ ಫಲವು ಕೃತಯುಗದಲ್ಲಿ ಅವನ ರಾಷ್ಟ್ರಕ್ಕೇ ಉಂಟಾಗುತ್ತದೆ; ತ್ರೇತಾಯುಗದಲ್ಲಿ ಪಟ್ಟಣಕ್ಕೆ ಮಾತ್ರ ಆಗುತ್ತದೆ.

೭. ದ್ವಾಪರದಲ್ಲಿ ಆ ಫಲವು ಮಾಡಿದಾತನ ವಂಶಮಧ್ಯದಲ್ಲಿ ಸಂಭವಿಸುತ್ತದೆ; ಕಲಿಯುಗದಲ್ಲಿ ಮಾಡಿದವನಿಗೆ ಮಾತ್ರ ಅದರ ಫಲವು ಸೇರುತ್ತದೆ. ಬಾಲ್ಯದಲ್ಲಿ ಅಜ್ಞಾನದಿಂದ ಯಾವುದು ಮಾಡಲ್ಪಡುವುದೋ ಅದರ ಫಲವು ಸ್ವಪ್ನದಲ್ಲಿ ಸಂಭವಿಸುತ್ತದೆ.

೮. ತಾರುಣ್ಯದಲ್ಲಿ ಅಜ್ಞಾನದಿಂದ ಪುಣ್ಯಪಾಪಗಳನ್ನು ಮಾಡಿದ್ದರೆ ಫಲವು ಬಾಲ್ಯದಲ್ಲಿ ಉಂಟಾಗುತ್ತದೆ. ಜ್ಞಾನಪೂರ್ವಕವಾಗಿ ಮಾಡಿದ ಫಲವನ್ನು ಆಜನ್ಮಾಂತವಾಗಿ ಅನುಭವಿಸಬೇಕಾಗುತ್ತದೆ.

೯. ಆರು ತಿಂಗಳವರೆವಿಗೆ ಪಾಪಿಗಳ ಸಹವಾಸದಲ್ಲಿದ್ದರೆ ಆ ನರನು ಪಾಪಿಯಾಗುತ್ತಾನೆ. ಪಾಪಿಗಳ ಅಥವಾ ಧರ್ಮಾತ್ಮರ ಸಂಸರ್ಗದಿಂದ ಹತ್ತು ತಿಂಗಳಲ್ಲಿ ಪಾಪಿ ಅಥವಾ ಪುಣ್ಯವಂತನಾಗುತ್ತಾನೆ.

೧೦. ಒಂದೇ ಪಙ್ಕ್ತಿಯಲ್ಲಿ ಕುಳಿತು ಭೋಜನಮಾಡುವುದರಿಂದ ಪುಣ್ಯ

ಯೋ ವೈ ಯಸ್ಯಾನ್ನಮಶ್ನಾತಿ ಸ ಭುಂಕ್ತೇ ತಸ್ಯ ಕಿಲ್ಬಿಷಂ ।
ಜಪಾದೌ ಪಾಪಿಸಂಸರ್ಗಾತ್ಷೋಡಶಾಂಶೋ ವಿನಶ್ಯತಿ ॥ ೧೧ ॥
ಪರಸ್ಯ ಸ್ತವನಾದ್ಯಾನಾತ್ ಏಕಪಾತ್ರಸ್ಥಭೋಜನಾತ್ ।
ಏಕಶಯ್ಯಾಪ್ರಾವರಣಾತ್ಷಷ್ಠಾಂಶಃ ಪುಣ್ಯಪಾಪಯೋಃ ॥ ೧೨ ॥
ಪುರುಷೋ ಹರತೇ ಸರ್ವಂ ಭಾರ್ಯಾಯಾ ಔರಸಸ್ಯ ಚ ।
ಅರ್ಧಂ ಶಿಷ್ಯಾಚ್ಚತುರ್ಥಾಂಶಂ ಪಾಪಂ ಪುಣ್ಯಂ ತಥೈವ ಚ ॥ ೧೩ ॥
ಭರ್ತುರಾಜ್ಞಾಕರೀ ನಾರೀ ಭರ್ತುರರ್ಧಂ ವೃಷಂ ಹರೇತ್ ।
ಯದ್ಧಸ್ತಪಕ್ವಂ ಭುಂಜೀಯಾದ್ದಶಾಂಶಂ ತದಘಂ ಹರೇತ್ ॥ ೧೪ ॥
ವರ್ಷಾಶನಂ ತು ಯೋ ದತ್ತೇ ತದರ್ಧಾಘಸ್ಯ ಭಾಗಯುಂ ।
ವರ್ಷಾಶನಾರ್ಧಂ ಪುಣ್ಯಂ ತು ಭುಂಕ್ತೇ ವರ್ಷಾಶನೀ ನರಃ ॥ ೧೫ ॥
ಪುರೋಹಿತಸ್ಯ ಷಷ್ಠಾಂಶಂ ಪಾಪಂ ವಾ ಪುಣ್ಯಮೇವ ವಾ ।
ಯಜಮಾನೋ ಭುನಕ್ತ್ಯೇವ ತದ್ದಶಾಂಶಂ ಪುರೋಹಿತಃ ॥ ೧೬ ॥

---

ಪಾಪಗಳ ಇಪ್ಪತ್ತನೆಯ ಒಂದು ಭಾಗವು ಬಂದು ಸೇರುತ್ತದೆ. ಇಬ್ಬರೂ ಏಕಾಸನದಲ್ಲಿ ಕುಳಿತಿರುವುದರಿಂದ ಸಹಸ್ರದಲ್ಲಿ ಒಂದು ಭಾಗ ಲೇಪವಾಗುತ್ತದೆ.

೧೧. ಯಾರು ಯಾರ ಅನ್ನವನ್ನು ತಿನ್ನುತ್ತಾರೋ ಅವರು ಅವರ ಪಾಪವನ್ನು ಅನುಭವಿಸುತ್ತಾರೆ. ಜಪಕಾಲದಲ್ಲಿ ಪಾಪಿಯ ಸಂಸರ್ಗವುಂಟಾದರೆ ಫಲದ ಹದಿನಾರನೆಯ ಒಂದು ಭಾಗವು ನಾಶವಾಗುತ್ತದೆ.

೧೨. ಬೇರೊಬ್ಬನನ್ನು ಸ್ತುತಿಸುವುದರಿಂದ, ಅವನೊಡನೆ ಒಂದು ವಾಹನವನ್ನೇರಿ ಪ್ರಯಾಣಮಾಡುವುದರಿಂದ, ಒಂದೇ ಪಾತ್ರೆಯಲ್ಲಿ ಭೋಜನಮಾಡುವುದರಿಂದ, ಒಂದೇ ಹಾಸಿಗೆ ಹೊದ್ದಿಕೆಗಳನ್ನು ಬಳಸುವುದರಿಂದ ಪುಣ್ಯಪಾಪಗಳಲ್ಲಿ ಆರನೆಯ ಒಂದು ಭಾಗವು ಪ್ರಾಪ್ತವಾಗುತ್ತದೆ.

೧೩. ಪಾಪವೇ ಆಗಲಿ, ಪುಣ್ಯವೇ ಆಗಲಿ, ಹೆಂಡತಿಯದೆಲ್ಲವೂ, ಔರಸಪುತ್ರನದರಲ್ಲಿ ಅರ್ಧವೂ, ಶಿಷ್ಯನದರಲ್ಲಿ ನಾಲ್ಕನೆಯ ಒಂದು ಭಾಗವೂ ಪುರುಷನಿಗೆ ಸೇರುತ್ತದೆ.

೧೪–೧೫. ಗಂಡನ ಅಪ್ಪಣೆಯನ್ನು ನಡೆಸುವ ನಾರಿಯು ಗಂಡನ ಧರ್ಮದಲ್ಲಿ ಅರ್ಧವನ್ನು ಪಡೆಯುತ್ತಾಳೆ. ಯಾರ ಕೈಯ ಅಡಿಗೆಯನ್ನು ಊಟಮಾಡಿದರೂ ಅವರ ಪಾಪದ ಹತ್ತನೆಯ ಒಂದು ಭಾಗವು ಊಟಮಾಡಿದವರಿಗೆ ಬರುತ್ತದೆ. ಯಾವನು ವರ್ಷಾಶನವನ್ನು ಕೊಡುತ್ತಾನೋ ಅವನ ಪಾಪದ ಅರ್ಧಭಾಗವು ಆ ವರ್ಷಾಶನವನ್ನನುಭವಿಸುವವನಿಗೆ ಸೇರುತ್ತದೆ. ಅನುಭವಿಸುವವನ ಅರ್ಧಪುಣ್ಯವನ್ನು ವರ್ಷಾಶನ ಕೊಟ್ಟ ಮನುಷ್ಯನು ಪಡೆಯುತ್ತಾನೆ.

೧೬. ಪುರೋಹಿತನ ಪಾಪದಲ್ಲಿಯೇ ಆಗಲಿ ಪುಣ್ಯದಲ್ಲೇ ಆಗಲಿ ಆರನೆಯ

ಉದ್ಯೋಗೀ ಚಾನುಮಂತಾ ಚ ಯಶ್ಚೋಪಕರಣಪ್ರದಃ ।
ಷಷ್ಠಾಂಶಂ ಪುಣ್ಯಪಾಪಾನಾಂ ಉಪದ್ರಷ್ಟಾ ದಶಾಂಶಕಂ ॥ ೧೭ ॥
ಯದ್ಧಸ್ತಾತ್ತತ್ಕಾರ್ಯತೇ ಕರ್ಮ ನಾನ್ನಮಸ್ಮೈ ಪ್ರಯಚ್ಛತಿ ।
ವಿನಾ ಭೃತಕಶಿಷ್ಯಾಭ್ಯಾಂ ಷಷ್ಠಾಂಶಂ ಪುಣ್ಯಮಾಹರೇತ್ ॥ ೧೮ ॥
ವ್ಯವಹಾರಾತ್ತಥಾ ಪ್ರೀತ್ಯಾ ನಿತ್ಯಂ ಸಂಭಾಷಣಾದಿಭಿಃ ।
ದಶಾಂಶಂ ಪುಣ್ಯಪಾಪಾನಾಂ ಲಭತೇ ನಾಽತ್ರ ಸಂಶಯಃ ॥ ೧೯ ॥
ಸಂಸರ್ಗಪುಣ್ಯಯೋಗೇನ ಏಕದಂತೋ ದ್ವಿಜಾಧಮಃ ।
ನರಕಾನ್ವಿವಿಧಾನ್‌ದೃಷ್ಟ್ವಾ ಸ್ವರ್ಗಂ ಪ್ರಾಪ ತದೈವ ಹಿ ॥ ೨೦ ॥

---

ಒಂದಂಶವನ್ನು ಯಜಮಾನನು ಪಡೆದೇ ಪಡೆಯುತ್ತಾನೆ. ಯಜಮಾನನ ಪುಣ್ಯ ಪಾಪಗಳ ಹತ್ತನೆಯ ಒಂದು ಪಾಲು ಪುರೋಹಿತನಿಗೆ ಸೇರುತ್ತದೆ.

೧೭–೧೮. ಉದ್ಯೋಗ ಮಾಡುವವನು, ಅದಕ್ಕೆ ಅನುಮತಿ ಕೊಡುವವನು, ಉಪಕರಣಗಳನ್ನು ಒದಗಿಸುವವನು—ಇವರು ಪುಣ್ಯಪಾಪಗಳಲ್ಲಿ ಆರನೆಯ ಒಂದಂಶಕ್ಕೆ ಭಾಗಿಗಳಾಗುತ್ತಾರೆ. ನೋಡುತ್ತಿರುವವನು ಹತ್ತನೆಯ ಒಂದು ಪಾಲನ್ನು ಪಡೆಯುತ್ತಾನೆ. ಯಾರ ಕೈಯಿಂದ ಕೆಲಸಮಾಡಿಸಿ ಅವನಿಗೆ ಅನ್ನ ಹಾಕುವುದಿಲ್ಲವೋ ಅವನು ಶಿಷ್ಯ ಮತ್ತು ಭೃತ್ಯರು ಹೊರತಾಗಿ, ಪುಣ್ಯದ ಆರನೆಯ ಒಂದು ಪಾಲನ್ನು ತೆಗೆದುಕೊಳ್ಳುತ್ತಾನೆ.

೧೯. ವ್ಯವಹಾರ ಮಾಡುವುದರಿಂದ, ಪ್ರೀತಿಯಿಂದ, ನಿತ್ಯವೂ ಸಂಭಾಷಣಾದಿಗಳನ್ನು ನಡೆಸುವುದರಿಂದ ಪುಣ್ಯಪಾಪಗಳ ಹತ್ತನೆಯ ಒಂದು ಪಾಲನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲವು.

೨೦. ಹಿಂದೆ ಏಕದಂತನೆಂಬ ದ್ವಿಜಾಧಮನು, ಸಂಸರ್ಗಪುಣ್ಯವು ಸೇರಿದ್ದರಿಂದ ವಿವಿಧ ನರಕಗಳನ್ನು ನೋಡಿ ಆಗಲೇ ಸ್ವರ್ಗಕ್ಕೆ ಹೋದನು.'' *

---

* **ಸನತ್ಕುಮಾರ ಸಂಹಿತೆಯಲ್ಲಿ ಈ ಕಥೆ ಪ್ರಸಿದ್ಧವಾಗಿದೆ:**—ಹಿಂದೆ ವಾರಾಣಸಿಯಲ್ಲಿ ಭಾರದ್ವಾಜ ಗೋತ್ರದವನಾದ ಕರ್ಮದತ್ತನೆಂಬ ವಿಪ್ರನೋರ್ವನಿದ್ದನು. ಅವನಿಗೆ ಏಕದಂತನೆಂಬ ಒಬ್ಬ ಮಗನಾದನು. ಅವನು ವಿದ್ವಾಂಸನಾದರೂ ದೈವಯೋಗದಿಂದ ಪತಿವ್ರತೆಯಾದ ತನ್ನ ಹೆಂಡತಿಯನ್ನು ತೊರೆದು ಸೂಳೆಯ ಸಹವಾಸದಲ್ಲಿಯೇ ಹಗಲಿರುಳೂ ಕಳೆಯುತ್ತಿದ್ದನು. ತಂದೆಯ ಆಸ್ತಿಯೆಲ್ಲ ಕರಗಿದ ಮೇಲೆ ಅವನು ಕಳ್ಳತನಕ್ಕೆ ಮೊದಲಿಟ್ಟು ಜೀವಿಕೆಯನ್ನು ನಡೆಸುತ್ತಿದ್ದನು.

ಹೀಗೆ ಕೇವಲ ದುಷ್ಟವ್ಯಾಪಾರದಲ್ಲಿ ತೊಡಗಿ ದೇಶದಿಂದ ದೇಶಕ್ಕೆ ಅಲೆಯುತ್ತ ಬಂದಾನೊಂದು ದಿನ ಯಮುನಾ ನದಿಗೆ ಬಂದನು. ಅಲ್ಲಿ ಕಾರ್ತಿಕಸ್ನಾನಕ್ಕಾಗಿ ಬಂದಿದ್ದ ದಾನಧರ್ಮವ್ರತಸಂಪನ್ನರಾದ ಜನರನ್ನು ಕಂಡು, ಅವರು ಮಾಡುತ್ತಿದ್ದ ಪೂಜೆ ಪುರಸ್ಕಾರಗಳನ್ನೂ, ಪುರಾಣಶ್ರವಣವನ್ನೂ ಕಂಡು ಅವನು ಅಲ್ಲಿಯೆ ಒಂದು ತಿಂಗಳ ಕಾಲ ನೆಲಸಿದನು.

ನಾರದ ಉವಾಚ :—

ಈದೃಶಂ ಕಾರ್ತಿಕವ್ರತಮಲ್ಪಾಯಾಸಂ ಮಹತ್ಫಲಂ ।
ನ ಕುರ್ವಂತಿ ಜನಾಃ ಕೇಚಿತ್ಕಿಮರ್ಥಂ ವೈ ಪಿತಾಮಹ ॥ ೨೧ ॥

ಬ್ರಹ್ಮೋವಾಚ :—

ಸ್ವಸೃಷ್ಟಿವೃದ್ಧಯೇ ವೇಧಾ ಧರ್ಮಾಧರ್ಮೌ ಸಸರ್ಜ ಹ ।
ಧರ್ಮಮೇವಾನುತಿಷ್ಠಂತಃ ಪ್ರಾಪ್ನುವಂತಿ ಶುಭಾಂ ಗತಿಂ ॥ ೨೨ ॥
ಅಧರ್ಮಮನುತಿಷ್ಠಂತೋ ಯಾಂತಿ ತೇಽಧೋಗತಿಂ ನರಾಃ ।
ಪುಣ್ಯಕರ್ಮಫಲಂ ನಾಕೋ ನರಕಸ್ತದ್ವಿಪರ್ಯಯಃ ॥ ೨೩ ॥
ತಯೋಃ ಪಾಲನಕರ್ತಾರೌ ದ್ವಾವೇವ ವಿಧಿನಾ ಕೃತೌ ।
ಶತಕ್ರತುಯಮೌ ತೌ ಚ ಪುಣ್ಯಪಾಪಾನುಸಾರಿಣೌ ॥ ೨೪ ॥

---

೨೧. ನಾರದನು ಕೇಳುತ್ತಾನೆ:—"ಎಲೈ ಪಿತಾಮಹನೇ! ಈ ರೀತಿಯಾದ ಕಾರ್ತಿಕವ್ರತಕ್ಕೆ ಆಯಾಸವು ಸ್ವಲ್ಪ; ಫಲವು ಮಹತ್ತಾದುದು. ಜನರು ಇದನ್ನು ಮಾಡುವುದಿಲ್ಲವೇಕೆ?"

೨೨. ಬ್ರಹ್ಮನು ಹೇಳುತ್ತಾನೆ:—"ಬ್ರಹ್ಮನು ತನ್ನ ಸೃಷ್ಟಿಯು ವೃದ್ಧಿಯಾಗಲೆಂದು ಧರ್ಮಾಧರ್ಮಗಳನ್ನು ಸೃಷ್ಟಿಸಿದನು. ಧರ್ಮವನ್ನೇ ಆಚರಿಸುವವರು ಶುಭವಾದ ಗತಿಯನ್ನು ಹೊಂದುತ್ತಾರೆ.

೨೩. ಯಾವ ನರರು ಅಧರ್ಮವನ್ನು ಆಚರಿಸುತ್ತಾರೆಯೋ ಅವರು ಅಧೋಗತಿಯನ್ನೈದುತ್ತಾರೆ. ಪುಣ್ಯಕರ್ಮಕ್ಕೆ ಫಲವು ಸ್ವರ್ಗ. ಪಾಪದ ಫಲ ಅದಕ್ಕೆ ವಿರುದ್ಧವಾದ ನರಕ.

೨೪. ಅವುಗಳ ಪಾಲನಕ್ಕಾಗಿ ವಿಧಿಯಿಂದ ನಿಯಮಿತರಾಗಿರುವವರು ಇಬ್ಬರೇ. ಇಂದ್ರ ಮತ್ತು ಯಮ. ಅವರಿಬ್ಬರೂ ಪುಣ್ಯಪಾಪಗಳನ್ನು ಅನುಸರಿಸತಕ್ಕವರು.

---

ತರುವಾಯ ಒಂದು ದಿನ ಅವನು ಅತ್ತಿತ್ತ ಅಲೆಯುತ್ತಿರಲು ಹಾವು ಕಚ್ಚಿ ಅವನು ಮಡಿಯಲು ಯಮದೂತರು ಅವನನ್ನು ಒಡನೆಯೆ ಯಮಲೋಕಕ್ಕೊಯ್ದರು. ಆಗ ಯಮನು ಅವನನ್ನು ತಪ್ತಕಟಾಹವೆಂಬ ಕುಂಭೀಪಾಕ ನರಕದಲ್ಲಿ ಹಾಕಿಸಿದನು. ಆದರೂ ಅದು ಅವನಿಗೆ ಬಹು ಸುಖಶೀತಳವಾಗಿ ಪರಿಣಮಿಸಿತು. ಅದನ್ನು ಕಂಡು ಯಮನು "ಇದು ಯಾವ ಸುಕೃತದ ಫಲವೋ!" ಎಂದು ಯೋಚಿಸುತ್ತಿರುವಂತೆಯೆ ನಾರದನಲ್ಲಿಗೆ ಬಂದು "ಅಯ್ಯಾ ಯಮನೇ! ನೀನು ಯೋಚಿಸುತ್ತಿರುವುದು ಸರಿ. ಇವನು ಕಾರ್ತಿಕವ್ರತಿಗಳಾದ ಸಜ್ಜನರ ಸಹವಾಸದಲ್ಲಿ ಯಮುನಾ ತೀರದಲ್ಲಿ ಒಂದು ತಿಂಗಳು ಕಳೆದಿದ್ದಾನೆ. ಇದು ಆ ಸತ್ಕರ್ಮದ ಫಲವೇ! ಇವನು ನರಕಭಾಗಿಯಲ್ಲ. ಆದುದರಿಂದ ಇವನನ್ನು ಬಿಡುಗಡೆ ಮಾಡಿ ಸ್ವರ್ಗಕ್ಕೆ ಕಳುಹು" ಎಂದು ಬೋಧಿಸಿದನು.

ಅಂತೆಯೆ ಯಮನು ಅವನನ್ನು ಆ ನರಕದಿಂದ ಹೊರಗೆ ಬರಮಾಡಿ ಅವನ ಪಾಪಕ್ಕೆ ಫಲವಾಗಿ ನರಕಗಳನ್ನೆಲ್ಲ ಅವನಿಗೆ ತೋರಿಸಿ ಆಮೇಲೆ ಸ್ವರ್ಗಕ್ಕೆ ಕಳುಹಿದನು.

ಗುರುತಲ್ಪಾದಯಃ ಪುತ್ರಾಃ ಕಾಮಸ್ಯ ಪ್ರಥಿತಾ ಭುವಿ ।
ಕ್ರೋಧಸ್ಯ ಪಿತೃಘಾತಾದ್ಯಾ ಲೋಭಸ್ಯ ತನಯಾಂಚ್ಛೃಣು ॥ ೨೫ ॥
ಬ್ರಹ್ಮಸ್ವಹರಣಾದ್ಯಾಶ್ಚ ಏತೇ ನರಕನಾಯಕಾಃ ।
ಕೃತಾ ಯಮೇನ ತೈರ್ವ್ಯಾಪ್ತಾ ಮನುಜಾ ನ ಹಿ ಕುರ್ವತೇ ॥ ೨೬ ॥
ವ್ರತಾದಿಧರ್ಮಕೃತ್ಯಂ ಯೈಸ್ತೈರ್ಮುಕ್ತಾಸ್ತೇ ಹಿ ಕುರ್ವತೇ ॥ ೨೭ ॥
ಶ್ರದ್ಧಾಮೇಧಾವಿಘಾತಿನ್ಯೌ ವರ್ತತೇ ಭುವಿ ಸರ್ವದಾ ।
ತಾಭ್ಯಾಂ ವ್ಯಾಪ್ತಸ್ತು ಮನುಜಃ ಶ್ರೀವಿಷ್ಣೋಶ್ಶ್ರವಣಾದಿಕಂ ॥ ೨೮ ॥
ನ ಕರೋತಿ ಸುದುರ್ಮೇಧಾ ಯೇನಾಂಧಂ ಯಾತಿ ವೈ ತಮಃ ।
ಕೃಷ್ಣೇನ ಸತ್ಯಭಾಮಾಯೈ ಯದುಕ್ತಂ ತದ್ವದಾಮಿ ತೇ ॥ ೨೯ ॥
ಅಧ್ಯಾಪನಾದ್ಯಾಜನಾದ್ವಾಽಪ್ಯೇಕಪಜ್ಙ್ಯಶನಾದಪಿ ।
ತುರ್ಯಾಂಶಪುಣ್ಯಪಾಪಾನಾಂ ಪರೋಕ್ಷಂ ಲಭತೇ ನರಃ ॥ ೩೦ ॥
ಏಕಾಸನಾದೇಕಯಾನಾನ್ನಿಶ್ವಾಸಸ್ಯಾಂಗಸಂಗತಃ ।
ಷಡಂಶಂ ಫಲಭಾಗೀ ಸ್ಯಾನ್ನಿಯತಂ ಪುಣ್ಯಪಾಪಯೋಃ ॥ ೩೧ ॥

---

೨೫. ಗುರುತಲ್ಪಗಮನವೇ ಮೊದಲಾದವು ಕಾಮದ ಮಕ್ಕಳೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಕ್ರೋಧದ ಮಕ್ಕಳು ಪಿತೃಹತ್ಯೆ ಮೊದಲಾದುವು. ಲೋಭದ ಮಕ್ಕಳು ಯಾರೆಂದು ಹೇಳುವೆನು, ಕೇಳು.

೨೬–೨೭. ಬ್ರಹ್ಮಸ್ವಹರಣ (ಬ್ರಾಹ್ಮಣ ದ್ರವ್ಯಾಪಹಾರ) ಮೊದಲಾದುವೇ ಲೋಭದ ಮಕ್ಕಳು. ಯಮನಿಂದ ಇವರೇ ನರಕದ ನಾಯಕರಾಗಿ ನಿಯಮಿಸಲ್ಪಟ್ಟರು. ಅವುಗಳಿಂದ ವ್ಯಾಪ್ತರಾದ ಮನುಷ್ಯರು ವ್ರತ ಮೊದಲಾದ ಧರ್ಮಕೃತ್ಯಗಳನ್ನು ಮಾಡುವುದಿಲ್ಲ. ಯಾರು ಅವುಗಳಿಂದ ಮುಕ್ತರಾಗಿರುವರೋ ಅವರು ಮಾಡುತ್ತಾರೆ.

೨೮–೨೯. ಶ್ರದ್ಧೆಯನ್ನೂ ಮೇಧೆ (ಬುದ್ಧಿಶಕ್ತಿ) ಯನ್ನೂ ಹಾಳುಮಾಡುವ ಪಾಪಗಳೆರಡು ಭೂಮಿಯಲ್ಲಿ ಸದಾ ಇರುತ್ತವೆ. ಅವುಗಳಿಂದ ವ್ಯಾಪ್ತನಾದ ಮನುಷ್ಯನು ಶ್ರೀವಿಷ್ಣುವಿನ ಶ್ರವಣ ಮೊದಲಾದುವನ್ನು ಮಾಡುವುದಿಲ್ಲ. ಆದರಿಂದ ಆ ದುರ್ಮತಿಯು ಅಂಧಂತಮಸ್ಸೆಂಬ ನರಕಕ್ಕೆ ಹೋಗುತ್ತಾನೆ. ಶ್ರೀಕೃಷ್ಣನು ಸತ್ಯಭಾಮೆಗೆ ಹೇಳಿದ್ದನ್ನು ನಿನಗೆ ಹೇಳುತ್ತೇನೆ.

೩೦. ಪಾಠ ಹೇಳುವುದರಿಂದ, ಯಜ್ಞಮಾಡಿಸುವುದರಿಂದ, ಒಂದೇ ಪಜ್ತಿಯಲ್ಲಿ ಊಟಮಾಡುವುದರಿಂದ, ಪುಣ್ಯಪಾಪಗಳಲ್ಲಿ ನಾಲ್ಕನೆಯ ಒಂದು ಭಾಗವನ್ನು ನರನು ಹೊಂದುತ್ತಾನೆ.

೩೧. ಒಂದೇ ಪೀಠದಲ್ಲಿ ಕೂರುವುದು, ಒಂದೇ ವಾಹನದಲ್ಲಿ ಹೋಗುವುದು, ನಿಶ್ವಾಸವು ಅಂಗಕ್ಕೆ ಸೋಕುವುದು — ಇವುಗಳಿಂದ ಮಾನವನು ಪುಣ್ಯ ಪಾಪಗಳಲ್ಲಿ ಆರನೆಯ ಒಂದು ಭಾಗಕ್ಕೆ ತಪ್ಪದೆ ಭಾಗಿಯಾಗುತ್ತಾನೆ.

ಸ್ಪರ್ಶನಾದ್ಭಾಷಣಾದ್ವಾಪಿ ಪರಸ್ಸಂಸ್ತವನಾದಪಿ ।
ದಶಾಂಶಂ ಪುಣ್ಯಪಾಪಾನಾಂ ನಿತ್ಯಂ ಪ್ರಾಪ್ನೋತಿ ಮಾನವಃ ॥ ೩೨ ॥
ದರ್ಶನಶ್ರವಣಾಭ್ಯಾಂ ಚ ಮನೋಧ್ಯಾನಾತ್ತಥೈವ ಚ ।
ಪರಸ್ಯ ಪುಣ್ಯಪಾಪಾನಾಂ ಶತಾಂಶಂ ಪ್ರಾಪ್ನುಯಾನ್ನರಃ ॥ ೩೩ ॥
ಪರಸ್ಯ ನಿಂದಾಂ ಪೈಶುನ್ಯಂ ಧಿಕ್ಕಾರಂ ಚ ಕರೋತಿ ಯಃ ।
ತತ್ಕೃತಂ ಪಾತಕಂ ಪ್ರಾಪ್ಯ ಸ್ವಪುಣ್ಯಂ ಪ್ರದದಾತಿ ಸಃ ॥ ೩೪ ॥
ಕುರ್ವತಃ ಪುಣ್ಯಕರ್ಮಾಣಿ ಸೇವಾಂ ಯಃ ಕುರುತೇ ನರಃ ।
ಪತ್ನೀಭೃತಕಶಿಷ್ಯೇಭ್ಯೋ ಯದನ್ಯಃ ಕೋಽಪಿ ಮಾನವಃ ॥ ೩೫ ॥
ತಸ್ಯ ಸೇವಾನುರೂಪಂ ಚ ದ್ರವ್ಯಂ ಕಿಂಚಿನ್ನ ದೀಯತೇ ।
ಸೋಽಪಿ ಸೇವಾನುರೂಪೇಣ ತತ್ಪುಣ್ಯಫಲಭಾಗ್ಭವೇತ್ ॥ ೩೬ ॥
ಏಕಪಙ್ಕ್ತಿಸ್ಥಿತಂ ಯಸ್ತು ಲಂಘಯೇತ್ಪರಿವೇಷಣಂ ।
ತತ್ಪುಣ್ಯಸ್ಯ ಷಡಂಶಂ ಚ ಲಭೇದ್ಯಸ್ತು ವಿಲಂಘಿತಃ ॥ ೩೭ ॥

---

೩೨. ಪರರ ಸ್ಪರ್ಶನದಿಂದಲೂ ಅವರೊಡನೆ ಭಾಷಣದಿಂದಲೂ ಅವರನ್ನು ಸ್ತುತಿಸುವುದರಿಂದಲೂ ಪುಣ್ಯಪಾಪಗಳ ಹತ್ತನೆಯ ಒಂದು ಭಾಗವನ್ನು ಮಾನವನು ಪಡೆಯುತ್ತಾನೆ.

೩೩. ನರನು ಬೇರೊಬ್ಬನ ದರ್ಶನ ಶ್ರವಣಗಳಿಂದಲೂ ಅವನನ್ನು ಕುರಿತು ಮನಸ್ಸಿನಲ್ಲಿ ಧ್ಯಾನಮಾಡುವುದರಿಂದಲೂ ಅವನ ಪುಣ್ಯಪಾಪಗಳಲ್ಲಿ ನೂರನೆಯ ಒಂದಂಶವನ್ನು ಪಡೆಯುತ್ತಾನೆ.

೩೪. ಯಾವನು ಪರರ ನಿಂದೆ ಧಿಕ್ಕಾರಗಳನ್ನು ಮಾಡುವನೊ, ಪರರ ಮೇಲೆ ಚಾಡಿ ಹೇಳುವನೋ ಅವನು, ಅವರು ಮಾಡಿದ ಪಾತಕಗಳನ್ನು ಪಡೆದು ತನ್ನ ಪುಣ್ಯವನ್ನು ಕೊಟ್ಟುಬಿಡುತ್ತಾನೆ.

೩೫–೩೬. ಪುಣ್ಯಕರ್ಮಗಳನ್ನು ಮಾಡುವವನಿಗೆ ಸೇವೆಯನ್ನು ಯಾವ ಮನುಷ್ಯನು ಮಾಡುತ್ತಾನೆಯೋ ಪತ್ನಿ, ಭೃತ್ಯರು, ಮತ್ತು ಶಿಷ್ಯರುಗಳ ಮೂಲಕ ಮತ್ತಾರಾದರೂ ಒಬ್ಬನ ಸೇವೆ ಸಲ್ಲಿಸುತ್ತಾನೆಯೋ, ಮತ್ತು ಹಾಗೆ ಸೇವೆಮಾಡಿದ್ದಕ್ಕೆ ಅನುರೂಪವಾದ ಪ್ರತಿಫಲವಾಗಿ ಸ್ವಲ್ಪವೂ ದ್ರವ್ಯವನ್ನು ಯಾವನು ತೆಗೆದುಕೊಳ್ಳುವುದಿಲ್ಲವೋ, ಅವನು ಕೂಡ ತನ್ನ ಸೇವೆಗೆ ಅನುರೂಪವಾಗಿ ಆ ಪುಣ್ಯಫಲಕ್ಕೆ ಭಾಗಿಯಾಗುತ್ತಾನೆ.

೩೭. ಒಂದೇ ಪಙ್ಕ್ತಿಯಲ್ಲಿ ಕುಳಿತಿರುವವನ ಪರಿಷೇಚನವನ್ನು ಯಾವನು ಮೀರುತ್ತಾನೆಯೋ ಅವನ ಪುಣ್ಯದ ಆರನೆಯ ಒಂದಂಶವನ್ನು ಹಾಗೆ ಮೀರಿಸಲ್ಪಟ್ಟವನು ಪಡೆಯುತ್ತಾನೆ.

ಸ್ನಾನಸಂಧ್ಯಾದಿಕಂ ಕುರ್ವನ್ಯಃ ಸ್ಪೃಶೇದ್ವಾಥ ಭಾಷತೇ ।
ಸ ಕರ್ಮಪುಣ್ಯಷಷ್ಠಾಂಶಂ ದದ್ಯಾತ್ತಸ್ಮೈ ವಿನಿಶ್ಚಿತಂ ॥ ೩೮ ॥
ಧರ್ಮೋದ್ದೇಶೇನ ಯೋ ದ್ರವ್ಯಮುಪರಂ ಯಾಚತೇ ನರಃ ।
ತತ್ಪುಣ್ಯಕರ್ಮಜಂ ತಸ್ಯ ಧನದಸ್ತ್ವಾಪ್ನುಯಾತ್ಫಲಂ ॥ ೩೯ ॥
ಅಪಹೃತ್ಯ ಪರದ್ರವ್ಯಂ ಪುಣ್ಯಕರ್ಮ ಕರೋತಿ ಯಃ ।
ಕರ್ಮಕೃತ್ಪಾಪಭಾಕ್ತತ್ರ ಧನಿನಸ್ತದ್ಭವಂ ಫಲಂ ॥ ೪೦ ॥
ನಾಪಕೃತ್ಯ ಋಣಂ ಯಸ್ತು ಪರಸ್ಯ ಮ್ರಿಯತೇ ನರಃ ।
ಧನೀ ತತ್ಪುಣ್ಯಮಾಧತ್ತೇ ತದ್ಧನಸ್ಯಾನುರೂಪತಃ ॥ ೪೧ ॥
ಬುದ್ಧಿದಾತಾನುಮಂತಾ ಚ ಯಶ್ಚೋಪಕರಣಪ್ರದಃ ।
ಬಲಕೃಚ್ಚಾಪಿ ಷಷ್ಠಾಂಶಂ ಪ್ರಾಪ್ನುಯಾತ್ಪುಣ್ಯಪಾಪಯೋಃ ॥ ೪೨ ॥
ಪ್ರಜಾಭ್ಯಃ ಪುಣ್ಯಪಾಪಾನಾಂ ರಾಜಾ ಷಷ್ಠಾಂಶಮುದ್ಧರೇತ್ ।
ಶಿಷ್ಯಾದ್ಗುರುಃ ಸ್ತ್ರಿಯೋ ಭರ್ತಾ ಪಿತಾ ಪುತ್ರಾತ್ತಥೈವ ಚ ॥ ೪೩ ॥

---

೩೮. ಸ್ನಾನಸಂಧ್ಯಾದಿಗಳನ್ನು ಮಾಡುತ್ತಿರುವಾಗ ಯಾವನು ಬೇರೊಬ್ಬನನ್ನು ಮುಟ್ಟುತ್ತಾನೆಯೋ ಅಥವಾ ಅವನೊಡನೆ ಮಾತಾಡುತ್ತಾನೆಯೋ ಅವನು ತಾನು ಮಾಡುವ ಕರ್ಮದ ಆರನೆಯ ಒಂದಂಶವನ್ನು ಕೊಟ್ಟುಬಿಡುತ್ತಾನೆ. ಇದು ನಿಶ್ಚಯವು.

೩೯. ಧರ್ಮೋದ್ದೇಶದಿಂದ ಯಾವನು ಬೇರೊಬ್ಬನ ಹಣವನ್ನು ಯಾಚಿಸುತ್ತಾನೋ ಅವನು ಮಾಡುವ ಪುಣ್ಯಕರ್ಮದ ಫಲವನ್ನು ಹಣ ಕೊಟ್ಟವನು ಪಡೆಯುತ್ತಾನೆ.

೪೦. ಪರದ್ರವ್ಯವನ್ನು ಅಪಹರಿಸಿ ಯಾವನಾದರೂ ಪುಣ್ಯಕರ್ಮಮಾಡಿದರೆ, ಆ ಕರ್ಮಕರ್ತನು ಪಾಪಭಾಗಿಯಾಗುತ್ತಾನೆ; ಆ ಕರ್ಮದ ಫಲವು ಹಣವು ಯಾರದೋ ಅವನಿಗೆ ಸೇರುತ್ತದೆ.

೪೧. ಪರರ ಋಣವನ್ನು ತೀರಿಸದೆ ಯಾವನು ಮೃತನಾಗುತ್ತಾನೆಯೋ ಆ ನರನ ಪುಣ್ಯವನ್ನು ಅವನಿಗೆ ಸಾಲಕೊಟ್ಟ ಧನಿಕನು ತನ್ನ ಹಣಕ್ಕೆ ಅನುರೂಪವಾಗಿ ಪಡೆಯುತ್ತಾನೆ.

೪೨. ಬುದ್ಧಿಹೇಳಿಕೊಟ್ಟವನು, ಅನುಮತಿಸಿದವನು, ಉಪಕರಣ ಒದಗಿಸಿಕೊಟ್ಟವನು, ಬೆಂಬಲಕೊಟ್ಟವನು—ಇವರೆಲ್ಲರೂ ಪುಣ್ಯಪಾಪಗಳ ಆರನೆಯ ಅಂಶವನ್ನು ಹೊಂದುತ್ತಾರೆ.

೪೩. ಪ್ರಜೆಗಳ ಪುಣ್ಯಪಾಪಗಳ ಆರನೆಯ ಒಂದು ಪಾಲನ್ನು ರಾಜನು ತೆಗೆದುಕೊಳ್ಳುತ್ತಾನೆ. ಅದೇ ರೀತಿ ಶಿಷ್ಯನಿಂದ ಗುರುವೂ, ಹೆಂಗಸಿನಿಂದ ಅವಳ ಗಂಡನೂ, ಮಗನಿಂದ ತಂದೆಯೂ ಆರನೆಯ ಒಂದಂಶವನ್ನು ಪಡೆಯುತ್ತಾರೆ.

ಸ್ವಮತೇರಪಿ ಪುಣ್ಯಸ್ಯ ಯೋಷಿದರ್ಧಮವಾಪ್ನುಯಾತ್ ।
ಚಿತ್ತಸ್ಯಾನುವೃತಾ ಶಶ್ವತ್ ವರ್ತತೇ ತುಷ್ಟಿಕಾರಿಣೀ ॥ ೪೪ ॥
ಪರಹಸ್ತೇನ ದಾನಾನಿ ಕುರ್ವಂತಃ ಪುಣ್ಯಕರ್ಮಣಃ ।
ವಿನಾ ಭೃತಕಪುತ್ರಾಭ್ಯಾಂ ಕರ್ತಾ ಷಷ್ಠಾಂಶಮುದ್ಧರೇತ್ ॥ ೪೫ ॥
ವೃತ್ತಿದೋ ವೃತ್ತಿಸಂಭೋಕ್ತುಃ ಪುಣ್ಯಂ ಷಷ್ಠಾಂಶಮುದ್ಧರೇತ್ ।
ಆತ್ಮನೋ ವಾ ಪರಸ್ಯಾಪಿ ಯದಿ ಸೇವಾಂ ನ ಕಾರಯೇತ್ ॥ ೪೬ ॥
ಇತ್ಥಂ ಹ್ಯದತ್ತಾನ್ಯಪಿ ಪುಣ್ಯಪಾಪಾ
ನ್ಯಾಯಾಂತಿ ನಿತ್ಯಂ ಪರಸಂಚಿತಾನಿ ।
ಕಲೌ ತ್ವಯಂ ನೈ ನಿಯಮೋ ನ ಕಾರ್ಯಃ
ಕರ್ತೈವ ಭೋಕ್ತಾ ಖಲು ಪುಣ್ಯಪಾಪಯೋಃ ॥ ೪೭ ॥
ಕಲೌ ಜ್ಞಾನಂ ದೃಢಂ ನಾಸ್ತಿ ಕಲೌ ಗರ್ವೇಣ ಸತ್ಕ್ರಿಯಾ ।
ಕಲೌ ದಂಭಾನ್ವಿತೋ ಯೋಗೋ ನಶ್ಯತ್ಯೇವ ನ ಸಂಶಯಃ ॥ ೪೮ ॥
ತಪೋನಿಷ್ಠಃ ಪುರಾ ದಂಭೀ ಸತೀಶುದ್ಧಪ್ರಭಾವತಃ ।
ಪಿತ್ರೋಃ ಪೂಜಾದರ್ಶನೇನ ಚೋರ್ಜಸೇವೀ ಪರಂ ಗತಃ ॥ ೪೯ ॥

---

೪೪-೪೫. ಯಾವಾಗಲೂ ಸಂತೋಷಕಾರಿಣಿಯಾಗಿ ಚಿತ್ತವನ್ನು ಅನುವರ್ತಿಸಿ ಸರಿಯಾಗಿ ಧರ್ಮದಲ್ಲಿ ನಡೆಯುವ ಹೆಂಗಸು ತನ್ನ ಗಂಡನ ಪುಣ್ಯದಲ್ಲಿ ಅರ್ಧಭಾಗವನ್ನು ಪಡೆಯುತ್ತಾಳೆ. ಬೇರೆಯವರ ಕೈಯಿಂದ ದಾನಾದಿಗಳನ್ನು ಮಾಡುವಲ್ಲಿ ಭೃತ್ಯ ಮತ್ತು ಪುತ್ರರ ಹೊರತಾಗಿ ಉಳಿದ ಆ ಕರ್ಮಕರ್ತೃಗಳು ಆ ಪುಣ್ಯದ ಆರನೆಯ ಒಂದು ಭಾಗವನ್ನು ತೆಗೆದುಕೊಳ್ಳುತ್ತಾರೆ.

೪೬. ವೃತ್ತಿಯನ್ನು ಕೊಡುವವನು ತನ್ನ ಅಥವಾ ಪರರ ಸೇವೆಯನ್ನು ಮಾಡಿಸದಿದ್ದಲ್ಲಿ ಭೋಗಿಸುವವನ ಪುಣ್ಯದ ಆರನೆಯ ಒಂದು ಭಾಗವನ್ನು ಹೊಂದುತ್ತಾನೆ.

೪೭. ಹೀಗೆ ಪರರು ಸಂಪಾದಿಸಿ ಕೂಡಿಸಿದ ಪುಣ್ಯ ಪಾಪಗಳು ಅವನ್ನು ದಾನಮಾಡಿ ಕೊಡದಿದ್ದರೂ ಸದಾ ಬಂದು ಸೇರುತ್ತಿರುತ್ತವೆ. ಕಲಿಯುಗದಲ್ಲಿ ಈ ನಿಯಮವನ್ನು ನಡೆಸತಕ್ಕದ್ದಲ್ಲ. ಪುಣ್ಯ ಪಾಪಗಳೆರಡನ್ನೂ ಕರ್ತನೇ ಅನುಭವಿಸುತ್ತಾನೆ.

೪೮. ಕಲಿಯುಗದಲ್ಲಿ ಜ್ಞಾನವು ದೃಢವಾಗಿರುವುದಿಲ್ಲ. ಕಲಿಯುಗದಲ್ಲಿ ಗರ್ವದಿಂದ ಸತ್ಕಾರ್ಯ ಮಾಡುತ್ತಾರೆ. ಕಲಿಯುಗದಲ್ಲಿ ದಂಭದಿಂದ ಯೋಗ ನಡೆಸುತ್ತಾರೆ. ಇವೆಲ್ಲ ನಾಶವಾಗುತ್ತದೆ.

೪೯. ಪೂರ್ವದಲ್ಲಿ ದಂಭಯುಕ್ತನಾದ ತಪೋನಿಷ್ಠನೆಂಬವನು ಪತಿವ್ರತೆಯ

ನಾರದ ಉವಾಚ :—

**ಭಗವಂಚ್ಛ್ರೋತುಮಿಚ್ಛಾಮಿ ವ್ರತಾನಾಮುತ್ತಮಂ ವ್ರತಂ ।**
**ವಿಧಿಂ ಮಾಸೋಪವಾಸಸ್ಯ ಫಲಂ ಚಾಸ್ಯ ಯಥೋಚಿತಂ ॥ ೫೦ ॥**

---

ಪರಿಶುದ್ಧಪ್ರಭಾವದಿಂದಲೂ, ಪಿತೃಗಳಿಗೆ ನಡಸುತ್ತಿದ್ದ ಪೂಜೆಯ ದರ್ಶನದಿಂದಲೂ ಕಾರ್ತಿಕವ್ರತ ನಡೆಸುವವನಾಗಿ ಪರಮಪದವಿಯನ್ನು ಪಡೆದನು.'' *

೫೦. ಇದನ್ನಾಲಿಸಿ ನಾರದನಿಂತೆಂದನು :—'' ಭಗವನ್ ! ವ್ರತಗಳಲ್ಲೆಲ್ಲ ಉತ್ತಮವಾದ ವ್ರತವೆನ್ನಿಸಿಕೊಂಡಿರುವ ಮಾಸೋಪವಾಸವ್ರತವನ್ನೂ, ಅದರ ವಿಧಿಯನ್ನೂ, ಯಥೋಚಿತವಾದ ಫಲವನ್ನೂ ಕೇಳಲಿಚ್ಛಿಸುತ್ತೇನೆ'' ಎಂದನು.

---

* **ಬ್ರಾಹ್ಮಪುರಾಣದಲ್ಲಿ ತಪೋನಿಷ್ಠನ ಕಥೆ:**—ತ್ರೇತಾಯುಗದಲ್ಲಿ ತಪೋನಿಷ್ಠನೆಂಬ ಬ್ರಾಹ್ಮಣನೊಬ್ಬನಿದ್ದನು. ಅವನು ಬಹಳ ಜಂಭಗಾರ. ಅವನಲ್ಲಿ ಅನೇಕ ದ್ವಂದ್ವಗಳಿದ್ದವು. ಒಂದಾನೊಂದು ದಿನ ಅವನು ಭಿಕ್ಷೆಗಾಗಿ ಹೊರಟನು. ಅದೇ ಸಮಯದಲ್ಲಿ ಅಂತರಿಕ್ಷದಲ್ಲಿ ಹಾರುತ್ತಿದ್ದ ಬಲಾಕಪಕ್ಷಿಗಳಲ್ಲಿ ಒಂದು ಹೆಣ್ಣುಪಕ್ಷಿಯು ಅನ್ನ ತುಂಬಿದ್ದ ಅವನ ಪಾತ್ರೆಯಲ್ಲಿ ಹೇಸಿಗೆ ಮಾಡಿತು. ಒಡನೆಯೇ ತಪೋನಿಷ್ಠನು ಕೋಪದಿಂದ ಮೇಲೆ ನೋಡಿದನು. ತತ್‌ಕ್ಷಣವೇ ಆ ಪಕ್ಷಿಯು ಸತ್ತು ಕೆಳಗೆ ಬಿದ್ದಿತು. ಆಗ ತಪೋನಿಷ್ಠನು ತನ್ನ ಪ್ರಭಾವಕ್ಕೆ ತಾನೇ ಮೆಚ್ಚಿಕೊಂಡು ಗರ್ವಿಸಿದನು.

ಮತ್ತೊಂದು ಸಲ ಅವನು ಭಿಕ್ಷೆಗಾಗಿ ಒಂದು ಮನೆಗೆ ಬಂದನು. ಆ ಮನೆಯಲ್ಲಿದ್ದ ಪತಿವ್ರತೆಯನ್ನು ಕುರಿತು, '' ಭವತಿ, ಭಿಕ್ಷೆ'' ಎಂದು ಕೂಗಿದನು. ಆಗಲಾ ಪತಿವ್ರತೆಯು ಗಂಡನಿಗೆ ಬಡಿಸುತ್ತಿದ್ದಳು. ಆಕೆಯು ಗಂಡನಿಗೆ ಎಲ್ಲ ಉಪಚಾರಗಳನ್ನೂ ಮಾಡಿ ಮುಗಿಸಿ ಅವನು ಮಲಗಿ ನಿದ್ರಿಸಿದ ಬಳಿಕ ಭಿಕ್ಷೆಯನ್ನು ತೆಗೆದುಕೊಂಡು ಹೊರಕ್ಕೆ ಬಂದು, '' ವಿಪ್ರ ! ಭಿಕ್ಷೆಯನ್ನು ಪರಿಗ್ರಹಿಸು '' ಎಂದು ಕೊಡಹೋದಳು. ಆ ತಪೋನಿಷ್ಠನು ರೇಗಿ ಹೂಂಕಾರ ಮಾಡಿ ಭಿಕ್ಷೆಯನ್ನು ತೆಗೆದುಕೊಳ್ಳದೆ ಸುಮ್ಮನಿದ್ದನು. ಆಗ ಪತಿವ್ರತೆಯು, '' ಅಯ್ಯಾ ಬ್ರಾಹ್ಮಣನೇ ! ನಾನು ಬಲಾಕಪಕ್ಷಿಯಲ್ಲ. ನಿನ್ನ ಕೋಪ ನನ್ನ ಮೇಲೆ ಏನೂ ಪರಿಣಾಮವಾಗುವುದಿಲ್ಲ. ಸುಮ್ಮನೆ ಭಿಕ್ಷವನ್ನು ತೆಗೆದುಕೋ'' ಎಂದಳು.

ಈ ಮಾತನ್ನು ಕೇಳಿದೊಡನೆಯೆ ತಪೋನಿಷ್ಠನಿಗೆ ಆಶ್ಚರ್ಯವಾಯಿತು. ಭಯವೂ ಆಯಿತು. ಕೈಲಿದ್ದ ಪಾತ್ರೆಯು ತಾನಾಗಿಯೇ ಕಳಚಿಬಿದ್ದಿತು. ಕೈಜೋಡಿಸಿಕೊಂಡು, '' ಅಮ್ಮ ! ನಿನಗೆ ಬಲಾಕದ ಸುದ್ದಿ ತಿಳಿದ ಬಗೆ ಹೇಗೆ ?'' ಎಂದು ಕೇಳಿದನು. ಪತಿವ್ರತೆಯು, '' ಎಲೈ ವಿಪ್ರನೇ ! ನೀನು ಭಯಪಡಬೇಡ. ಇದು ಮಂತ್ರಪ್ರಭಾವವಲ್ಲ. ಇದು ನನಗೆ ಸ್ವಭಾವ. ಯಾರಯಾರ ಹೃದಯದಲ್ಲಿ ಅಚ್ಯುತನು ನೆಲಸಿರುವನೋ ಅವರಲ್ಲೆಲ್ಲ ಈ ಪ್ರಭಾವವು ಸಾಮಾನ್ಯವಾದುದೇ ! ಕರ್ಮಠರಾದವರಿಗೆ ಅಗ್ನಿಯೇ ಶ್ರೀಮಹಾವಿಷ್ಣುವು. ಮಕ್ಕಳಿಗೆ ತಾಯಿತಂದೆಗಳೂ, ಸ್ತ್ರೀಯರಿಗೆ ಗಂಡನೂ, ಶಿಷ್ಯರಿಗೆ ಗುರುವೂ, ಸಮಸ್ತ ವರ್ಣಗಳವರಿಗೂ ಬ್ರಾಹ್ಮಣನೂ ವಿಷ್ಣುಸ್ವರೂಪರೆಂದು ತಿಳಿದವರು ಹೇಳುತ್ತಾರೆ. ಅಲ್ಪಬುದ್ಧಿಯುಳ್ಳವರಿಗೆ ಪ್ರತಿಮೆಗಳಲ್ಲಿಯೂ, ಯೋಗಿಗಳ ಹೃದಯದಲ್ಲಿಯೂ ವಿಷ್ಣುವು ಇರುತ್ತಾನೆ. ಅಂಥ ಪುರಾಣಪುರುಷನಾದ ಶ್ರೀಹರಿಯೇ ನನ್ನ ಪ್ರತ್ಯಕ್ಷದೈವವಾಗಿರುವನು. ತಂದೆ, ತಾಯಿ, ಗುರು, ರಕ್ಷಕ, ನೆಂಟರು, ಗೆಳೆಯರು, ಮಕ್ಕಳು, ಎಲ್ಲರೂ ನನಗೆ ನನ್ನ ಪತಿಯೇ ದಿಟವು. ಆತನ ಶುಶ್ರೂಷೆಯಿಂದ ನನಗೆ

ಬ್ರಹ್ಮೋವಾಚ :—
ಸಾಧು ನಾರದ ಸರ್ವಂ ತೇ ಯತ್ಪೃಷ್ಟಂ ಪ್ರಬ್ರುವೇಽನಘ ।
ಭಕ್ತ್ಯಾ ಮತಿಮತಾಂ ಶ್ರೇಷ್ಠ ಶೃಣುಷ್ವ ಗದತೋ ಮಮ ॥ ೫೧ ॥
ಸುರಾಣಾಂ ಚ ಯಥಾ ವಿಷ್ಣುಸ್ತಪತಾಂ ಚ ಯಥಾ ರವಿಃ ।
ಮೇರುಶ್ಶಿಖರಿಣಾಂ ಯದ್ವದ್ವೈನತೇಯಶ್ಚ ಪಕ್ಷಿಣಾಂ ॥ ೫೨ ॥
ಶ್ರೇಷ್ಠಂ ಸರ್ವವ್ರತಾನಾಂ ತು ತದ್ವನ್ಮಾಸೋಪವಾಸನಂ ।
ಸರ್ವವ್ರತೇಷು ಯತ್ಪುಣ್ಯಂ ಸರ್ವತೀರ್ಥೇಷು ಚೈವ ಹಿ ॥ ೫೩ ॥

---

೫೧. ನಾರದನಿಗೆ ಬ್ರಹ್ಮನು ಈ ರೀತಿ ಮರುನುಡಿದನು :—ಸಾಧು, ನಾರದಾ, ಸಾಧು. ಎಲೈ ಅನಘಾ! ನೀನು ಪ್ರಶ್ನೆಮಾಡಿದ್ದನ್ನೆಲ್ಲ ನಿನಗೆ ತಿಳಿಸುತ್ತೇನೆ. ಬುದ್ಧಿವಂತರಲ್ಲೆಲ್ಲ ಶ್ರೇಷ್ಠನಾದವನೇ! ನಾನು ಹೇಳುವ ಮಾತುಗಳನ್ನು ಭಕ್ತಿಯಿಂದ ಆಲಿಸು.

೫೨–೫೩. ದೇವತೆಗಳಲ್ಲೆಲ್ಲ ವಿಷ್ಣುವು ಹೇಗೋ, ಬೆಳಗುವ ವಸ್ತುಗಳಲ್ಲೆಲ್ಲ ಸೂರ್ಯನು ಹೇಗೋ, ಪರ್ವತಗಳಲ್ಲೆಲ್ಲ ಮೇರುಪರ್ವತವು ಹೇಗೋ, ಪಕ್ಷಿಗಳಲ್ಲಿ ಗರುಡನು ಹೇಗೋ, ಹಾಗೆ ಸರ್ವವ್ರತಗಳಲ್ಲಿಯೂ ಮಾಸೋಪವಾಸವ್ರತವು

---

ಈ ಜ್ಞಾನವುಂಟಾಗಿದೆ. ಇಹಪರಗಳೆರಡೂ ನನಗೆ ಸುಲಭ್ಯಗಳೂ ಆಗಿವೆ. ನಾನು ಹೆಂಗಸು; ಇತರರೊಡನೆ ಹೀಗೆ ಮಾತನಾಡಬಾರದು. ಇಷ್ಟು ಮಾತನಾಡಿದ್ದೂ ಅಪರಾಧವೆ! ಇದನ್ನು ನನ್ನ ವಿಷ್ಣುವು ಕ್ಷಮಿಸಲಿ. ನೀನು ಧರ್ಮವಿಚಾರವನ್ನು ಹೆಚ್ಚಾಗಿ ಕೇಳಬಯಸಿದರೆ ವಾರಾಣಸಿಗೆ ಹೋಗು. ಅಲ್ಲಿ ಮಾಂಸ ಮಾರುವ ವ್ಯಾಧನೊಬ್ಬನಿರುವನು. ಅವನನ್ನು ಕೇಳು, ಹೇಳುತ್ತಾನೆ'' ಎಂದು ಉತ್ತರವಿತ್ತಳು.

ಆ ಪತಿವ್ರತೆಯು ಹೀಗೆ ಉತ್ತರವಿತ್ತು ಮನೆಯೊಳಕ್ಕೆ ಹೊರಟುಹೋದಳು. ತರುವಾಯ ತಪೋನಿಷ್ಠನು ಆಕೆಯು ಹೇಳಿದಂತೆಯೇ ವಾರಾಣಸಿಗೆ ಹೋಗಿ ಮಾಂಸ ಮಾರುವವನಾದ ಧರ್ಮವ್ಯಾಧನನ್ನು ಕಂಡನು. ಅವನಾದರೊ, ''ಅಯ್ಯಾ ವಿಪ್ರನೇ! ನಿನಗೆ ಸ್ವಾಗತವು. ಪತಿವ್ರತೆಯು ನಿನ್ನನ್ನು ಇಲ್ಲಿಗೆ ಕಳಿಸಿದಳಲ್ಲವೆ. ಬಾ'' ಎಂದನು. ಅದನ್ನು ಕೇಳಿ ತಪೋನಿಷ್ಠನಿಗೆ ಇನ್ನೂ ಆಶ್ಚರ್ಯವಾಯಿತು. ''ಇದನ್ನು ನೀನು ಹೇಗೆ ತಿಳಿದೆ?'' ಎಂದು ಕೇಳಿದನು. ಧರ್ಮವ್ಯಾಧನು, ''ಅಯ್ಯಾ! ಇದು ಮಂತ್ರಪ್ರಭಾವವಲ್ಲ. ಇದು ನನಗೆ ಸಹಜವಾಗಿ ಬಂದುದು. ನಾನು ಪ್ರತಿದಿನವೂ ತಾಯಿ ತಂದೆಗಳನ್ನು ನಮಸ್ಕರಿಸಿ ಉಪಚರಿಸುತ್ತಿರುವುದರ ಪ್ರಭಾವವಿದು'' ಎಂದನು. ತಪೋನಿಷ್ಠನು, ''ಮಹಾತ್ಮಾ! ನೀನು ನನಗೆ ಧರ್ಮೋಪದೇಶ ಮಾಡಬೇಕು'' ಎಂದು ಕೇಳಿದನು. ಧರ್ಮವ್ಯಾಧನು, ''ನಾನು ಶೂದ್ರ! ಉಪದೇಶಾಧಿಕಾರ ನನಗಿಲ್ಲ. ಪಂಚನದ ಕ್ಷೇತ್ರದಲ್ಲಿ ಬಿಂದುಋಷಿಯಿರುವನು. ಆತನಿಂದ ನೀನು ಉಪದೇಶವನ್ನು ಪಡೆ'' ಎಂದು ಹೇಳಿದನು.

ಬಳಿಕ ತಪೋನಿಷ್ಠನು ಧರ್ಮವ್ಯಾಧನು ಹೇಳಿದಂತೆ ಬಿಂದುಋಷಿಯ ಬಳಿಗೆ ಬಂದು ಧರ್ಮವನ್ನು ತಿಳಿದು ಕಾರ್ತಿಕವ್ರತವನ್ನಾಚರಿಸಿ ಕಡೆಗೆ ವಿಷ್ಣುಲೋಕವನ್ನು ಸೇರಿದನು.

**ಸರ್ವದಾನೋದ್ಭವಂ ಚೈವ ಯಜ್ಞೈಶ್ಚ ಭೂರಿದಕ್ಷಿಣೈಃ ।**
**ನ ತತ್ಪುಣ್ಯಮವಾಪ್ನೋತಿ ಯನ್ಮಾಸಪರಿಲಂಘನಾತ್ ॥ ೫೪ ॥**
**ಗುರೋರಾಜ್ಞಾಂ ತತೋ ಲಬ್ಧ್ವಾ ಕುರ್ಯಾನ್ಮಾಸೋಪವಾಸನಂ ।**
**ಅತಿಕೃಚ್ಛ್ರಂ ಚ ಪಾರಾಕಂ ಕೃತ್ವಾ ಚಾಂದ್ರಾಯಣಂ ತತಃ ॥ ೫೫ ॥**
**ಮಾಸೋಪವಾಸಂ ಕುರ್ವೀತ ಜ್ಞಾತ್ವಾ ದೇಹಬಲಾಬಲಂ ।**
**ವಾನಪ್ರಸ್ಥೋ ಯತಿರ್ವಾಪಿ ನಾರೀ ವಾ ವಿಧವಾ ಮುನೇ ॥ ೫೬ ॥**
**ಮಾಸೋಪವಾಸಂ ಕುರ್ವೀತ ಗುರೋರ್ವಿಪ್ರಾಜ್ಞಯಾ ತತಃ ।**
**ಆಶ್ವಿನಸ್ಯಾಮಲೇ ಪಕ್ಷೇ ಏಕಾದಶ್ಯಾಮುಪೋಷಿತಃ ॥ ೫೭ ॥**
**ವ್ರತಮೇತತ್ತು ಗೃಹ್ಣೀಯಾದ್ಯಾವತ್ತ್ರಿಂಶದ್ದಿನಾನಿ ತು ।**
**ಅಚ್ಯುತಸ್ಯಾಲಯೇ ಭಕ್ತ್ಯಾ ತ್ರಿಕಾಲಂ ಪೂಜಯೇದ್ಧರಿಂ ॥ ೫೮ ॥**
**ನೈವೇದ್ಯಧೂಪದೀಪಾದ್ಯೈಃ ಪುಷ್ಪೈರ್ನಾನಾವಿಧೈರಪಿ ।**
**ಮನಸಾ ಕರ್ಮಣಾ ವಾಚಾ ಪೂಜಯೇದ್ಗರುಡಧ್ವಜಂ ॥ ೫೯ ॥**

---

ಶ್ರೇಷ್ಠವಾದದ್ದು. ಸರ್ವವ್ರತಗಳಲ್ಲಿಯೂ ಯಾವ ಪುಣ್ಯವು ದೊರೆಯುವುದೋ, ಸರ್ವತೀರ್ಥಗಳಲ್ಲಿಯೂ ಯಾವ ಪುಣ್ಯವಿರುವುದೋ, ಸರ್ವದಾನಗಳಿಂದಲೂ ಭೂರಿದಕ್ಷಿಣೆಗಳಿಂದ ಕೂಡಿದ ಯಜ್ಞಗಳಿಂದಲೂ ಯಾವ ಪುಣ್ಯವುಂಟಾಗುವುದೋ ಆ ಪುಣ್ಯವು ಮಾಸೋಪವಾಸವ್ರತದ ಪುಣ್ಯಕ್ಕೆ ಸಮನಲ್ಲ. ಒಂದು ಮಾಸಕಾಲ ಉಪವಾಸ ಮಾಡುವುದರಿಂದ ಯಾವ ಪುಣ್ಯವುಂಟಾಗುವುದೋ ಆ ಪುಣ್ಯವು ಆ ತೀರ್ಥಾದಿಗಳಿಂದ ದೊರೆಯುವುದಿಲ್ಲ.

೫೫. ಗುರುವಿನ ಆಜ್ಞೆಯನ್ನು ಪಡೆದು ಅತಿ ಕೃಚ್ಛ್ರವನ್ನೂ ಪಾರಾಕವನ್ನೂ ಚಾಂದ್ರಾಯಣವನ್ನೂ ನಡೆಸಿ ಬಳಿಕ ಮಾಸೋಪವಾಸವನ್ನು ಮಾಡಬೇಕು.

೫೬. ವಾನಪ್ರಸ್ಥನಾಗಲಿ, ಯತಿಯಾಗಲಿ, ನಾರಿಯಾಗಲಿ, ವಿಧವೆಯಾಗಲಿ ತಮ್ಮ ತಮ್ಮ ದೇಹದ ಬಲಾಬಲಗಳನ್ನು ತಿಳಿದುಕೊಂಡು ಮಾಸೋಪವಾಸವನ್ನು ಮಾಡಬೇಕು.

೫೭. ಆಶ್ವೀಜಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಉಪವಾಸಮಾಡಿ ಗುರುವಿಪ್ರರ ಆಜ್ಞೆಯಿಂದ ಮಾಸೋಪವಾಸವನ್ನು ಮಾಡಬೇಕು.

೫೮. ಮೂವತ್ತು ದಿನಗಳು ಮುಗಿಯುವವರೆಗೂ ಈ ವ್ರತವನ್ನು ಆಚರಿಸಬೇಕು. ಅಚ್ಯುತನ ಆಲಯದಲ್ಲಿ ಮೂರು ಹೊತ್ತು ಭಕ್ತಿಯಿಂದ ಹರಿಯನ್ನು ಪೂಜಿಸಬೇಕು.

೫೯. ನೈವೇದ್ಯ, ಧೂಪ, ದೀಪ— ಇವೇ ಮೊದಲಾದುವುಗಳಿಂದಲೂ, ನಾನಾ ವಿಧವಾದ ಹೂವುಗಳಿಂದಲೂ ಮನಸ್ಸು, ಕರ್ಮ, ವಾಕ್ಕು— ಇವುಗಳಿಂದ ಗರುಡಧ್ವಜನನ್ನು ಪೂಜಿಸಬೇಕು.

ನರಃ ಸ್ವಧರ್ಮನಿರತಃ ಸಧವಾ ಚ ಜಿತೇಂದ್ರಿಯಾ ।
ನಾರೀ ವಾ ವಿಧವಾ ಸಾಧ್ವೀ ವಾಸುದೇವಂ ಸಮರ್ಚಯೇತ್ ॥ ೬೦ ॥
ವಸ್ತ್ರಾವಲೋಕನಗಂಧಾದಿ ಸ್ವಾದಿತಂ ಪರಿಕೀರ್ತಿತಂ ।
ಅನ್ಯಸ್ಯ ವರ್ಜಯೇದ್ಗ್ರಾಸಂ ಗ್ರಾಸಾನಾಂ ಸಂಪ್ರಮೋಕ್ಷಣಂ ॥ ೬೧ ॥
ಗಾತ್ರಾಭ್ಯಂಗಂ ಶಿರೋಽಭ್ಯಂಗಂ ತಾಂಬೂಲಂ ಸವಿಲೇಪನಂ ।
ವ್ರತಾರ್ಥೀ ವರ್ಜಯೇತ್ಸರ್ವಂ ಯಚ್ಚಾನ್ಯಚ್ಚ ನಿರಾಕೃತಂ ॥ ೬೨ ॥
ನ ವ್ರತಸ್ಥಃ ಸ್ಪೃಶೇತ್ಕಂಚಿತ್ ವಿಕರ್ಮಸ್ಥಂ ನ ಚಾಲಪೇತ್ ।
ದೇವತಾಯತನೇ ತಿಷ್ಠನ್ ಗೃಹಸ್ಥಶ್ಚಾಚರೇದ್ವ್ರತಂ ॥ ೬೩ ॥
ಕೃತ್ವಾ ಮಾಸೋಪವಾಸಂ ತು ಯಥೋಕ್ತವಿಧಿನಾ ನರಃ ।
ಅನ್ಯೂನಾಧಿಕಮೇವಂ ತು ವ್ರತಂ ತ್ರಿಂಶದ್ದಿನೈರಿತಿ ॥ ೬೪ ॥
ತತೋಽರ್ಚಯೇದೇವ ಪುಣ್ಯಾಂ ದ್ವಾದಶ್ಯಾಂ ಗರುಡಧ್ವಜಂ ।
ವಸ್ತ್ರದಾನಾದಿಭಿಶ್ಚೈವ ಭೋಜಯಿತ್ವಾ ದ್ವಿಜೋತ್ತಮಾನ್ ॥ ೬೫ ॥
ದದ್ಯಾಚ್ಚ ದಕ್ಷಿಣಾಂ ತೇಭ್ಯಃ ಪ್ರಣಿಪತ್ಯ ಕ್ಷಮಾಪಯೇತ್ ।
ವಿಪ್ರಾನ್ಕ್ಷಮಾಪಯಿತ್ವಾ ತು ವಿಸೃಜ್ಯಾಭ್ಯರ್ಚ್ಯ ಪೂಜ್ಯ ಚ ॥ ೬೬ ॥

---

೬೦–೬೧. ಸ್ವಧರ್ಮನಿರತನಾದ ನರನೂ, ಜಿತೇಂದ್ರಿಯಳಾದ ಮುತ್ತೈದೆಯೂ ಅಥವಾ ಸಾಧ್ವಿಯಾದ ವಿಧವೆಯೂ ವಾಸುದೇವನನ್ನು ಅರ್ಚಿಸಬೇಕು. ಪರಾನ್ನವನ್ನು ತ್ಯಜಿಸಬೇಕು. ಯಥಾಶಕ್ತಿ ಅನ್ನದಾನ ಮಾಡಬೇಕು.

೬೨. ಗಾತ್ರಾಭ್ಯಂಗ (ಮೈಗೆಲ್ಲ ಎಣ್ಣೆ ಹಚ್ಚಿಕೊಂಡು ಎರೆದುಕೊಳ್ಳುವುದು), ಶಿರೋಭ್ಯಂಗ (ತಲೆಗೆ ಮಾತ್ರ ಎಣ್ಣೆ ನೀರೆರೆದುಕೊಳ್ಳುವುದು), ತಾಂಬೂಲ, ಗಂಧಾದಿಪರಿಮಳ ಲೇಪನ— ಇವನ್ನೂ, ಬೇರೆಡೆಗಳಲ್ಲಿ ನಿರಾಕರಿಸಲ್ಪಟ್ಟಿರುವುವೆಲ್ಲವನ್ನೂ ವ್ರತಸ್ಥನಾದವನು ವರ್ಜಿಸಬೇಕು.

೬೩. ವ್ರತಸ್ಥನು ವಿಕರ್ಮ (ಪಾಪಕರ್ಮ) ಮಾಡುತ್ತಿರುವ ಯಾವನನ್ನೂ ಮುಟ್ಟಬಾರದು. ಅವನನ್ನು ಮಾತನಾಡಿಸಲೂಬಾರದು. ಗೃಹಸ್ಥನು ದೇವಸ್ಥಾನದಲ್ಲಿ ಇರುತ್ತ ವ್ರತ ಮಾಡಬೇಕು.

೬೪–೬೬. ಇದಕ್ಕೆ ಹೇಳಲ್ಪಟ್ಟಿರುವ ವಿಧಿಪ್ರಕಾರವಾಗಿ ಹೆಚ್ಚುಕಡಮೆಗಳುಂಟಾಗದಂತೆ ಮೂವತ್ತು ದಿನಗಳೂ ಮಾಸೋಪವಾಸವ್ರತವನ್ನು ಮಾಡಿ, ಬಳಿಕ ಪುಣ್ಯಸ್ವರೂಪನಾದ ಗರುಡಧ್ವಜನನ್ನು ದ್ವಾದಶೀ ದಿನದಲ್ಲಿ ಅರ್ಚಿಸಬೇಕು. ಬ್ರಾಹ್ಮಣರಿಗೆ ಭೋಜನಮಾಡಿಸಿ ವಸ್ತ್ರದಾನಾದಿಗಳಿಂದ ಅವರಿಗೆ ದಕ್ಷಿಣೆಕೊಟ್ಟು ಪ್ರಣಾಮಮಾಡಿ ಕ್ಷಮೆ ಕೇಳಿಕೊಳ್ಳಬೇಕು. ಬ್ರಾಹ್ಮಣರನ್ನು ಕ್ಷಮೆ ಕೇಳಿಕೊಂಡು ಅರ್ಚಿಸಿ ಪೂಜಿಸಿ ಕಳಿಸಿಕೊಡಬೇಕು.

ಏವಂ ಮಾಸೋಪವಾಸಾಂತೇ ಕೃತ್ವಾ ವಿಪ್ರಾಂಸ್ತ್ರಯೋದಶ ।
ಕಾರಯೇದ್ವೈಷ್ಣವಂ ಯಜ್ಞಂ ಏಕಾದಶ್ಯಾಮುಪೋಷಿತಃ ॥ ೬೭ ॥
ತತೋಽನುಭೋಜಯೇದ್ವಿಪ್ರಾನ್ನಮಸ್ಕಾರಪುರಸ್ಸರಂ ।
ತಾಂಬೂಲವಸ್ತ್ರಯುಗ್ಮಾನಿ ಭೋಜನಾಚ್ಛಾದನಾನಿ ಚ ॥ ೬೮ ॥
ಯೋಗಪಟ್ಟಾನಿ ಸೂತ್ರಾಣಿ ಶಯ್ಯಾಂ ಸೋಪಸ್ಕರಾಂ ತಥಾ ।
ದತ್ವಾ ಚೈವ ದ್ವಿಜಾಗ್ರೇಭ್ಯಃ ಪೂಜಯಿತ್ವಾ ವಿಸರ್ಜಯೇತ್ ॥ ೬೯ ॥
ವಿಧಿರ್ಮಾಸೋಪವಾಸಸ್ಯ ಯಥಾವತ್ಪರಿಕೀರ್ತಿತಃ ।
ಅತಃ ಪರಂ ಪ್ರವಕ್ಷ್ಯಾಮಿ ನವಮ್ಯಾದಿತಿಥೌ ವಿಧಿಂ ॥ ೭೦ ॥
ಋಷಿಭ್ಯೋ ವಾಲಖಿಲ್ಯೈಶ್ಚ ಪ್ರೋಕ್ತಂ ತಂ ಶೃಣು ನಾರದ ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ದತ್ತಪುಣ್ಯಪಾಪಫಲ ಪ್ರಾಪ್ತಿವರ್ಣನಪೂರ್ವಕ ಮಾಸೋಪವಾಸವ್ರತವಿಧಿಕಥನಂ" ನಾಮ ತ್ರಿಂಶೋಽಧ್ಯಾಯಃ

---

೬೭. ಹೀಗೆ ಮಾಸೋಪವಾಸಮಾಡಿ ಕೊನೆಯಲ್ಲಿ ಹದಿಮೂರು ಜನ ಬ್ರಾಹ್ಮಣರನ್ನು ಕರೆಯಿಸಿ ಏಕಾದಶಿಯಲ್ಲಿ ಉಪವಾಸವಿದ್ದು ವೈಷ್ಣವಯಜ್ಞ ವನ್ನು ನಡೆಸಬೇಕು.

೬೮–೬೯. ಬಳಿಕ ಬ್ರಾಹ್ಮಣರ ಭೋಜನವಾದಮೇಲೆ ಅವರಿಗೆ ನಮಸ್ಕಾರ ಮಾಡಿ ತಾನು ಭೋಜನಮಾಡಬೇಕು. ತಾಂಬೂಲ, ವಸ್ತ್ರಯುಗ್ಮ (ಧೋತ್ರದ ಜೊತೆ), ಹೊದಿಕೆಗಳು, ಯೋಗಪಟ್ಟಗಳು, ಸೂತ್ರಗಳು, ಸಲಕರಣೆಗಳಿಂದೊಡ ಗೂಡಿದ ಶಯ್ಯೆ— ಇವೇ ಮೊದಲಾದುವನ್ನು ದ್ವಿಜಶ್ರೇಷ್ಠರಿಗೆ ಕೊಟ್ಟು ಪೂಜಿಸಿ ಕಳಿಸಿಕೊಡಬೇಕು.

೭೦. ಮಾಸೋಪವಾಸದ ವಿಧಿಯನ್ನು ಯಥಾವತ್ತಾಗಿ ಹೇಳಿದ್ದಾಯಿತು. ಇನ್ನುಮುಂದೆ ನವಮಿ ಮೊದಲಾದ ತಿಥಿಗಳಲ್ಲಿ ನಡೆಸಬೇಕಾದ ವಿಧಿಯನ್ನು ವಿವರಿಸುತ್ತೇನೆ.

೭೧. ವಾಲಖಿಲ್ಯರು ಅದನ್ನು ಋಷಿಗಳಿಗೆ ಹೇಳಿದರು. ನಾರದಾ! ಅದನ್ನು ಆಲಿಸಿ ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯ ದಲ್ಲಿ "ದತ್ತಪುಣ್ಯಪಾಪಫಲಪ್ರಾಪ್ತಿವರ್ಣನಪೂರ್ವಕ ಮಾಸೋಪವಾಸವ್ರತವಿಧಿಕಥನ" ವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋಽಧ್ಯಾಯಃ

## ಕೂಷ್ಮಾಂಡನವಮೀ ತುಲಸೀ ವಿವಾಹವಿಧಿವರ್ಣನಂ

**ವಾಲಖಿಲ್ಯಾ ಊಚುಃ:—**

**ಕಾರ್ತಿಕೇ ಶುಕ್ಲನವಮೀ ತತ್ರಾಭೂದ್ದ್ವಾಪರಂ ಯುಗಂ ।**
**ಪೂರ್ವಾಪರಾಹ್ಣಗಾ ಗ್ರಾಹ್ಯಾ ಕ್ರಮಾದ್ದಾನೋಪವಾಸಯೋಃ ॥ ೧ ॥**
**ಅತ್ರ ಕೂಷ್ಮಾಂಡಕೋನಾಮ ಹತೋ ದೈತ್ಯಸ್ತು ವಿಷ್ಣುನಾ ।**
**ತದ್ರೋಮಭಿಸ್ಸಮುದ್ಭೂತಾ ವಲ್ಲ್ಯಃ ಕೂಷ್ಮಾಂಡಸಂಭವಾಃ ॥ ೨ ॥**
**ತಸ್ಮಾತ್ಕೂಷ್ಮಾಂಡದಾನೇನ ಫಲಮಾಪ್ನೋತಿ ನಿಶ್ಚಿತಂ ।**
**ಅಸ್ಯಾಮೇವ ನವಮ್ಯಾಂ ತು ಕುರ್ಯಾತ್ಕೃಷ್ಣೋತ್ಸವಂ ನರಃ ॥ ೩ ॥**
**ಸ್ವಶಾಖೋಕ್ತೇನ ವಿಧಿನಾ ತುಲಸ್ಯಾಃ ಕರಪೀಡನಂ ।**
**ಕನ್ಯಾದಾನಫಲಂ ತಸ್ಯ ಜಾಯತೇ ನಾತ್ರ ಸಂಶಯಃ ॥ ೪ ॥**
**ಕಾರ್ತಿಕೇ ಶುಕ್ಲನವಮೀಮವಾಪ್ಯ ವಿಜಿತೇಂದ್ರಿಯಃ ।**
**ಹರಿಂ ವಿಧಾಯ ಸೌವರ್ಣಂ ತುಲಸ್ಯಾ ಸಹಿತಂ ಶುಭಂ ॥ ೫ ॥**

---

### ಕನ್ನಡದ ಅನುವಾದ

#### ಕೂಷ್ಮಾಂಡ ನವಮೀ ತುಲಸೀ ವಿವಾಹವಿಧಿವರ್ಣನ

೧. ವಾಲಖಿಲ್ಯರು ಹೇಳುತ್ತಾರೆ:—ಕಾರ್ತಿಕದಲ್ಲಿ ಶುಕ್ಲನವಮಿಯ ದಿನ ದ್ವಾಪರಯುಗವು ಮೊದಲಾಯಿತು. ಪೂರ್ವಾಹ್ಣ ಮತ್ತು ಅಪರಾಹ್ಣಗಳಲ್ಲಿ ವ್ಯಾಪಿಸಿರುವ ನವಮೀ ತಿಥಿಯನ್ನು ಕ್ರಮವಾಗಿ ದಾನ ಉಪವಾಸಗಳಿಗೆ ತಕ್ಕವುಗಳೆಂದು ಗ್ರಹಿಸಬೇಕು.

೨. ಆ ದಿನ ಕೂಷ್ಮಾಂಡಕನೆಂಬ ದೈತ್ಯನು ವಿಷ್ಣುವಿನಿಂದ ಹತನಾದನು. ಅವನ ರೋಮಗಳಿಂದ ಕೂಷ್ಮಾಂಡ (ಕುಂಬಳ) ವೆಂಬ ಹೆಸರಿನ ಬಳ್ಳಿಗಳು ಉದ್ಭವಿಸಿದವು.

೩. ಆದ್ದರಿಂದ ನರರು ಕೂಷ್ಮಾಂಡದಾನವನ್ನು ಮಾಡಿದರೆ ಅದರಿಂದ ನಿಶ್ಚಿತವಾಗಿ ಫಲವನ್ನು ಪಡೆಯುತ್ತಾರೆ. ಈ ನವಮಿಯಲ್ಲಿಯೇ ಕೃಷ್ಣೋತ್ಸವವನ್ನು ಮಾಡಬೇಕು.

೪. ತನ್ನ ಶಾಖೆಗೆ ಹೇಳಿರುವ ವಿಧಿಯನ್ನನುಸರಿಸಿ ತುಲಸಿಯ ವಿವಾಹವನ್ನು ನಡೆಸಬೇಕು. ಇದರಿಂದ ಅವನಿಗೆ ಕನ್ಯಾದಾನದ ಫಲವುಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲವು.

೫–೬. ಕಾರ್ತಿಕಮಾಸದಲ್ಲಿ ಶುಕ್ಲನವಮೀ ತಿಥಿಯು ಬರಲು ಜಿತೇಂದ್ರಿಯನಾಗಿ, ಸುವರ್ಣದಿಂದ ಹರಿಯ ಮೂರ್ತಿಯನ್ನು ಮಾಡಿ ಆ ಮಂಗಳಮೂರ್ತಿ

ಪೂಜಯೇದ್ವಿಧಿವದ್ಭಕ್ತ್ಯಾ ವ್ರತೀ ತತ್ರ ದಿನತ್ರಯಂ ।
ಏವಂ ಯಥೋಕ್ತವಿಧಿನಾ ಕುರ್ಯಾದ್ವೈವಾಹಿಕಂ ವಿಧಿಂ ॥ ೬ ॥
ಗ್ರಾಹ್ಯಂ ತ್ರಿರಾತ್ರಮತ್ರೈವ ನವಮ್ಯಾದ್ಯನುರೋಧತಃ ।
ಮಧ್ಯಾಹ್ನವ್ಯಾಪಿನೀ ಗ್ರಾಹ್ಯಾ ನವಮೀ ಪೂರ್ವವೇಧಿತಾ ॥ ೭ ॥
ಧಾತ್ರ್ಯಶ್ವತ್ಥೌ ಯಃ ಏಕತ್ರ ಪಾಲಯಿತ್ವಾ ಸಮುದ್ವಹೇತ್ ।
ನ ನಶ್ಯತೇ ತಸ್ಯ ಪುಣ್ಯಂ ಕಲ್ಪಕೋಟಿಶತೈರಪಿ ॥ ೮ ॥
ಕನಕಸ್ಯ ಸುತಾ ಪೂರ್ವಂ ಏಕಾದಶ್ಯಾಂ ಕಿಶೋರಿಕಾ ।
ಚಕಾರ ಭಕ್ತಿತಸ್ಸಾಯಂ ತುಲಸ್ಯುದ್ವಾಹಜಂ ವಿಧಿಂ ॥ ೯ ॥
ತೇನ ವೈಧವ್ಯದೋಷೇಣ ನಿರ್ಮುಕ್ತಾಸೀತ್ಸುಲೋಚನಾ ।
ತಸ್ಮಾತ್ಸಾಯಂ ಪ್ರಕರ್ತವ್ಯಃ ತುಲಸ್ಯುದ್ವಾಹಜೋ ವಿಧಿಃ ॥ ೧೦ ॥
ಅವಶ್ಯಮೇವ ಕರ್ತವ್ಯಃ ಪ್ರತಿವರ್ಷಂ ತು ವೈಷ್ಣವೈಃ ।
ವಿಧಿಂ ತಸ್ಯ ಪ್ರವಕ್ಷ್ಯಾಮಿ ಯಥಾ ಸಾಂಗಾ ಕ್ರಿಯಾ ಭವೇತ್ ॥ ೧೧ ॥
ವಿಷ್ಣೋಸ್ತು ಪ್ರತಿಮಾಂ ಕುರ್ಯಾತ್ಪಲಸ್ಯ ಸ್ವರ್ಣಜಾಂ ಶುಭಾಂ ।
ತದರ್ಧಾರ್ಧಂ ತದರ್ಧಾರ್ಧಂ ಯಥಾಶಕ್ತ್ಯಾ ಪ್ರಕಲ್ಪಯೇತ್ ॥ ೧೨ ॥

---

ಯನ್ನು ತುಲಸಿಯೊಡನೆ ಕೂಡಿಸಿ, ವ್ರತಿಯು ಭಕ್ತಿಯಿಂದ ವಿಧಿಪೂರ್ವಕವಾಗಿ ಮೂರು ದಿನಗಳವರೆಗೆ ಪೂಜೆ ಮಾಡಬೇಕು. ಹೀಗೆ ಯಥೋಕ್ತವಿಧಿಯಿಂದ ವಿವಾಹವಿಧಿಯನ್ನು ನಡಸಬೇಕು.

೭–೮. ಇಲ್ಲಿ ನವಮಿಯಿಂದ ಮೊದಲುಗೊಂಡು ಮೂರು ರಾತ್ರಿಗಳನ್ನು ಗ್ರಹಿಸಬೇಕು. ಪೂರ್ವವೇಧೆಯುಳ್ಳದ್ದಾಗಿಯೂ ಮಧ್ಯಾಹ್ನದಲ್ಲಿ ವ್ಯಾಪನೆಯುಳ್ಳದ್ದಾಗಿಯೂ ಇರುವ ನವಮಿಯನ್ನು ಗ್ರಹಿಸಬೇಕು. ಯಾವನು ಧಾತ್ರಿ (ನೆಲ್ಲಿ) ಮತ್ತು ಅಶ್ವತ್ಥಗಳನ್ನು ಒಂದೇ ಕಡೆ ಬೆಳಸಿ ಅವಕ್ಕೆ ವಿವಾಹ ಮಾಡುತ್ತಾನೋ ಅವನ ಪುಣ್ಯವು ನೂರಾರು ಕಲ್ಪಕೋಟಿಗಳಲ್ಲಿಯೂ ನಾಶವಾಗುವುದಿಲ್ಲ.

೯. ಪೂರ್ವದಲ್ಲಿ ಕನಕನ ಮಗಳು ಕಿಶೋರಿಕಾವಸ್ಥೆಯಲ್ಲಿದ್ದು ಏಕಾದಶಿಯ ಸಾಯಂಕಾಲ ಭಕ್ತಿಯಿಂದ ತುಲಸೀವಿವಾಹವನ್ನು ನಡೆಸಿದಳು.

೧೦. ಆ ವಿವಾಹವ್ರತವನ್ನು ನಡೆಸಿದ್ದರಿಂದ, ಆ ಸುಲೋಚನೆಯು ವೈಧವ್ಯದೋಷದಿಂದ ವಿಮೋಚನೆಯನ್ನು ಹೊಂದಿದಳು. ಆದ್ದರಿಂದ ತುಲಸಿಯ ವಿವಾಹವಿಧಿಯನ್ನು ಸಾಯಂಕಾಲ ನಡೆಸಬೇಕು.

೧೧. ವೈಷ್ಣವರು ಪ್ರತಿವರ್ಷವೂ (ಈ ತುಲಸೀ ವಿವಾಹವನ್ನು) ಅವಶ್ಯವಾಗಿ ಮಾಡತಕ್ಕದ್ದು. ಈ ಕ್ರಿಯೆಯು ಸಾಂಗವಾಗುವುದಕ್ಕೆ ಅನುಸರಿಸಬೇಕಾದ ಅದರ ವಿಧಿಯನ್ನು ವಿವರಿಸುತ್ತೇನೆ; ಕೇಳು.

೧೨. ಒಂದು ಪಲತೂಕದ ಚಿನ್ನದಿಂದ ಶುಭವಾದ ವಿಷ್ಣುಪ್ರತಿಮೆಯನ್ನು

**ಪ್ರಾಣಪ್ರತಿಷ್ಠಾಂ ಕೃತ್ವೈವ ತುಲಸೀವಿಷ್ಣುರೂಪಯೋಃ ।**
**ತತ ಉತ್ಥಾಪಯೇದ್ದೇವಂ ಪೂರ್ವೋಕ್ತೈಃ ಸ್ತವಾದಿಭಿಃ ॥ ೧೩ ॥**
**ಉಪಚಾರೈಷ್ಷೋಡಶಭಿಃ ಪೂಜಯೇತ್ ಪುರುಷೋಕ್ತಿಭಿಃ ।**
**ದೇಶಕಾಲೌ ತತಸ್ಸ್ಮೃತ್ವಾ ಗಣೇಶಂ ತತ್ರ ಪೂಜಯೇತ್ ॥ ೧೪ ॥**
**ಪುಣ್ಯಾಹಂ ವಾಚಯಿತ್ವಾಥ ನಾಂದೀಶ್ರಾದ್ಧಂ ಸಮಾಚರೇತ್ ।**
**ವೇದವಾದ್ಯಾದಿನಿರ್ಘೋಷೈರ್ವಿಷ್ಣುಮೂರ್ತಿಂ ಸಮಾನಯೇತ್ ॥ ೧೫ ॥**
**ತುಲಸೀನಿಕಟೇ ಸಾ ತು ಸ್ಥಾಪ್ಯಾ ಚಾಂತರ್ಹಿತಾ ಪಟೈಃ ।**
**ಆಗಚ್ಛ ಭಗವನ್ ದೇವ ಅರ್ಚಯಿಷ್ಯಾಮಿ ಕೇಶವ ॥ ೧೬ ॥**
**ತುಭ್ಯಂ ದಾಸ್ಯಾಮಿ ತುಲಸೀಂ ಸರ್ವಕಾಮಪ್ರದೋ ಭವ ।**
**ದದ್ಯಾತ್ತ್ರಿವಾರಮರ್ಘ್ಯಂ ಚ ಪಾದ್ಯಂ ವಿಷ್ಟರಮೇವ ಚ ॥ ೧೭ ॥**
**ತತ ಆಚಮನೀಯಂ ಚ ತ್ರಿರುಕ್ತ್ವಾ ಚ ಪ್ರದಾಪಯೇತ್ ।**
**ತತೋ ದಧಿ ಘೃತಂ ಕ್ಷೀರಂ ಕಾಂಸ್ಯಪಾತ್ರಪುಟೀಕೃತಂ ॥ ೧೮ ॥**

---

ಮಾಡಬೇಕು. ಅದರ ಅರ್ಧದ ಅರ್ಧ, ಅದರ ಅರ್ಧದ ಅರ್ಧ ಚಿನ್ನ—ಹೀಗೆ ಯಥಾಶಕ್ತಿಯಾಗಿ ಪ್ರತಿಮೆಯನ್ನು ನಿರ್ಮಿಸಬೇಕು.

೧೩. ತುಲಸೀವಿಷ್ಣುರೂಪಗಳಿಗೆ ಪ್ರಾಣಪ್ರತಿಷ್ಠೆಮಾಡಿ ಬಳಿಕ ಈ ಮೊದಲೇ ಹೇಳಿರುವ ಸ್ತವಾದಿಗಳಿಂದ ದೇವದೇವನನ್ನು ಎಚ್ಚರಗೊಳಿಸಬೇಕು.

೧೪. ಪುರುಷೋಕ್ತಿಗಳಿಂದ (ಪುರುಷಸೂಕ್ತದ ಮಂತ್ರಗಳಿಂದ) ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಬಳಿಕ ದೇಶಕಾಲಗಳನ್ನು ಸ್ಮರಿಸಿ ಗಣೇಶನನ್ನು ಪೂಜಿಸಬೇಕು.

೧೫. ಆಮೇಲೆ ಪುಣ್ಯಾಹವಾಚನೆಮಾಡಿ ನಾಂದೀಶ್ರಾದ್ಧವನ್ನು ಮಾಡಬೇಕು. ವೇದ, ವಾದ್ಯ ಮೊದಲಾದುವುಗಳ ಘೋಷದಿಂದ ವಿಷ್ಣುಮೂರ್ತಿಯನ್ನು ತೆಗೆದುಕೊಂಡುಬರಬೇಕು.

೧೬. ಆ ಮೂರ್ತಿಯನ್ನು ತುಲಸಿಯ ಸಮೀಪದಲ್ಲಿಟ್ಟು ಪಟಗಳಿಂದ ಮರೆಮಾಡಿರಬೇಕು. "ಭಗವನ್, ದೇವಾ, ಕೇಶವಾ, ಇಲ್ಲಿ ಬಿಜಮಾಡು! ನಿನ್ನನ್ನು ಅರ್ಚಿಸುತ್ತೇನೆ.

೧೭. ನಿನಗೆ ತುಲಸಿಯನ್ನು ಕೊಡುತ್ತೇನೆ. ಸಮಸ್ತ ಇಷ್ಟಾರ್ಥಗಳನ್ನೂ ನೀಡುವವನಾಗು"—ಎಂದು ಹೇಳಿ ಮೂರು ಸಾರಿ ಅರ್ಘ್ಯ ಕೊಡಬೇಕು. ಪಾದ್ಯವನ್ನೂ ಪೀಠವನ್ನೂ ಅರ್ಪಿಸಬೇಕು.

೧೮–೧೯. ಬಳಿಕ ಆಚಮನೀಯವನ್ನು ಮೂರು ಸಲ ಹೇಳಿ ಕೊಡಬೇಕು. ಬಳಿಕ ಮೊಸರು, ತುಪ್ಪ, ಹಾಲುಗಳನ್ನು ಕಂಚಿನ ಪಾತ್ರೆಯಲ್ಲಿ ಮಿಶ್ರಮಾಡಿ, "ಮಧುಪರ್ಕವನ್ನು ನೀನು ಸ್ವೀಕರಿಸು. ವಾಸುದೇವಾ ನಿನಗೆ ನಮಸ್ಕಾರ"

ಮಧುಪರ್ಕಂ ಗೃಹಾಣ ತ್ವಂ ವಾಸುದೇವ ನಮೋಽಸ್ತು ತೇ ।
ಹರಿದ್ರಾಲೇಪನಾಭ್ಯಂಗಕಾರ್ಯಂ ಸರ್ವಂ ವಿಧಾಯ ಚ ॥ ೧೯ ॥
ಗೋಧೂಲಿಸಮಯೇ ಪೂಜ್ಯೌ ತುಲಸೀಕೇಶವೌ ಪುನಃ ।
ಪೃಥಕ್ಪೃಥಕ್ತಥಾ ಕಾರ್ಯೌ ಸಮ್ಮುಖೌ ಮಂಗಲಂ ಪಠೇತ್ ॥ ೨೦ ॥
ಈಷದ್ದೃಶ್ಯೇ ಭಾಸ್ಕರೇ ತು ಸಂಕಲ್ಪಂ ತು ಸಮುಚ್ಚರೇತ್ ।
ಸ್ವಗೋತ್ರಪ್ರವರಾನುಕ್ತ್ವಾ ತಥಾ ತ್ರಿಪುರುಷಾದಿಕಂ ॥ ೨೧ ॥
ಅನಾದಿಮಧ್ಯನಿಧನ ತ್ರೈಲೋಕ್ಯಪ್ರತಿಪಾಲಕ ।
ಇಮಾಂ ಗೃಹಾಣ ತುಲಸೀಂ ವಿವಾಹವಿಧಿನೇಶ್ವರ ॥ ೨೨ ॥
ಪಾರ್ವತೀಬೀಜಸಂಭೂತಾಂ ವೃಂದಾಭಸ್ಮನಿ ಸಂಸ್ಥಿತಾಂ ।
ಅನಾದಿಮಧ್ಯನಿಧನಾಂ ವಲ್ಲಭಾಂ ತೇ ದದಾಮ್ಯಹಂ ॥ ೨೩ ॥
ಪಯೋಘಟೈಶ್ಚ ಸೇವಾಭಿಃ ಕನ್ಯಾವದ್ವರ್ಧಿತಾ ಮಯಾ ।
ತ್ವತ್ಪ್ರಿಯಾಂ ತುಲಸೀಂ ತುಭ್ಯಂ ದದಾಮಿ ತ್ವಂ ಗೃಹಾಣ ಭೋ ॥ ೨೪ ॥
ಏವಂ ದತ್ವಾ ಚ ತುಲಸೀಂ ಪಶ್ಚಾತ್ತೌ ಪೂಜಯೇತ್ತತಃ ।
ರಾತ್ರೌ ಜಾಗರಣಂ ಕುರ್ಯಾದ್ವಿವಾಹೋತ್ಸವಪೂರ್ವಕಂ ॥ ೨೫ ॥

---

ಎಂದು ನುಡಿಯುತ್ತಾ ಮಧುಪರ್ಕವನ್ನು ಅರ್ಪಿಸಬೇಕು. ಆಮೇಲೆ ಹರಿದ್ರಾಲೇಪನ, ಅಭ್ಯಂಗಕಾರ್ಯ—ಎಲ್ಲವನ್ನೂ ನೆರವೇರಿಸಬೇಕು.

೨೦. ಗೋಧೂಲಿ ಸಮಯದಲ್ಲಿ ತುಲಸೀಕೇಶವರನ್ನು ಮತ್ತೆ ಬೇರೆಬೇರೆಯಾಗಿ ಪೂಜಿಸಬೇಕು. ಬಳಿಕ ಎದುರುಬದುರಾಗಿ ಕೂಡಿಸಿ ಮಂಗಳವನ್ನು ಪಠಿಸಬೇಕು.

೨೧. ಸೂರ್ಯನು ಇನ್ನೂ ಸ್ವಲ್ಪಮಾತ್ರ ಕಾಣುತ್ತಿರುವಾಗ ತನ್ನ ಗೋತ್ರ ಪ್ರವರಗಳನ್ನೂ ಮೂರುತಲೆಯವರೆಗೆ ಹಿಂದಿನ ಪಿತೃಪುರುಷರನ್ನೂ ಹೇಳಿ ಸಂಕಲ್ಪವನ್ನುಚ್ಚರಿಸಬೇಕು.

೨೨–೨೩. "ಆದಿ, ಮಧ್ಯ, ಅಂತಗಳಿಲ್ಲದವನೆ! ಮೂರು ಲೋಕಗಳನ್ನು ಪರಿಪಾಲಿಸುವವನೇ, ಈಶ್ವರಾ! ಈ ತುಲಸಿಯನ್ನು ವಿವಾಹವಿಧಿಯಿಂದ ಪರಿಗ್ರಹಿಸು. ಪಾರ್ವತಿಯು ಕೊಟ್ಟ ಬೀಜದಿಂದ ಹುಟ್ಟಿದವಳೂ, ವೃಂದೆಯ ಭಸ್ಮದಲ್ಲಿ ನೆಲಸಿದವಳೂ, ಆದಿಮಧ್ಯಾಂತಗಳಿಲ್ಲದವಳೂ ಆದ ಈ ತುಲಸಿಯನ್ನು ನಿನ್ನ ವಲ್ಲಭೆಯಾಗಿ ಕೊಡುತ್ತೇನೆ.

೨೪. ಪಯೋಘಟ (ಹಾಲಿನ, ನೀರಿನ ಗಡಿಗೆ) ಗಳಿಂದಲೂ ಸೇವೆಗಳಿಂದಲೂ ಕನ್ಯೆಯಂತೆ ನಾನು ಇವಳನ್ನು ಬೆಳಸಿದ್ದೇನೆ. ನಿನಗೆ ಪ್ರಿಯಳಾದ ಈ ತುಲಸಿಯನ್ನು ನಿನಗೆ ಕೊಡುತ್ತೇನೆ ಸ್ವಾಮಿ; ಸ್ವೀಕರಿಸು."

೨೫. ಎಂದು ಈ ರೀತಿಯಾಗಿ ತುಲಸಿಯನ್ನು ಶ್ರೀಹರಿಗೆ ದಾನಮಾಡ

ತತಃ ಪ್ರಭಾತಸಮಯೇ ತುಲಸೀಂ ವಿಷ್ಣುಮರ್ಚಯೇತ್ ।
ವಹ್ನಿಸಂಸ್ಥಾಪನಂ ಕೃತ್ವಾ ದ್ವಾದಶಾಕ್ಷರವಿದ್ಯಯಾ ॥ ೨೬ ॥
ಪಾಯಸಾಜ್ಯಕ್ಷೌದ್ರತಿಲೈರ್ಜುಹ್ಯಾದಷ್ಟೋತ್ತರಂ ಶತಂ ।
ತತಃ ಸ್ವಿಷ್ಟಕೃತಂ ಹುತ್ವಾ ದದ್ಯಾತ್ಪೂರ್ಣಾಹುತಿಂ ತತಃ ।
ಆಚಾರ್ಯಂ ಚ ಸಮಭ್ಯರ್ಚ್ಯ ಹೋಮಶೇಷಂ ಸಮಾಪಯೇತ್ ॥ ೨೭ ॥
ಚತುರೋ ವಾರ್ಷಿಕಾನ್ ಮಾಸಾನ್ನಿಯಮೋ ಯೇನ ಯಃ ಕೃತಃ ।
ಕಥಯಿತ್ವಾ ದ್ವಿಜೇಭ್ಯಸ್ತತ್ತಥಾನ್ಯತ್ಪರಿಪೂರಯೇತ್ ॥ ೨೮ ॥
ಇದಂ ವ್ರತಂ ಮಯಾ ದೇವ ಕೃತಂ ಪ್ರೀತ್ಯೈ ತವ ಪ್ರಭೋ ।
ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾಜ್ಜನಾರ್ದನ ॥ ೨೯ ॥
ರೇವತೀತುರ್ಯಚರಣೇ ದ್ವಾದಶೀಸಂಯುತೇ ನರಃ ।
ನ ಕುರ್ಯಾತ್ಪಾರಣಂ ಕುರ್ವನ್ವ್ರತಂ ನಿಷ್ಫಲತಾಂ ನಯೇತ್ ॥ ೩೦ ॥
ತತೋ ಯೇಷಾಂ ಪದಾರ್ಥಾನಾಂ ವರ್ಜನಂ ತು ಕೃತಂ ಭವೇತ್ ।
ಚಾತುರ್ಮಾಸ್ಯೇಽಥವಾ ಚೋರ್ಜೇ ಬ್ರಾಹ್ಮಣೇಭ್ಯಸ್ಸಮರ್ಪಯೇತ್ ।
ತತಸ್ಸರ್ವಂ ಸಮಶ್ನೀಯಾದ್ಯದ್ಯತ್ತ್ಯಕ್ತಂ ವ್ರತೇ ಸ್ಥಿತಂ ॥ ೩೧ ॥

---

ಬೇಕು. ಬಳಿಕ ಇಬ್ಬರನ್ನೂ ಪೂಜಿಸಬೇಕು. ವಿವಾಹೋತ್ಸವಪೂರ್ವಕವಾಗಿ ರಾತ್ರಿಯಲ್ಲಿ ಜಾಗರಣೆ ಮಾಡಬೇಕು.

೨೬–೨೭. ಆಮೇಲೆ ಪ್ರಭಾತಕಾಲದಲ್ಲಿ ತುಲಸಿಯನ್ನೂ ವಿಷ್ಣುವನ್ನೂ ಅರ್ಚಿಸಬೇಕು. ಅಗ್ನಿಪ್ರತಿಷ್ಠೆಯನ್ನು ಮಾಡಿ ದ್ವಾದಶಾಕ್ಷರ ವಿದ್ಯೆಯಿಂದ, ಪಾಯಸ, ತುಪ್ಪ, ಜೇನುತುಪ್ಪ, ಎಳ್ಳು—ಇವುಗಳನ್ನು ನೂರೆಂಟುಸಲ ಹೋಮ ಮಾಡಬೇಕು. ಆಮೇಲೆ ಸ್ವಿಷ್ಟಕೃತ್ ಹೋಮಮಾಡಿ ಬಳಿಕ ಪೂರ್ಣಾಹುತಿಯನ್ನು ಕೊಡಬೇಕು. ಆಚಾರ್ಯನನ್ನು ಅರ್ಚಿಸಿ ಹೋಮಶೇಷವನ್ನು ಮುಗಿಸಬೇಕು.

೨೮. ವರ್ಷಾಕಾಲದ ನಾಲ್ಕು ಮಾಸಗಳಲ್ಲಿ ಈ ರೀತಿ ನಿಯಮಮಾಡಿ ಕೊಂಡು ಆ ನಿಯಮವನ್ನು ದ್ವಿಜರಿಗೆ ತಿಳಿಸಿ ಅದರಂತೆ ನಡೆಸಬೇಕು.

೨೯. "ಎಲೈ ದೇವನೇ, ಪ್ರಭುವೇ! ಈ ವ್ರತವನ್ನು ನಿನ್ನ ಪ್ರೀತಿಗಾಗಿ ನಾನು ಮಾಡಿದೆನು. ಜನಾರ್ದನಾ! ನಿನ್ನ ಅನುಗ್ರಹದಿಂದ ನ್ಯೂನತೆಯೆಲ್ಲ ಸಂಪೂರ್ಣತೆಯನ್ನು ಪಡೆಯಲಿ" ಎಂದು ಸಂಕಲ್ಪ ಮಾಡಬೇಕು.

೩೦. ರೇವತಿಯ ನಾಲ್ಕನೆಯ ಪಾದವು ದ್ವಾದಶಿಯೊಡನೆ ಸೇರಿರಲಾಗಿ ಪಾರಣೆಮಾಡಬಾರದು. ಪಾರಣೆಮಾಡಿದ ನರನು ನಿಷ್ಫಲತ್ವವನ್ನು ಹೊಂದುತ್ತಾನೆ.

೩೧. ಬಳಿಕ, ಚಾತುರ್ಮಾಸ್ಯದಲ್ಲಾಗಲಿ, ಕಾರ್ತಿಕದಲ್ಲಾಗಲಿ ಯಾವ ಪದಾರ್ಥಗಳ ವರ್ಜನೆ ಮಾಡಲಾಗಿದೆಯೋ ಅವನ್ನು ಬ್ರಾಹ್ಮಣರಿಗೆ ಸಮರ್ಪಿಸ ಬೇಕು. ಬಳಿಕ ವ್ರತದಲ್ಲಿ ಯಾವಯಾವುದನ್ನು ತ್ಯಾಗಮಾಡಲಾಗಿದೆಯೋ ಅದನ್ನೆಲ್ಲ ತಿನ್ನಬೇಕು.

ದಂಪತಿಭ್ಯಾಂ ಸಹೈವಾತ್ರ ಭೋಕ್ತವ್ಯಂ ಚ ದ್ವಿಜೈಸ್ಸಹ ॥ ೩೨ ॥
ತತೋ ಭಕ್ತ್ಯುತ್ತರಂ ಯಾನಿ ಗಲಿತಾನಿ ದಲಾನಿ ಚ ।
ತಾನಿ ಭುಕ್ತ್ವಾ ತುಲಸ್ಯಾಶ್ಚ ಸ್ವಯಂ ಪಾಪೈಃ ಪ್ರಮುಚ್ಯತೇ ॥ ೩೩ ॥
ಇಕ್ಷುದಂಡಂ ತಥಾ ಧಾತ್ರೀಫಲಂ ಕೋಲಫಲಂ ತಥಾ ।
ಭುಕ್ತ್ವಾ ತು ಭೋಜನಸ್ಯಾಂತೇ ತಸ್ಯೋಚ್ಛಿಷ್ಟಂ ವಿನಶ್ಯತಿ ॥ ೩೪ ॥
ಏಷು ತ್ರಿಷು ನ ಭುಕ್ತಂ ಚೇತ್ ಏಕೈಕಮಪಿ ಯೇನ ತು ।
ಜ್ಞೇಯ ಉಚ್ಛಿಷ್ಟ ಆವರ್ಷಂ ನರೋಽಸೌ ನಾತ್ರ ಸಂಶಯಃ ॥ ೩೫ ॥
ತತಸ್ಸಾಯಂ ಪುನಃ ಪೂಜ್ಯಾವಿಕ್ಷುದಂಡೈಶ್ಚ ಶೋಭಿತೈಃ ।
ತುಲಸೀವಾಸುದೇವೌ ಚ ಕೃತಕೃತ್ಯೋ ಭವೇತ್ತತಃ ॥ ೩೬ ॥
ತತೋ ವಿಸರ್ಜನಂ ಕೃತ್ವಾ ದತ್ವಾ ದಾಯಾದಿಕಂ ಹರೇಃ ।
ವೈಕುಂಠಂ ಗಚ್ಛ ಭಗವನ್ ತುಲಸೀಸಹಿತಂ ಪ್ರಭೋ ।
ಮತ್ಕೃತಂ ಪೂಜನಂ ಗೃಹ್ಯ ಸಂತುಷ್ಟೋ ಭವ ಸರ್ವದಾ ॥ ೩೭ ॥
ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಪರಮೇಶ್ವರ ।
ಯತ್ರ ಬ್ರಹ್ಮಾದಯೋ ದೇವಾ ತತ್ರ ಗಚ್ಛ ಜನಾರ್ದನ ॥ ೩೮ ॥

---

೩೨–೩೩. ದಂಪತಿಗಳಿಬ್ಬರೂ ಬ್ರಾಹ್ಮಣಸಮೇತರಾಗಿ ಅಲ್ಲಿಯೇ ಭೋಜನ ಮಾಡಬೇಕು. ಭೋಜನವಾದಮೇಲೆ ತುಲಸಿಯ ದಳಗಳಲ್ಲಿ ಯಾವುವು ಗಳಿತ ವಾಗಿವೆಯೋ ಅವನ್ನು ತಿನ್ನಬೇಕು. ಈ ರೀತಿ ತಿಂದುದಾದರೆ ಪಾಪಗಳಿಂದ ಬಿಡಲ್ಪಡುತ್ತಾನೆ.

೩೪. ಭೋಜನದ ಕೊನೆಯಲ್ಲಿ ಕಬ್ಬಿನ ಜಳವೆ, ಧಾತ್ರೀಫಲ (ನೆಲ್ಲಿಯ ಕಾಯಿ), ಕೋಲಫಲ (ಬದರಿಫಲ)—ಇವನ್ನು ತಿನ್ನಬೇಕು. ಹಾಗೆ ತಿಂದವನಿಗೆ ಉಚ್ಛಿಷ್ಠದೋಷವು ಪರಿಹಾರವಾಗುತ್ತದೆ.

೩೫. ಈ ಮೂರರಲ್ಲಿ ಒಂದೊಂದನ್ನಾದರೂ ಯಾವನು ತಿನ್ನುವುದಿಲ್ಲವೋ ಆ ನರನು ಒಂದು ವರ್ಷದವರೆಗೂ ಉಚ್ಛಿಷ್ಠನೆಂದು ಭಾವಿಸಬೇಕು. ಇದರಲ್ಲಿ ಸಂಶಯವಿಲ್ಲವು.

೩೬–೩೭. ಬಳಿಕ ಸಾಯಂಕಾಲದಲ್ಲಿ ತುಲಸೀ ವಾಸುದೇವರನ್ನು ಕಬ್ಬಿನ ಜಲ್ಲೆಗಳಿಂದ ಮತ್ತೆ ಪೂಜಿಸಬೇಕು. ಆಗ ಕೃತ್ಯಗಳನ್ನೆಲ್ಲ ಮಾಡಿ ಮುಗಿಸಿ ದಂತಾಗುತ್ತದೆ. (ವ್ರತಿಯು ಕೃತಕೃತ್ಯನಾಗುತ್ತಾನೆ.) ಆಮೇಲೆ ವಿಸರ್ಜನೆ ಮಾಡಿ ಹರಿಗೆ ದಾಯ ಮೊದಲಾದುವನ್ನು ಕೊಟ್ಟು, "ಭಗವನ್, ವೈಕುಂಠಕ್ಕೆ ಹೋಗು. ತುಲಸಿಯೊಡಗೂಡಿದ ಎಲೈ ಪ್ರಭುವೇ! ನಾನು ಮಾಡಿದ ಈ ಪೂಜೆಯನ್ನು ಪರಿಗ್ರಹಿಸಿ ಸರ್ವದಾ ಸಂತುಷ್ಟನಾಗಿರು.

೩೮. ಎಲೈ ಸುರಶ್ರೇಷ್ಠನೇ, ಪರಮೇಶ್ವರಾ! ನಿನ್ನ ಸ್ವಂತಸ್ಥಳಕ್ಕೆ ಹೋಗು.

ಏವಂ ವಿಸೃಜ್ಯ ದೇವೇಶಂ ಆಚಾರ್ಯಾಯ ಪ್ರದಾಪಯೇತ್ ।
ಮೂರ್ತ್ಯಾದಿಕಂ ಸರ್ವ ಏವ ಕೃತಕೃತ್ಯೋ ಭವೇನ್ನರಃ ॥ ೩೯ ॥
ಪ್ರತಿವರ್ಷಂ ತು ಯಃ ಕುರ್ಯಾತ್ತುಲಸೀಕರಪೀಡನಂ ।
ಭಕ್ತಿಮಾನ್ ಧನಧಾನ್ಯೈಸ್ಸ ಯುಕ್ತೋ ಭವತಿ ನಿಶ್ಚಿತಂ ।
ಇಹಲೋಕೇ ಪರತ್ರಾಪಿ ವಿಪುಲಂ ಚ ಯಶೋ ಲಭೇತ್ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಕೂಷ್ಮಾಂಡ ನವಮೀ ತುಲಸೀವಿವಾಹವಿಧಿವರ್ಣನಂ" ನಾಮೈಕತ್ರಿಂಶೋಽಧ್ಯಾಯಃ

---

ಎಲೈ ಜನಾರ್ದನನೇ! ಬ್ರಹ್ಮಾದಿಗಳು ಎಲ್ಲಿರುವರೋ ಅಲ್ಲಿಗೆ ಹೋಗು" ಎಂದು ಪ್ರಾರ್ಥಿಸಬೇಕು.

೩೯. ಈ ರೀತಿ ದೇವೇಶನನ್ನು ವಿಸರ್ಜನೆಮಾಡಿ ಆಚಾರ್ಯನಿಗೆ ಮೂರ್ತಿ ಮೊದಲಾದುವೆಲ್ಲವನ್ನು ಕೊಟ್ಟುಬಿಡಬೇಕು. ಹೀಗೆ ಮಾಡಿದ ನರನು ಕೃತಕೃತ್ಯ ನಾಗುತ್ತಾನೆ.

೪೦. ಪ್ರತಿವರ್ಷವೂ ಯಾವನು ಭಕ್ತಿವಂತನಾಗಿ ತುಲಸೀ ವಿವಾಹವನ್ನು ಮಾಡುತ್ತಾನೆಯೋ ಅವನು ಧನಧಾನ್ಯಗಳಿಂದ ಯುಕ್ತನಾಗಿರುತ್ತಾನೆ. ಇದು ನಿಶ್ಚಯವು. ಅವನು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಬಹಳವಾಗಿ ಯಶಸ್ಸನ್ನು ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಕೂಷ್ಮಾಂಡನವಮೀ — ತುಲಸೀವಿವಾಹವಿಧಿವರ್ಣನ"ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾತ್ರಿಂಶೋಽಧ್ಯಾಯಃ

### ಭೀಷ್ಮಪಂಚಕವ್ರತಮಾಹಾತ್ಮ್ಯವರ್ಣನಂ

ವಾಲಖಿಲ್ಯಾ ಊಚುಃ :–

**ಕಾರ್ತಿಕಸ್ಯಾಮಲೇ ಪಕ್ಷೇ ಸ್ನಾತ್ವಾ ಸಮ್ಯಗ್ಯತವ್ರತಃ ।**
**ಏಕಾದಶ್ಯಾಂ ತು ಗೃಹ್ಣೀಯಾದ್ವ್ರತಂ ಪಂಚದಿನಾತ್ಮಕಂ ॥ ೧ ॥**
**ಶರಪಂಜರಸುಪ್ತೇನ ಭೀಷ್ಮೇಣ ತು ಮಹಾತ್ಮನಾ ।**
**ರಾಜಧರ್ಮಾ ಮೋಕ್ಷಧರ್ಮಾ ದಾನಧರ್ಮಾಸ್ತತಃ ಪರಂ ।**
**ಕಥಿತಾಃ ಪಾಂಡುದಾಯಾದ್ಯೈಃ ಕೃಷ್ಣೇನಾಪಿ ಶ್ರುತಾಸ್ತದಾ ॥ ೨ ॥**
**ತತಃ ಪ್ರೀತೇನ ಮನಸಾ ವಾಸುದೇವೇನ ಭಾಷಿತಂ ।**
**ಧನ್ಯ ಧನ್ಯೋಽಸಿ ಭೀಷ್ಮ ತ್ವಂ ಧರ್ಮಾಸ್ಸಂಶ್ರಾವಿತಾಃ ಸ್ತ್ವಯಾ ॥ ೩ ॥**
**ಏಕಾದಶ್ಯಾಂ ಕಾರ್ತಿಕಸ್ಯ ಯಾಚಿತಂ ಚ ಜಲಂ ತ್ವಯಾ ।**
**ಅರ್ಜುನೇನ ಸಮಾನೀತಂ ಗಾಂಗಂ ಬಾಣಸ್ಯ ವೇಗತಃ ॥ ೪ ॥**
**ತುಷ್ಟಾನಿ ತವ ಗಾತ್ರಾಣಿ ತಸ್ಮಾದದ್ಯ ದಿನಾವಧಿ ।**
**ಪೂರ್ಣಾಂತಂ ಸರ್ವಲೋಕಾಸ್ತ್ವಾಂ ತರ್ಪಯಂತ್ವರ್ಘ್ಯದಾನತಃ ॥ ೫ ॥**

---

## ಕನ್ನಡದ ಅನುವಾದ

### ಭೀಷ್ಮಪಂಚಕವ್ರತಮಾಹಾತ್ಮ್ಯವರ್ಣನವು

೧. ವಾಲಖಿಲ್ಯರು ಹೇಳುತ್ತಾರೆ:— ಕಾರ್ತಿಕದ ಶುಕ್ಲಪಕ್ಷದಲ್ಲಿ ಸ್ನಾನ ಮಾಡಿ ವಿಧ್ಯುಕ್ತವಾಗಿ ಏಕಾದಶಿಯಲ್ಲಿ ಪಂಚದಿನಾತ್ಮಕವಾದ (ಐದು ದಿನಗಳ ವರೆಗೆ ನಡಸಬೇಕಾದ) ವ್ರತವನ್ನು ಹಿಡಿಯಬೇಕು.

೨. ಶರಪಂಜರದಲ್ಲಿ ಮಲಗಿದ ಮಹಾತ್ಮನಾದ ಭೀಷ್ಮನು ರಾಜಧರ್ಮಗಳನ್ನೂ, ಮೋಕ್ಷಧರ್ಮಗಳನ್ನೂ, ಆ ಬಳಿಕ ದಾನಧರ್ಮಗಳ ವಿಚಾರವನ್ನೂ ಪಾಂಡುಪುತ್ರರಿಗೆ ಹೇಳಿದನು. ಆಗ ಶ್ರೀಕೃಷ್ಣನೂ ಅವನ್ನು ಕುರಿತು ಹೇಳಿದನು.

೩. ಬಳಿಕ ಪ್ರೀತಿಯುಳ್ಳ ಮನಸ್ಸಿನಿಂದ ವಾಸುದೇವನು ಈ ರೀತಿ ಹೇಳಿದನು :—"ಭೀಷ್ಮಾ! ನೀನೇ ಧನ್ಯ, ಧನ್ಯ, ಧರ್ಮಗಳನ್ನೆಲ್ಲ ನೀನು ಕೇಳಿಸಿರುವೆ.

೪. ಕಾರ್ತಿಕಮಾಸದ ಏಕಾದಶಿಯ ದಿನ ನೀನು ಜಲವನ್ನು ಯಾಚಿಸಿದೆ. ಅರ್ಜುನನು ಬಾಣದ ವೇಗದಿಂದ ಗಂಗೆಯ ಜಲವನ್ನು ತಂದುಕೊಟ್ಟನು.

೫. ಆ ಜಲದಿಂದ ನಿನ್ನ ಅಂಗಗಳು ಸಂತುಷ್ಟಿಹೊಂದಿದವು. ಆದ್ದರಿಂದ ಈ ದಿನ ಮೊದಲುಗೊಂಡು ಪೂರ್ಣಿಮೆಯು ಮುಗಿಯುವವರೆಗೂ ಸರ್ವಲೋಕಗಳೂ ನಿನ್ನನ್ನು ಅರ್ಘ್ಯದಾನದಿಂದ ತೃಪ್ತಿಪಡಿಸಲಿ.

ತಸ್ಮಾತ್ಸರ್ವಪ್ರಯತ್ನೇನ ಮಮ ಸಂತುಷ್ಟಿಕಾರಕಂ ।
ಏತದ್ವ್ರತಂ ಪ್ರಕುರ್ವಂತು ಭೀಷ್ಮಪಂಚಕಸಂಜ್ಞಿತಂ ॥ ೬ ॥
ಕಾರ್ತಿಕಸ್ಯ ವ್ರತಂ ಕೃತ್ವಾ ನ ಕುರ್ಯಾದ್ಭೀಷ್ಮಪಂಚಕಂ ।
ಸಮಗ್ರಂ ಕಾರ್ತಿಕವ್ರತಂ ವೃಥಾ ತಸ್ಯ ಭವಿಷ್ಯತಿ ॥ ೭ ॥
ಅಶಕ್ತಶ್ಚೇನ್ನರೋ ಭೂಯಾದಸಮರ್ಥಶ್ಚ ಕಾರ್ತಿಕೇ ।
ಭೀಷ್ಮಸ್ಯ ಪಂಚಕಂ ಕೃತ್ವಾ ಕಾರ್ತಿಕಸ್ಯ ಫಲಂ ಲಭೇತ್ ॥ ೮ ॥
ಸತ್ಯವ್ರತಾಯ ಶುಚಯೇ ಗಾಂಗೇಯಾಯ ಮಹಾತ್ಮನೇ ।
ಭೀಷ್ಮಾಯೈತದ್ದದಾಮ್ಯರ್ಘ್ಯಮಾಜನ್ಮಬ್ರಹ್ಮಚಾರಿಣೇ ॥ ೯ ॥
ಸರ್ವೇನಾನೇನ ಮಂತ್ರೇಣ ಅರ್ಪಣಂ ಸಾರ್ವವರ್ಣಿಕಂ ॥ ೧೦ ॥
ವ್ರತಾಂಗತ್ವಾತ್ಪೂರ್ಣಿಮಾಯಾಂ ಪ್ರದೇಯಃ ಪಾಪಪೂರುಷಃ ।
ಅಪುತ್ರೇಣ ಪ್ರಕರ್ತವ್ಯಂ ಸರ್ವಥಾ ಭೀಷ್ಮಪಂಚಕಂ ॥ ೧೧ ॥
ಯಃ ಪುತ್ರಾರ್ಥಂ ವ್ರತಂ ಕುರ್ಯಾತ್ಸಸ್ತ್ರೀಕೋ ಭೀಷ್ಮಪಂಚಕಂ ।
ಪ್ರದತ್ವಾ ಪಾಪಪುರುಷಂ ವರ್ಷಮಧ್ಯೇ ಸುತಂ ಲಭೇತ್ ॥ ೧೨ ॥

---

೬. ಆದುದರಿಂದ ಮಾನವರೆಲ್ಲರೂ ನನಗೆ ಸಂತುಷ್ಟಿಯನ್ನುಂಟುಮಾಡುವ ಈ ಭೀಷ್ಮಪಂಚಕವೆಂಬ ಹೆಸರುಳ್ಳ ಈ ವ್ರತವನ್ನು ಸರ್ವಪ್ರಯತ್ನದಿಂದಲೂ ಮಾಡಲಿ.

೭. ಕಾರ್ತಿಕದ ವ್ರತವನ್ನು ಮಾಡಿ ಭೀಷ್ಮಪಂಚಕವನ್ನು ಮಾಡದಿದ್ದರೆ, ಅವನಿಗೆ ಸಮಗ್ರ ಕಾರ್ತಿಕವ್ರತವೂ ವ್ಯರ್ಥವಾಗುತ್ತದೆ.

೮. ಕಾರ್ತಿಕವ್ರತ ಮಾಡಲು ಅಶಕ್ತನೂ ಅಸಮರ್ಥನೂ ಆಗಿರುವ ಪಕ್ಷದಲ್ಲಿ ಆ ನರನು ಭೀಷ್ಮಪಂಚಕವನ್ನು ಮಾಡಿ ಕಾರ್ತಿಕದ ಫಲವನ್ನು ಪಡೆಯುತ್ತಾನೆ.

೯–೧೦. 'ಸತ್ಯವ್ರತನೂ, ಶುಚಿಯೂ, ಗಂಗೇಯನೂ, ಮಹಾತ್ಮನೂ, ಆಜನ್ಮ ಬ್ರಹ್ಮಚಾರಿಯೂ ಆದ ಭೀಷ್ಮನಿಗೆ ಈ ಅರ್ಘ್ಯವನ್ನು ಕೊಡುತ್ತೇನೆ' ಎಂಬ ಈ ಮಂತ್ರದಿಂದ ಸರ್ವ ವರ್ಣದವರೂ ತರ್ಪಣ ಕೊಡತಕ್ಕುದು.

೧೧. ವ್ರತದ ಅಂಗವಾಗಿ ಪೂರ್ಣಿಮೆಯ ದಿನ ಪಾಪಪುರಷನ ಪ್ರತಿಮೆಯನ್ನು ದಾನ ಕೊಡಬೇಕು. ಅಪುತ್ರನಾದವನು ಭೀಷ್ಮಪಂಚಕವನ್ನು ಸರ್ವಪ್ರಯತ್ನದಿಂದಲೂ ಮಾಡಿಯೇ ತೀರಬೇಕು.

೧೨. ಯಾವನು ಪತ್ನೀಸಮೇತನಾಗಿ ಪುತ್ರಾರ್ಥವಾಗಿ ಭೀಷ್ಮಪಂಚಕವ್ರತವನ್ನು ಮಾಡುವನೋ ಅವನು ಪಾಪ ಪುರುಷನನ್ನು ದಾನಮಾಡಿ ವರ್ಷಮಧ್ಯದಲ್ಲಿಯೆ ಸುತನನ್ನು ಪಡೆಯುತ್ತಾನೆ.

ಅವಶ್ಯಮೇವ ಕರ್ತವ್ಯಂ ತಸ್ಮಾದ್ಭೀಷ್ಮಸ್ಯ ಪಂಚಕಂ ।
ವಿಷ್ಣುಪ್ರೀತಿಕರಂ ಪ್ರೋಕ್ತಂ ಮಯಾ ಭೀಷ್ಮಸ್ಯ ಪಂಚಕಂ ॥ ೧೩ ॥
ಶೃಣ್ವಂತು ಋಷಯಸ್ಸರ್ವೇ ವಿಶೇಷೋ ಭೀಷ್ಮಪಂಚಕೇ ।
ಕಾರ್ತಿಕೇಯಾಯ ರುದ್ರೇಣ ಪುರಾ ಪ್ರೋಕ್ತಸ್ಸವಿಸ್ತರಾತ್ ॥ ೧೪ ॥

ಈಶ್ವರ ಉವಾಚ :—

ಪ್ರವಕ್ಷ್ಯಾಮಿ ಮಹಾಪುಣ್ಯಂ ವ್ರತಂ ವ್ರತವತಾಂ ವರ ।
ಭೀಷ್ಮೇಣೈತದ್ಯತಃ ಪ್ರಾಪ್ತಂ ವ್ರತಂ ಪಂಚದಿನಾತ್ಮಕಂ ॥ ೧೫ ॥
ಸಕಾಶಾದ್ವಾಸುದೇವಸ್ಯ ತೇನೋಕ್ತಂ ಭೀಷ್ಮಪಂಚಕಂ ।
ವ್ರತಸ್ಯಾಸ್ಯ ಗುಣಾನ್ವಕ್ತುಂ ಕಶ್ಶಕ್ತಃ ಕೇಶವಾದೃತೇ ॥ ೧೬ ॥
ಕಾರ್ತಿಕೇ ಶುಕ್ಲಪಕ್ಷೇತು ಶೃಣು ಧರ್ಮಂ ಪುರಾತನಂ ।
ವಸಿಷ್ಠಭೃಗುಗರ್ಗಾದ್ಯೈಶ್ಚೀರ್ಣಂ ಕೃತಯುಗಾದಿಷು ॥ ೧೭ ॥
ಅಂಬರೀಷೇಣ ಭೋಗಾದ್ಯೈಶ್ಚೀರ್ಣಂ ತ್ರೇತಾಯುಗಾದಿಷು ।
ಬ್ರಾಹ್ಮಣೈರ್ಬ್ರಹ್ಮಚರ್ಯೇಣ ಜಪಹೋಮಕ್ರಿಯಾದಿಭಿಃ ॥ ೧೮ ॥

---

೧೩. ಆದ್ದರಿಂದ ಭೀಷ್ಮಪಂಚಕವನ್ನು ಅವಶ್ಯವಾಗಿ ಮಾಡಬೇಕು. ಭೀಷ್ಮಪಂಚಕವು ವಿಷ್ಣುಪ್ರೀತಿಕರವೆಂದು ನನ್ನಿಂದ ಹೇಳಲ್ಪಟ್ಟಿದೆ."

೧೪. ಸೂತಪುರಾಣಿಕನು ಹೀಗೆ ಮುಂದುವರಿಸಿದನು :—ಎಲೈ ಋಷಿಗಳೆ! ಭೀಷ್ಮಪಂಚಕದಲ್ಲಿನ ವಿಶೇಷವನ್ನು ನೀವೆಲ್ಲರೂ ಲಾಲಿಸಿರಿ. ಪೂರ್ವದಲ್ಲಿ ರುದ್ರನು ಕಾರ್ತಿಕೇಯನಿಗೆ ಇದನ್ನು ವಿಸ್ತಾರವಾಗಿ ವಿವರಿಸಿದನು.

೧೫–೧೬. ಈಶ್ವರನಿಂತೆಂದನು :—"ವ್ರತಧಾರಿಗಳಲ್ಲೆಲ್ಲ ಶ್ರೇಷ್ಠನಾದವನೇ! ಮಹಾಪುಣ್ಯಕರವಾದ ವ್ರತವನ್ನು ನಿನಗೆ ತಿಳಿಸುತ್ತೇನೆ. ಪಂಚದಿನಾತ್ಮಕವಾದ ವ್ರತವು ಭೀಷ್ಮನಿಗೆ ವಾಸುದೇವನಿಂದ ಲಭಿಸಿತು. ಆದುದರಿಂದ ಇದು ಭೀಷ್ಮಪಂಚಕವೆಂದು ಕರೆಯಲ್ಪಟ್ಟಿತು. ಈ ವ್ರತದ ಗುಣಗಳನ್ನು ಹೇಳಲು ಕೇಶವನನ್ನುಳಿದು ಯಾವನುತಾನೆ ಶಕ್ತನಾಗುವನು?

೧೭. ಕಾರ್ತಿಕ ಶುಕ್ಲಪಕ್ಷದಲ್ಲಿ ನಡೆಸುವ ಪುರಾತನ ಧರ್ಮವನ್ನು ಕೇಳುವವನಾಗು. ವಸಿಷ್ಠ, ಭೃಗು, ಗರ್ಗ, ಮೊದಲಾದವರಿಂದ ಇದು ಕೃತಯುಗಾದಿಗಳಲ್ಲಿ ನಡೆಸಲ್ಪಟ್ಟಿತು.

೧೮. ತ್ರೇತಾಯುಗಾದಿಗಳಲ್ಲಿ ಅಂಬರೀಷನಿಂದ ಇದು ಭೋಗಾದಿಗಳಿಂದ ನಡೆಸಲ್ಪಟ್ಟಿತು. ಬ್ರಾಹ್ಮಣರು ಬ್ರಹ್ಮಚರ್ಯದಿಂದಲೂ, ಜಪ, ಹೋಮ, ಕ್ರಿಯೆ ಮೊದಲಾದುವುಗಳಿಂದಲೂ ಈ ವ್ರತವನ್ನು ನಡೆಸತಕ್ಕುದು.

ಕ್ಷತ್ರಿಯೈಶ್ಚ ತಥಾ ವೈಶ್ಯೈಸ್ಸತ್ಯಶೌಚಪರಾಯಣೈಃ ।
ದುಷ ರಂ ಸತ್ಯಹೀನಾನಾಮಶಕ್ಯಂ ಬಾಲಚೇತಸಾಂ ॥ ೧೯ ॥
ದುಷ್ಕರಂ ಭೀಷ್ಮಮಿತ್ಯಾಹುರ್ನ ಶಕ್ಯಂ ಪ್ರಾಕೃತೈರ್ನರೈಃ ।
ಯಸ್ಮಾತ್ಕರೋತಿ ವಿಪ್ರೇಂದ್ರ ತೇನ ಸರ್ವಂ ಕೃತಂ ಭವೇತ್ ॥ ೨೦ ॥
ವ್ರತಂ ಚೈತನ್ಮಹಾಪುಣ್ಯಂ ಮಹಾಪಾತಕನಾಶನಂ ।
ಅತೋ ನರೈಃ ಪ್ರಯತ್ನೇನ ಕರ್ತವ್ಯಂ ಭೀಷ್ಮಪಂಚಕಂ ॥ ೨೧ ॥
ಕಾರ್ತಿಕಸ್ಯಾಮಲೇ ಪಕ್ಷೇ ಸ್ನಾತ್ವಾ ಸಮ್ಯಗ್ವಿಧಾನತಃ ।
ಏಕಾದಶ್ಯಾಂ ತು ಗೃಹ್ಣೀಯಾದ್ವ್ರತಂ ಪಂಚದಿನಾತ್ಮಕಂ ॥ ೨೨ ॥
ಪ್ರಾತಃ ಸ್ನಾತ್ವಾ ವಿಶೇಷೇಣ ಮಧ್ಯಾಹ್ನೇ ಚ ತಥಾ ವ್ರತೀ ।
ನದ್ಯಾಂ ನಿರ್ಝರತೋಯೇ ವಾ ಸಮಾಲಭ್ಯ ಚ ಗೋಮಯಂ ॥ ೨೩ ॥
ಯವವ್ರೀಹಿತಿಲೈಸ್ಸಮ್ಯಕ್ಪಿತೄನ್ಸಂತರ್ಪಯೇತ್ಕ್ರಮಾತ್ ।
ಸ್ನಾತ್ವಾ ಮೌನಂ ನರಃ ಕೃತ್ವಾ ಧೌತವಾಸಾ ದೃಢವ್ರತಃ ॥ ೨೪ ॥
ಭೀಷ್ಮಾಯೋದಕದಾನಂ ಚ ಅರ್ಘ್ಯಂ ಚೈವ ಪ್ರಯತ್ನತಃ ।
ಪೂಜಾ ಭೀಷ್ಮಸ್ಯ ಕರ್ತವ್ಯಾ ದಾನಂ ದದ್ಯಾತ್ಪ್ರಯತ್ನತಃ ॥ ೨೫ ॥

---

೧೯–೨೦. ಕ್ಷತ್ರಿಯರೂ, ವೈಶ್ಯರೂ ಸತ್ಯಶೌಚಗಳಲ್ಲಿ ತತ್ಪರರಾಗಿ ಇದನ್ನು ಆಚರಿಸತಕ್ಕದ್ದು. ಸತ್ಯಹೀನರಾದವರಿಗೆ ಇದು ಬಹು ಕಷ್ಟಸಾಧ್ಯ. ಬಾಲಬುದ್ಧಿಯುಳ್ಳವರಿಗೆ ಇದು ಅಶಕ್ಯವು. ದುಷ್ಕರವಾದ್ದರಿಂದ ಇದನ್ನು ಭೀಷ್ಮವ್ರತವೆಂದು ಹೇಳುತ್ತಾರೆ. ಪ್ರಾಕೃತರಾದ ನರರಿಗೆ ಇದು ಶಕ್ಯವಲ್ಲ. ವಿಪ್ರೇಂದ್ರಾ! ಇದನು ಮಾಡುವುದರಿಂದ ಅವನು ಎಲ್ಲವನ್ನೂ ಮಾಡಿದಂತಾಗುತ್ತದೆ.

೨೧. ಈ ವ್ರತವು ಮಹಾ ಪುಣ್ಯಕರವಾದುದು, ಮಹಾಪಾತಕಗಳನ್ನು ನಾಶಮಾಡುವಂತಹುದು. ಆದ್ದರಿಂದ ಈ ಭೀಷ್ಮಪಂಚಕವನ್ನು ನರರು ಪ್ರಯತ್ನಪಟ್ಟು ನಡೆಸಬೇಕು.

೨೨. ಕಾರ್ತಿಕಶುಕ್ಲಪಕ್ಷದ ಏಕಾದಶಿಯಲ್ಲಿ ವಿಧಿಪೂರ್ವಕವಾಗಿ ಚೆನ್ನಾಗಿ ಸ್ನಾನಮಾಡಿ ಪಂಚದಿನಾತ್ಮಕವಾದ ಈ ವ್ರತವನ್ನು ಹಿಡಿಯಬೇಕು.

೨೩. ವ್ರತ ಧರಿಸಿದವನು ಪ್ರಾತಃಕಾಲದಲ್ಲಿ ವಿಶೇಷವಾಗಿ ನದಿಯಲ್ಲಿ ಅಥವಾ ಝರಿಯ ನೀರಿನಲ್ಲಿ ಸ್ನಾನಮಾಡಿ, ಮಧ್ಯಾಹ್ನದಲ್ಲಿಯೂ ಹಾಗೆಯೇ ಸ್ನಾನಮಾಡಿ ಗೋಮಯವನ್ನು ಸಂಪಾದಿಸಬೇಕು.

೨೪. ಸ್ನಾನಮಾಡಿ ಮೌನವನ್ನು ಧರಿಸಿ ಮಡಿಬಟ್ಟೆಯುಟ್ಟು ದೃಢವ್ರತಿಯಾಗಿ ಯವ (ಜವೆಗೋಧಿ), ಬತ್ತ, ಎಳ್ಳು, ಇವುಗಳಿಂದ ಕ್ರಮವಾಗಿ ಪಿತೃಗಳಿಗೆ ತರ್ಪಣಗಳನ್ನು ಕೊಡಬೇಕು.

೨೫. ಭೀಷ್ಮನಿಗೆ ಉದಕದಾನ (ತರ್ಪಣ)ವನ್ನೂ ಅರ್ಘ್ಯವನ್ನೂ ಪ್ರಯತ್ನ

ಪಂಚರತ್ನಂ ವಿಶೇಷೇಣ ದತ್ವಾ ವಿಪ್ರಾಯ ಯತ್ನತಃ ।
ವಾಸುದೇವೋऽಪಿ ಸಂಪೂಜ್ಯೋ ಲಕ್ಷ್ಮೀಯುಕ್ತಸ್ಸದಾ ಪ್ರಭುಃ ॥ ೨೬ ॥
ಪಂಚಕೇ ಪೂಜಯಿತ್ವಾ ತು ಕೋಟಿಜನ್ಮನಿ ತುಷ್ಯತಿ ॥ ೨೭ ॥
ಯತ್ಕಿಂಚಿದ್ದದತೇ ಮರ್ತ್ಯಃ ಪಂಚಧಾತುಪ್ರಕಲ್ಪಿತಂ ।
ಸಂವತ್ಸರವ್ರತಾನಾಂ ಸ ಲಭತೇ ಸಕಲಂ ಫಲಂ ॥ ೨೮ ॥
ಕೃತ್ವಾ ತೂದಕದಾನಂ ತು ತಥಾರ್ಘ್ಯಸ್ಯ ಚ ದಾಪನಂ ।
ಮಂತ್ರೇಣಾನೇನ ಯಃ ಕುರ್ಯಾನ್ಮುಕ್ತಿಭಾಗೀ ಭವೇನ್ನರಃ ॥ ೨೯ ॥
ವೈಯಾಘ್ರಪಾದಗೋತ್ರಾಯ ಸಾಂಕೃತ್ಯಪ್ರವರಾಯ ಚ ।
ಅನಪತ್ಯಾಯ ಭೀಷ್ಮಾಯ ಉದಕಂ ಭೀಷ್ಮಕರ್ಮಣೇ ॥ ೩೦ ॥
ವಸೂನಾಮವತಾರಾಯ ಶಂತನೋರಾತ್ಮಜಾಯ ಚ ।
ಅರ್ಘ್ಯಂ ದದಾಮಿ ಭೀಷ್ಮಾಯ ಆಜನ್ಮಬ್ರಹ್ಮಚಾರಿಣೇ ॥ ೩೧ ॥
ಅನೇನ ವಿಧಿನಾ ಯಸ್ತು ಪಂಚಕಂ ತು ಸಮಾಪಯೇತ್ ।
ಅಶ್ವಮೇಧಸಮಂ ಪುಣ್ಯಂ ಪ್ರಾಪ್ನೋತ್ಯತ್ರ ನ ಸಂಶಯಃ ॥ ೩೨ ॥

---

ಪೂರ್ವಕವಾಗಿ ಕೊಡಬೇಕು. ಭೀಷ್ಮನಿಗೆ ಪೂಜೆಯನ್ನರ್ಪಿಸಬೇಕು. ಪ್ರಯತ್ನ ಪೂರ್ವಕವಾಗಿ ದಾನ ಮಾಡಬೇಕು.

೨೬. ವಿಶೇಷವಾಗಿ ಬ್ರಾಹ್ಮಣನಿಗೆ ಪ್ರಯತ್ನಪೂರ್ವಕವಾಗಿ ಪಂಚರತ್ನಗಳನ್ನು ಕೊಟ್ಟು, ಲಕ್ಷ್ಮೀಸಮೇತನೂ, ಪ್ರಭುವೂ ಆದ ವಾಸುದೇವನನ್ನು ಕೂಡ ಚೆನ್ನಾಗಿ ಪೂಜಿಸಬೇಕು.

೨೭. ಈ ಭೀಷ್ಮಪಂಚಕದಲ್ಲಿ ವ್ರತತೊಟ್ಟು ಪೂಜೆ ಮಾಡಿದರೆ ಮಾನವನು ಕೋಟಿ ಜನ್ಮಗಳಲ್ಲಿ ಸಂತುಷ್ಟನಾಗಿರುತ್ತಾನೆ.

೨೮. ಮರ್ತ್ಯನು ಪಂಚಧಾತುಗಳಿಂದ ನಿರ್ಮಿಸಿದ ಯಾವುದೊಂದನ್ನಾದರೂ ದಾನಮಾಡಿದನಾದರೆ, ಅವನು ಸಂವತ್ಸರವ್ರತಗಳ ಸಕಲ ಫಲಗಳನ್ನೂ ಪಡೆಯುತ್ತಾನೆ.

೨೯. ಈ ಮಂತ್ರದಿಂದ ಯಾವ ನರನು ಉದಕದಾನವನ್ನೂ, ಅರ್ಘ್ಯದಾನವನ್ನೂ ಮಾಡುತ್ತಾನೋ ಅವನು ಮುಕ್ತಿಭಾಗಿಯಾಗುತ್ತಾನೆ.

೩೦–೩೧. 'ವ್ಯಾಘ್ರಪಾದ ಗೋತ್ರದಲ್ಲಿ ಹುಟ್ಟಿದವನೂ, ಸಾಂಕೃತ್ಯಪ್ರವರವುಳ್ಳವನೂ, ಅನಪತ್ಯನೂ (ಮಕ್ಕಳಿಲ್ಲದವನೂ), ಭೀಷ್ಮನೂ (ಭಯಂಕರನೂ), ಭೀಷ್ಮನೆಂಬ ಹೆಸರುಳ್ಳವನೂ ಆದ ಮಹಾತ್ಮನಿಗೆ ಉದಕವನ್ನು ಕೊಡುತ್ತೇನೆ. ವಸುಗಳ ಅವತಾರನಾದವನೂ, ಶಂತನುವಿನ ಆತ್ಮಜನೂ, ಭೀಷ್ಮನೂ, ಆಜನ್ಮ ಬ್ರಹ್ಮಚಾರಿಯೂ ಆದ ಪುಣ್ಯಾತ್ಮನಿಗೆ ಅರ್ಘ್ಯವನ್ನು ಕೊಡುತ್ತೇನೆ.' ಇದು ಅರ್ಘ್ಯದ ಮಂತ್ರ.

ಪಂಚಾಹಮಪಿ ಕರ್ತವ್ಯಂ ನಿಯಮಂ ಚ ಪ್ರಯತ್ನತಃ ।
ನಿಯಮೇನ ವಿನಾ ಯತ್ರ ನ ಭಾವ್ಯಂ ವರವರ್ಣಿನಾ ॥ ೩೩ ॥
ಉತ್ತರಾಯಣಹೀನಾಯ ಭೀಷ್ಮಾಯ ಪ್ರದದೌ ಹರಿಃ ।
ಉತ್ತರಾಯಣಹೀನೇಽಪಿ ಶುದ್ಧಲಗ್ನಂ ಸುತೋಷಿತಃ ॥ ೩೪ ॥
ತತಸ್ಸಂಪೂಜಯೇದ್ದೇವಂ ಸರ್ವಪಾಪಹರಂ ಹರಿಂ ।
ಅನಂತರಂ ಪ್ರಯತ್ನೇನ ಕರ್ತವ್ಯಂ ಭೀಷ್ಮಪಂಚಕಂ ॥ ೩೫ ॥
ಸ್ನಾಪಯೇತ ಜಲೈರ್ಭಕ್ತ್ಯಾ ಮಧುಕ್ಷೀರಘೃತೇನ ಚ ।
ತಥೈವ ಪಂಚಗವ್ಯೇನ ಗಂಧಚಂದನವಾರಿಣಾ ॥ ೩೬ ॥
ಚಂದನೇನ ಸುಗಂಧೇನ ಕುಂಕುಮೇನಾಥ ಕೇಶವಂ ।
ಕರ್ಪೂರೋಶೀರಮಿಶ್ರೇಣ ಲೇಪಯೇದ್ಗರುಡಧ್ವಜಂ ॥ ೩೭ ॥
ಅರ್ಚಯೇದ್ರುಚಿರೈಃ ಪುಷ್ಪೈರ್ಗಂಧಧೂಪಸಮನ್ವಿತೈಃ ।
ಗುಗ್ಗುಲಂ ಘೃತಸಂಯುಕ್ತಂ ದದೇತ್ಕೃಷ್ಣಾಯ ಭಕ್ತಿಮಾನ್ ॥ ೩೮ ॥

---

೩೨. ಈ ವಿಧಿಯಿಂದ ಯಾವನು ಭೀಷ್ಮಪಂಚಕವನ್ನು ಸಮಾಪ್ತಿ ಮಾಡುತ್ತಾನೆಯೋ ಅವನು ಅಶ್ವಮೇಧಕ್ಕೆ ಸಮಾನವಾದ ಪುಣ್ಯವನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲವು.

೩೩. ಐದು ದಿನವೂ ಪ್ರಯತ್ನಪೂರ್ವಕವಾಗಿ ಈ ನಿಯಮವನ್ನು ನಡೆಸಬೇಕು. ನಿಯಮವಿಲ್ಲದುದನ್ನು ಉತ್ತಮನಾದವನು ಮನಸ್ಸಿನಲ್ಲಿಯೂ ಭಾವಿಸಬಾರದು.

೩೪. ಉತ್ತಾರಾಯಣಹೀನನಾದ ಭೀಷ್ಮನಲ್ಲಿ ಹರಿಯು ತುಂಬ ಸಂತುಷ್ಟನಾಗಿ ಉತ್ತರಾಯಣವಿಲ್ಲದಿದ್ದರೂ ಶುದ್ಧವಾದ ಲಗ್ನವನ್ನು ಕೊಟ್ಟನು.

೩೫. ಆದುದರಿಂದ ಸರ್ವಪಾಪಪರಿಹಾರಕನಾದ ಶ್ರೀಹರಿಯನ್ನು ಪೂಜಿಸಬೇಕು. ಅನಂತರ ಪ್ರಯತ್ನಪೂರ್ವಕವಾಗಿ ಭೀಷ್ಮಪಂಚಕವನ್ನು ನಡೆಸಬೇಕು.

೩೬. ಭಕ್ತಿಯಿಂದ ಹರಿಯನ್ನು ಜಲಗಳಿಂದಲೂ, ಜೇನು, ಹಾಲು, ತುಪ್ಪಗಳಿಂದಲೂ ಅದೇ ರೀತಿ ಪಂಚಗವ್ಯದಿಂದಲೂ ಗಂಧಚಂದನಮಿಶ್ರವಾದ ನೀರಿನಿಂದಲೂ ಸ್ನಾನ ಮಾಡಿಸಬೇಕು.

೩೭. ಚಂದನದಿಂದಲೂ, ಸುಗಂಧದಿಂದಲೂ, ಕುಂಕುಮದಿಂದಲೂ ಕೇಶವನನ್ನು ಲೇಪಿಸಬೇಕು. ಕರ್ಪೂರ, ಉಶೀರಮಿಶ್ರಿತ ಗಂಧವನ್ನು ಗರುಡಧ್ವಜನಿಗೆ ಬಳಿಯಬೇಕು.

೩೮. ಗಂಧ ಧೂಪ ಸಮೇತವಾಗಿ ಮನೋಹರಗಳಾದ ಪುಷ್ಪಗಳಿಂದ ಅರ್ಚಿಸಬೇಕು. ಭಕ್ತಿವಂತನಾಗಿ ತುಪ್ಪದಿಂದೊಡಗೂಡಿದ ಗುಗ್ಗುಳವನ್ನು ಕೃಷ್ಣನಿಗೆ ಅರ್ಪಿಸಬೇಕು.

ದೀಪಕಂ ತು ದಿವಾರಾತ್ರೌ ದದ್ಯಾತ್ಪಂಚದಿನಾನಿ ತು ।
ನೈವೇದ್ಯಂ ದೇವದೇವಸ್ಯ ಪರಮಾನ್ನಂ ನಿವೇದಯೇತ್ ॥ ೩೯ ॥
ಏವಮಭ್ಯರ್ಚಯೇದ್ದೇವಂ ಸಂಸ್ಮೃತ್ಯ ಚ ಪ್ರಣಮ್ಯ ಚ ।
ಓಂ ನಮೋ ವಾಸುದೇವಾಯೇತಿ ಜಪೇದಷ್ಟೋತ್ತರಂ ಶತಂ ॥ ೪೦ ॥
ಜುಹುಯಾಚ್ಚ ಘೃತಾಭ್ಯಕ್ತೈಸ್ತಿಲವ್ರೀಹಿಯವಾದಿಭಿಃ ।
ಷಡಕ್ಷರೇಣ ಮಂತ್ರೇಣ ಸ್ವಾಹಾಕಾರಾನ್ವಿತೇನ ಚ ॥ ೪೧ ॥
ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಪ್ರಣಮ್ಯ ಗರುಡಧ್ವಜಂ ।
ಜಪಿತ್ವಾ ಪೂರ್ವವನ್ಮಂತ್ರಂ ಕ್ಷಿತಿಶಾಯೀ ಭವೇತ್ಸದಾ ॥ ೪೨ ॥
ಸರ್ವಮೇತದ್ವಿಧಾನಂ ತು ಕಾರ್ಯಂ ಪಂಚದಿನಾನಿ ತು ।
ವಿಶೇಷೋಽತ್ರ ವ್ರತೇ ಹ್ಯಸ್ಮಿನ್ಯದನ್ಯೂನಂ ಶೃಣುಷ್ವ ತತ್ ॥ ೪೩ ॥
ಪ್ರಥಮೇಽಹ್ನಿ ಹರೇಃ ಪಾದೌ ಪೂಜಯೇತ್ಕಮಲೈರ್ವ್ರತೀ ।
ದ್ವಿತೀಯೇ ಬಿಲ್ವಪತ್ರೇಣ ಜಾನುದೇಶಂ ಸಮರ್ಚಯೇತ್ ॥ ೪೪ ॥
ತತೋಽನು ಪೂಜಯೇಚ್ಛೀರ್ಷಂ ಮಾಲತ್ಯಾ ಚಕ್ರಪಾಣಿನಃ ।
ಕಾರ್ತಿಕ್ಯಾಂ ದೇವದೇವಸ್ಯ ಭಕ್ತ್ಯಾ ತದ್ಗತಮಾನಸಃ ॥ ೪೫ ॥

---

೩೯. ಐದು ದಿನವೂ ಹಗಲೂ ರಾತ್ರಿ ದೀಪವನ್ನಿಟ್ಟಿರಬೇಕು. ದೇವದೇವನಿಗೆ ಪರಮಾನ್ನ ನೈವೇದ್ಯವನ್ನು ನಿವೇದನ ಮಾಡಬೇಕು.

೪೦–೪೧. ಈ ರೀತಿಯಾಗಿ ದೇವನನ್ನು ಸ್ಮರಿಸಿ ಪ್ರಣಾಮಮಾಡುತ್ತಾ ಅರ್ಚಿಸಬೇಕು. 'ಓಂ ನಮೋ ವಾಸುದೇವಾಯ' ಎಂದು ನೂರೆಂಟು ಸಲ ಜಪ ಮಾಡಬೇಕು. ಷಡಕ್ಷರ ಮಂತ್ರಕ್ಕೆ ಸ್ವಾಹಾಕಾರವನ್ನು ಕೂಡಿಸಿ ಅದರಿಂದ, ತುಪ್ಪದಲ್ಲಿ ನೆನಸಿದ ಎಳ್ಳು, ಬತ್ತ, ಯವ ಮೊದಲಾದುವುಗಳನ್ನು ಹೋಮ ಮಾಡಬೇಕು. ('ಓಂ ನಮೋ ವಿಷ್ಣವೇ'—ಎಂಬುದು ಹೋಮಮಂತ್ರ).

೪೨. ಪಶ್ಚಿಮ (ಸಾಯಂ) ಸಂಧ್ಯೆಯನ್ನು ಉಪಾಸನೆಮಾಡಿ ಗರುಡಧ್ವಜನಿಗೆ ಪ್ರಣಾಮಮಾಡಿ ಮೊದಲಿನಂತೆಯೇ ಮಂತ್ರವನ್ನು ಜಪಿಸಿ ಸದಾ ನೆಲದ ಮೇಲೆಯೇ ಮಲಗಬೇಕು.

೪೩–೪೪. ಈ ಎಲ್ಲ ವಿಧಾನವನ್ನು ಐದು ದಿನಗಳವರೆಗೂ ಆಚರಿಸಬೇಕು. ಈ ವ್ರತದಲ್ಲಿ ಯಾವ ವಿಶೇಷವುಂಟೋ ಅದನ್ನು ಕುಂದಿಲ್ಲದಂತೆ ಹೇಳುವೆನು, ಕೇಳು. ವ್ರತಧಾರಿಯು ಕಮಲಗಳಿಂದ ಹರಿಯ ಪಾದಗಳನ್ನು ಪೂಜಿಸಬೇಕು. ಎರಡನೆಯ ದಿನ ಬಿಲ್ವಪತ್ರಗಳಿಂದ ಜಾನು ಪ್ರದೇಶವನ್ನು (ಮೊಣಕಾಲನ್ನು) ಅರ್ಚಿಸಬೇಕು.

೪೫. ಬಳಿಕ ಕಾರ್ತಿಕಮಾಸದಲ್ಲಿ ದೇವದೇವನಾದ ಚಕ್ರಪಾಣಿಯ ಶಿರಸ್ಸನ್ನು ಭಕ್ತಿಯಿಂದ ಅವನಲ್ಲೇ ಮನಸ್ಸು ನೆಟ್ಟು ಮಾಲತೀ ಪುಷ್ಪಗಳಿಂದ ಪೂಜಿಸಬೇಕು.

ಅರ್ಚಿತ್ವಾ ತಂ ಹೃಷೀಕೇಶಮೇಕಾದಶ್ಯಾಂ ಸಮಾಸತಃ ।
ತ್ರಿಃಪ್ರಾಶ್ಯ ಗೋಮಯಂ ಸಮ್ಯಗೇಕಾದಶ್ಯಾಮುಪಾವಸೇತ್ ॥ ೪೬ ॥
ಗೋಮೂತ್ರಂ ಮಂತ್ರವದ್ಭೂಮೌ ದ್ವಾದಶ್ಯಾಂ ಪ್ರಾಶಯೇದ್ವ್ರತೀ ।
ಕ್ಷೀರಂ ಚೈವ ತ್ರಯೋದಶ್ಯಾಂ ಚತುರ್ದಶ್ಯಾಂ ತಥಾ ದಧಿ ॥ ೪೭ ॥
ಸಂಪ್ರಾಶ್ಯ ಕಾಯಶುದ್ಧ್ಯರ್ಥಂ ಲಂಘಯಿತ್ವಾ ಚತುರ್ದಿನಂ ।
ಪಂಚಮೇ ದಿವಸೇ ಸ್ನಾತ್ವಾ ವಿಧಿವತ್ಪೂಜ್ಯ ಕೇಶವಂ ।
ಭೋಜಯೇದ್ಬ್ರಾಹ್ಮಣಾನ್ಭಕ್ತ್ಯಾ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ॥ ೪೮ ॥
ಪಾಪಬುದ್ಧಿಂ ಪರಿತ್ಯಜ್ಯ ಬ್ರಹ್ಮಚರ್ಯೇಣ ಧೀಮತಾ ।
ಮದ್ಯಂ ಮಾಂಸಂ ಪರಿತ್ಯಾಜ್ಯಂ ಮೈಥುನಂ ಪಾಪಕಾರಣಂ ॥ ೪೯ ॥
ಶಾಕಾಹಾರೇಣ ಮುನ್ಯನ್ನೈಃ ಕೃಷ್ಣಾರ್ಚನಪರೋ ನರಃ ।
ತತೋ ನಕ್ತಂ ಸಮಶ್ನೀಯಾತ್ಪಂಚಗವ್ಯಪುರಸ್ಸರಂ ॥ ೫೦ ॥
ಏವಂ ಸಮ್ಯಕ್ಸಮಾಪ್ಯಂ ಸ್ಯಾದ್ಯಥೋಕ್ತಂ ಫಲಮಾಪ್ನುಯಾತ್ ॥ ೫೧ ॥

---

೪೬. ಆ ಹೃಷೀಕೇಶನನ್ನು ಏಕಾದಶಿಯಲ್ಲಿ ಎಲ್ಲವುಗಳಿಂದಲೂ ಅರ್ಚಿಸಿ, ಗೋಮಯವನ್ನು ಮೂರು ಬಾರಿ ಪ್ರಾಶನಮಾಡಿ ಏಕಾದಶಿಯಲ್ಲಿ ಉಪವಾಸ ಮಾಡಬೇಕು.

೪೭. ಈ ವ್ರತವನ್ನು ಹಿಡಿದವನು ದ್ವಾದಶಿಯ ದಿನ ಮಂತ್ರಪೂತವಾದ ಭೂಮಿಯಲ್ಲಿ ಗೋಮೂತ್ರವನ್ನು ಪ್ರಾಶನಮಾಡಬೇಕು. ತ್ರಯೋದಶಿಯಲ್ಲಿ ಹಾಲನ್ನು ಕುಡಿಯಬೇಕು. ಚತುರ್ದಶಿಯಲ್ಲಿ ಮೊಸರನ್ನು ಕುಡಿಯಬೇಕು.

೪೮. ದೇಹಶುದ್ಧಿಗಾಗಿ ಇವನ್ನು ಪ್ರಾಶನಮಾಡಿ ನಾಲ್ಕುದಿನವೂ ಉಪವಾಸ ಮಾಡಿ ಐದನೆಯ ದಿವಸ ಸ್ನಾನಮಾಡಿ ವಿಧಿವತ್ತಾಗಿ ಕೇಶವನನ್ನು ಪೂಜಿಸಿ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅವರಿಗೆ ದಕ್ಷಿಣೆಯನ್ನು ಕೊಡಬೇಕು.

೪೯. ಧೀಮಂತನಾದವನು ಪಾಪಬುದ್ಧಿಯನ್ನು ಪರಿತ್ಯಜಿಸಿ ಬ್ರಹ್ಮಚರ್ಯವನ್ನು ಧರಿಸಿ, ಪಾಪಕಾರಣವಾದ ಮದ್ಯವನ್ನೂ, ಮಾಂಸವನ್ನೂ, ಮೈಥುನವನ್ನೂ ತೊರೆಯಬೇಕು.

೫೦. ಈ ರೀತಿ ನರನು ಕೃಷ್ಣಾರ್ಚನಪರನಾಗಿರುತ್ತ ರಾತ್ರಿಯಹೊತ್ತು ಶಾಕಾಹಾರವನ್ನಾಗಲಿ ಮುನ್ಯನ್ನವನ್ನಾಗಲಿ ಪಂಚಗವ್ಯಪೂರ್ವಕವಾಗಿ ತೆಗೆದುಕೊಳ್ಳಬೇಕು.

೫೧. ಹೀಗೆ ಸರಿಯಾಗಿ ನಡೆದುಕೊಂಡು ವ್ರತವನ್ನು ಸಮಾಪ್ತಿಮಾಡಿದರೆ ಯಥೋಕ್ತವಾದ ಫಲವನ್ನು ಪಡೆಯಲಾಗುತ್ತದೆ.

ಮದ್ಯಪೋ ಯಃ ಪಿಬೇನ್ಮದ್ಯಂ ಜನ್ಮನೋ ಮರಣಾಂತಿಕಂ ।
ಏತದ್ಭೀಷ್ಮವ್ರತಂ ಕೃತ್ವಾ ಪ್ರಾಪ್ನೋತಿ ಪರಮಂ ಪದಂ ॥ ೫೨ ॥
ಸ್ತ್ರೀಭಿರ್ವಾ ಭರ್ತೃವಾಕ್ಯೇನ ಕರ್ತವ್ಯಂ ಧರ್ಮವರ್ಧನಂ ।
ವಿಧವಾಭಿಶ್ಚ ಕರ್ತವ್ಯಂ ಮೋಕ್ಷಸೌಖ್ಯಾತಿವೃದ್ಧಯೇ ॥ ೫೩ ॥
ಅಯೋಧ್ಯಾಯಾಂ ಪುರಾ ಕಶ್ಚಿದತಿಥಿರ್ನಾಮ ವೈ ನೃಪಃ ।
ವಸಿಷ್ಠವಚನಾತ್ಕೃತ್ವಾ ವ್ರತಮೇತತ್ಸುದುರ್ಲಭಂ ।
ಭುಕ್ತ್ವೇಹ ನಿಖಿಲಾನ್ಭೋಗಾನಂತೇ ವಿಷ್ಣುಪುರಂ ಯಯೌ ॥ ೫೪ ॥
ಇತ್ಥಂ ಕುರ್ಯಾದ್ವ್ರತಂ ನಿತ್ಯಂ ಪಂಚಕಂ ಭೀಷ್ಮಸಂಜ್ಞಿತಂ ।
ನಿಯಮೇನೋಪವಾಸೇನ ಪಂಚಗವ್ಯೇನ ವಾ ಪುನಃ ।
ಪಯೋಮೂಲಫಲಾಹಾರೈರ್ಹವಿಷ್ಯೈರ್ವ್ರತತತ್ಪರಃ ॥ ೫೫ ॥
ಪೌರ್ಣಮಾಸೀದಿನೇ ಪ್ರಾಪ್ತೇ ಪೂಜಾಂ ಕೃತ್ವಾ ತು ಪೂರ್ವವತ್ ।
ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಗಾಂ ಚ ದದ್ಯಾತ್ಸವತ್ಸಕಾಂ ॥ ೫೬ ॥

---

೫೨ ಯಾವ ಮದ್ಯಪಾಯಿಯು ಹುಟ್ಟಿದಾಗಿನಿಂದ ಸಾಯುವವರೆಗೂ ಮದ್ಯವನ್ನು ಪಾನಮಾನಮಾಡುತ್ತಿರುವನೋ ಅವನು ಸಹ ಈ ಭೀಷ್ಮವ್ರತವನ್ನು ಮಾಡಿ ಪರಮಪದವನ್ನು ಪಡೆಯುತ್ತಾನೆ.

೫೩. ಸ್ತ್ರೀಯರು ಕೂಡ ಗಂಡನ ಮಾತಿನಪ್ರಕಾರ ಧರ್ಮವರ್ಧನವಾದ ಈ ವ್ರತವನ್ನು ಮಾಡತಕ್ಕುದು. ವಿಧವೆಯರು ಕೂಡ ಮೋಕ್ಷಸೌಖ್ಯದ ವೃದ್ಧಿಗಾಗಿ ಇದನ್ನು ಮಾಡತಕ್ಕುದು.

೫೪. ಪೂರ್ವದಲ್ಲಿ ಅಯೋಧ್ಯೆಯಲ್ಲಿ ಅತಿಥಿಯೆಂಬ ಒಬ್ಬಾನೊಬ್ಬ ದೊರೆಯು ವಸಿಷ್ಠನ ಮಾತಿನಿಂದ ಬಹು ದುರ್ಲಭವಾದ ಈ ವ್ರತವನ್ನಾಚರಿಸಿ, ಈ ಲೋಕದಲ್ಲಿ ನಿಖಿಲ ಭೋಗಗಳನ್ನೂ ಅನುಭವಿಸಿ ಕೊನೆಯಲ್ಲಿ ವಿಷ್ಣುಪುರಕ್ಕೆ ಹೋದನು.

೫೫. ಈ ರೀತಿಯಾಗಿ ನಿತ್ಯವೂ ಭಿಷ್ಮಪಂಚಕವ್ರತವನ್ನು ನಿಯಮದಿಂದಲೂ ಉಪವಾಸದಿಂದಲೂ ಅಥವಾ ಪಂಚಗವ್ಯಪೂರ್ವಕವಾಗಿ ಹಾಲು, ಫಲ, ಮೂಲಗಳ ಆಹಾರದಿಂದಲೂ ಹವಿಷ್ಯನ್ನದಿಂದಲೂ ವ್ರತತತ್ಪರನಾದವನು ಈ ವ್ರತವನ್ನು ನಡೆಸಬೇಕು.

೫೬. ಪೌರ್ಣಮಿಯ ದಿನವು ಬರಲು ಪೂರ್ವದಂತೆಯೇ ಪೂಜೆಮಾಡಿ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಕರುವಿನಿಂದ ಕೂಡಿದ ಗೋವನ್ನು ದಾನಮಾಡಬೇಕು.

ಯದ್ಭೀಷ್ಮಪಂಚಕಮಿತಿ ಪ್ರಥಿತಂ ಪೃಥಿವ್ಯಾ
ಮೇಕಾದಶೀಪ್ರಭೃತಿ ಪಂಚದಶೀನಿರುದ್ಧಂ ।
ಉಕ್ತಂ ನ ಭೋಜನಪರಸ್ಯ ತದಾ ನಿಷೇಧ
ಸ್ತಸ್ಮಿನ್ ವ್ರತೇ ಶುಭಫಲಂ ಪ್ರದದಾತಿ ವಿಷ್ಣುಃ ॥ ೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಭೀಷ್ಮಪಂಚಕವ್ರತ ಮಾಹಾತ್ಮ್ಯವರ್ಣನಂ" ನಾಮ ದ್ವಾತ್ರಿಂಶೋಽಧ್ಯಾಯಃ

---

೫೭. ಏಕಾದಶಿಯ ದಿನ ಮೊದಲುಗೊಂಡು ಪೂರ್ಣಿಮೆಯವರೆಗೂ ಸೇರಿ ಭೀಷ್ಮಪಂಚಕವೆಂದು ಪೃಥಿವಿಯಲ್ಲಿ ಪ್ರಸಿದ್ಧವಾಗಿರುವ ವ್ರತವು ಭೋಜನ ಪರನಿಗೆ ಹೇಳಿದ್ದಲ್ಲ. ಭೋಜನಪರನಿಗಾದರೆ ಆ ವ್ರತದಲ್ಲಿ ನಿಷೇಧವು ಉಕ್ತ ವಾಗಿದೆ. ಅವನೂ ಸಹ ಅದರಂತೆ ಆಚರಿಸಿದರೆ ವಿಷ್ಣುವು ಅವನಿಗೂ ಶುಭ ಫಲವನ್ನು ನೀಡುತ್ತಾನೆ."

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಭೀಷ್ಮಪಂಚಕವ್ರತ ಮಾಹಾತ್ಮ್ಯವರ್ಣನ"ವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯಸ್ತ್ರಿಂಶೋಽಧ್ಯಾಯಃ

### ಪ್ರಬೋಧೋತ್ಸವ ದ್ವಾದಶೀ ತಿಥಿಕೃತ್ಯವರ್ಣನಂ

ಈಶ್ವರ ಉವಾಚ :—

**ಪ್ರಬೋಧಿನ್ಯಾಶ್ಚ ಮಾಹಾತ್ಮ್ಯಂ ಪಾಪಘ್ನಂ ಪುಣ್ಯವರ್ಧನಂ ।**
**ಮುಕ್ತಿದಂ ತತ್ತ್ವಬುದ್ಧೀನಾಂ ಶೃಣುಷ್ವ ಸುರಸತ್ತಮ ॥ ೧ ॥**
**ತಾವದ್ಗರ್ಜತಿ ಸೇನಾನೀರ್ಗಂಗಾ ಭಾಗೀರಥೀ ಕ್ಷಿತೌ ।**
**ಯಾವತ್ಪ್ರಯಾತಿ ಪಾಪಘ್ನೀ ಕಾರ್ತಿಕೇ ಹರಿಬೋಧಿನೀ ॥ ೨ ॥**
**ತಾವದ್ಗರ್ಜಂತಿ ತೀರ್ಥಾನಿ ಆಸಮುದ್ರಸರಾಂಸಿ ವೈ ।**
**ಯಾವತ್ಪ್ರಬೋಧಿನೀ ವಿಷ್ಣೋಃ ಸ್ಥಿತಿರ್ನಾಯಾತಿ ಕಾರ್ತಿಕೇ ॥ ೩ ॥**
**ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ।**
**ಏಕೇನೈವೋಪವಾಸೇನ ಪ್ರಬೋಧಿನ್ಯಾ ಯಥಾಽಭವತ್ ॥ ೪ ॥**
**ದುರ್ಲಭಂ ಚೈವ ದುಷ್ಪ್ರಾಪ್ಯಂ ತ್ರೈಲೋಕ್ಯೇ ಸಚರಾಚರೇ ।**
**ತದಪಿ ಪ್ರಾರ್ಥಿತಂ ವಿಪ್ರ ದದಾತಿ ಪ್ರತಿಬೋಧಿನೀ ॥ ೫ ॥**

---

### ಕನ್ನಡದ ಅನುವಾದ

#### ಪ್ರಬೋಧೋತ್ಸವ ದ್ವಾದಶೀತಿಥಿಕೃತ್ಯ ವರ್ಣನವು

೧. ಈಶ್ವರನು ಹೇಳುತ್ತಾನೆ:—ಪ್ರಬೋಧಿನಿಯ ಮಾಹಾತ್ಮ್ಯವು ಪಾಪ ಪರಿಹಾರವನ್ನು ಮಾಡುವುದು; ಪುಣ್ಯವನ್ನು ವೃದ್ಧಿಪಡಿಸುವುದು; ತತ್ತ್ವಬುದ್ಧಿಯುಳ್ಳವರಿಗೆ ಮುಕ್ತಿಯನ್ನೀಯುವುದು. ಸುರಶ್ರೇಷ್ಠಾ! ಅದನ್ನಾಲಿಸು.

೨. ಕಾರ್ತಿಕಮಾಸದಲ್ಲಿ ಹರಿಯನ್ನೆಚ್ಚರಿಸುವ ಪ್ರಬೋಧಿನಿಯು ಬರುವವರೆಗೂ ಸೇನಾನಿಯೂ, ಭಾಗೀರಥಿಯೂ ಎನಿಸಿದ ಗಂಗೆಯೂ ಭೂಮಿಯಲ್ಲಿ ಗರ್ಜಿಸುತ್ತಿರುತ್ತಾಳೆ.

೩. ಕಾರ್ತಿಕಮಾಸದಲ್ಲಿ ವಿಷ್ಣುವಿನ ಪ್ರಬೋಧಿನೀತಿಥಿಯು ಎಲ್ಲಿಯವರೆಗೆ ಬರುವುದಿಲ್ಲವೋ ಅಲ್ಲಿಯವರೆಗೂ ಸರೋವರಗಳಿಂದ ಹಿಡಿದು ಸಮುದ್ರ ಪರ್ಯಂತವಾಗಿರುವ ತೀರ್ಥಗಳೆಲ್ಲವೂ ಗರ್ಜಿಸುತ್ತವೆ.

೪. ಸಾವಿರಾರು ಅಶ್ವಮೇಧಗಳೂ ನೂರಾರು ರಾಜಸೂಯಗಳೂ ಪ್ರಬೋಧಿನಿಯ ಒಂದೇ ಒಂದು ಉಪವಾಸಕ್ಕೆ ಸಮವಾಗುವುವು.

೫. ಎಲೈ ವಿಪ್ರನೇ! ಯಾವುದು ಚರಾಚರಗಳಿಂದ ಕೂಡಿದ ಮೂರು ಲೋಕಗಳಲ್ಲೂ ದುರ್ಲಭವೊ, ಪಡೆಯಲು ಬಹು ಕಷ್ಟವೊ ಅದನ್ನು ಪ್ರಾರ್ಥಿಸಿದರೂ, ಈ ಪ್ರಬೋಧಿನಿಯು ಕೊಟ್ಟುಬಿಡುತ್ತದೆ.

ಐಶ್ವರ್ಯಂ ಸಂತತಿಂ ಜ್ಞಾನಂ ರಾಜ್ಯಂ ಚ ಸುಖಸಂಪದಃ ।
ದದಾತ್ಯುಪೋಷಿತಾ ವಿಪ್ರ ಹೇಲಯಾ ಹರಿಬೋಧಿನೀ ॥ ೬ ॥
ಮೇರುಮಂದರತುಲ್ಯಾನಿ ಪಾಪಾನ್ಯುಪಾರ್ಜಿತಾನಿ ಚ ।
ಏಕೇನೈವೋಪವಾಸೇನ ದಹತೇ ಹರಿಬೋಧಿನೀ ॥ ೭ ॥
ಉಪವಾಸಂ ಪ್ರಬೋಧಿನ್ಯಾಂ ಯಃ ಕರೋತಿ ಸ್ವಭಾವತಃ ।
ವಿಧಿನಾ ನರಶಾರ್ದೂಲ ಯಥೋಕ್ತಂ ಲಭತೇ ಫಲಂ ॥ ೮ ॥
ಪೂರ್ವಜನ್ಮಸಹಸ್ರೇಷು ಪಾಪಂ ಯತ್ಸಮುಪಾರ್ಜಿತಂ ।
ಜಾಗರೇಣ ಪ್ರಬೋಧಿನ್ಯಾಂ ದಹ್ಯತೇ ತೂಲರಾಶಿವತ್ ॥ ೯ ॥
ಶೃಣು ಷಣ್ಮುಖ ವಕ್ಷ್ಯಾಮಿ ಜಾಗರಸ್ಯ ಚ ಲಕ್ಷಣಂ ।
ತಸ್ಯ ವಿಜ್ಞಾನಮಾತ್ರೇಣ ದುರ್ಲಭೋ ನ ಜನಾರ್ದನಃ ॥ ೧೦ ॥
ಗೀತಂ ವಾದ್ಯಂ ಚ ನೃತ್ಯಂ ಚ ಪುರಾಣಪಠನಂ ತಥಾ ।
ಧೂಪಂ ದೀಪಂ ಚ ನೈವೇದ್ಯಂ ಪುಷ್ಪಗಂಧಾನುಲೇಪನಂ ॥ ೧೧ ॥
ಫಲಮರ್ಘ್ಯಂ ಚ ಶ್ರದ್ಧಾ ಚ ದಾನಮಿಂದ್ರಿಯಸಂಯಮಂ ।
ಸತ್ಯಾನ್ವಿತಂ ವಿನಿಂದಂ ಚ ಮುದಾ ಯುಕ್ತಂ ಕ್ರಿಯಾನ್ವಿತಂ ॥ ೧೨ ॥

---

೬. ಎಲೈ ವಿಪ್ರನೇ! ಹರಿಬೋಧಿನಿಯ ದಿನ ಉಪವಾಸ ಮಾಡಿದರೆ ಅದು, ಐಶ್ವರ್ಯ, ಸಂತತಿ, ಜ್ಞಾನ, ರಾಜ್ಯ, ಸುಖ ಸಂಪತ್ತು—ಇವುಗಳನ್ನೆಲ್ಲ ಲೀಲೆಯಿಂದಲೇ ಮಾನವನಿಗೆ ಕೊಡುತ್ತದೆ.

೭. ಬಹುಕಾಲದಿಂದಲೂ ಸಂಪಾದಿಸಿರುವ ಪಾಪಗಳು ಮೇರುಮಂದರ ಪರ್ವತಗಳಷ್ಟಿದ್ದರೂ ಅವನ್ನೆಲ್ಲ ಹರಿಬೋಧಿನಿಯು ಒಂದು ಉಪವಾಸದಿಂದಲೇ ಸುಟ್ಟುಬಿಡುತ್ತದೆ.

೮–೯. ಎಲೈ ಸುರಶ್ರೇಷ್ಠನೇ! ಯಾವನು ಪ್ರಬೋಧಿನಿಯಲ್ಲಿ ಸ್ವಭಾವವಾಗಿಯೇ ವಿಧಿಯಲ್ಲಿ ಹೇಳಿರುವಂತೆ ಉಪವಾಸ ಮಾಡುತ್ತಾನೆಯೋ ಅವನು, ಯಥೋಕ್ತ ಫಲವನ್ನು ಪಡೆಯುತ್ತಾನೆ. ಪೂರ್ವಜನ್ಮ ಸಹಸ್ರಗಳಲ್ಲಿ ಯಾವ ಪಾಪವನ್ನು ಸಂಪಾದಿಸಿರುತ್ತಾಯೊ ಆ ಪಾಪವನ್ನೆಲ್ಲ ಪ್ರಬೋಧಿಸಿಯಲ್ಲಿ ಜಾಗರಣೆ ಮಾಡುವುದರಿಂದ ಹತ್ತಿಯ ರಾಶಿಯಂತೆ ಸುಟ್ಟುಹೋಗುವುದು.

೧೦. ಷಣ್ಮುಖಾ! ಕೇಳು. ಜಾಗರಣೆಯ ಲಕ್ಷಣವನ್ನು ಹೇಳುತ್ತೇನೆ. ಅದನ್ನು ತಿಳಿದ ಮಾತ್ರದಿಂದಲೇ ಜನಾರ್ದನನು ದುರ್ಲಭನಲ್ಲವಾಗುತ್ತಾನೆ.

೧೧. ಗೀತ, ವಾದ್ಯ, ನೃತ್ಯ, ಪುರಾಣಪಠನ,—ಇವನ್ನು ಮಾಡುತ್ತಿರಬೇಕು. ಧೂಪ, ದೀಪ, ನೈವೇದ್ಯ, ಪುಷ್ಪ, ಗಂಧಾದ್ಯನುಲೇಪನ—ಇವನ್ನು ಶ್ರೀಮನ್ಮಹಾವಿಷ್ಣುವಿಗೆ ಅರ್ಪಿಸುತ್ತಿರಬೇಕು.

೧೨. ಫಲವನ್ನೂ ಅರ್ಘ್ಯವನ್ನೂ ಅರ್ಪಿಸಬೇಕು. ಶ್ರದ್ಧೆ, ದಾನ, ಇಂದ್ರಿಯ

ಸಾಶ್ಚರ್ಯಂ ಚೈವ ಪ್ರೋತ್ಸಾಹಮಾಲಸ್ಯಾದಿವಿವರ್ಜಿತಂ ।
ಪ್ರದಕ್ಷಿಣಾದಿಸಂಯುಕ್ತಂ ನಮಸ್ಕಾರಪುರಸ್ಸರಂ ॥ ೧೩ ॥
ನೀರಾಜನಸಮಾಯುಕ್ತಮನಿರ್ವಿಣ್ಣೇನ ಚೇತಸಾ ।
ಯಾಮೇ ಯಾಮೇ ಮಹಾಭಾಗ ಕುರ್ವನ್ನೀರಾಜನಂ ಹರೇಃ ॥ ೧೪ ॥
ಏತೈರ್ಗುಣೈಸ್ಸಮಾಯುಕ್ತಂ ಕುರ್ಯಾಜ್ಜಾಗರಣಂ ವಿಭೋಃ ।
ಏಕಾಗ್ರಮನಸಾ ಯಸ್ತು ನ ಪುನರ್ಜಾಯತೇ ಭುವಿ ॥ ೧೫ ॥
ಯ ಏವಂ ಕುರುತೇ ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।
ಜಾಗರಂ ವಾಸರೇ ವಿಷ್ಣೋರ್ಲೀಯತೇ ಪರಮಾತ್ಮನಿ ॥ ೧೬ ॥
ಪುರುಷಸೂಕ್ತೇನ ಯೋ ನಿತ್ಯಂ ಕಾರ್ತಿಕೇಽಥಾರ್ಚಯೇದ್ಧರಿಂ ।
ವರ್ಷಕೋಟಿಸಹಸ್ರಾಣಿ ಪೂಜಿತಸ್ತೇನ ಕೇಶವಃ ॥ ೧೭ ॥
ಯಥೋಕ್ತೇನ ವಿಧಾನೇನ ಪಂಚರಾತ್ರೋದಿತೇನ ವೈ ।
ಕಾರ್ತಿಕೇ ತ್ವರ್ಚಯೇನ್ನಿತ್ಯಂ ಮುಕ್ತಿಭಾಗೀ ಭವೇನ್ನರಃ ॥ ೧೮ ॥

---

ಸಂಯಮ ಮತ್ತು ಸತ್ಯಗಳಿಂದ ಕೂಡಿರಬೇಕು. ನಿಂದೆಯನ್ನು ತೊರೆದು ಸಂತೋಷದಿಂದ ಕ್ರಿಯೆಗಳನ್ನು ನಡೆಸುತ್ತಿರಬೇಕು.

೧೩. ಆಶ್ಚರ್ಯ ಪ್ರೋತ್ಸಾಹಗಳಿಂದ ಕೂಡಿರಬೇಕು. ಆಲಸ್ಯಾದಿಗಳನ್ನು ಬಿಟ್ಟಿರಬೇಕು. ಪ್ರದಕ್ಷಿಣಾದಿಗಳಿಂದ ಸೇವಿಸಬೇಕು. ನಮಸ್ಕಾರ ಮಾಡುತ್ತಿರಬೇಕು.

೧೪–೧೫. ಕುಗ್ಗದ ಮನಸ್ಸಿನಿಂದ ನೀರಾಜನ ಮಾಡುತ್ತಿರಬೇಕು. ಎಲೈ ಮಹಾಭಾಗನೇ! ಯಾಮ ಯಾಮದಲ್ಲಿಯೂ ಹರಿಗೆ ನೀರಾಜನವನ್ನು ಮಾಡುತ್ತಿರಬೇಕು. ಈ ನಿಯಮಗಳಿಂದ ಕೂಡಿ ಯಾವನು ಏಕಾಗ್ರಮನಸ್ಸಿನಿಂದ ಆ ವಿಭುವಿನೆದುರಿಗೆ ಜಾಗರಣ ಮಾಡುತ್ತಾನೆಯೋ ಅವನು ಭೂಮಿಯಲ್ಲಿ ಮತ್ತೆ ಹುಟ್ಟುವುದಿಲ್ಲ.

೧೬. ಯಾವನು ವಿಷ್ಣುವಿನ ಈ ವಾಸರದಲ್ಲಿ ಭಕ್ತಿಯಿಂದ ವಿತ್ತಶಾಠ್ಯವನ್ನು ತೊರೆದು ಹೀಗೆ ಜಾಗರಣೆಯನ್ನು ಮಾಡುತ್ತಾನೆಯೋ ಅವನು ಪರಮಾತ್ಮನಲ್ಲಿ ಲೀನನಾಗುತ್ತಾನೆ.

೧೭. ಕಾರ್ತಿಕಮಾಸದಲ್ಲಿ ಯಾವನು ಶ್ರೀಹರಿಯನ್ನು ಪುರುಷಸೂಕ್ತದಿಂದ ನಿತ್ಯವೂ ಅರ್ಚಿಸುತ್ತಾನೆಯೋ ಅವನು ಕೋಟಿಸಹಸ್ರವರ್ಷಗಳು ಕೇಶವನನ್ನು ಪೂಜಿಸಿದಂತಾಗುತ್ತದೆ.

೧೮. ಪಂಚರಾತ್ರ (ಆಗಮ)ದಲ್ಲಿ ಹೇಳಿರುವ ವಿಧಾನವನ್ನನುಸರಿಸಿ ಕಾರ್ತಿಕದಲ್ಲಿ ಯಾವನು ನಿತ್ಯವೂ ಅರ್ಚಿಸುತ್ತಾನೆಯೋ ಆ ನರನು ಮುಕ್ತಿಗೆ ಭಾಗಿಯಾಗುತ್ತಾನೆ.

ನಮೋ ನಾರಾಯಣಾಯೇತಿ ಕಾರ್ತಿಕೇ ಯೋಽರ್ಚಯೇದ್ಧರಿಂ ।
ಸ ಮುಕ್ತೋ ನಾರಕೈರ್ದುಃಖೈಃ ಪದಂ ಗಚ್ಛತ್ಯನಾಮಯಂ ॥ ೧೯ ॥
ಹರೇರ್ನಾಮಸಹಸ್ರಂ ಚ ಗಜರಾಜಸ್ಯ ಮೋಕ್ಷಣಂ ।
ಕಾರ್ತಿಕೇ ಪಠತೇ ಯಸ್ತು ಪುನರ್ಜನ್ಮ ನ ವಿಂದತಿ ॥ ೨೦ ॥
ಯುಗಕೋಟಿಸಹಸ್ರಾಣಿ ಮನ್ವಂತರಶತಾನಿ ಚ ।
ದ್ವಾದಶ್ಯಾಂ ಕಾರ್ತಿಕೇ ಮಾಸಿ ಜಾಗರೀ ವಸತೇ ದಿವಿ ॥ ೨೧ ॥
ಕುಲೇ ತಸ್ಯ ಚ ಯೇ ಜಾತಾಃ ಶತಶೋಽಥ ಸಹಸ್ರಶಃ ।
ಪ್ರಾಪ್ನುವಂತಿ ಪದಂ ವಿಷ್ಣೋಸ್ತಸ್ಮಾತ್ಕುರ್ವೀತ ಜಾಗರಂ ॥ ೨೨ ॥
ಕಾರ್ತಿಕೇ ಪಶ್ಚಿಮೇ ಯಾಮೇ ಸ್ತವಂ ಗಾನಂ ಕರೋತಿ ಯಃ ।
ಶ್ವೇತದ್ವೀಪೇ ತು ವಸತೇ ಪಿತೃಭಿಸ್ಸಹ ಸುವ್ರತ ॥ ೨೩ ॥
ನೈವೇದ್ಯದಾನಂ ಹರಯೇ ಕಾರ್ತಿಕೇ ದಿನಸಂಕ್ಷಯೇ ।
ಯುಗಾನಿ ವಸತೇ ಸ್ವರ್ಗೇ ತಾವಂತಿ ಮುನಿಸತ್ತಮಾಃ ॥ ೨೪ ॥

---

೧೯. ಕಾರ್ತಿಕದಲ್ಲಿ ಯಾವನು 'ನಮೋ ನಾರಾಯಣಾಯ' (ನಾರಾಯಣನಿಗೆ ನಮಸ್ಕಾರ) ಎಂದು ಮಂತ್ರದಿಂದ ಹರಿಯನ್ನು ಅರ್ಚಿಸುತ್ತಾನೆಯೋ ಅವನು ನರಕದುಃಖಗಳಿಂದ ಬಿಡುಗಡೆ ಹೊಂದಿದವನಾಗಿ ಅನಾಮಯವಾದ (ದುಃಖ ಸಂಕಟಗಳಿಲ್ಲದ) ಪದವಿಯನ್ನು ಹೊಂದುತ್ತಾನೆ.

೨೦. ಯಾವನು ಕಾರ್ತಿಕಮಾಸದಲ್ಲಿ ಶ್ರೀಹರಿಯ ಸಹಸ್ರನಾಮವನ್ನೂ ಗಜೇಂದ್ರಮೋಕ್ಷವನ್ನೂ ಪಠಿಸುತ್ತಾನೆಯೋ ಅವನು ಪುನರ್ಜನ್ಮವನ್ನು ಹೊಂದುವುದಿಲ್ಲ.

೨೧. ಕಾರ್ತಿಕಮಾಸದ ದ್ವಾದಶಿಯಲ್ಲಿ ಜಾಗರಣೆಮಾಡುವವನು ಕೋಟಿ ಸಹಸ್ರಯುಗಗಳವರೆಗೂ, ನೂರಾರು ಮನ್ವಂತರಗಳವರೆಗೂ ಸ್ವರ್ಗಲೋಕದಲ್ಲಿ ವಾಸಮಾಡುತ್ತಾನೆ.

೨೨. ಅವನ ಕುಲದಲ್ಲಿ ಯಾರು ಹುಟ್ಟುವರೋ ಅವರೂ ನೂರುಗಟ್ಟಳೆ, ಸಾವಿರಗಟ್ಟಳೆಯಾಗಿ ವಿಷ್ಣುವಿನ ಪದವಿಯನ್ನು ಪಡೆಯುತ್ತಾರೆ. ಆದ್ದರಿಂದ ಜಾಗರಣೆಯನ್ನು ಮಾಡಬೇಕು.

೨೩. ಎಲೈ ಸುವ್ರತನೇ! ಯಾವನು ಕಾರ್ತಿಕ ಪೌರ್ಣಮಿಯ ಪಶ್ಚಿಮ ಯಾಮದಲ್ಲಿ ಸ್ತೋತ್ರವನ್ನು ಗಾನಮಾಡುತ್ತಾನೆಯೋ ಅವನು ಶ್ವೇತದ್ವೀಪದಲ್ಲಿ ಪಿತೃಗಳೊಡನೆ ಸಮಸಮವಾಗಿ ವಾಸಮಾಡುತ್ತಾನೆ.

೨೪. ಎಲೈ ಮುನಿಶ್ರೇಷ್ಠರೇ! ಯಾರು ಕಾರ್ತಿಕಮಾಸದಲ್ಲಿ ಎಷ್ಟುದಿನ ಶ್ರೀಹರಿಗೆ ನೈವೇದ್ಯವನ್ನರ್ಪಿಸುತ್ತಾರೆಯೋ ಅವರು ಅಷ್ಟು ಯುಗಗಳವರೆಗೆ ಸ್ವರ್ಗದಲ್ಲಿ ವಾಸಮಾಡುತ್ತಾರೆ.

ಅಕ್ಷಯಂ ಮುನಿಶಾರ್ದೂಲ ಮಾಲತೀಕಮಲಾರ್ಚನಂ ।
ಅರ್ಚಯೇದ್ದೇವದೇವೇಶಂ ಸ ಯಾತಿ ಪರಮಂ ಪದಂ ॥ ೨೫ ॥
ಕಾರ್ತಿಕೇ ಶುಕ್ಲಪಕ್ಷೇ ತು ಕೃತ್ವಾ ಹ್ಯೇಕಾದಶೀಂ ನರಃ ।
ಪ್ರಾತರ್ದತ್ವಾ ಶುಭಾನ್ ಕುಂಭಾನ್ಸ ಯಾತಿ ಮಮ ಮಂದಿರಂ॥ ೨೬ ॥
ಅತ್ರೈವ ತು ಪ್ರಕರ್ತವ್ಯಃ ಪ್ರಬೋಧಸ್ತು ಹರೇಃ ಖಗ ।
ಅತಃ ಶಂಖಾಸುರೋ ದೈತ್ಯೋ ನಭಸಃ ಶುಕ್ಲಪಕ್ಷಕೇ ॥ ೨೭ ॥
ಏಕಾದಶ್ಯಾಂ ತತೋ ವಿಷ್ಣುಶ್ಚಾತುರ್ಮಾಸ್ಯೇ ಪ್ರಸುಪ್ತವಾನ್ ।
ಕ್ಷೀರಾಂಬೋಧೌ ಜಾಗೃತೋಽಸಾವೇಕಾದಶ್ಯಾಂ ತು ಕಾರ್ತಿಕೇ ॥ ೨೮ ॥
ಅತಃ ಪ್ರಬೋಧನಂ ಕಾರ್ಯಮೇಕಾದಶ್ಯಾಂ ತು ವೈಷ್ಣವೇ ।
ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ ।
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು ॥ ೨೯ ॥
ಇತ್ಯುಕ್ತ್ವಾ ಶಂಖಭೇರ್ಯಾದಿ ಪ್ರಾತಃಕಾಲೇ ತು ವಾದಯೇತ್ ।
ವೀಣಾವೇಣುಮೃದಂಗಾದಿ ನೃತ್ಯಗೀತಾದಿ ಕಾರಯೇತ್ ॥ ೩೦ ॥

---

೨೫. ಎಲೈ ಮುನಿಶ್ರೇಷ್ಠನೇ! ಮಾಲತಿ ಮತ್ತು ಕಮಲಪುಷ್ಪಗಳಿಂದ ಅರ್ಚನೆ ಮಾಡಿದರೆ ಅಕ್ಷಯ ಫಲವನ್ನು ಕೊಡುತ್ತದೆ. ಯಾವನು ಅವುಗಳಿಂದ ದೇವದೇವೇಶನನ್ನು ಅರ್ಚಿಸುತ್ತಾನೋ ಅವನು ಪರಮಪದವನ್ನು ಪಡೆಯುತ್ತಾನೆ.

೨೬. ಕಾರ್ತಿಕಮಾಸದ ಶುಕ್ಲಪಕ್ಷದ ಏಕಾದಶೀ ವ್ರತವನ್ನು ಮಾಡಿ ಯಾವ ನರನು ಪ್ರಾತಃಕಾಲದಲ್ಲಿ ಶುಭಕರವಾದ ಕುಂಭಗಳನ್ನು ದಾನ ಕೊಡುತ್ತಾನೆಯೋ ಅವನು ನನ್ನ ಮಂದಿರಕ್ಕೆ ಹೋಗುತ್ತಾನೆ.

೨೭–೨೮. ಎಲೈ ಗಗನಸಂಚಾರಿಯೇ! ಇಲ್ಲಿಯೇ ಹರಿಗೆ ಪ್ರಬೋಧೋತ್ಸವವನ್ನು ಮಾಡಬೇಕು. ಶಂಖಾಸುರನೆಂಬ ದೈತ್ಯನು ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ ಹತನಾದನು. ಬಳಿಕ ವಿಷ್ಣುವು ಚಾತುರ್ಮಾಸ್ಯಕ್ಕಾಗಿ ಕ್ಷೀರಸಮುದ್ರದಲ್ಲಿ ಮಲಗಿ ನಿದ್ರಿಸಿದನು. ಕಾರ್ತಿಕದ ಏಕಾದಶಿಯಲ್ಲಿ ಎಚ್ಚತ್ತನು.

೨೯. ಆದ್ದರಿಂದ ವೈಷ್ಣವರು ಏಕಾದಶಿಯಲ್ಲಿ ಪ್ರಬೋಧನವನ್ನಾಚರಿಸಬೇಕು. "ಏಳು, ಏಳು, ಗೋವಿಂದ. ಏಳು, ಗರುಡಧ್ವಜಾ. ಕಮಲಾಕಾಂತಾ, ಏಳು. ಮೂರುಲೋಕಕ್ಕೂ ಮಂಗಳವನ್ನು ಮಾಡು."

೩೦. ಹೀಗೆಂದು ನುಡಿಯುತ್ತಾ ಪ್ರಾತಃಕಾಲದಲ್ಲಿ ಶಂಖ, ಭೇರಿ ಮೊದಲಾದುವುಗಳನ್ನು ಬಾಜಿಸಬೇಕು. ವೀಣೆ,-ಕೊಳಲು, ಮೃದಂಗ ಮೊದಲಾದುವನ್ನು ನುಡಿಸಬೇಕು. ನೃತ್ಯಗೀತಾದಿಗಳನ್ನು ಮಾಡಿಸಬೇಕು.

ಉತ್ಥಾಪಯಿತ್ವಾ ದೇವೇಶಂ ಪೂಜಾಂ ತಸ್ಯ ವಿಧಾಯ ಚ ।
ಸಾಯಂಕಾಲೇ ಪ್ರಕರ್ತವ್ಯಸ್ತುಲಸ್ಯುದ್ವಾಹಜೋ ವಿಧಿಃ ॥ ೩೧ ॥
ಸರ್ವದೈಕಾದಶೀ ಪುಣ್ಯಾ ವಿಶೇಷಾತ್ಕಾರ್ತಿಕೇ ಸ್ಮೃತಾ ।
ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ॥ ೩೨ ॥
ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ।
ಸ ಕೇವಲಮಘಂ ಭುಂಕ್ತೇ ಯೋ ಭುಂಕ್ತೇ ಹರಿವಾಸರೇ ॥ ೩೩ ॥
ತಸ್ಮಾತ್ಸರ್ವಪ್ರಯತ್ನೇನ ಕುರ್ಯಾದೇಕಾದಶೀವ್ರತಂ ।
ನ ಕುರ್ಯಾದ್ಯದಿ ಮೋಹೇನ ಉಪವಾಸಂ ನರಾಧಮಃ ॥ ೩೪ ॥
ನರಕೇ ನಿಯತೋ ವಾಸಃ ಪಿತೃಭಿಸ್ಸಹ ತಸ್ಯ ವೈ ।
ಸೂತಕೇ ಮೃತಕೇ ವಾಪಿ ನೋಪವಾಸಂ ತ್ಯಜೇದ್ಬುಧಃ ॥ ೩೫ ॥
ದಶಮೀವೇಧಸಂಯುಕ್ತಾ ತ್ಯಾಜ್ಯಾ ಚೈಕಾದಶೀ ವ್ರತೇ ।
ಗಾಂಧಾರ್ಯಾಪಿ ಪುರಾ ತಸ್ಯಾಮುಪವಾಸಃ ಕೃತೋ ಗುಹ ॥ ೩೬ ॥
ತಸ್ಯಾಃ ಪುತ್ರಶತಂ ನಷ್ಟಂ ತಸ್ಮಾತ್ತಾಂ ವೇಧಜಾಂ ತ್ಯಜೇತ್ ।
ಏಕಾದಶೀಮುಪವಸೇತ್ಸ್ನಾನದಾನಪುರಸ್ಸರಂ ॥ ೩೭ ॥

---

೩೧. ದೇವೇಶನನ್ನು ಎಚ್ಚರಗೊಳಿಸಿ ಅವನಿಗೆ ಪೂಜೆಮಾಡಿ ಸಾಯಂಕಾಲದಲ್ಲಿ ತುಲಸೀವಿವಾಹವನ್ನು ನಡೆಸಬೇಕು.

೩೨–೩೩. ಯಾವಾಗಲೇ ಆದರೂ ಏಕಾದಶಿಯು ಪುಣ್ಯಕರವು. ಅದರಲ್ಲೂ ವಿಶೇಷವಾಗಿ ಕಾರ್ತಿಕಮಾಸದಲ್ಲಿ ಅತ್ಯಂತ ಪುಣ್ಯಕರವು. ಬ್ರಹ್ಮಹತ್ಯವೇ ಮೊದಲಾದ ಯಾವ ಯಾವ ಪಾಪಗಳುಂಟೋ ಅವೆಲ್ಲವೂ ಹರಿವಾಸರವು ಬರಲಾಗಿ ಅನ್ನವನ್ನಾಶ್ರಯಿಸಿ ನೆಲಸಿರುತ್ತವೆ. ಹರಿವಾಸರದಲ್ಲಿ ಯಾವನು ಊಟಮಾಡುತ್ತಾನೆಯೋ ಅವನು ಕೇವಲ ಪಾಪವನ್ನೇ ಊಟಮಾಡುತ್ತಾನೆ.

೩೪–೩೬. ಆದ್ದರಿಂದ ಸರ್ವಪ್ರಯತ್ನದಿಂದಲೂ ಏಕಾದಶೀ ವ್ರತವನ್ನು ಮಾಡಬೇಕು. ನರಾಧಮನಾದವನು ಮೋಹದಿಂದ ಉಪವಾಸ ಮಾಡದಿದ್ದರೆ ಅವನಿಗೆ ಪಿತೃಗಳೊಡನೆ ನರಕದಲ್ಲಿ ವಾಸವು ನಿಯತವಾಗಿರುತ್ತದೆ. ಜಾತಾಶೌಚದಲ್ಲಾಗಲಿ, ಮೃತಾಶೌಚದಲ್ಲಾಗಲಿ ಪಂಡಿತನಾದವನು ಉಪವಾಸವನ್ನು ಬಿಡಬಾರದು. ದಶಮಿಯ ವೇಧೆಯಿಂದ ಕೂಡಿದ ಏಕಾದಶಿಯು ವ್ರತಕ್ಕೆ ತ್ಯಾಜ್ಯವು. ಎಲೈ ಗುಹನೇ! ಪೂರ್ವದಲ್ಲಿ ಹಾಗೆ ದಶಮಿಯ ವೇಧೆಯುಳ್ಳ ಏಕಾದಶೀ ತಿಥಿಯಲ್ಲಿ ಗಾಂಧಾರಿಯು ಉಪವಾಸ ಮಾಡಿದಳು.

೩೭. ಅದರಿಂದ ಅವಳ ನೂರು ಮಂದಿ ಪುತ್ರರೂ ಮಡಿದುಹೋದರು. ಆದ್ದರಿಂದ ವಧೆಗೆ ಕಾರಣವಾದ ಆ ಏಕಾದಶಿಯನ್ನು ತ್ಯಜಿಸಬೇಕು. ಸ್ನಾನದಾನ ಪೂರ್ವಕವಾಗಿ ಏಕಾದಶೀ ದಿನದಲ್ಲಿ ಉಪವಾಸವನ್ನು ಮಾಡಬೇಕು.

ರುಕ್ಮಾಂಗದೋऽಪಿ ರಾಜರ್ಷಿರ್ಮೋಹಿನ್ಯಾಸ್ಸಂಗಮೇನ ಚ ।
ಇಹಲೋಕೇ ಸುಖಂ ಭುಂಕ್ತ್ವಾ ಚಾಂತೇ ವಿಷ್ಣುಪುರಂ ಯಯೌ॥ ೩೮ ॥

ಇತಿ ಪ್ರಬೋಧೋತ್ಸವಃ

ಅಥ ದ್ವಾದಶೀಮಾಹಾತ್ಮ್ಯಂ

ದ್ವಾದಶೀ ಪುಣ್ಯದಾ ಪ್ರೋಕ್ತಾ ಸರ್ವಾಘೌಘವಿನಾಶಿನೀ ।
ಕಿಂ ದಾನೈಃ ಕಿಂ ತಪೋಭಿಶ್ಚ ಕಿಮುಪೋಷ್ಯೈರ್ವ್ರತೈಶ್ಚ ಕಿಂ ॥ ೩೯ ॥
ಕಿಮಿಷ್ಟೈಶ್ಚೈವ ಪುತ್ರೈಶ್ಚ ದ್ವಾದಶೀ ಯೇನ ಸೇವಿತಾ ।
ಗಂಗಾಯಾಂ ಚೈವ ದುರ್ಭಿಕ್ಷೇ ಪ್ರತ್ಯಹಂ ಕೋಟಿಭೋಜನಾತ್॥ ೪೦ ॥
ಯತ್ಫಲಂ ತದವಾಪ್ನೋತಿ ದ್ವಾದಶ್ಯಾಮೇಕಭೋಜನಾತ್ ।
ಯದ್ದತ್ತಂ ಚಾರ್ಹತೇ ದಾನಂ ದ್ವಾದಶ್ಯಾಂ ತು ಸಿತೇ ಶುಭೇ ॥ ೪೧ ॥
ಸಿಕ್ಥೇ ಸಿಕ್ಥೇ ಚ ವೈ ತಸ್ಯ ಕತಿ ಬ್ರಾಹ್ಮಣಭೋಜನಂ ।
ತದಹಂ ನೈವ ಜಾನಾಮಿ ಮಹಿಮಾನಂ ಹಿ ಸುವ್ರತ ॥ ೪೨ ॥
ಶಾಲಗ್ರಾಮಶಿಲಾದಾನಂ ಯಃ ಕುರ್ಯಾದ್ದ್ವಾದಶೀದಿನೇ ।
ಸಪ್ತದ್ವೀಪವತೀಂ ಭೂಮಿಂ ಗಂಗಾಯಾಂ ಚ ರವಿಗ್ರಹೇ ।
ದತ್ವಾ ಯತ್ಫಲಮಾಪ್ನೋತಿ ತತ್ಫಲಂ ಲಭತೇ ನರಃ ॥ ೪೩ ॥

---

೩೮. ರಾಜರ್ಷಿಯಾದ ರುಕ್ಮಾಂಗದನೂ ಕೂಡ ಮೋಹಿನಿಯ ಸಂಗಮದಿಂದ ಈ ಲೋಕದಲ್ಲಿ ಸುಖವನ್ನನುಭವಿಸಿ ಕಡೆಗೆ ವಿಷ್ಣುಪುರಕ್ಕೆ ಹೋಗಿ ಸೇರಿದನು.

ಇಂತು ಪ್ರಬೋಧೋತ್ಸವವು ಮುಗಿಯಿತು.

ಇನ್ನು ದ್ವಾದಶೀ ಮಾಹಾತ್ಮ್ಯವು ಮೊದಲಾಗುವುದು.

೩೯–೪೨. ದ್ವಾದಶಿಯು ಪುಣ್ಯಪ್ರದವೆಂದೂ, ಸಮಸ್ತ ಪಾಪಸಮೂಹಗಳನ್ನು ನಾಶಮಾಡತಕ್ಕದ್ದೆಂದೂ ಹೇಳಲ್ಪಟ್ಟಿದೆ. ಯಾವನಿಂದ ದ್ವಾದಶಿಯು ಸೇವಿಸಲ್ಪಟ್ಟಿರುವುದೋ ಅವನಿಗೆ ದಾನಗಳಿಂದೇನು ಪ್ರಯೋಜನ? ತಪಸ್ಸುಗಳಿಂದತಾನೆ ಪ್ರಯೋಜನವೇನು? ಉಪವಾಸಗಳಿಂದಲೂ, ವ್ರತಗಳಿಂದಲೂ ಏನು ಪ್ರಯೋಜನ? ದುರ್ಭಿಕ್ಷಕಾಲದಲ್ಲಿ ಗಂಗಾತೀರದಲ್ಲಿ ಕೋಟಿ ಜನಕ್ಕೆ ಭೋಜನ ಮಾಡಿಸುವುದರಿಂದ ಯಾವ ಫಲವುಂಟೋ ಅದನ್ನು ದ್ವಾದಶಿಯಲ್ಲಿ ಒಬ್ಬನಿಗೆ ಭೋಜನಮಾಡಿಸುವುದರಿಂದ ಪಡೆಯಲಾಗುತ್ತದೆ. ಎಲೈ ಸುವ್ರತನೇ! ಶುಕ್ಲಪಕ್ಷದ ನಿರ್ಮಲವಾದ ದ್ವಾದಶಿಯಲ್ಲಿ ಮಾಡಿದ ದಾನವು ತುತ್ತುತುತ್ತಿಗೂ ಒಬ್ಬನಿಗೆ ಎಷ್ಟು ಬ್ರಾಹ್ಮಣಭೋಜನದ ಫಲವನ್ನು ಉಂಟುಮಾಡುತ್ತದೆಯೆಂಬ ಆ ಮಹಿಮೆಯನ್ನು ತಿಳಿಯಲೇ ಆರದವನಾಗಿದ್ದೇನೆ.

೪೩. ಯಾವನು ದ್ವಾದಶೀ ದಿನದಲ್ಲಿ ಸಾಲಗ್ರಾಮ ಶಿಲೆಯನ್ನು ದಾನ

ಪಂಚಾಮೃತೈಸ್ತು ಯೋ ವಿಷ್ಣುಂ ಭಕ್ತ್ಯಾ ಸಂಸ್ನಾಪಯೇದ್ದ್ವಿಜ ।
ಸ ಸರ್ವಂ ಕುಲಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೪೪ ॥
ಶುಕ್ಲೇ ಕಾರ್ತಿಕಮಾಸಸ್ಯ ದ್ವಾದಶ್ಯಾಂ ಪರಮೋತ್ಸವೇ ।
ಪ್ರಾತರಾರಭ್ಯ ಯಃ ಕುರ್ಯಾತ್ಸ್ನಾನದಾನಾದಿಕಂ ತಥಾ ।
ಸ ತು ಮೋಕ್ಷಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೪೫ ॥
ದ್ವಾದಶ್ಯಾಂ ಕಾರ್ತಿಕೇ ಮಾಸಿ ಸ್ನಾನಸಂಧ್ಯಾದಿಕರ್ಮ ಚ ।
ಕೃತ್ವಾ ದಾಮೋದರಂ ಪೂಜ್ಯ ಭಕ್ತಿಶ್ರದ್ಧಾಸಮನ್ವಿತಃ ॥ ೪೬ ॥
ಯಸ್ತಸ್ಯಾಂ ಸೂಪನೈವೇದ್ಯಂ ನ ದದಾತಿ ನರಾಧಮಃ ।
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೭ ॥
ತಸ್ಮಾತ್ಸೂಪಸ್ಯ ನೈವೇದ್ಯಂ ದ್ವಾದಶ್ಯಾಂ ಕಾರ್ತಿಕೇ ಶುಭೇ ।
ದದ್ಯಾದ್ಭಕ್ತಿಯುತಂ ಬ್ರಹ್ಮನ್ ಚಾನ್ಯಥಾ ನರಕಂ ವ್ರಜೇತ್ ॥ ೪೮ ॥
ಯಸ್ತಸ್ಯಾಂ ದಂಪತೀನಾಂ ತು ಭೋಜನಂ ಕುರುತೇ ನರಃ ।
ನ ತಸ್ಯ ಫಲವಿಶ್ರಾಂತಿರ್ಮಯಾ ವಕ್ತುಂ ತು ಶಕ್ಯತೇ ॥ ೪೯ ॥

---

ಮಾಡುತ್ತಾನೆಯೋ ಆ ನರನು, ಸೂರ್ಯಗ್ರಹಣ ಕಾಲದಲ್ಲಿ ಗಂಗಾತೀರದಲ್ಲಿ ಸಪ್ತದ್ವೀಪಗಳನ್ನೂ ಒಳಕೊಂಡ ಭೂಮಿಯನ್ನು ದಾನಮಾಡಿದರೆ ಬರುವ ಫಲವನ್ನು ಪಡೆಯುತ್ತಾನೆ.

೪೪. ಎಲೈ ದ್ವಿಜನೇ! ಯಾವನು ಭಕ್ತಿಯಿಂದ ವಿಷ್ಣುವನ್ನು ಪಂಚಾಮೃತಗಳಿಂದ ಅಭಿಷೇಕಿಸುವನೊ ಅವನು ತನ್ನ ಸರ್ವಕುಲವನ್ನು ಉದ್ಧರಿಸಿ ವಿಷ್ಣುಲೋಕದಲ್ಲಿ ದೊಡ್ಡವನೆನಿಸಿಕೊಳ್ಳುತ್ತಾನೆ.

೪೫. ಕಾರ್ತಿಕಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಪರಮೋತ್ಸವದಿಂದ ಪ್ರಾತಃಕಾಲದಿಂದಲೂ, ಸ್ನಾನಾದಿಗಳನ್ನು ಯಾವನು ಮಾಡುವನೋ ಅವನು ಮೋಕ್ಷವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೪೬–೪೭. ಕಾರ್ತಿಕಮಾಸದಲ್ಲಿ ದ್ವಾದಶಿಯ ದಿನ ಸ್ನಾನಸಂಧ್ಯಾದಿಕರ್ಮಗಳನ್ನು ಮಾಡಿ ಭಕ್ತಿಶ್ರದ್ಧೆಗಳಿಂದೊಡಗೂಡಿ ದಾಮೋದರನನ್ನು ಪೂಜಿಸಿ ಯಾವನು ಸೂಪ (ತೊವ್ವೆ) ನೈವೇದ್ಯವನ್ನು ಅರ್ಪಿಸುವುದಿಲ್ಲವೊ ಆ ನರಾಧಮನಿಗೆ ನರಕದಲ್ಲಿ ಖಂಡಿತವಾಗಿಯೂ ವಾಸವುಂಟಾಗುವುದೆಂದು ಕೇಳಿದ್ದೇವೆ.

೪೮–೪೯. ಎಲೈ ಬ್ರಾಹ್ಮಣನೇ! ಆದ್ದರಿಂದ, ಶುಭವಾದ ಕಾರ್ತಿಕಮಾಸದಲ್ಲಿ ಭಕ್ತಿಯುಕ್ತನಾಗಿ ಸೂಪದ ನೈವೇದ್ಯವನ್ನು ನೀಡಬೇಕು. ಹಾಗಲ್ಲದಿದ್ದರೆ ನರಕಕ್ಕೆ ಹೋಗಬೇಕಾಗುತ್ತದೆ. ಯಾವನು ಆ ದ್ವಾದಶಿಯಲ್ಲಿ ದಂಪತಿಗಳಿಗೆ ಭೋಜನ ಮಾಡಿಸುತ್ತಾನೆಯೋ ಆ ನರನಿಗೆ ಫಲವು ಯಾವಾಗ ಕೊನೆಗಾಣುವುದೆಂಬುದನ್ನು ಹೇಳಲು ನನಗಂತೂ ಶಕ್ಯವಲ್ಲ.

ಧಾತ್ರೀಛಾಯಾಂ ಗತೋ ಯಸ್ತು ದ್ವಾದಶ್ಯಾಂ ಪೂಜಯೇದ್ಧರಿಂ ।
ತತ್ರೈವ ಭೋಜನಂ ಯಸ್ತು ಬ್ರಾಹ್ಮಣಾನಾಂ ತು ಕಾರಯೇತ್ ॥ ೫೦ ॥
ಸ್ವಯಂ ಚ ತತ್ರ ಭುಂಕ್ತೇ ಯಃ ಸೂಪಭಕ್ಷ್ಯಾದಿಕಂ ತಥಾ ।
ನ ತಸ್ಯ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೫೧ ॥
ಏವಂ ಪ್ರಾತರ್ವಿಧಾಯಾಥ ಪೂಜಾಂ ದಾಮೋದರಸ್ಯ ಹಿ ।
ರಾತ್ರೌ ಪುನಃ ಪ್ರಕರ್ತವ್ಯಂ ಪೂಜಾಕರ್ಮ ಹರೇರ್ದ್ವಿಜ ॥ ೫೨ ॥
ತುಲಸೀಸನ್ನಿಧೌ ಕೃತ್ವಾ ಪತಾಕಾಧ್ವಜಶೋಭಿತಂ ।
ಪುಷ್ಪಮಾಲಾಸಮಾಕೀರ್ಣಂ ನಾನಾರತ್ನೋಪಶೋಭಿತಂ ॥ ೫೩ ॥
ಮುಕ್ತಾದಾಮಭಿರಾಚ್ಛನ್ನಂ ಕೃತ್ವಾ ಮಂಡಪಮುತ್ತಮಂ ।
ಪೂಜಯೇದ್ವಿಷ್ಣುಮವ್ಯಗ್ರಃ ತದ್ಗತೈಕಾಗ್ರಮಾನಸಃ ॥ ೫೪ ॥
ಪಂಚರಾತ್ರೋಕ್ತಮಾರ್ಗೇಣ ಗಂಧಪುಷ್ಪಾಕ್ಷತಾದಿಭಿಃ ।
ನವನೀತಂ ದಧಿ ಕ್ಷೀರಂ ತಥೈವ ಚ ಘನಂ ಘೃತಂ ॥ ೫೫ ॥
ವಿವಿಧೈಃ ಖಾದ್ಯನೈವೇದ್ಯೈರ್ಜಲೇನ ಚ ಸುಗಂಧಿನಾ ।
ಯುಕ್ತಂ ನಿವೇದಯೇದ್ವಿಷ್ಣೋಸ್ತಾಂಬೂಲಂ ಸಲವಂಗಕಂ ॥ ೫೬ ॥

---

೫೦–೫೧. ಯಾವನು ನೆಲ್ಲಿಮರದ ನೆರಳಿಗೆ ಹೋಗಿ ದ್ವಾದಶಿಯಲ್ಲಿ ಹರಿಯನ್ನು ಪೂಜಿಸುತ್ತಾನೆಯೋ, ಅಲ್ಲಿಯೇ ಯಾವನು ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಾನೆಯೋ, ಹಾಗೆಯೇ ತಾನು ಕೂಡ ಅಲ್ಲಿಯೇ ಸೂಪಭಕ್ಷ್ಯಾದಿಗಳನ್ನು ಭೋಜನಮಾಡುತ್ತಾನೆಯೋ ಅವನಿಗೆ ನೂರಾರು ಕಲ್ಪಕೋಟಿಗಳು ರುಳಿದರೂ ಪುನರಾವೃತ್ತಿಯಿರುವುದಿಲ್ಲ.

೫೨. ಎಲೈ ದ್ವಿಜನೇ! ಹೀಗೆ ಬೆಳಿಗ್ಗೆ ದಾಮೋದರನಿಗೆ ಪೂಜೆಮಾಡಿ ರಾತ್ರಿಯಲ್ಲಿ ಮತ್ತೆ ಹರಿಗೆ ಪೂಜಾಕರ್ಮವನ್ನು ನೆರವೇರಿಸಬೇಕು.

೫೩. ತುಲಸಿಯ ಸನ್ನಿಧಿಯಲ್ಲಿ ಧ್ವಜಪತಾಕೆಗಳಿಂದ ಶೋಭಿತವಾಗಿಯೂ, ಹೂಮಾಲೆಗಳಿಂದ ತುಂಬಿದುದಾಗಿಯೂ, ನಾನಾ ರತ್ನಗಳಿಂದ ಶೋಭಿಸುವುದಾಗಿಯೂ, ಮುತ್ತಿನ ಸರಗಳಿಂದ ಮುಚ್ಚಲ್ಪಟ್ಟದ್ದಾಗಿಯೂ ಇರುವ ಉತ್ತಮವಾದ ಮಂಟಪವನ್ನು ನಿರ್ಮಿಸಿ ಮನಸ್ಸಿನಲ್ಲಿ ಯಾವ ಕಳವಳವನ್ನೂ ಇಟ್ಟುಕೊಳ್ಳದೆ ವಿಷ್ಣುವನ್ನೆ ನೆನೆಯುತ್ತ ಪೂಜಿಸಬೇಕು.

೫೪–೫೬. ಪಂಚರಾತ್ರಾಗಮದಲ್ಲಿ ಹೇಳಿರುವ ಪ್ರಕಾರವಾಗಿ ಗಂಧ ಪುಷ್ಪ ಅಕ್ಷತಾದಿಗಳಿಂದ ಪೂಜಿಸಿ, ಬೆಣ್ಣೆ, ಮೊಸರು, ಹಾಲು, ಗಟ್ಟಿಯಾದ ತುಪ್ಪ, ವಿಧವಿಧವಾದ ರುಚಿಯಾದ ನೈವೇದ್ಯಗಳು, ಸುಗಂಧಯುಕ್ತವಾದ ನೀರು, ಲವಂಗ ಸಮೇತವಾದ ತಾಂಬೂಲ— ಇವನ್ನೆಲ್ಲ ನೈವೇದ್ಯಮಾಡಿ ವಿಷ್ಣುವಿಗೆ ಅರ್ಪಿಸಬೇಕು.

ಪುಷ್ಪಾಣಿ ಚ ವಿಚಿತ್ರಾಣಿ ಸುಗಂಧೀನಿ ಬಹೂನಿ ಚ ।
ಪ್ರೋಕ್ಷಯಿತ್ವಾ ಚ ವಿಧಿವದರ್ಪಯಿತ್ವಾ ದಲೈಶ್ಶುಭೈಃ ॥ ೫೭ ॥
ತುಲಸ್ಯಾಶ್ಚಾಪಿ ಧಾತ್ರ್ಯಾಶ್ಚ ಫಲೈಶ್ಚಾಪಿ ಪ್ರಪೂಜಯೇತ್ ।
ನೀರಾಜನಂ ತತಃ ಕೃತ್ವಾ ಮಂತ್ರಪುಷ್ಪಂ ಸಮರ್ಪಯೇತ್ ॥ ೫೮ ॥
ಅಭಿಷೇಕಂ ವಿನಾ ಸರ್ವಪೂಜಾಂ ಕೃತ್ವಾ ವಿಧಾನತಃ ।
ವಿಷ್ಣೋಃ ಪೂಜಾಂ ಸಮಾಪ್ಯಾಥ ಬ್ರಾಹ್ಮಣಾನಾಂ ಪ್ರಪೂಜನಂ ॥ ೫೯ ॥
ಕುರ್ಯಾದ್ಭಕ್ತಿಯುತೋ ವಿಪ್ರ ದದ್ಯಾಚ್ಚೈವ ಫಲಾದಿಕಂ ।
ತಾಂಬೂಲಂ ಚ ತತೋ ದತ್ವಾ ದಕ್ಷಿಣಾಂ ಶಕ್ತಿತೋಽರ್ಪಯೇತ್॥೬೦॥
ತತೋ ವೃದ್ಧಾನ್ಪಿತೄನ್ಮಾತೄಃ ಪೂಜಯಿತ್ವಾ ವಿಧಾನತಃ ।
ತತಃ ಸ್ವಯಂ ಸಭಾರ್ಯಾಭಿರ್ನೈವೇದ್ಯಂ ಭಕ್ಷಯೇತ್ ಸುಧೀಃ ॥ ೬೧ ॥
ಇತ್ಯೇವಂ ತು ವಿಧಾನೇನ ಯಃ ಕುರ್ಯಾದ್ದ್ವಾದಶೀ ವ್ರತಂ ।
ನ ತಸ್ಯ ಲೋಕಾಃ ಕ್ಷೀಯಂತೇ ಕಲ್ಪಕೋಟಿಶತೈರಪಿ ॥ ೬೨ ॥
ಪುತ್ರಪೌತ್ರೈಃ ಪರಿವೃತೋ ಭುಕ್ತ್ವಾ ಭೋಗಾನ್ಮನೋಹರಾನ್ ।
ಭೋಗಾಂತೇ ಚ ವ್ರಜೇನ್ಮೋಕ್ಷಂ ಅತೀತಕುಲಸಪ್ತಕೈಃ ॥ ೬೩ ॥

---

೫೭–೫೮. ವಿಚಿತ್ರಗಳಾಗಿಯೂ ಸುಗಂಧಯುಕ್ತಗಳಾಗಿಯೂ ಇರುವ ಬಹು ಪುಷ್ಪಗಳನ್ನು ವಿಧಿಪ್ರಕಾರವಾಗಿ ಪ್ರೋಕ್ಷಣೆಮಾಡಿ ಅರ್ಪಿಸಬೇಕು. ಶುಭವಾದ ತುಲಸಿಯ ದಳಗಳಿಂದಲೂ ಧಾತ್ರೀ ಫಲಗಳಿಂದಲೂ ಪೂಜೆಮಾಡಬೇಕು. ಬಳಿಕ ನೀರಾಜನವನ್ನು ಮಾಡಿ ಮಂತ್ರಪುಷ್ಪವನ್ನು ಸಮರ್ಪಿಸಬೇಕು.

೫೯. ಅಭಿಷೇಕವೊಂದು ಹೊರತು ಉಳಿದ ಎಲ್ಲ ಪೂಜೆಯನ್ನೂ ವಿಧಾನಕ್ಕೆ ಸರಿಯಾಗಿ ನಡಸಿ ವಿಷ್ಣುವಿನ ಪೂಜೆಯನ್ನು ಸಮಾಪ್ತಿಮಾಡಿ ಬ್ರಾಹ್ಮಣರನ್ನು ಪೂಜಿಸಬೇಕು.

೬೦. ಎಲೈ ವಿಪ್ರನೇ! ಭಕ್ತಿಯುಕ್ತನಾಗಿ ಬ್ರಾಹ್ಮಣಪೂಜೆಯನ್ನು ಮಾಡಬೇಕು. ಅವರಿಗೆ ಫಲಾದಿಗಳನ್ನು ಕೊಡಬೇಕು. ಬಳಿಕ ತಾಂಬೂಲವನ್ನು ಕೊಟ್ಟು ತನ್ನ ಶಕ್ತಿಯಿರುವಷ್ಟು ದಕ್ಷಿಣೆಯನ್ನರ್ಪಿಸಬೇಕು.

೬೧. ಆಮೇಲೆ ವೃದ್ಧರಾದ ತಂದೆತಾಯಿಗಳನ್ನು ವಿಧಿಪ್ರಕಾರವಾಗಿ ಪೂಜೆಮಾಡಿ ಸದ್ಬುದ್ಧಿಯುಳ್ಳಾತನು ತಾನು ತನ್ನ ಹೆಂಡತಿಯೊಡನೆ ನೈವೇದ್ಯವನ್ನು ಭಕ್ಷಿಸಬೇಕು.

೬೨. ಈ ರೀತಿಯಾದ ವಿಧಾನದಿಂದ ದ್ವಾದಶೀವ್ರತವನ್ನು ಯಾವನು ನಡೆಸುತ್ತಾನೋ ಅವನಿಗೆ ನೂರಾರು ಕಲ್ಪಕೋಟಿಗಳಲ್ಲಿಯೂ ಪುಣ್ಯಲೋಕಗಳು ಕ್ಷೀಣಿಸುವುದಿಲ್ಲ.

೬೩. ಅವನು ಪುತ್ರಪೌತ್ರರಿಂದ ಪರಿವೃತನಾಗಿ ಮನೋಹರಗಳಾದ

ತಸ್ಮಾನ್ನಾರದ ಮಾಹಾತ್ಮ್ಯಂ ದ್ವಾದಶ್ಯಾಃ ಕಾರ್ತಿಕಸ್ಯ ಚ ।
ನ ಮಯಾ ಶಕ್ಯತೇ ವಕ್ತುಂ ಕಿಮನ್ಯೈರ್ಮನುಜೈರಪಿ ॥ ೬೪ ॥
ದ್ವಾದಶ್ಯಾ ಹ್ಯುತ್ತಮಂ ಪುಣ್ಯಂ ಮಾಹಾತ್ಮ್ಯಂ ಯಃ ಪಠೇನ್ನರಃ ।
ಶೃಣುಯಾದ್ವಾ ಮುನಿಶ್ರೇಷ್ಠ ಸ ಯಾತಿ ಪರಮಾಂ ಗತಿಂ ॥ ೬೫ ॥
ರಾಜರ್ಷಿರಂಬರೀಷೋಽಪಿ ಚಕಾರೈತದ್ವ್ರತಂ ಶುಭಂ ।
ಯಥಾವಿಧಿ ತಪೋನಿಷ್ಠಸ್ತೇನ ಮೋಕ್ಷಮವಾಪ್ತವಾನ್ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಪ್ರಬೋಧೋತ್ಸವ ದ್ವಾದಶೀ ತಿಥಿಕೃತ್ಯವರ್ಣನಂ"ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ಭೋಗಗಳನ್ನನುಭವಿಸಿ, ಆ ಭೋಗಗಳು ಮುಗಿದಮೇಲೆ ಹಿಂದಿನ ಏಳುತಲೆಯ ಪಿತೃಗಳೊಡನೆ ಮೋಕ್ಷವನ್ನೈದುತ್ತಾನೆ.

೬೪. ಎಲೈ ನಾರದಾ! ಆದ್ದರಿಂದ ಕಾರ್ತಿಕದ ದ್ವಾದಶಿಯ ಮಾಹಾತ್ಮ್ಯವನ್ನು ವಿವರಿಸುವುದಕ್ಕೆ ನನ್ನಿಂದ ಶಕ್ಯವಿಲ್ಲ. ಬೇರೆ ಸಾಧಾರಣ ಮನುಷ್ಯರಿಗೆ ಶಕ್ಯವಾದೀತೇ?

೬೫. ಎಲೈ ಮುನಿಶ್ರೇಷ್ಠಾ! ಉತ್ತಮವೂ ಪುಣ್ಯಕರವೂ ಆದ ದ್ವಾದಶಿಯ ಮಾಹಾತ್ಮ್ಯವನ್ನು ಯಾವ ನರನು ಪಠಿಸುವನೋ ಅಥವಾ ಕೇಳುತ್ತಾನೋ, ಅವನು ಪರಮಗತಿಯನ್ನೈದುತ್ತಾನೆ.

೬೬. ರಾಜರ್ಷಿಯೂ ತಪೋನಿಷ್ಠನೂ ಆದ ಅಂಬರೀಷನು ಕೂಡ ಶುಭವಾದ ಈ ವ್ರತವನ್ನು ಯಥಾವಿಧಿಯಾಗಿ ನೆರವೇರಿಸಿದನು. ಆದರಿಂದ ಅವನು ಮೋಕ್ಷವನ್ನು ಪಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಪ್ರಬೋಧೋತ್ಸವ ದ್ವಾದಶೀತಿಥಿಕೃತ್ಯವರ್ಣನ"ವೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಸ್ತ್ರಿಂಶೋಽಧ್ಯಾಯಃ

## ವ್ರತೋದ್ಯಾಪನ ವಿಧಿಕಥನಂ

ನಾರದ ಉವಾಚ :-

ವ್ರತಾನಾಮಪಿ ಸರ್ವೇಷಾಂ ಬ್ರಹ್ಮನ್ನುದ್ಯಾಪನಂ ಸ್ಮೃತಂ ।
ಅಭಾವೇ ತೂದ್ಯಾಪನಸ್ಯ ಫಲಂ ನೈವಾಪ್ನುಯಾತ್ಕ್ವಚಿತ್ ॥ ೧ ॥
ಕೃತವ್ರತಫಲಾಪ್ತ್ಯರ್ಥಂ ಕುರ್ಯಾದುದ್ಯಾಪನಂ ಬುಧಃ ।
ಅನ್ಯಥಾ ನಿಷ್ಫಲಂ ಯಾತಿ ಕೃತಂ ವ್ರತಮನುತ್ತಮಂ ॥ ೨ ॥
ಕಾರ್ತಿಕೇಽಪಿ ಕೃತಂ ದೇವ ವ್ರತಾನಾಮುತ್ತಮಂ ವ್ರತಂ ।
ನ ತಸ್ಯೋದ್ಯಾಪನಾಭಾವೇ ವ್ರತೋಕ್ತಫಲಮಾಪ್ನುಯಾತ್ ॥ ೩ ॥
ತಸ್ಮಾತ್ಕಾರ್ತಿಕಮಾಸಸ್ಯ ಚೋದ್ಯಾಪನ ವಿಧಿಂಪ್ರಭೋ ।
ವದ ಮೇ ಶಿಷ್ಯವರ್ಯಾಯ ಪ್ರಪನ್ನಾಯಾನುವರ್ತಿನೇ ॥ ೪ ॥

ಬ್ರಹ್ಮೋವಾಚ :—

ಅಥೋರ್ಜೋದ್ಯಾಪನಂ ವಕ್ಷ್ಯೇ ಸರ್ವಪಾಪಪ್ರಣಾಶನಂ ।
ತಚ್ಛೃಣುಷ್ವ ಮಹಾಭಕ್ತ್ಯಾ ಸವಿಧಾನಂ ಸಮಾಸತಃ ॥ ೫ ॥

---

## ಕನ್ನಡದ ಅನುವಾದ

### ವ್ರತೋದ್ಯಾಪನ ವಿಧಿವರ್ಣನವು

೧. ನಾರದನು ಹೇಳುತ್ತಾನೆ:—"ಎಲೈ ಬ್ರಹ್ಮದೇವನೇ! ಎಲ್ಲಾ ವ್ರತಗಳಿಗೂ ಉದ್ಯಾಪನೆಯುಂಟೆಂದೂ, ಉದ್ಯಾಪನೆ ಮಾಡದಿದ್ದಲ್ಲಿ ವ್ರತದ ಫಲವನ್ನೆಂದಿಗೂ ಪಡೆಯಲಾಗುವುದಿಲ್ಲವೆಂದೂ ಕೇಳಿದ್ದೇನೆ.

೨. ಪಂಡಿತನಾದವನು ಮಾಡಿದ ವ್ರತದ ಫಲವನ್ನು ಪಡೆಯುವುದಕ್ಕಾಗಿ ಉದ್ಯಾಪನೆಯನ್ನು ಮಾಡಬೇಕು. ಹಾಗಲ್ಲದಿದ್ದರೆ ಮಾಡಿದ ಉತ್ತಮ ವ್ರತವು ನಿಷ್ಫಲವಾಗುತ್ತದೆ.

೩. ದೇವಾ! ಕಾರ್ತಿಕಮಾಸದಲ್ಲಿಯೂ ಕೂಡ ವ್ರತಗಳಲ್ಲೆಲ್ಲ ಉತ್ತಮವಾದ ವ್ರತವನ್ನು ಮಾಡಿ ಅದಕ್ಕೆ ಉದ್ಯಾಪನೆಯನ್ನು ಮಾಡದೆಹೋದರೆ ವ್ರತದಲ್ಲಿ ಹೇಳಿರುವ ಫಲವನ್ನು ಪಡೆಯುವುದಿಲ್ಲ.

೪. ಎಲೈ ಪ್ರಭುವೇ! ಆದ್ದರಿಂದ ಶಿಷ್ಯವರ್ಯನೂ ಶರಣಾಗತನೂ ಅನುವರ್ತಿಯೂ ಆದ ನನಗೆ ಕಾರ್ತಿಕಮಾಸದ ಉದ್ಯಾಪನವಿಧಿಯನ್ನು ತಿಳಿಸು."

೫. ಬ್ರಹ್ಮನು ಹೇಳುತ್ತಾನೆ:—"ಇನ್ನು ಸರ್ವಪಾಪಗಳನ್ನೂ ಪರಿಹರಿಸುವ ಕಾರ್ತಿಕವ್ರತದ ಉದ್ಯಾಪನವಿಧಿಯನ್ನು ವಿಧಾನಪೂರ್ವಕವಾಗಿ ಎಲ್ಲವನ್ನೂ ಹೇಳುತ್ತೇನೆ. ಮಹಾಭಕ್ತಿಯಿಂದ ಅದನ್ನಾಲಿಸು.

ಊರ್ಜೇ ಶುಕ್ಲಚತುರ್ದಶ್ಯಾಂ ಕುರ್ಯಾದುದ್ಯಾಪನಂ ವ್ರತೀ ।
ವ್ರತಸಂಪೂರಣಾರ್ಥಾಯ ವಿಷ್ಣುಪ್ರೀತ್ಯರ್ಥಹೇತವೇ ॥ ೬ ॥
ತುಲಸ್ಯಾ ಉಪರಿಷ್ಟಾತ್ತು ಕುರ್ಯಾನ್ಮಂಡಪಿಕಾಂ ಶುಭಾಂ ।
ಕದಳೀಸ್ತಂಭಸಂಯುಕ್ತಾಂ ನಾನಾಧಾತುವಿಚಿತ್ರಿತಾಂ ॥ ೭ ॥
ದೀಪಮಾಲಾ ಚತುರ್ದಿಕ್ಷು ಕಾರ್ಯಾ ತತ್ರ ಸುಶೋಭನಾ ।
ಸುತೋರಣಾಶ್ಚತುರ್ದ್ವಾರಃ ಪುಷ್ಪಚಾಮರಶೋಭಿತಾಃ ॥ ೮ ॥
ದ್ವಾರೇಷು ದ್ವಾರಪಾಲಾಂಶ್ಚ ಪೂಜಯೇನ್ಮೃಣ್ಮಯಾನ್ ಪೃಥಕ್ ।
ಜಯಶ್ಚ ವಿಜಯಶ್ಚೈವ ಚಂಡಶ್ಚೈವ ಪ್ರಚಂಡಕಃ ॥ ೯ ॥
ನಂದಶ್ಚೈವ ಸುನಂದಶ್ಚ ಕುಮುದಃ ಕುಮುದಾಕ್ಷಕಃ ।
ಏತಾಂಶ್ಚತುರ್ಷು ದ್ವಾರೇಷು ಪೂಜಯೇದ್ಭಕ್ತಿಸಂಯುತಃ ॥ ೧೦ ॥
ತುಲಸೀಮೂಲದೇಶೇ ತು ಸರ್ವತೋಭದ್ರಸಂಜ್ಞಿತಂ ।
ಚತುರ್ಭಿರ್ವರ್ಣಕೈಸ್ಸಮ್ಯಕ್ಶೋಭಾಢ್ಯಂ ಸಮಲಂಕೃತಂ ॥ ೧೧ ॥
ತಸ್ಯೋಪರಿಷ್ಟಾತ್ಕಲಶಂ ಪೂರ್ಣರತ್ನಸಮನ್ವಿತಂ ।
ತತ್ರ ಸಂಪೂಜಯೇದ್ದೇವಂ ಶಂಖಚಕ್ರಗದಾಧರಂ ॥ ೧೨ ॥

---

೬. ವ್ರತಿಯಾದವನು ಕಾರ್ತಿಕಮಾಸದ ಶುಕ್ಲಚತುರ್ದಶಿಯಲ್ಲಿ ವ್ರತವು ಸಂಪೂರ್ಣವಾಗುವುದಕ್ಕೂ ವಿಷ್ಣುಪ್ರೀತಿಯುಂಟಾಗುವುದಕ್ಕೂ ಉದ್ಯಾಪನೆಯನ್ನು ಮಾಡಬೇಕು.

೭. ತುಲಸಿಯ ಮೇಲುಗಡೆಯಲ್ಲಿ ಬಾಳೆಯ ಕಂಬಗಳಿಂದ ಕೂಡಿ ನಾನಾ ಧಾತುಗಳಿಂದ ವಿಚಿತ್ರವಾಗಿಯೂ ಇರುವ ಶುಭ ಮಂಟಪವನ್ನು ನಿರ್ಮಿಸಬೇಕು.

೮. ಅಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಶೋಭನವಾದ ದೀಪಮಾಲೆಯನ್ನಿಡಬೇಕು. ನಾಲ್ಕು ಬಾಗಿಲುಗಳಲ್ಲಿಯೂ ಚೆನ್ನಾಗಿ ತೋರಣಕಟ್ಟಿರಬೇಕು. ಹೂವಿನ ಚಾಮರಗಳಿಂದ ಶೋಭಿತಮಾಡಬೇಕು.

೯–೧೦. ಬಾಗಿಲುಗಳಲ್ಲಿ ದ್ವಾರಪಾಲಕರನ್ನು ಬೇರೆಬೇರೆಯಾಗಿ ಮಣ್ಣಿನಿಂದ ಮಾಡಿಟ್ಟು ಪೂಜಿಸಬೇಕು. ಜಯ, ವಿಜಯ, ಚಂಡ, ಪ್ರಚಂಡ, ನಂದ, ಸುನಂದ, ಕುಮುದ, ಕುಮುದಾಕ್ಷ—ಇವರನ್ನು ನಾಲ್ಕು ಬಾಗಿಲುಗಳಲ್ಲಿಯೂ ಭಕ್ತಿಯಿಂದ ಪೂಜಿಸಬೇಕು.

೧೧. ತುಲಸಿಯ ಮೂಲಪ್ರದೇಶದಲ್ಲಿ ನಾಲ್ಕುವರ್ಣಗಳಿಂದ ಸರ್ವತೋಭದ್ರಮಂಡಲವನ್ನು ಚೆನ್ನಾಗಿ ಕಳೆಮಂಬಿರುವಂತೆ ನಿರ್ಮಿಸಿ ಅಲಂಕರಿಸಬೇಕು.

೧೨–೧೩. ಅದರಮೇಲೆ ಪೂರ್ಣರತ್ನಗಳಿಂದ ಕೂಡಿದ ಕಲಶವನ್ನಿಡಬೇಕು. ಅಲ್ಲಿ ಶಂಖಚಕ್ರಗದಾಧರನೂ, ರೇಷ್ಮೆಯ ಪೀತಾಂಬರವನ್ನು ಧರಿಸಿದವನೂ,

ಕೌಶೇಯಪೀತವಸನಂ ಲಕ್ಷ್ಮ್ಯಾ ಯುಕ್ತಂ ಪ್ರಪೂಜಯೇತ್ ।
ಇಂದ್ರಾದಿಲೋಕಪಾಲಾಂಶ್ಚ ಮಂಡಪೇ ಪೂಜಯೇದ್ವ್ರತೀ ॥ ೧೩ ॥
ತಸ್ಮಿನ್ನುಪವಸೇದ್ಭಕ್ತ್ಯಾ ಶಾಂತಃ ಪ್ರಣತಮಾನಸಃ ।
ರಾತ್ರೌ ಜಾಗರಣಂ ಕುರ್ಯಾತ್ ಗೀತವಾದ್ಯಾದಿಮಂಗಲೈಃ ॥ ೧೪ ॥
ಗೀತಂ ಕುರ್ವಂತಿ ಯೇ ಭಕ್ತ್ಯಾ ಜಾಗರೇ ಚಕ್ರಪಾಣಿನಃ ।
ಜನ್ಮಾಂತರಶತೋದ್ಭೂತೈಸ್ತೇ ಮುಕ್ತಾಃ ಪಾಪಸಂಚಯೈಃ ॥ ೧೫ ॥
ತತಸ್ತು ಪೂರ್ಣಿಮಾಯಾಂ ತು ಸಪತ್ನೀಕಾನ್ ದ್ವಿಜೋತ್ತಮಾನ್ ।
ತ್ರಿಂಶನ್ಮಿತಾನಥೈಕಂ ವಾ ಬ್ರಾಹ್ಮಣಾಂಶ್ಚ ನಿಮಂತ್ರಯೇತ್ ॥ ೧೬ ॥
ಪ್ರಾತಃಸ್ನಾನಂ ತತಃ ಕೃತ್ವಾ ದೇವಪೂಜಾಂ ತಥೈವ ಚ ।
ಸ್ಥಂಡಿಲಂ ಚ ತತಃ ಕೃತ್ವಾ ಸಮಾಧಾಯಾಗ್ನಿಮತ್ರ ಹಿ ॥ ೧೭ ॥
ಅತೋ ದೇವೇತಿ ಮಂತ್ರೇಣ ಜುಹುಯಾತ್ತಿಲಪಾಯಸಂ ।
ಪ್ರೀತ್ಯರ್ಥಂ ದೇವದೇವಸ್ಯ ದೇವಾನಾಂ ಚ ಪೃಥಕ್ಪೃಥಕ್ ॥ ೧೮ ॥
ಹೋಮಶೇಷಂ ಸಮಾಪ್ಯಾಥ ಬ್ರಾಹ್ಮಣಾನ್ಪೂಜ್ಯ ಭಕ್ತಿತಃ ।
ಬ್ರಾಹ್ಮಣೇಭ್ಯೋ ಯಥಾಶಕ್ತ್ಯಾ ಪ್ರದದ್ಯಾದ್ದಕ್ಷಿಣಾಂ ನರಃ ॥ ೧೯ ॥

---

ಲಕ್ಷ್ಮೀಸಮೇತನೂ ಆದ ದೇವನನ್ನು ಪೂಜಿಸಬೇಕು. ವ್ರತಿಯು ಇಂದ್ರಾದಿ ಲೋಕಪಾಲಕರನ್ನು ಕೂಡ ಮಂಟಪದಲ್ಲಿ ಪೂಜಿಸಬೇಕು.

೧೪. ಆ ದಿನ ಭಕ್ತಿಯಿಂದ ನಮ್ರವಾದ ಮನಸ್ಸುಳ್ಳವನಾಗಿ ಉಪವಾಸ ಮಾಡಬೇಕು. ರಾತ್ರಿಹೊತ್ತು ಗೀತವಾದ್ಯ ಮೊದಲಾದ ಮಂಗಳಗಳಿಂದ ಕೂಡಿ ಜಾಗರಣೆ ಮಾಡಬೇಕು.

೧೫. ಜಾಗರಣೆಯಲ್ಲಿ ಚಕ್ರಪಾಣಿಗಾಗಿ ಯಾರು ಗೀತವನ್ನು ಭಕ್ತಿಯಿಂದ ಹಾಡುತ್ತಾರೋ ಅವರು ನೂರಾರು ಜನ್ಮಾಂತರಗಳಲ್ಲಿ ಉದ್ಭವಿಸಿದ ಪಾಪ ಸಂಚಯಗಳಿಂದ ಮುಕ್ತರಾಗುತ್ತಾರೆ.

೧೬. ಬಳಿಕ ಪೌರ್ಣಮಿಯ ದಿನ ಪತ್ನೀಸಮೇತರಾದ ಮೂವತ್ತು ಮಂದಿ ಅಥವಾ ಒಬ್ಬ, ಬ್ರಾಹ್ಮಣೋತ್ತಮರನ್ನು (ಊಟಕ್ಕೆ) ಕರೆಯಬೇಕು.

೧೭. ಬಳಿಕ ಪ್ರಾತಃಸ್ನಾನವನ್ನೂ ದೇವಪೂಜೆಯನ್ನೂ ಮಾಡಿ ಆಮೇಲೆ ಸ್ಥಂಡಿಲವನ್ನು ಮಾಡಿ ಅಲ್ಲಿ ಅಗ್ನಿ ಸಂಧಾನ ಮಾಡಬೇಕು.

೧೮. 'ಅತೋ ದೇವಾ' ಎಂಬ ಮಂತ್ರದಿಂದ ತಿಲಪಾಯಸಗಳನ್ನು ದೇವ ದೇವನ ಪ್ರೀತಿಗಾಗಿಯೂ ದೇವತೆಗಳ ಪ್ರೀತ್ಯರ್ಥವಾಗಿಯೂ ಬೇರೆಬೇರೆಯಾಗಿ ಹೋಮ ಮಾಡಬೇಕು.

೧೯. ಹೋಮಶೇಷವನ್ನು ಸಮಾಪ್ತಿಮಾಡಿ ಭಕ್ತಿಯಿಂದ ಬ್ರಾಹ್ಮಣರನ್ನು ಪೂಜಿಸಿ, ಆ ಬ್ರಾಹ್ಮಣರಿಗೆ ಶಕ್ತ್ಯನುಸಾರ ದಕ್ಷಿಣೆಯನ್ನು ಕೊಡಬೇಕು.

ತತೋ ಗಾಂ ಕಪಿಲಾಂ ತತ್ರ ಪೂಜಯೇದ್ವಿಧಿವದ್ವ್ರತೀ ।
ಸವತ್ಸಾಂ ಗಾಂ ತಥಾ ದದ್ಯಾತ್ ವಿಪ್ರಾಯ ಚ ಕುಟುಂಬಿನೇ ॥ ೨೦ ॥
ಗುರುಂ ವ್ರತೋಪದೇಷ್ಟಾರಂ ವಸ್ತ್ರಾಲಂಕಾರಭೂಷಣೈಃ ।
ಸಪತ್ನೀಕಂ ಸಮಭ್ಯರ್ಚ್ಯ ತಾಂಶ್ಚ ವಿಪ್ರಾನ್ ಕ್ಷಮಾಪಯೇತ್ ॥ ೨೧ ॥
ಯುಷ್ಮತ್ಪ್ರಸಾದಾದ್ದೇವೇಶಃ ಪ್ರಸನ್ನೋಽಸ್ತು ಸದಾ ಮಮ ।
ವ್ರತಾದಸ್ಮಾಚ್ಚ ಯತ್ಪಾಪಂ ಸಪ್ತಜನ್ಮಕೃತಂ ಮಯಾ ॥ ೨೨ ॥
ತತ್ಸರ್ವಂ ನಾಶಮಾಯಾತು ಸ್ಥಿರಾ ಮೇ ಚಾಸ್ತು ಸಂತತಿಃ ।
ಮನೋರಥಾಸ್ತು ಸಫಲಾಸ್ಸಂತು ಭಕ್ತಿರ್ಹರೌ ಭವೇತ್ ॥ ೨೩ ॥
ಸತಾಂ ಸಮಾಗಮೋ ಭೂಯಾನ್ಮಮ ಜನ್ಮನಿ ಜನ್ಮನಿ ।
ಇತಿ ಕ್ಷಮಾಪ್ಯ ತಾನ್ವಿಪ್ರಾನ್ಪ್ರಸಾದ್ಯ ಚ ವಿಸರ್ಜಯೇತ್ ॥ ೨೪ ॥
ಪ್ರತಿಮಾಂ ತಾಂ ಗುರೋರ್ದದ್ಯಾತ್ಸವಸ್ತ್ರಾಂ ಮುನಿಪುಂಗವ ।
ತತಸ್ಸುಹೃದ್ಗುರುಯುತಸ್ಸ್ವಯಂ ಭುಂಜೀತ ಭಕ್ತಿಮಾನ್ ॥ ೨೫ ॥
ದ್ವಾದಶ್ಯಾಂ ಪ್ರತಿಬುದ್ಧೋಽಸೌ ತ್ರಯೋದಶ್ಯಾಂ ಯುತಸ್ಸುರೈಃ ।
ದೃಷ್ಟೋಽರ್ಚಿತಶ್ಚತುರ್ದಶ್ಯಾಂ ತಸ್ಮಾತ್ಪೂಜ್ಯಸ್ತಿಥಾವಿಹ ॥ ೨೬ ॥

---

೨೦–೨೧. ಬಳಿಕ ವ್ರತಿಯು ಕರುವಿನಿಂದ ಕೂಡಿದ ಕಪಿಲೆ (ಕರಿಯ) ಹಸುವನ್ನು ವಿಧಿವತ್ತಾಗಿ ಪೂಜಿಸಬೇಕು. ಆ ಗೋವನ್ನು ಕುಟುಂಬವಂತನಾದ ವಿಪ್ರನಿಗೆ ದಾನ ಕೊಡಬೇಕು. ವ್ರತೋಪದೇಶ ಮಾಡಿದ ಗುರುವನ್ನೂ ಅವನ ಪತ್ನಿಯನ್ನೂ ವಸ್ತ್ರಾಲಂಕಾರಭೂಷಣಗಳಿಂದ ಚೆನ್ನಾಗಿ ಪೂಜಿಸಿ ಆ ವಿಪ್ರರನ್ನು ಕ್ಷಮೆ ಕೇಳಿಕೊಳ್ಳಬೇಕು.

೨೨–೨೪. ನಿಮ್ಮ ಅನುಗ್ರಹದಿಂದ ದೇವೇಶನು ನನಗೆ ಸದಾ ಪ್ರಸನ್ನನಾಗಲಿ. ಹಿಂದಿನ ಏಳು ಜನ್ಮಗಳಿಂದಲೂ ನಾನು ಯಾವ ಪಾಪಗಳನ್ನು ಮಾಡಿರುವೆನೋ ಅವೆಲ್ಲ ಈ ವ್ರತದಿಂದ ನಾಶವಾಗಲಿ. ನನ್ನ ಸಂತತಿಯು ಸ್ಥಿರವಾಗಿರಲಿ. ನನ್ನ ಮನೋರಥಗಳು ಸಫಲಗಳಾಗಲಿ. ಹರಿಯಲ್ಲಿ ನನಗೆ ಭಕ್ತಿ ಉಂಟಾಗಲಿ. ನನಗೆ ಜನ್ಮಜನ್ಮದಲ್ಲಿಯೂ ಸತ್ಪುರುಷರ ಸಮಾಗಮವುಂಟಾಗಲಿ.'' ಹೀಗೆಂದು ಕ್ಷಮೆಯನ್ನು ಯಾಚಿಸಿ ಆ ವಿಪ್ರರನ್ನು ಪ್ರಸನ್ನಗೊಳಿಸಿ ಕಳಿಸಿಕೊಡಬೇಕು.

೨೫. ಮುನಿಶ್ರೇಷ್ಠಾ! ಆ ಪ್ರತಿಮೆಯನ್ನು ವಸ್ತ್ರ ಸಮೇತವಾಗಿ ಗುರುವಿಗೆ ಕೊಡಬೇಕು. ಆ ಬಳಿಕ ಸ್ನೇಹಿತರು ಮತ್ತು ಗುರುಗಳೊಡಗೂಡಿ ಭಕ್ತಿವಂತನಾಗಿ ತಾನೂ ಭೋಜನಮಾಡಬೇಕು.

೨೬. ಈ ಶ್ರೀಮನ್ನಾರಾಯಣನು ದ್ವಾದಶಿಯಲ್ಲಿ (ನಿದ್ದೆಯಿಂದ ಎದ್ದನು. ತ್ರಯೋದಶಿಯಲ್ಲಿ ದೇವತೆಗಳೊಡನೆ ಸೇರಿದನು. ಚತುರ್ದಶಿಯ

ಪೂಜಯೇದ್ದೇವದೇವೇಶಂ ಸೌವರ್ಣಂ ಗುರ್ವನುಜ್ಞಯಾ ।
ಪರಾತ್ರ ಪೌರ್ಣಮಾಸ್ಯಾಂ ತು ಯಾತ್ರಾ ಸ್ಯಾತ್ಪುಷ್ಕರಸ್ಯ ತು ॥ ೨೭ ॥
ವರಾನ್ ದತ್ವಾ ಯತೋ ವಿಷ್ಣುರ್ಮತ್ಸ್ಯರೂಪೋಽಭವತ್ತತಃ ।
ತಸ್ಯಾಂ ದತ್ತಂ ಹುತಂ ಜಪ್ತಂ ತದಕ್ಷಯ್ಯಫಲಂ ಭವೇತ್ ॥ ೨೮ ॥
ಕಾರ್ತಿಕೇ ಮಾಸಿ ಕರ್ತವ್ಯೋ ವಿಧಿರೇಷ ಹಿ ನಾರದ ।
ಏವಂ ಯಃ ಕುರುತೇ ಸಮ್ಯಕ್ಕಾರ್ತಿಕಸ್ಯ ವ್ರತಂ ನರಃ ॥ ೨೯ ॥
ಯತ್ಫಲಂ ತದವಾಪ್ನೋತಿ ವ್ರತಂ ಕೃತ್ವಾ ತು ಕಾರ್ತಿಕೇ ।
ತೇ ಧನ್ಯಾಸ್ತೇ ಸದಾ ಪೂಜ್ಯಾಸ್ತೇಷಾಂ ವೈ ಸಫಲೋದಯಃ ॥ ೩೦ ॥
ವಿಷ್ಣುಭಕ್ತಿರತಾ ಯೇ ಸ್ಯುಃ ಕಾರ್ತಿಕೇ ವ್ರತಚಾರಿಣಃ ।
ದೇಹಸ್ಥಿತಾನಿ ಪಾಪಾನಿ ವಿಲಯಂ ಯಾಂತಿ ತತ್ಕ್ಷಣಾತ್ ॥ ೩೧ ॥
ಕ್ವ ಯಾಮೋಽದ್ಯ ಭವತ್ಯೇಷ ಯದೂರ್ಜವ್ರತಕೃನ್ನರಃ ।
ಇತಿ ಸರ್ವಾಣಿ ಪಾಪಾನಿ ರಟಂತೀಹ ಪುನಃ ಪುನಃ ॥ ೩೨ ॥
ತಸ್ಮಾತ್ಕಾರ್ತಿಕಮಾಸಸ್ಯ ಸದೃಶಂ ನ ಹಿ ವಿದ್ಯತೇ ।
ಸರ್ವಪಾಪಸ್ಯ ದಹನೇ ಅಗ್ನೇಸ್ಸದೃಶ ಉಚ್ಯತೇ ॥ ೩೩ ॥

---

ದಿನ ದೃಷ್ಟಿ ಗೋಚರನಾಗಿ ಅರ್ಚಿಸಲ್ಪಟ್ಟನು. ಆದ್ದರಿಂದ ಈ ತಿಥಿಯಲ್ಲಿ ಅವನನ್ನು ಪೂಜಿಸಬೇಕು.

೨೭–೨೮. ಸುವರ್ಣಮೂರ್ತಿಯಾಗಿ ನಿರ್ಮಿಸಿದ ದೇವದೇವೇಶನನ್ನು ಗುರುಗಳ ಅನುಜ್ಞೆಯಿಂದ ಪೂಜೆ ಮಾಡಬೇಕು. ಪೂರ್ಣಿಮೆಯಲ್ಲಾದರೋ ಶ್ರೇಷ್ಠವಾದ ಪುಷ್ಕರದ ಯಾತ್ರೆಯನ್ನು ಮಾಡಬೇಕು. ಅಂದು ವಿಷ್ಣುವು ವರಗಳನ್ನು ಕೊಟ್ಟು ಬಳಿಕ ಮತ್ಸ್ಯರೂಪವನ್ನು ಧರಿಸಿದನು. ಆದ್ದರಿಂದ ಆ ದಿನ ಮಾಡಿದ ದಾನ, ಹೋಮ, ಜಪ—ಎಲ್ಲವೂ ಅಕ್ಷಯಫಲವುಳ್ಳದ್ದಾಗುವುದು.

೨೯–೩೧. ನಾರದಾ! ಕಾರ್ತಿಕಮಾಸದಲ್ಲಿ ನಡೆಸಬೇಕಾದ ವಿಧಿಯಿದು. ಈರೀತಿಯಾಗಿ ಯಾವ ನರನು ಕಾರ್ತಿಕವ್ರತವನ್ನು ಚೆನ್ನಾಗಿ ನೆರವೇರಿಸುವನೋ ಅವನು ಕಾರ್ತಿಕದಲ್ಲಿ ವ್ರತಮಾಡಿದ್ದರಿಂದ ಬರಬೇಕಾದ ಫಲವು ಯಾವುದೋ ಅದನ್ನು ಪಡೆಯುತ್ತಾನೆ. ಯಾರು ವಿಷ್ಣುಭಕ್ತಿಯಲ್ಲಿ ನಿರತರಾಗಿ ಕಾರ್ತಿಕದಲ್ಲಿ ವ್ರತಚಾರಿಗಳಾಗಿರುವರೋ ಅವರೇ ಧನ್ಯರು. ಅವರೇ ಸದಾ ಪೂಜ್ಯರು. ಅವರ ಜನ್ಮವೀಗ ಸಫಲವಾಯಿತೆನ್ನಬಹುದು. ಅವರ ದೇಹದಲ್ಲಿ ನೆಲಸಿದ್ದ ಪಾಪಗಳು ಆ ಕ್ಷಣವೇ ನಾಶವನ್ನೈದುತ್ತವೆ.

೩೨. 'ಇವನು ಕಾರ್ತಿಕವ್ರತಮಾಡಿದವನಾಗಿದ್ದಾನೆ. ಈಗ ನಾವೆಲ್ಲಿ ಹೋಗೋಣ?' ಎಂದು ಸರ್ವಪಾಪಗಳೂ ಮತ್ತೆಮತ್ತೆ ಕೂಗಿಕೊಳ್ಳುತ್ತವೆ.

೩೩. ಆದುದರಿಂದ ಕಾರ್ತಿಕಮಾಸಕ್ಕೆ ಸಮಾನವಾದುದು ಇಲ್ಲವೇ ಇಲ್ಲ.

ಊರ್ಜೋದ್ಯಾಪನಮಾಹಾತ್ಮ್ಯಂ ಶೃಣುಯಾಚ್ಛ್ರದ್ಧಯಾನ್ವಿತಃ ।
ಶ್ರಾವಯೇದ್ವಾ ಪುಮಾನ್ಯಸ್ತು ವಿಷ್ಣುಸಾಯುಜ್ಯಮಾಪ್ನುಯಾತ್॥ ೩೪ ॥

ನಾರದ ಉವಾಚ :—

ಊರ್ಜೇ ವ್ರತೋದ್ಯಾಪನಾದಾವಶಕ್ತಃ ಸಿದ್ಧಿಭಾಕ್ ಕಥಂ ।
ಕಥಂ ವಿಮುಚ್ಯತೇ ಜಂತುಃ ದುಃಖಸಂಸಾರಸಾಗರಾತ್ ॥ ೩೫ ॥

ಬ್ರಹ್ಮೋವಾಚ :—

ಶೃಣುಯಾದೂರ್ಜಮಾಹಾತ್ಮ್ಯಂ ನಿಯಮೇನ ಶುಚಿಃ ಪುಮಾನ್ ।
ಉದ್ಯಾಪನಫಲಂ ಪ್ರಾಪ್ಯ ವಿಷ್ಣುಲೋಕೇ ವಸೇಚ್ಚ ಸಃ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ವ್ರತೋದ್ಯಾಪನವಿಧಿ ಕಥನಂ" ನಾಮ ಚತುಸ್ತ್ರಿಂಶೋಽಧ್ಯಾಯಃ

---

ಇದು ಸರ್ವಪಾಪಗಳನ್ನು ದಹಿಸುವುದರಲ್ಲಿ ಅಗ್ನಿಗೆ ಸಮಾನವೆಂದು ಹೇಳಲ್ಪಡುತ್ತದೆ.

೩೪. ಯಾವ ಮನುಷ್ಯನು ಕಾರ್ತಿಕವ್ರತದ ಉದ್ಯಾಪನೆಯ ಮಾಹಾತ್ಮ್ಯವನ್ನು ಶ್ರದ್ಧೆಯಿಂದ ಕೇಳುತ್ತಾನೋ ಅಥವಾ ಕೇಳಿಸುತ್ತಾನೋ ಅವನು ವಿಷ್ಣುವಿನ ಸಾಯುಜ್ಯವನ್ನು ಪಡೆಯುತ್ತಾನೆ."

೩೫. ನಾರದನು ಕೇಳುತ್ತಾನೆ:—"ಕಾರ್ತಿಕದಲ್ಲಿ ವ್ರತೋದ್ಯಾಪನೆ ಮೊದಲಾದುವನ್ನು ಮಾಡಲು ಅಶಕ್ತನಾದವನು ಸಿದ್ಧಿಯನ್ನು ಪಡೆಯುವುದು ಹೇಗೆ? ಜಂತುವು ದುಃಖಪೂರ್ಣವಾದ ಸಂಸಾರಸಾಗರದಿಂದ ಬಿಡುಗಡೆ ಹೊಂದುವುದು ಹೇಗೆ?"

೩೬. ಬ್ರಹ್ಮನು ಹೇಳುತ್ತಾನೆ:—"ಯಾವ ಮನುಷ್ಯನು ಶುಚಿಯಾಗಿ ನಿಯಮದಿಂದ ಕಾರ್ತಿಕಮಾಹಾತ್ಮ್ಯವನ್ನು ಕೇಳುವನೋ ಅವನು ಉದ್ಯಾಪನೆಯ ಫಲವನ್ನು ಪಡೆದು ವಿಷ್ಣುಲೋಕದಲ್ಲಿ ವಾಸಮಾಡುತ್ತಾನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯೆ "ವ್ರತೋದ್ಯಾಪನವಿಧಿಕಥನ"ವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದು

॥ ಶ್ರೀಃ ॥

## ಅಥ ಪಂಚತ್ರಿಂಶೋಽಧ್ಯಾಯಃ

### ವೈಕುಂಠಚತುರ್ದಶೀ ತ್ರಿಪುರೀಪೂರ್ಣಿಮಾವ್ರತವಿಧಾನಕಥನಂ

ಬ್ರಹ್ಮೋವಾಚ :—

**ವೈಕುಂಠಾಖ್ಯಚತುರ್ದಶ್ಯಾ ಮಾಹಾತ್ಮ್ಯಂ ತೇ ವದಾಮ್ಯಹಂ ।**
**ವಾಲಖಿಲ್ಯೈಃ ಪುರಾ ಪ್ರೋಕ್ತಂ ಸಂಕ್ಷೇಪೇಣ ಶ್ರುಣುಷ್ವ ತತ್ ॥ ೧ ॥**

ವಾಲಖಿಲ್ಯಾ ಊಚುಃ :—

**ಕಾರ್ತಿಕಸ್ಯ ಸಿತೇ ಪಕ್ಷೇ ಚತುರ್ದಶ್ಯಾಂ ಸಮಾಗಮತ್ ।**
**ವೈಕುಂಠೇಶಸ್ತು ವೈಕುಂಠಾದ್ವಾರಾಣಸ್ಯಾಂ ಕೃತೇ ಯುಗೇ ॥ ೨ ॥**
**ರಾತ್ರ್ಯಾಂ ತುರ್ಯಾಂಶಶೇಷಾಯಾಂ ಸ್ನಾತ್ವಾಸೌ ಮಣಿಕರ್ಣಿಕೇ ।**
**ಗೃಹೀತ್ವಾ ಹೇಮಪದ್ಮಾನಾಂ ಸಹಸ್ರಂ ವೈ ತತೋಽವ್ರಜತ್ ॥ ೩ ॥**
**ಅತಿಭಕ್ತ್ಯಾ ಪೂಜಯಿತುಂ ಶಿವಯಾ ಸಹಿತಂ ಶಿವಂ ।**
**ವಿಧಾಯ ಪೂಜಾಂ ವಿಶ್ವೇಶೀಂ ತತಃ ಪದ್ಮೈರಪೂಜಯತ್ ॥ ೪ ॥**
**ಸಹಸ್ರಸಂಖ್ಯಾಂ ಕೃತ್ವಾದಾವೇಕನಾಮ್ನಾ ತತಃ ಪರಂ ।**
**ಆರಬ್ಧಂ ಪೂಜನಂ ತೇನ ಶಿವಸ್ತದ್ಭಕ್ತಿಮೈಕ್ಷತ ॥ ೫ ॥**

---

### ಕನ್ನಡದ ಅನುವಾದ

#### ವೈಕುಂಠಚತುರ್ದಶೀ ತ್ರಿಪುರೀಪೂರ್ಣಿಮಾವ್ರತವಿಧಾನವರ್ಣನವು

೧. ಬ್ರಹ್ಮನು ಹೇಳುತ್ತಾನೆ:—ವೈಕುಂಠವೆಂಬ ಹೆಸರುಳ್ಳ ಚತುರ್ದಶಿಯ ಮಾಹಾತ್ಮ್ಯವನ್ನು ನಿನಗೆ ಹೇಳುತ್ತೇನೆ. ಅದು ಪೂರ್ವದಲ್ಲಿ ವಾಲಖಿಲ್ಯರಿಂದ ಸಂಕ್ಷೇಪವಾಗಿ ಹೇಳಲ್ಪಟ್ಟಿದೆ. ಅದನ್ನು ಕೇಳು.

೨. ವಾಲಖಿಲ್ಯರು ಹೇಳುತ್ತಾರೆ:— ಕೃತಯುಗದಲ್ಲಿ ಕಾರ್ತಿಕಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ ವೈಕುಂಠೇಶನು ವೈಕುಂಠದಿಂದ ವಾರಾಣಸಿಗೆ ಬಂದನು.

೩. ರಾತ್ರಿಯಲ್ಲಿ ನಾಲ್ಕನೆಯ ಭಾಗ ಉಳಿದಿರುವಾಗ ಅವನು ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ಸಾವಿರ ಹೇಮ (ಚಿನ್ನದ) ಪದ್ಮಗಳನ್ನು ತೆಗೆದುಕೊಂಡು ಅಲ್ಲಿಂದ ಹೊರಟನು.

೪–೫. ಪಾರ್ವತಿಯಿಂದ ಸಮೇತನಾದ ಶಿವನನ್ನು ಮಹಾಭಕ್ತಿಯಿಂದ ಪೂಜಿಸುವುದಕ್ಕಾಗಿ ಹೋದನು. ವಿಶ್ವೇಶನಿಗೆ ಪೂಜೆಮಾಡಿ ಬಳಿಕ ಪದ್ಮಗಳಿಂದ ಅರ್ಚಿಸಿದನು. ಮೊದಲು ಸಹಸ್ರಸಂಖ್ಯೆಯಷ್ಟು ಹೂವುಗಳನ್ನು ಎಣಿಸಿಟ್ಟು ಆ ಬಳಿಕ ಒಂದೊಂದು ನಾಮಕ್ಕೆ ಒಂದೊಂದರಂತೆ ಪೂಜೆಮಾಡತೊಡಗಿದನು. ಶಿವನು ಅವನ ಭಕ್ತಿಯನ್ನು ಕಂಡನು.

ಏಕಂ ಪದ್ಮಂ ಪದ್ಮಮಧ್ಯಾನ್ನಿಲೀಯಾತ್ತಂ ಹರೇಣ ತು ।
ತತಃ ಪೂಜಿತವಾನ್ವಿಷ್ಣುರೇಕೋನಂ ಕಮಲಂ ತ್ವಭೂತ್ ॥ ೬ ॥
ಇತಸ್ತತಸ್ತೇನದೃಷ್ಟಂ ಪದ್ಮಂ ತಿಷ್ಠತಿ ನ ಕ್ವಚಿತ್ ।
ಕಮಲೇಷು ಭ್ರಮೋ ಜಾತೋಽಥವಾ ನಾಮಸು ಮೇ ಭ್ರಮಃ ॥ ೭ ॥
ಕ್ಷಣಂ ವಿಚಾರ್ಯ ಸ ಹರಿರ್ನ ಮೇ ನಾಮಭ್ರಮೋಽಭವತ್ ।
ಪದ್ಮೇ ಚೈವ ಭ್ರಮೋ ಜಾತೋ ವಿಚಾರ್ಯೈವಂ ಪುನಃ ಪುನಃ ॥ ೮ ॥
ಸಹಸ್ರಪದ್ಮಸಂಕಲ್ಪಃ ಪೂಜಾರ್ಥಂ ತು ಕೃತೋ ಮಯಾ ।
ಅರ್ಚ್ಯಃ ಕಥಂ ಮಹಾದೇವ ಏಕೋನಕಮಲೈರ್ಮಯಾ ॥ ೯ ॥
ಯದ್ಯಾನೇತುಂ ಗಮಿಷ್ಯಾಮಿ ಭಂಗಃ ಸ್ಯಾದಾಸನಸ್ಯ ತು ।
ಅತಃ ಪರಂ ಕಿಂ ವಿಧೇಯಂ ಚಿಂತೋದ್ವಿಗ್ನೋ ಹರಿಸ್ತದಾ ॥ ೧೦ ॥
ಏಕಃ ಪ್ರಕಾರ ಉತ್ಪನ್ನೋ ಹೃದಯೇಽಸ್ಯ ಮುನೀಶ್ವರಾಃ ।
ಪುಂಡರೀಕಾಕ್ಷ ಇತ್ಯೇವಂ ಮಾಂ ವದಂತಿ ಮುನೀಶ್ವರಾಃ ॥ ೧೧ ॥
ನೇತ್ರಂ ಮೇ ಪದ್ಮಸದೃಶಂ ಪದ್ಮಾರ್ಥೇ ತ್ವರ್ಪಯಾಮ್ಯಹಂ ।
ಇತಿ ನಿಶ್ಚಿತ್ಯ ಮನಸಾ ದತ್ವಾ ತರ್ಜನಿಕಾಂ ಸ ತು ॥ ೧೨ ॥

---

೬. ಹರನು ಆ ಪದ್ಮಗಳಲ್ಲಿ ಒಂದು ಪದ್ಮವನ್ನು ಮುಚ್ಚಿಟ್ಟನು. ಆಮೇಲೆ ವಿಷ್ಣುವು ಪೂಜೆಮಾಡಿದನು. ಕಮಲಗಳು ಸಾವಿರಕ್ಕೊಂದು ಸಾಲದಂತಾಯಿತು.

೭. ವಿಷ್ಣುವು ಅತ್ತಿತ್ತನೋಡಿ ಹುಡುಕಿದನು. ಎಲ್ಲಿಯೂ ಆ ಪದ್ಮವಿರಲಿಲ್ಲ. 'ಪದ್ಮಸಂಖ್ಯೆಗಳಲ್ಲಿ ನನಗೆ ಭ್ರಮೆಯು ಬಂದಿತೋ? ಅಥವಾ ನಾಮಗಳಲ್ಲಿ ನನಗೆ ಭ್ರಮೆಯುಂಟಾಯಿತೋ?'

೮. ಎಂದು ಹರಿಯು ಒಂದು ಕ್ಷಣಕಾಲ ವಿಚಾರಮಾಡಿ 'ನನಗೆ ನಾಮಗಳಲ್ಲಿ ಭ್ರಮೆಯಿಲ್ಲ. ಪದ್ಮಗಳಲ್ಲೇ ಭ್ರಮೆಯಾಗಿರಬೇಕು' ಎಂದು ಮತ್ತೆ ಮತ್ತೆ ವಿಚಾರಮಾಡಿದನು.

೯–೧೦. ಸಹಸ್ರಪದ್ಮಗಳಿಂದ ಪೂಜಿಸುವೆನೆಂದು ಸಂಕಲ್ಪವನ್ನು ಮಾಡಿದೆ. ಈ ಒಂದು ಕಡಮೆಯಾಗಿರುವ ಕಮಲಗಳಿಂದ ಮಹಾದೇವನನ್ನು ಪೂಜಿಸುವುದು ಹೇಗೆ? ತರುವುದಕ್ಕೆ ಹೋಗುವೆನೆಂದರೆ, ಆಸನಕ್ಕೆ ಭಂಗವಾಗುತ್ತದೆ. ಆ ಮೇಲೆ ಏನುಮಾಡತಕ್ಕದ್ದು?—ಹೀಗೆಂದು ಚಿಂತೆಯಿಂದ ಉದ್ವಿಗ್ನನಾದನು.

೧೧. ಎಲೈ ಮುನೀಶ್ವರರೇ! ಆಗ ಅವನ ಮನಸ್ಸಿನಲ್ಲಿ ಒಂದು ಪ್ರಕಾರವಾಗಿ ಭಾವವುಂಟಾಯಿತು. 'ನನ್ನನ್ನು ಮುನೀಶ್ವರರು ಪುಂಡರೀಕಾಕ್ಷನೆನ್ನುತ್ತಾರೆ.

೧೨–೧೩. ಪದ್ಮಕ್ಕೆ ಸಮಾನವಾದ ನನ್ನ ನೇತ್ರವನ್ನು ಪದ್ಮಕ್ಕೆ ಬದಲಾಗಿ ಅರ್ಪಿಸುತ್ತೇನೆ.' ಇಂತೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು, ತರ್ಜನಿ

ನೇತ್ರಮುಧ್ಯಾತ್ತದುತ್ಪಾಟ್ಯ ಮಹಾದೇವಸ್ತು ಪೂಜಿತಃ ।
ತತೋ ಮಹೇಶ್ವರಸ್ತುಷ್ಟೋ ವಾಕ್ಯಮೇತದುವಾಚ ಹ ॥ ೧೩ ॥

ಮಹಾದೇವ ಉವಾಚ :—

ತ್ವತ್ಸಮೋ ನಾಸ್ತಿ ಮದ್ಭಕ್ತಸ್ತ್ರೈಲೋಕ್ಯೇ ಸಚರಾಚರೇ ।
ರಾಜ್ಯಂ ದತ್ತಂ ತ್ರಿಲೋಕ್ಯಾಸ್ತೇ ಭವ ತ್ವಂ ಲೋಕಪಾಲಕಃ ॥ ೧೪ ॥
ಅನ್ಯಂ ವರಯ ಭದ್ರಂ ತೇ ವರಂ ಯನ್ಮನಸೇಪ್ಸಿತಂ ।
ಅವಶ್ಯಮೇವ ದಾಸ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥ ೧೫ ॥
ಮದ್ಭಕ್ತಿಂ ತು ಸಮಾಲಂಬ್ಯ ಯೇ ದ್ವಿಷಂತಿ ಜನಾರ್ದನಂ ।
ತೇ ಮದ್ದ್ವೇಷ್ಯಾ ನರಾ ವಿಷ್ಣೋ ವ್ರಜೇಯುರ್ನರಕಂ ಧ್ರುವಂ ॥ ೧೬ ॥

ವಿಷ್ಣುರುವಾಚ :—

ತ್ರೈಲೋಕ್ಯರಕ್ಷಾಕರಣಂ ಮಮಾದಿಷ್ಟಂ ಮಹೇಶ್ವರ ।
ದುರ್ಮದಾಶ್ಚ ಮಹಾಸತ್ವಾ ದೈತ್ಯಾ ಮಾರ್ಯಾಃ ಕಥಂ ಮಯಾ ॥ ೧೭ ॥

ಶಿವ ಉವಾಚ :—

ಏತತ್ಸುದರ್ಶನಂ ಚಕ್ರಂ ಮಹಾದೈತ್ಯನಿಕೃಂತನಂ ।
ಗೃಹಾಣ ಭಗವನ್ವಿಷ್ಣೋ ಮಯಾ ತುಭ್ಯಂ ನಿವೇದಿತಂ ॥ ೧೮ ॥

---

ಯನ್ನು (ತೋರುಬೆರಳನ್ನು) ನೀಡಿ ನೇತ್ರಮಧ್ಯದಿಂದ ಅದನ್ನು ಕಿತ್ತು ಅರ್ಪಿಸಿ ಮಹಾದೇವನನ್ನು ಪೂಜಿಸಿದನು. ಆಗ ಮಹೇಶ್ವರನು ಸಂತುಷ್ಟನಾಗಿ ಈ ಮಾತನ್ನು ಹೇಳಿದನು :—

೧೪. ಮಹಾದೇವನು ಹೇಳುತ್ತಾನೆ :— "ಚರಾಚರಗಳಿಂದೊಡಗೂಡಿದ ಮೂರು ಲೋಕಗಳಲ್ಲಿಯೂ ನಿನ್ನ ಸಮನಾದ ಭಕ್ತನಾವನೂ ಇರುವುದಿಲ್ಲ. ಮೂರು ಲೋಕದ ರಾಜ್ಯವನ್ನೂ ನಿನಗೆ ಕೊಟ್ಟಿದೆ. ನೀನು ಲೋಕಪಾಲಕನಾಗು.

೧೫–೧೬. ನಿನ್ನ ಮನಸ್ಸಿಗೆ ಬೇಕಾಗಿರುವ ಬೇರೊಂದು ವರವನ್ನು ಬೇಡು. ನಿನಗೆ ಮಂಗಳವಾಗಲಿ. ಅವಶ್ಯವಾಗಿ ಅದನ್ನು ಕೊಡುತ್ತೇನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲವು. ಎಲೈ ವಿಷ್ಣುವೇ! ನನ್ನ ಭಕ್ತಿಯನ್ನವಲಂಬಿಸಿ ಯಾರು ಜನಾರ್ದನನನ್ನು ದ್ವೇಷಿಸುತ್ತಾರೆಯೋ ಆ ನರರು ನನಗೂ ದ್ವೇಷಿಗಳು. ಅವರು ಶಾಶ್ವತವಾದ ನರಕವನ್ನೈದುತ್ತಾರೆ."

೧೭. ವಿಷ್ಣುವು ಕೇಳುತ್ತಾನೆ:—"ಮಹೇಶ್ವರಾ! ಮೂರು ಲೋಕಗಳನ್ನೂ ರಕ್ಷಣೆಮಾಡುವ ಕೆಲಸವನ್ನು ನನಗೆ ಹೇಳಿದೆ. ದುರ್ಮದರಾಗಿಯೂ, ಮಹಾ ಬಲಶಾಲಿಗಳಾಗಿಯೂ ಇರುವ ದೈತ್ಯರನ್ನು ನಾನು ಹೇಗೆತಾನೆ ಕೊಲ್ಲಲಿ?" ಎಂದು ಕೇಳಿದನು.

೧೮. ಶಿವನು ಹೇಳುತ್ತಾನೆ:—"ಭೋ ಭಗವನ್! ಮಹಾ ದೈತ್ಯರನ್ನು ಕತ್ತರಿಸಿಹಾಕುವ ಈ ಸುದರ್ಶನಚಕ್ರವನ್ನು ತೆಗೆದುಕೋ. ಎಲೈ ವಿಷ್ಣುವೆ! ಇದನ್ನು ನಿನಗೆ ನಾನು ಕೊಡುತ್ತೇನೆ.

ಅನೇನ ಸರ್ವದೈತ್ಯಾನಾಂ ಭಗವನ್ ಕದನಂ ಕುರು ।
ಏವಂ ಚಕ್ರಂ ಹರೇರ್ದತ್ತ್ವಾ ತತೋ ವಚನಮಬ್ರವೀತ್ ॥ ೧೯ ॥
ಶಿವ ಉವಾಚ:—
ವರ್ಷೇ ಚ ಹೇಮಲಂಬಾಖ್ಯೇ ಮಾಸೇ ಶ್ರೀಮತಿ ಕಾರ್ತಿಕೇ ।
ಶುಕ್ಲಪಕ್ಷೇ ಚತುರ್ದಶ್ಯಾಮರುಣಾಭ್ಯುದಯಂ ಪ್ರತಿ ॥ ೨೦ ॥
ಮಹಾದೇವತಿಥೌ ಬ್ರಾಹ್ಮೇ ಮುಹೂರ್ತೇ ಮಣಿಕರ್ಣಿಕೇ ।
ಸ್ನಾತ್ವಾ ವಿಶ್ವೇಶ್ವರಂ ಲಿಂಗಂ ವೈಕುಂಠಾದೇತ್ಯ ಪೂಜಿತಂ ॥ ೨೧ ॥
ಸಹಸ್ರಕಮಲೈಸ್ತಸ್ಮಾತ್ ಭವಿಷ್ಯತಿ ಮಮ ಪ್ರಿಯಾ ।
ವಿಖ್ಯಾತಾ ಸರ್ವಲೋಕೇಷು ವೈಕುಂಠಾಖ್ಯಾ ಚತುರ್ದಶೀ ॥ ೨೨ ॥
ಅನ್ಯಂ ವರಂ ಪ್ರಯಾಚ್ಛಾಮಿ ಶೃಣು ವಿಷ್ಣೋ ವಚೋ ಮಮ ।
ಪೂರ್ವರಾತ್ರೇಷು ತೇ ಪೂಜಾ ಕರ್ತವ್ಯಾ ಸರ್ವಜಾತಿಭಿಃ ॥ ೨೩ ॥
ಉಪವಾಸಂ ದಿವಾ ಕುರ್ಯಾತ್ಸಾಯಂಕಾಲೇ ತವಾರ್ಚನಂ ।
ಪಶ್ಚಾನ್ಮಮಾರ್ಚನಂ ಕಾರ್ಯಮನ್ಯಥಾ ನಿಷ್ಫಲಂ ಭವೇತ್ ॥ ೨೪ ॥
ಗ್ರಾಹ್ಯಾ ತು ಹರಿಪೂಜಾಯಾಂ ರಾತ್ರಿವ್ಯಾಪ್ತಾ ಚತುರ್ದಶೀ ।
ಅರುಣೋದಯವೇಲಾಯಾಂ ಶಿವಪೂಜಾಂ ಸಮಾಚರೇತ್ ॥ ೨೫ ॥

---

೧೯. ಭಗವನ್! ಇದರಿಂದ ಸರ್ವದೈತ್ಯರೊಡನೆಯೂ ಕದನಮಾಡು"— ಹೀಗೆಂದು ಹರಿಗೆ ಚಕ್ರವನ್ನು ಕೊಟ್ಟು ಬಳಿಕ ಮತ್ತಿಂತೆಂದನು:—

೨೦–೨೨. 'ಶಿವನು ಹೇಳುತ್ತಾನೆ:— "ಹೇಮಲಂಬವೆಂಬ ವರ್ಷದಲ್ಲಿ ಶ್ರೀಮತ್ ಕಾರ್ತಿಕಮಾಸದಲ್ಲಿ ಶುಕ್ಲಪಕ್ಷದ ಚತುರ್ದಶಿಯಲ್ಲಿ ಅರುಣೋದಯಕ್ಕೆ ಸರಿಯಾಗಿ ಈ ಮಹಾದೇವತಿಥಿಯ ಬ್ರಾಹ್ಮಮುಹೂರ್ತದಲ್ಲಿ ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ವಿಶ್ವೇಶ್ವರಲಿಂಗವನ್ನು ನೀನು ವೈಕುಂಠದಿಂದ ಬಂದು ಸಹಸ್ರಕಮಲಗಳಿಂದ ಪೂಜಿಸಿದೆ. ಆದುದರಿಂದ ಈ ತಿಥಿಯು ನನಗೆ ಪ್ರಿಯವಾಗಿರುತ್ತದೆ. ಸರ್ವ ಲೋಕಗಳಲ್ಲಿಯೂ ಇದು ವೈಕುಂಠಚತುರ್ದಶಿಯೆಂದು ಪ್ರಖ್ಯಾತವಾಗುತ್ತದೆ.

೨೩–೨೪. ಮತ್ತೊಂದು ವರವನ್ನು ಕೊಡುತ್ತೇನೆ. ಎಲೈ ವಿಷ್ಣುವೇ! ನನ್ನ ಮಾತನ್ನಾಲಿಸು. ಪೂರ್ವರಾತ್ರಿಗಳಲ್ಲಿ ಸರ್ವಜಾತಿಗಳೂ ನಿನ್ನ ಪೂಜೆಯನ್ನು ಮಾಡಬೇಕು. ಹಗಲು ಉಪವಾಸ ಮಾಡಬೇಕು. ಸಾಯಂಕಾಲದಲ್ಲಿ ನಿನ್ನ ಅರ್ಚನೆಯನ್ನು ಮಾಡಬೇಕು. ಆ ಬಳಿಕ ನನ್ನನ್ನು ಅರ್ಚಿಸಬೇಕು. ಹಾಗಲ್ಲದಿದ್ದರೆ ಪೂಜೆಯು ನಿಷ್ಫಲವಾಗುತ್ತದೆ.

೨೫. ಹರಿಪೂಜೆಯಲ್ಲಿ ರಾತ್ರಿಗೆ ವ್ಯಾಪಿಸಿರುವ ಚತುರ್ದಶಿಯನ್ನು ಗ್ರಹಿಸಬೇಕು. ಅರುಣೋದಯ ಸಮಯದಲ್ಲಿ ಶಿವಪೂಜೆಯನ್ನಾಚರಿಸಬೇಕು.

ಸಹಸ್ರಕಮಲೈರ್ವಿಷ್ಣುರಾದೌ ಯೈಃ ಪೂಜಿತೋ ನರೈಃ ।
ಪಶ್ಚಾಚ್ಛಿವಃ ಪೂಜಿತಶ್ಚೇತ್ ಜೀವನ್ಮುಕ್ತಾಸ್ತ ಏವ ಹಿ ॥ ೨೬ ॥
ಸಾಯಂ ಸ್ನಾತ್ವಾ ಪಂಚನದೇ ಬಿಂದುಮಾಧವಮರ್ಚಯೇತ್ ।
ಸ್ನಾತ್ವಾ ಯೋ ವಿಷ್ಣುಕಾಂಚ್ಯಾಂ ವಾಽನಂತಸೇನಂ ಸಮರ್ಚಯೇತ್ ॥
ರುದ್ರಕಾಂಚ್ಯಾಂ ತತಃ ಸ್ನಾತ್ವಾ ಪ್ರಣವೇಶಂ ಸಮರ್ಚಯೇತ್ ।
ಆದೌ ಸ್ನಾತ್ವಾ ವಹ್ನಿತೀರ್ಥೇ ಯಜೇನ್ನಾರಾಯಣಂ ತತಃ ॥ ೨೮ ॥
ರೇತೋದಕೇ ತತಃ ಸ್ನಾತ್ವಾ ಕೇದಾರೇಶಂ ಸಮರ್ಚಯೇತ್ ।
ಆದೌ ಸ್ನಾತ್ವಾ ಸೂರ್ಯಪುತ್ರ್ಯಾಂ ವೇಣೀಮಾಧವಮರ್ಚಯೇತ್ ॥೨೯॥
ಜಾಹ್ನವ್ಯಾಂ ಚ ತತಃ ಸ್ನಾತ್ವಾ ಸಂಗಮೇಶಂ ಪ್ರಪೂಜಯೇತ್ ।
ಸರ್ವಶ್ರಿಯಸ್ತಸ್ಯ ವಶ್ಯಾಃ ಸತ್ಯಂ ವಿಷ್ಣೋ ಮಯೋದಿತಂ ॥ ೩೦ ॥
ಏವಂ ತಸ್ಮೈ ವರಾನ್ ದತ್ವಾ ಹ್ಯಂತರ್ಧಾನಂ ಯಯೌ ಶಿವಃ ।
ತಸ್ಮಾತ್ಸರ್ವಪ್ರಯತ್ನೇನ ಪೂಜ್ಯೌ ಹರಿಹರಾವುಭೌ ॥ ೩೧ ॥
ಕಲೌ ದಶಸಹಸ್ರಾಣಿ ವಿಷ್ಣುಸ್ತ್ಯಜತಿ ಮೇದಿನೀಂ ।
ತದರ್ಧಂ ಜಾಹ್ನವೀತೋಯಂ ತದರ್ಧಂ ಗ್ರಾಮದೇವತಾಃ ॥ ೩೨ ॥

---

೨೬. ಯಾವ ನರರು ಸಹಸ್ರಕಮಲಗಳಿಂದ ಮೊದಲು ವಿಷ್ಣುವನ್ನು ಪೂಜಿಸಿ, ಆ ಬಳಿಕ ಶಿವನನ್ನೂ ಪೂಜಿಸುವರೋ ಅವರೇ ಜೀವನ್ಮುಕ್ತರು.

೨೭. ಸಾಯಂಕಾಲದಲ್ಲಿ ಪಂಚನದ ತೀರ್ಥದಲ್ಲಿ ಸ್ನಾನವನ್ನು ಮಾಡಿ ಬಿಂದುಮಾಧವನನ್ನು ಅರ್ಚಿಸಬೇಕು. ವಿಷ್ಣುಕಾಂಚಿಯಲ್ಲಿ ಸ್ನಾನಮಾಡಿ ಅನಂತಸೇನನನ್ನು ಅರ್ಚಿಸಬೇಕು.

೨೮. ಆ ಬಳಿಕ ರುದ್ರಕಾಂಚಿಯಲ್ಲಿ ಸ್ನಾನಮಾಡಿ ಪ್ರಣವೇಶನನ್ನು ಅರ್ಚಿಸಬೇಕು. ಮೊದಲು ವಹ್ನಿತೀರ್ಥದಲ್ಲಿ ಮಿಂದು ನಾರಾಯಣನನ್ನು ಪೂಜಿಸಬೇಕು.

೨೯. ಆಮೇಲೆ ರೇತೋದಕದಲ್ಲಿ ಸ್ನಾನಮಾಡಿ ಕೇದಾರೇಶ್ವರನನ್ನು ಅರ್ಚಿಸಬೇಕು. ಮೊದಲು ಯಮುನೆಯಲ್ಲಿ ಸ್ನಾನಮಾಡಿ ವೇಣೀಮಾಧವನನ್ನು ಪೂಜಿಸಬೇಕು.

೩೦. ಆ ಬಳಿಕ ಜಾಹ್ನವಿಯಲ್ಲಿ ಸ್ನಾನಮಾಡಿ ಸಂಗಮೇಶನನ್ನು ಪೂಜಿಸಬೇಕು. ಈ ರೀತಿ ಯಾವನು ಪೂಜೆಮಾಡುತ್ತಾನೋ ಅವನಿಗೆ ಸರ್ವಸಂಪತ್ತುಗಳೂ ವಶವಾಗುತ್ತವೆ. ಎಲೈ ವಿಷ್ಣುವೇ! ನಾನು ಹೇಳಿದುದು ಸತ್ಯವು.''

೩೧. ಹೀಗೆಂದು ಆ ವಿಷ್ಣುವಿಗೆ ವರಗಳನ್ನಿತ್ತು ಶಿವನು ಅಂತರ್ಧಾನ ಹೊಂದಿದನು. ಆದುದ್ದರಿಂದ ಸರ್ವಪ್ರಯತ್ನದಿಂದಲೂ ಹರಿಹರರಿಬ್ಬರನ್ನೂ ಪೂಜಿಸಬೇಕು.

೩೨. ಕಲಿಯುಗದಲ್ಲಿ ಹತ್ತುಸಾವಿರ ವರ್ಷಗಳ ಹೊತ್ತಿಗೆ ವಿಷ್ಣುವು ಭೂಮಿ

**ಕಾರ್ತಿಕ್ಯಾಂ ಪೂರ್ಣಿಮಾಯಾಂ ತು ಕುರ್ಯಾತ್ತ್ರೈಪುರಮುತ್ಸವಂ ।**
**ದೀಪೋ ದೇಯೋಽವಶ್ಯಮೇವ ಸಾಯಂಕಾಲೇ ಶಿವಾಲಯೇ ॥ ೩೩ ॥**
**ತ್ರಿಪುರೋ ನಾಮ ದೈತ್ಯೇಂದ್ರಃ ಪ್ರಯಾಗೇ ತಪ ಆಸ್ಥಿತಃ ।**
**ತಪಸಾ ತಸ್ಯ ಸಂತುಷ್ಟೋ ದದೌ ಬ್ರಹ್ಮಾ ವರಂ ಪರಂ ॥ ೩೪ ॥**
**ದೇವಾಸುರಮನುಷ್ಯೇಭ್ಯೋ ನ ತೇ ಮೃತ್ಯುರ್ಭವಿಷ್ಯತಿ ।**
**ಇತಿ ಲಬ್ಧವರೋ ದೈತ್ಯೋ ವಿಶ್ವಕರ್ಮವಿನಿರ್ಮಿತಂ ॥ ೩೫ ॥**
**ತ್ರಿಪುರಾಖ್ಯಂ ವಿಮಾನಂ ತಂ ಆರುಹ್ಯ ಭುವನತ್ರಯಂ ।**
**ಯದಾ ವೈ ಪೀಡಯಾಮಾಸ ತದಾ ದೇವೈಃ ಸ್ತುತೋ ಹರಃ ॥ ೩೬ ॥**
**ತ್ರಿಪುರಂ ಘಾತಯಾಮಾಸ ಬಾಣೇನೈಕೇನ ಶತ್ರುಹಾ ।**
**ಕಾರ್ತಿಕ್ಯಾಂ ಪೂರ್ಣಿಮಾಯಾಂ ತು ಸರ್ವೇ ದೇವಾ ಪ್ರತುಷ್ಟುವುಃ॥ ೩೭॥**
**ತಸ್ಮಿನ್ ದಿನೇ ಸರ್ವದೇವೈರ್ದೀಪಾ ದತ್ತಾ ಹರಾಯ ಚ ।**
**ಸರ್ವಥೈವ ಪ್ರದೇಯಾಶ್ಚ ದೀಪಾಸ್ತು ಹರತುಷ್ಟಯೇ ॥ ೩೮ ॥**

---

ಯನ್ನು ತ್ಯಜಿಸುತ್ತಾನೆ. ಅದರಲ್ಲಿ ಅರ್ಧದಷ್ಟು ಕಾಲದಲ್ಲಿ ಗಂಗೆಯ ಜಲವೂ ಅದರಲ್ಲರ್ಧದಷ್ಟು ಕಾಲದಲ್ಲಿ ಗ್ರಾಮದೇವತೆಗಳೂ ಭೂಮಿಯನ್ನು ತ್ಯಜಿಸುತ್ತವೆ.

೩೩. ಕಾರ್ತಿಕಮಾಸದ ಪೂರ್ಣಿಮೆಯಲ್ಲಿ ತ್ರೈಪುರೋತ್ಸವನ್ನು ಮಾಡಬೇಕು. ಸಾಯಂಕಾಲದಲ್ಲಿ ಶಿವಾಲಯದಲ್ಲಿ ಅವಶ್ಯವಾಗಿ ದೀಪವನ್ನು ಹೊತ್ತಿಸಬೇಕು.

೩೪. ತ್ರಿಪುರನೆಂಬ ದೈತ್ಯೇಂದ್ರನು ಪ್ರಯಾಗದಲ್ಲಿ ತಪಸ್ಸುಮಾಡುತ್ತಿದ್ದನು. ತಪಸ್ಸಿನಿಂದ ಸಂತುಷ್ಟನಾಗಿ ಬ್ರಹ್ಮನು ಅವನಿಗೆ ಶ್ರೇಷ್ಠವಾದ ವರವನ್ನು ನೀಡಿದನು.

೩೫–೩೬. 'ದೇವತೆಗಳು, ಅಸುರರು, ಮನುಷ್ಯರು — ಇವರುಗಳಿಂದ ನಿನಗೆ ಮರಣವುಂಟಾಗುವುದಿಲ್ಲ' ಎಂದು ವರವಿತ್ತನು. ಈ ರೀತಿ ವರವನ್ನು ಹೊಂದಿದ ಆ ದೈತ್ಯನು ವಿಶ್ವಕರ್ಮನಿಂದ ನಿರ್ಮಿತವಾದ ತ್ರಿಪುರವೆಂಬ ವಿಮಾನವನ್ನೇರಿ ಮೂರು ಲೋಕಗಳನ್ನೂ ಪೀಡಿಸತೊಡಗಿದನು. ಆಗ ದೇವತೆಗಳು ಹರನನ್ನು ಸ್ತುತಿಸಿದರು.

೩೭. ಶತ್ರುನಾಶಕನಾದ ಶಿವನು ಕಾರ್ತಿಕಮಾಸದ ಪೂರ್ಣಿಮೆಯ ದಿ ಒಂದೇ ಒಂದು ಬಾಣದಿಂದ ತ್ರಿಪುರನನ್ನು ಧ್ವಂಸಮಾಡಿದನು. ಸರ್ವದೇವಗಳೂ ಬಹುವಾಗಿ ಸ್ತುತಿಸಿದರು.

೩೮. ಆ ದಿನ ಸರ್ವದೇವತೆಗಳೂ ಹರನಿಗೆ ದೀಪಗಳನ್ನರ್ಪಿಸಿದರ ಹರನ ಸಂತುಷ್ಟಿಗಾಗಿ ಸರ್ವಪ್ರಕಾರದಿಂದಲೂ ದೀಪಗಳನ್ನು ಅರ್ಪಿಸಲೇಬೇಕ

ವಿಂಶತಿಸ್ಸಪ್ತಶತಕಾಃ ಸಹಿತಾ ದೀಪವರ್ತಯಃ ।
ದದದ್ದೀಪಂ ಪೌರ್ಣಿಮಾಯಾಂ ಸರ್ವಪಾಪೈಃ ಪ್ರಮುಚ್ಯತೇ ॥ ೩೯ ॥
ಪೌರ್ಣಿಮಾಸ್ಯಾಂ ತು ಸಂಧ್ಯಾಯಾಂ ಕರ್ತವ್ಯಸ್ತ್ರಿಪುರೋತ್ಸವಃ ।
ದದ್ಯಾದನೇನ ಮಂತ್ರೇಣ ಪ್ರದೀಪಾಂಶ್ಚ ಸುರಾಲಯೇ ॥ ೪೦ ॥
ಕೀಟಾಃ ಪತಂಗಾ ಮಶಕಾಶ್ಚ ವೃಕ್ಷಾ
ಜಲೇ ಸ್ಥಲೇ ಯೇ ವಿಚರಂತಿ ಜೀವಾಃ ।
ದೃಷ್ಟ್ವಾ ಪ್ರದೀಪಂ ನ ಚ ಜನ್ಮಭಾಗಿನೋ
ಭವಂತು ನಿತ್ಯಂ ಶ್ವಪಚಾ ಹಿ ವಿಪ್ರಾಃ ॥ ೪೧ ॥
ಕಾರ್ಯಸ್ತಸ್ಮಾತ್ಪೌರ್ಣಮಾಸ್ಯಾಂ ತ್ರಿಪುರಾಯ ಮಹೋತ್ಸವಃ ।
ಕಾರ್ತಿಕ್ಯಾಂ ಕೃತ್ತಿಕಾಯೋಗೇ ಯಃ ಕುರ್ಯಾತ್ಸ್ವಾಮಿದರ್ಶನಂ ॥ ೪೨ ॥
ಸಪ್ತಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ।
ಅತ್ರ ಕೃತ್ವಾ ವೃಷೋತ್ಸರ್ಗಂ ನಕ್ತಾಚ್ಛೈವಪುರಂ ವ್ರಜೇತ್ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ವೈಕುಂಠಚತುರ್ದಶೀ ತ್ರಿಪುರೀಪೂರ್ಣಿಮಾವ್ರತವಿಧಾನಕಥನಂ" ನಾಮ ಪಂಚತ್ರಿಂಶೋಽಧ್ಯಾಯಃ

---

೩೯. ಏಳುನೂರ ಇಪ್ಪತ್ತು ದೀಪದ ಬತ್ತಿಗಳಿಂದ ದೀಪ ಹಚ್ಚಿ ಪೂರ್ಣಿಮೆಯಲ್ಲಿ ದೀಪಗಳನ್ನರ್ಪಿಸಿದಲ್ಲಿ ಸರ್ವಪಾಪಗಳಿಂದಲೂ ಬಿಡುಗಡೆಯುಂಟಾಗುತ್ತದೆ.

೪೦. ಪೂರ್ಣಿಮೆಯ ದಿನ ಸಂಧ್ಯಾಕಾಲದಲ್ಲಿ ತ್ರಿಪುರೋತ್ಸವವನ್ನು ನಡೆಸಬೇಕು. ಈ ಮಂತ್ರದಿಂದ ದೇವಾಲಯದಲ್ಲಿ ದೀಪಗಳನ್ನರ್ಪಿಸಬೇಕು.

೪೧. "ಕೀಟಗಳೂ, ಪತಂಗಗಳೂ, ಮಶಕ (ಸೊಳ್ಳೆ)ಗಳೂ, ಮರಗಳೂ, ಜಲದಲ್ಲೂ ಸ್ಥಲದಲ್ಲೂ ಯಾವ ಜೀವಗಳು ಸಂಚರಿಸುತ್ತವೋ ಆ ಜೀವಗಳೂ, ಶ್ವಪಚರೂ, ವಿಪ್ರರೂ ಈ ಪ್ರದೀಪವನ್ನು ನೋಡಿ ಮುಂದೆ ಜನ್ಮಭಾಗಿಗಳಾಗದಿರಲಿ."

೪೨–೪೩. ಆದುದರಿಂದ ಪೂರ್ಣಿಮೆಯ ದಿನ ತ್ರಿಪುರನಿಗಾಗಿ ಮಹೋತ್ಸವ ಮಾಡಬೇಕು. ಕಾರ್ತಿಕದಲ್ಲಿ ಕೃತ್ತಿಕೆಯ ಯೋಗವಿರುವಾಗ ಯಾವನು ಸ್ವಾಮಿ ದರ್ಶನಮಾಡುತ್ತಾನೆಯೋ ಅವನು ಏಳುಜನ್ಮಗಳವರೆಗೂ ಧನಾಢ್ಯನೂ, ವೇದ ಪಾರಂಗತನೂ ಆದ ಬ್ರಾಹ್ಮಣನಾಗುತ್ತಾನೆ. ಇಲ್ಲಿ ವೃಷೋತ್ಸರ್ಗವನ್ನು ಮಾಡಿ ನಕ್ತವ್ರತಗಳಿಂದ ಶೈವಪುರಕ್ಕೆ ಹೋಗಿ ಸೇರುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಹಾತ್ಮ್ಯದಲ್ಲಿ "ವೈಕುಂಠಚತುರ್ದಶೀ ತ್ರಿಪುರೀಪೂರ್ಣಿಮಾವ್ರತವಿಧಾನಕಥನ"ವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ತ್ರಿಂಶೋಽಧ್ಯಾಯಃ

**ಪುಷ್ಕರಿಣೀಸಂಜ್ಞಕಾಂತಿಮತಿಥಿತ್ರಯಮಾಹಾತ್ಮ್ಯಕಥನಪೂರ್ವಕ ಪುರಾಣಶ್ರವಣ ಮಹಿಮಾವರ್ಣನಂ**

ಬ್ರಹ್ಮೋವಾಚ :—

ಯಾಸ್ತಿಸ್ರಸ್ತಿಥಯಃ ಪುಣ್ಯಾ ಅಂತಿಕೇ ಶುಕ್ಲಪಕ್ಷಕೇ ।
ಕಾರ್ತಿಕೇ ಮಾಸಿ ವಿಪ್ರೇಂದ್ರ ಪೂರ್ಣಿಮಾಂತಾಶ್ಶುಭಾವಹಾಃ ॥ ೧ ॥
ಅಂತಿಪುಷ್ಕರಿಣೀಸಂಜ್ಞಾ ಸರ್ವಪಾಪಕ್ಷಯಾವಹಾ ।
ಕಾರ್ತಿಕೇ ಮಾಸಿ ಸಂಪೂರ್ಣಂ ಯೋ ವೈ ಸ್ನಾನಂ ಕರೋತಿ ಹ ॥ ೨ ॥
ತಿಥಿಷ್ವೇತಾಸು ಸಃ ಸ್ನಾನಾತ್ಪೂರ್ಣಮೇವ ಫಲಂ ಲಭೇತ್ ।
ಸರ್ವೇ ವೇದಾಸ್ತ್ರಯೋದಶ್ಯಾಂ ಗತ್ವಾ ಜಂತೂನ್ಪುನಂತಿ ಹಿ ॥ ೩ ॥
ಚತುರ್ದಶ್ಯಾಂ ಸಯಜ್ಞಾಶ್ಚ ದೇವಾ ಜಂತೂನ್ಪುನಂತಿ ಹಿ ।
ಪೂರ್ಣಿಮಾಯಾಂ ಸುತೀರ್ಥಾನಿ ವಿಷ್ಣುನಾ ಸಂಸ್ಥಿತಾನಿ ಹಿ ॥ ೪ ॥
ಬ್ರಹ್ಮಘ್ನಾನ್ವಾ ಸುರಾಪಾನ್ವಾ ಸರ್ವಾನ್ಜಂತೂನ್ಪುನಂತಿ ಹಿ ।
ಉಷ್ಣೋದಕೇನ ಯಃ ಸ್ನಾಯಾತ್ಕಾರ್ತಿಕ್ಯಾದಿ ದಿನತ್ರಯೇ ॥ ೫ ॥

---

## ಕನ್ನಡದ ಅನುವಾದ

**ಪುಷ್ಕರಿಣೀ ಸಂಜ್ಞಕಾಂತಿಮತಿಥಿತ್ರಯಮಾಹಾತ್ಮ್ಯಕಥನಪೂರ್ವಕ ಪುರಾಣಶ್ರವಣ ಮಹಿಮಾವರ್ಣನ**

೧. ಬ್ರಹ್ಮನು ಹೇಳುತ್ತಾನೆ:—ಎಲೈ ವಿಪ್ರಶ್ರೇಷ್ಠನೇ! ಕಾರ್ತಿಕಮಾಸದ ಶುಕ್ಲಪಕ್ಷದ ಕೊನೆಯಲ್ಲಿ ಪೂರ್ಣಿಮೆಯವರೆಗಿನ ಯಾವ ಮೂರು ಪುಣ್ಯಕರಗಳಾದ ತಿಥಿಗಳಿರುವುವೋ ಅವು ಶುಭವನ್ನುಂಟುಮಾಡುವಂಥವು.

೨–೩. ಇವಕ್ಕೆ ಅಂತಿಪುಷ್ಕರಿಣಿಗಳೆಂದು ಹೆಸರು. ಇವು ಸರ್ವಪಾಪಗಳಿಗೂ ಕ್ಷಯವನ್ನುಂಟುಮಾಡುವುವು. ಕಾರ್ತಿಕಮಾಸದಲ್ಲಿ ತಿಂಗಳು ಪೂರ್ತಿಯಾಗಿ ಯಾವನು ಸ್ನಾನಮಾಡುತ್ತಾನೋ ಅವನು ಈ ತಿಥಿಗಳಲ್ಲಿ ಸ್ನಾನಮಾಡುವುದರಿಂದ ಪೂರ್ಣವಾಗಿ ಫಲವನ್ನು ಪಡೆಯುತ್ತಾನೆ. ಸರ್ವವೇದಗಳೂ ತ್ರಯೋದಶಿಯಲ್ಲಿ ಹೋಗಿ ನೆಲಸಿ ಜಂತುಗಳನ್ನು ಪುನೀತಮಾಡುತ್ತವೆ.

೪. ಚತುರ್ದಶಿಯಲ್ಲಿ ಯಜ್ಞಗಳಿಂದೊಡಗೂಡಿ ದೇವತೆಗಳು ಜಂತುಗಳನ್ನು ಪವಿತ್ರಗೊಳಿಸುತ್ತಾರೆ. ಪೂರ್ಣಿಮೆಯಲ್ಲಿ ವಿಷ್ಣುವಿನಿಂದೊಡಗೂಡಿ ಶ್ರೇಷ್ಠ ತೀರ್ಥಗಳು ನೆಲಸಿರುತ್ತವೆ.

೫–೬. ನೆಲಸಿ ಬ್ರಹ್ಮಹತ್ಯಮಾಡಿದವರನ್ನೇ ಆಗಲಿ, ಸುರಾಪಾಯಿಗಳನ್ನೇ ಆಗಲಿ, ಸರ್ವ ಜಂತುಗಳನ್ನೂ ಪುನೀತಮಾಡುತ್ತವೆ. ಯಾವನು ಕಾರ್ತಿಕ

ರೌರವಂ ನರಕಂ ಯಾತಿ ಯಾವದಿಂದ್ರಾಶ್ಚತುರ್ದಶ ।
ಅಮಾಸನಿಯಮಾಶಕ್ತಃ ಕುರ್ಯಾದೇತದ್ದಿನತ್ರಯೇ ॥ ೬ ॥
ತೇನ ಪೂರ್ಣಫಲಂ ಪ್ರಾಪ್ಯ ಮೋದತೇ ವಿಷ್ಣುಮಂದಿರೇ ।
ಯೋ ವೈ ದೇವಾನ್ಪಿತೄನ್ವಿಷ್ಣುಂ ಗುರುಮುದ್ದಿಶ್ಯ ಮಾನವಃ ॥ ೭ ॥
ನ ಸ್ನಾನಾದಿ ಕರೋತ್ಯದ್ಧಾ ಸ ಯಾತಿ ನರಕಂ ಧ್ರುವಂ ।
ಕುಟುಂಬಭೋಜನಂ ಯಸ್ತು ಗೃಹಸ್ಥಸ್ತು ದಿನತ್ರಯೇ ॥ ೮ ॥
ಸರ್ವಾನ್ಪಿತೄನ್ಸಮುದ್ಧೃತ್ಯ ಸ ಯಾತಿ ಪರಮಂ ಪದಂ ।
ಗೀತಾಪಾಠಂ ತು ಯಃ ಕುರ್ಯಾದಂತಿಮೇ ಚ ದಿನತ್ರಯೇ ॥ ೯ ॥
ದಿನೇ ದಿನೇಽಶ್ವಮೇಧಾನಾಂ ಫಲಮೇತಿ ನ ಸಂಶಯಃ ।
ಸಹಸ್ರನಾಮಪಠನಂ ಯಃ ಕುರ್ಯಾತ್ತು ದಿನತ್ರಯೇ ॥ ೧೦ ॥
ನ ಪಾಪೈರ್ಲಿಪ್ಯತೇ ಕ್ವಾಪಿ ಪದ್ಮಪತ್ರಮಿವಾಂಭಸಾ ।
ದೇವತ್ವಂ ಮನುಜೈಃ ಕೈಶ್ಚಿತ್ ಕೈಶ್ಚಿತ್ಸಿದ್ಧತ್ವಮೇವ ಚ ॥ ೧೧ ॥
ತಸ್ಯ ಪುಣ್ಯಫಲಂ ವಕ್ತುಂ ಕಃ ಶಕ್ನೋತಿ ದಿವಿ ವಾ ಭುವಿ ।
ಯೋ ವೈ ಭಾಗವತಂ ಶಾಸ್ತ್ರಂ ಶೃಣೋತಿ ಚ ದಿನತ್ರಯಂ ॥ ೧೨ ॥

---

ಮಾಸದ ಈ ಮೂರು ದಿನಗಳಲ್ಲಿ ಬಿಸಿನೀರಿನಲ್ಲಿ ಸ್ನಾನಮಾಡುತ್ತಾನೆಯೋ ಅವನು ಹದಿನಾಲ್ಕು ಮಂದಿ ಇಂದ್ರರು ಇರುವವರೆಗೂ ರೌರವ ನರಕಕ್ಕೆ ಹೋಗುತ್ತಾನೆ. ತಿಂಗಳೆಲ್ಲ ಪೂರ್ತಿಯಾಗಿ ನಿಯಮವನ್ನಾಚರಿಸಲು ಅಶಕ್ತನಾದವನು ಈ ಮೂರು ದಿನಗಳಲ್ಲಾದರೂ ನಡಸಿಯೇ ತೀರಬೇಕು.

೭-೧೧. ಅದರಿಂದ ಪೂರ್ಣ ಫಲವನ್ನು ಪಡೆದು ವಿಷ್ಣುಮಂದಿರದಲ್ಲಿ ಆನಂದವನ್ನನುಭವಿಸುತ್ತಾನೆ. ಯಾವ ಮಾನವನು ದೇವತೆಗಳನ್ನೂ, ಪಿತೃಗಳನ್ನೂ, ವಿಷ್ಣುವನ್ನೂ, ಗುರುವನ್ನೂ ಉದ್ದೇಶಿಸಿ ಸ್ನಾನಾದಿಗಳನ್ನು ಮಾಡುವುದಿಲ್ಲವೊ ಅವನು ಶಾಶ್ವತವಾದ ನರಕವನ್ನೈದುತ್ತಾನೆ. ಯಾವ ಗೃಹಸ್ಥನು ಈ ಮೂರು ದಿನಗಳಲ್ಲಿ ಕುಟುಂಬಭೋಜನವನ್ನು ಮಾಡಿಸುತ್ತಾನೆಯೊ ಅವನು ತನ್ನ ಪಿತೃಗಳೆಲ್ಲರನ್ನೂ ಉದ್ಧರಿಸಿ ಪರಮಪದವನ್ನು ಪಡೆಯುತ್ತಾನೆ. ಯಾವನು ಕೊನೆಯ ಮೂರು ದಿನಗಳಲ್ಲಿ ಗೀತಾಪಾಠವನ್ನು ಮಾಡುತ್ತಾನೋ ಅವನು ದಿನ ದಿನವೂ ಅಶ್ವಮೇಧ ಯಜ್ಞಗಳ ಫಲವನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ. ಯಾವನು ಈ ಮೂರು ದಿನಗಳಲ್ಲಿ ಸಹಸ್ರನಾಮಪಠನವನ್ನು ಮಾಡುತ್ತಾನೆಯೋ ಅವನು ನೀರಿನಲ್ಲಿರುವ ಪದ್ಮಪತ್ರದಂತೆ ಎಲ್ಲಿಯೂ ಪಾಪಗಳಿಂದ ಲೇಪಹೊಂದುವುದಿಲ್ಲ. ಹೀಗೆ ಗೀತಾಸಹಸ್ರನಾಮಪಠನದಿಂದ ಕೆಲವರು ಮನುಷ್ಯರು ದೇವತ್ವವನ್ನು ಪಡೆದರು; ಕೆಲವರು ಸಿದ್ಧತ್ವವನ್ನು ಪಡೆದರು.

೧೨. ಈ ಮೂರು ದಿನಗಳೂ ಯಾವನು ಭಾಗವತಶಾಸ್ತ್ರವನ್ನು ಕೇಳು

ಕೈಶ್ಚಿತ್ಪ್ರಾಪ್ತೋ ಬ್ರಹ್ಮಭಾವೋ ದಿನತ್ರಯನಿಷೇವಣಾತ್ ।
ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ॥ ೧೩ ॥
ಅಥವಾ ಕಾರ್ತಿಕೇ ಮಾಸಿ ದಿನತ್ರಯನಿಷೇವಣಾತ್ ।
ಕಾರ್ತಿಕೇ ಹರಿಪೂಜಾಂ ತು ಯಃ ಕರೋತಿ ದಿನತ್ರಯೇ ॥ ೧೪ ॥
ನ ತಸ್ಯ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ।
ಕಾರ್ತಿಕೇ ಮಾಸಿ ವಿಪ್ರೇಂದ್ರ ಸರ್ವಮಂತ್ಯದಿನತ್ರಯೇ ॥ ೧೫ ॥
ಪುಣ್ಯಂ ತತ್ರಾಪಿ ವೈ ಶೇಷ್ಯಂ ರಾಕಾಯಾಂ ವರ್ತತೇಽನಘ ।
ಪ್ರಾತಃಕಾಲೇ ಸಮುತ್ಥಾಯ ಶೌಚಂ ಸ್ನಾನಾದಿಕಂ ಚರೇತ್ ॥ ೧೬ ॥
ಸಮಾಪ್ಯ ಸರ್ವಕರ್ಮಾಣಿ ವಿಷ್ಣುಪೂಜಾಂ ಸಮಾಚರೇತ್ ।
ಉದ್ಯಾನೇ ವಾ ಗೃಹೇ ವಾಪಿ ಕಾರ್ತಿಕ್ಯಾಂ ವಿಷ್ಣುತತ್ಪರಃ ॥ ೧೭ ॥
ಮಂಡಪಂ ತತ್ರ ಕುರ್ವೀತ ಕದಲೀಸ್ತಂಭಮಂಡಿತಂ ।
ಚೂತಪಲ್ಲವಸಂವೀತಮಿಕ್ಷುದಂಡೈಸ್ಸುಮಂಡಿತಂ ॥ ೧೮ ॥

---

ತ್ತಾನೆಯೋ ಅವನ ಪುಣ್ಯಫಲವನ್ನು ಇಷ್ಟೆಂದು ಹೇಳಲು ಭೂಮಿಯಲ್ಲಾಗಲಿ ಸ್ವರ್ಗದಲ್ಲಾಗಲಿ ಯಾವನು ಶಕ್ತನಾದಾನು?

೧೩. ಈ ಮೂರು ದಿನಗಳಕಾಲ ವ್ರತ ನಡೆಸುವುದರಿಂದ ಕೆಲವರು ಬ್ರಹ್ಮ ಭಾವವನ್ನು ಪಡೆದರು. ಬ್ರಹ್ಮಜ್ಞಾನದಿಂದಲಾಗಲಿ, ಪ್ರಯಾಗದಲ್ಲಿ ಮರಣ ಹೊಂದುವುದರಿಂದಾಗಲಿ ಮುಕ್ತಿಯುಂಟಾಗುತ್ತದೆ.

೧೪–೧೫. ಅಥವಾ ಕಾರ್ತಿಕಮಾಸದಲ್ಲಿ ಮೂರು ದಿನ ವ್ರತ ನಡೆಸುವುದರಿಂದ ಮುಕ್ತಿಯು ದೊರೆಯುತ್ತದೆ. ಕಾರ್ತಿಕಮಾಸದಲ್ಲಿ ಈ ಮೂರು ದಿನಗಳಲ್ಲಿ ಯಾವನು ಹರಿಪೂಜೆಯನ್ನು ಮಾಡುತ್ತಾನೆಯೋ ಅವನಿಗೆ ನೂರಾರು ಕಲ್ಪಕೋಟಿಗಳಲ್ಲಿ ಕೂಡ ಪುನರಾವೃತ್ತಿಯು ದೊರೆಯುವುದಿಲ್ಲ. ಎಲೈ ವಿಪ್ರೇಂದ್ರಾ! ಕಾರ್ತಿಕಮಾಸದಲ್ಲಿ ಸರ್ವವೂ ಕೊನೆಯ ಮೂರು ದಿನಗಳಲ್ಲಿ ನೆಲಸಿರುವುದು.

೧೬. ಎಲೈ ಪಾಪರಹಿತನೇ! ಅದರಲ್ಲಿಯೂ ಪೂರ್ಣಿಮೆಯಲ್ಲಿ ವಿಶೇಷವಾದ ಪುಣ್ಯವುಂಟು. ಪ್ರಾತಃಕಾಲದಲ್ಲಿ ಎದ್ದು ಶೌಚವನ್ನೂ, ಸ್ನಾನಾದಿಗಳನ್ನೂ ಮಾಡಬೇಕು.

೧೭. ಸರ್ವಕರ್ಮಗಳನ್ನೂ ಮುಗಿಸಿ ವಿಷ್ಣುಪೂಜೆಯನ್ನು ಮಾಡಬೇಕು. ಕಾರ್ತಿಕದಲ್ಲಿ ವಿಷ್ಣುತತ್ಪರನಾಗಿ ಉದ್ಯಾನದಲ್ಲಾಗಲಿ, ಮನೆಯೊಳಗೇ ಆಗಲಿ ವಿಷ್ಣುಪೂಜೆಯನ್ನು ಮಾಡಬೇಕು.

೧೮. ಬಾಳೆಯ ಕಂದುಗಳಿಂದಲೂ, ಕಬ್ಬಿನ ಜಲ್ಲೆಗಳಿಂದಲೂ ಅಲಂಕರಿಸಲ್ಪಟ್ಟು ಮಾವಿನ ತಳಿರು ಬಿಗಿದಿರುವ ಮಂಟಪವನ್ನು ರಚಿಸಬೇಕು.

ಚಿತ್ರವಸ್ತ್ರೈಃ ಸ್ವಲಂಕೃತ್ಯ ತತ್ರ ದೇವಂ ಪ್ರಪೂಜಯೇತ್ ।
ಚೂತಪಲ್ಲವಪುಷ್ಪಾಢ್ಯೈಃ ಫಲಾದ್ಯೈಃ ಪೂಜಯೇದ್ಧರಿಂ ॥ ೧೯ ॥
ಶೃಣುಯಾದೂರ್ಜಮಾಹಾತ್ಮ್ಯಂ ನಿಯಮೇನ ಶುಚಿಃ ಪುಮಾನ್ ।
ಸಂಪೂರ್ಣಮಥವಾಽಧ್ಯಾಯಮೇಕಶ್ಲೋಕಮಥಾಪಿ ವಾ ॥ ೨೦ ॥
ಮುಹೂರ್ತಂ ವಾಪಿ ಶೃಣುಯಾತ್ಕಥಾಂ ಪುಣ್ಯಾಂ ದಿನೇ ದಿನೇ ।
ಯದಿ ಪ್ರತಿದಿನಂ ಶ್ರೋತುಮಶಕ್ತಃ ಸ್ಯಾತ್ತು ಮಾನವಃ ॥ ೨೧ ॥
ಪುಣ್ಯಮಾಸೇಽಥವಾ ಪುಣ್ಯತಿಥೌ ಸಂಶೃಣುಯಾದಪಿ ।
ತೇನ ಪುಣ್ಯಪ್ರಭಾವೇನ ಪಾಪಾನ್ಮುಕ್ತೋ ಭವೇನ್ನರಃ ॥ ೨೨ ॥
ಪುರಾಣಜ್ಞಃ ಶುಚಿರ್ದಕ್ಷಃ ಶಾಂತೋ ವಿಗತಮತ್ಸರಃ ।
ಸಾಧುಃ ಕಾರುಣಿಕೋ ವಾಗ್ಮೀ ವದೇತ್ಪುಣ್ಯಾಂ ಕಥಾಂ ಸುಧೀಃ ॥ ೨೩ ॥
ವ್ಯಾಸಾಸನಂ ಸಮಾರೂಢೋ ಯದಾ ಪೌರಾಣಿಕೋ ಭವೇತ್ ।
ಆಸಮಾಪ್ತೇಃ ಪ್ರಸಂಗಸ್ಯ ನಮಸ್ಕುರ್ಯಾನ್ನ ಕಸ್ಯಚಿತ್ ॥ ೨೪ ॥
ನ ದುರ್ಜನಸಮಾಕೀರ್ಣೇ ನ ಶೂದ್ರಶ್ವಾಪದಾವೃತೇ ।
ದೇಶೇ ನ ದ್ಯೂತಸದನೇ ವದೇತ್ಪುಣ್ಯಕಥಾಂ ಸುಧೀಃ ॥ ೨೫ ॥

---

೧೯. ಅದನ್ನು ಚಿತ್ರವಸ್ತ್ರಗಳಿಂದ ಅಲಂಕರಿಸಿ ಅಲ್ಲಿ ದೇವನನ್ನು ಪೂಜಿಸಬೇಕು. ಮಾವಿನ ಚಿಗುರು ಮತ್ತು ಹೂವುಗಳಿಂದಲೂ, ಫಲಾದಿಗಳಿಂದಲೂ ಶ್ರೀಹರಿಯನ್ನು ಪೂಜಿಸಬೇಕು.

೨೦. ಶುಚಿಯಾಗಿ ನಿಯಮದಿಂದ ಕಾರ್ತಿಕಮಾಹಾತ್ಮ್ಯವನ್ನು ಕೇಳಬೇಕು. ಆ ಮಾಹಾತ್ಮ್ಯವನ್ನು ಸಂಪೂರ್ಣವಾಗಿಯಾಗಲಿ, ಒಂದು ಅಧ್ಯಾಯವನ್ನಾಗಲಿ, ಅಥವಾ ಕಡೆಗೆ ಒಂದು ಶ್ಲೋಕವನ್ನೇ ಆಗಲಿ ಕೇಳಬೇಕು.

೨೧–೨೨. ದಿನದಿನವೂ ಪುಣ್ಯಕಥೆಯನ್ನು ಒಂದು ಮುಹೂರ್ತದವರೆಗಾದರೂ ಕೇಳುತ್ತಿರಬೇಕು. ಪ್ರತಿದಿನವೂ ಕೇಳಲು ಅಶಕ್ತನಾದ ಪಕ್ಷದಲ್ಲಿ ಪುಣ್ಯಮಾಸದಲ್ಲೋ ಅಥವಾ ಪುಣ್ಯತಿಥಿಯಲ್ಲೋ ಅದನ್ನು ಕೇಳಬೇಕು. ಆ ಪುಣ್ಯದ ಪ್ರಭಾವದಿಂದ ನರನು ಪಾಪದಿಂದ ಮುಕ್ತನಾಗುತ್ತಾನೆ.

೨೩–೨೪. ಪುರಾಣಗಳನ್ನು ಬಲ್ಲವನೂ, ಶುಚಿಯೂ, ದಕ್ಷನೂ, ಶಾಂತನೂ, ಮಾತ್ಸರ್ಯವಿಲ್ಲದವನೂ, ಸಾಧುವೂ, ಕರುಣಾವಂತನೂ, ವಾಗ್ಮಿಯೂ ಆದ ಪಂಡಿತರು ಪುಣ್ಯಕಥೆಯನ್ನು ಹೇಳಬೇಕು. ಪೌರಾಣಿಕನು ವ್ಯಾಸಾಸನವನ್ನು ಏರಿದ ಬಳಿಕ ಪ್ರಸಂಗವು ಮುಗಿಯುವವರೆಗೂ ಯಾರಿಗೂ ನಮಸ್ಕಾರ ಮಾಡಬಾರದು.

೨೫. ದುರ್ಜನರು ತುಂಬಿರುವ ಕಡೆಯಲ್ಲಿಯೂ, ಶೂದ್ರರಿಂದಲೂ, ಕ್ರೂರಮೃಗಗಳಿಂದಲೂ ತುಂಬಿದ ಪ್ರದೇಶದಲ್ಲಿಯೂ, ಜೂಜಿನ ಮನೆಯಲ್ಲಿಯೂ ಪಂಡಿತನು ಪುಣ್ಯಕಥೆಯನ್ನು ಹೇಳಬಾರದು.

ಶ್ರದ್ಧಾಭಕ್ತಿಸಮಾಯುಕ್ತಾಃ ನಾನ್ಯಕಾರ್ಯೇಷು ಲಾಲಸಾಃ ।
ವಾಗ್ಯತಾಃ ಶುಚಯೋ ದಕ್ಷಾಃ ಶ್ರೋತಾರಃ ಪುಣ್ಯಭಾಗಿನಃ ॥ ೨೬ ॥
ಅಭಕ್ತ್ಯಾ ಯೇ ಕಥಾಂ ಪುಣ್ಯಾಂ ಶೃಣ್ವಂತಿ ಮನುಜಾಧಮಾಃ ।
ತೇಷಾಂ ಪುಣ್ಯಫಲಂ ನಾಸ್ತಿ ದುಃಖಃ ಸ್ಯಾಜ್ಜನ್ಮಜನ್ಮನಿ ॥ ೨೭ ॥
ಪೌರಾಣಿಕಂ ಚ ಮಾಸಾಂತೇ ಪೂಜಯೇದ್ಭಕ್ತಿತತ್ಪರಃ ।
ಗಂಧಮಾಲ್ಯೈಸ್ತಥಾ ವಸ್ತ್ರೈರಲಂಕಾರೈರ್ಧನೇನ ಚ ॥ ೨೮ ॥
ಶೃಣ್ವಂತಿ ಚ ಕಥಾಂ ಭಕ್ತ್ಯಾ ನ ದರಿದ್ರಾ ನ ಪಾಪಿನಃ ॥ ೨೯ ॥
ಕಥಾಯಾಂ ಕೀರ್ತ್ಯಮಾನಾಯಾಂ ಯೇ ಗಚ್ಛಂತ್ಯನ್ಯತೋ ನರಾಃ ।
ಭೋಗಾಂತರೇ ಪ್ರಣಶ್ಯಂತಿ ತೇಷಾಂ ದಾರಾಶ್ಚ ಸಂಪದಃ ॥ ೩೦ ॥
ಉಚ್ಚಾಸನಸಮಾರೂಢೋ ನ ನರಃ ಪ್ರಣತೋ ಭವೇತ್ ।
ವಿಷವೃಕ್ಷಸ್ತಥಾ ಸ್ವಾಪೇ ವನೇ ಚಾಜಗರೋ ಭವೇತ್ ॥ ೩೧ ॥
ಕಥಾಯಾಂ ಕೀರ್ತ್ಯಮಾನಾಯಾಂ ವಿಘ್ನಂ ಕುರ್ವಂತಿ ಯೇ ನರಾಃ ।
ಕೋಟ್ಯಬ್ದನರಕಾನ್ಭುಕ್ತ್ವಾ ಭವಂತಿ ಗ್ರಾಮಸೂಕರಾಃ ॥ ೩೨ ॥

---

೨೬–೨೭. ಶ್ರದ್ಧಾಭಕ್ತಿಗಳಿಂದ ಕೂಡಿ ಬೇರೆ ಕಾರ್ಯಗಳಲ್ಲಿ ಮನಸ್ಸಿಡದೆ ಮಾತನ್ನು ಅಂಕೆಯಲ್ಲಿಟ್ಟುಕೊಂಡು ಶುಚಿಗಳೂ ದಕ್ಷರೂ ಆಗಿ ಕೇಳುವವರು ಪುಣ್ಯಭಾಗಿಗಳಾಗುತ್ತಾರೆ. ಅಭಕ್ತರಾಗಿ ಯಾವ ಮನುಷ್ಯಾಧಮರು ಪುಣ್ಯ ಕಥೆಯನ್ನು ಕೇಳುತ್ತಾರೆಯೋ ಅವರಿಗೆ ಪುಣ್ಯಫಲವಿಲ್ಲ. ಜನ್ಮಜನ್ಮದಲ್ಲಿಯೂ ಅವರಿಗೆ ದುಃಖವೇ ಉಂಟಾಗುತ್ತದೆ.

೨೮–೨೯. ತಿಂಗಳ ಕೊನೆಯಲ್ಲಿ ವ್ರತಿಯು ಭಕ್ತಿತತ್ಪರನಾಗಿ ಗಂಧಮಾಲ್ಯ ಗಳಿಂದಲೂ, ವಸ್ತ್ರಾಲಂಕಾರಗಳಿಂದಲೂ, ಧನದಿಂದಲೂ ಪುರಾಣಿಕನನ್ನು ಪೂಜಿಸಬೇಕು. ಯಾರು ಕಥೆಯನ್ನು ಭಕ್ತಿಯಿಂದ ಕೇಳುತ್ತಾರೆಯೋ ಅವರು ದರಿದ್ರರೂ, ಪಾಪಿಗಳೂ ಆಗುವುದಿಲ್ಲ.

೩೦. ಕಥೆಯನ್ನು ಹೇಳುತ್ತಿರುವಾಗ ಯಾವ ನರರು ಬೇರೆ ಕಡೆಗೆ ಹೊರಟು ಹೋಗುವರೋ ಅವರಿಗೆ ಜನ್ಮಾಂತರದಲ್ಲಿ ಹೆಂಡಿರೂ ಸಂಪತ್ತೂ ನಾಶವಾಗಿ ಹೋಗುತ್ತವೆ.

೩೧. ಉಚ್ಚಾಸನದಲ್ಲಿ ಕುಳಿತ ನರನು ಪುರಾಣಿಕನಿಗೆ ನಮ್ರನಾಗದಿದ್ದಲ್ಲಿ ಜನ್ಮಾಂತರದಲ್ಲಿ ವಿಷವೃಕ್ಷವಾಗುತ್ತಾನೆ; ಶಯನಮಾಡಿದಲ್ಲಿ ವನದಲ್ಲಿ ಅಜಗರ (ಹೆಬ್ಬಾವು)ವಾಗುತ್ತಾನೆ.

೩೨. ಕಥೆಯನ್ನು ಹೇಳುತ್ತಿರುವಾಗ ಯಾವ ನರರು ವಿಘ್ನಮಾಡುತ್ತಾರೆಯೋ ಅವರು ಕೋಟಿವರ್ಷಗಳಕಾಲ ನರಕಗಳನ್ನನುಭವಿಸಿ ಊರಹಂದಿಗಳಾಗಿ ಹುಟ್ಟುತ್ತಾರೆ.

ಯೇ ಶ್ರಾವಯಂತಿ ಮನುಜಾಃ ಕಥಾಂ ಪೌರಾಣಿಕೀಂ ಶುಭಾಂ ।
ಕಲ್ಪಕೋಟಿಶತಂ ಸಾಗ್ರಂ ತಿಷ್ಠಂತಿ ಬ್ರಹ್ಮಣಃ ಪದೇ ॥ ೩೩ ॥
ಆಸನಾರ್ಥೇ ಪ್ರಯಚ್ಛಂತಿ ಪುರಾಣಜ್ಞಸ್ಯ ಯೇ ನರಾಃ ।
ಕಂಬಲಾಜಿನವಾಸಾಂಸಿ ಮಂಚಂ ಫಲಕಮೇವ ವಾ ॥ ೩೪ ॥
ಪರಿಧಾನೀಯವಸ್ತ್ರಾಣಿ ಪ್ರಯಚ್ಛಂತಿ ಚ ಯೇ ನರಾಃ ।
ಭೂಷಣಾದಿ ಪ್ರಯಚ್ಛಂತಿ ವಸೇಯುರ್ಬ್ರಹ್ಮಸದ್ಮನಿ ॥ ೩೫ ॥
ವಾಚಕೇ ಪರಿತುಷ್ಟೇ ತು ತುಷ್ಟಾಃ ಸ್ಯುಃ ಸರ್ವದೇವತಾಃ ।
ಅತಃ ಸಂತೋಷಯೇದ್ಭಕ್ತ್ಯಾ ಭಕ್ತಿಶ್ರದ್ಧಾನ್ವಿತಃ ಪುಮಾನ್ ।
ತಸ್ಯ ಪುಣ್ಯಫಲಂ ಪೂರ್ಣಂ ಭವತ್ಯೇವ ನ ಸಂಶಯಃ ॥ ೩೬ ॥
ಯತ್ಫಲಂ ಸರ್ವಯಜ್ಞೇಷು ಸರ್ವದಾನೇಷು ಯತ್ಫಲಂ ।
ಸಕೃತ್ಪುರಾಣಶ್ರವಣಾತ್ತತ್ಫಲಂ ವಿಂದತೇ ನರಃ ॥ ೩೭ ॥
ಕಲೌ ಯುಗೇ ವಿಶೇಷೇಣ ಪುರಾಣಶ್ರವಣಾದೃತೇ ।
ನಾಸ್ತಿ ಧರ್ಮಃ ಪರಃ ಪುಂಸಾಂ ನಾಸ್ತಿ ಮುಕ್ತಿಪಥಃ ಪರಃ ।
ಪುರಾಣಶ್ರವಣಾದ್ವಿಷ್ಣೋರ್ನಾಸ್ತಿ ಸಂಕೀರ್ತನಾತ್ಪರಂ ॥ ೩೮ ॥

---

೩೩. ಯಾವ ಮನುಷ್ಯರು ಶುಭಕರವಾದ ಪುರಾಣದ ಕಥೆಯನ್ನು ಇತರರಿಗೆ ಕೇಳಿಸುತ್ತಾರೆಯೋ ಅವರು ನೂರುಕೋಟಿ ಕಲ್ಪಗಳಕಾಲ ಪೂರ್ತಿಯಾಗಿ ಬ್ರಹ್ಮನ ಪದದಲ್ಲಿ ನೆಲಸಿರುತ್ತಾರೆ.

೩೪–೩೫. ಯಾವ ನರರು ಪುರಾಣಿಕನಿಗೆ ಕೂರುವ ಪೀಠಕ್ಕಾಗಿ ಕಂಬಳಿ, ಅಜಿನ, ಬಟ್ಟೆ, ಮಂಚ, ಹಲಗೆ—ಮೊದಲಾದುವನ್ನು ಕೊಡುತ್ತಾರೋ, ಯಾರು ಭೂಷಣಾದಿಗಳನ್ನು ಕೊಡುತ್ತಾರೆಯೋ ಅವರು ಬ್ರಹ್ಮಮಂದಿರದಲ್ಲಿ ವಾಸ ಮಾಡುತ್ತಾರೆ.

೩೬. ವಾಚಕನು (ಪುರಾಣ ಹೇಳುವಾತನು) ತುಷ್ಟನಾದರೆ ಸರ್ವದೇವತೆಗಳೂ ಸಂತುಷ್ಟರಾಗುತ್ತಾರೆ. ಆದುದರಿಂದ ಭಕ್ತಿಶ್ರದ್ಧಾಯುಕ್ತನಾದ ಪುರುಷನು ಭಕ್ತಿಯಿಂದ ಪುರಾಣಿಕನನ್ನು ಸಂತೋಷಪಡಿಸಬೇಕು. ಅಂತಹವನಿಗೆ ಪುಣ್ಯಫಲವು ಪೂರ್ಣವಾಗಿಯೇ ಆಗುತ್ತದೆಯೆಂಬುದರಲ್ಲಿ ಸಂಶಯವಿಲ್ಲ.

೩೭. ಸರ್ವಯಜ್ಞಗಳಲ್ಲಿ ಯಾವ ಫಲವುಂಟೋ, ಸರ್ವದಾನಗಳಲ್ಲಿ ಯಾವ ಫಲವುಂಟೋ, ಆ ಫಲವನ್ನು ನರನು ಒಂದು ಸಲ ಪುರಾಣಶ್ರವಣ ಮಾಡುವುದರಿಂದ ಪಡೆಯುತ್ತಾನೆ.

೩೮. ಕಲಿಯುಗದಲ್ಲಿ ವಿಶೇಷವಾಗಿ ಪುರಾಣಶ್ರವಣವನ್ನು ಬಿಟ್ಟರೆ ಮನುಷ್ಯನಿಗೆ ಬೇರೆ ಶ್ರೇಷ್ಠಧರ್ಮವಿಲ್ಲ; ಬೇರೆ ಮುಕ್ತಿಮಾರ್ಗವಿಲ್ಲ. ಪುರಾಣಶ್ರವಣಕ್ಕಿಂತಲೂ ವಿಷ್ಣುವಿನ ನಾಮಸಂಕೀರ್ತನಕ್ಕಿಂತಲೂ ಮೇಲಾದುದು ಬೇರೊಂದಿಲ್ಲ.

ಯ ಏತದೂರ್ಜಮಾಹಾತ್ಮ್ಯಂ ಶೃಣುಯಾಚ್ಛ್ರಾವಯೇದಪಿ ।
ಸ ತೀರ್ಥರಾಜಬದರೀಗಮನಸ್ಯ ಫಲಂ ಲಭೇತ್ ॥ ೩೯ ॥
ಸರ್ವರೋಗಾಪಹಂ ಸರ್ವಪಾಪನಾಶಕರಂ ಶುಭಂ ॥ ೪೦ ॥
ಶ್ರುತ್ವಾ ಚೈಕಪದೇ ಯೋ ವೈ ಅಗಮ್ಯಾಗಮನೇ ರತಃ ।
ಕನ್ಯಾಸ್ವಸ್ರೋರ್ವಿಕ್ರಯಿಣಮುಭಯಂ ತು ವಿಮೋಚಯೇತ್ ॥ ೪೧ ॥
ಮಾಹಾತ್ಮ್ಯಮೇತದಾಕರ್ಣ್ಯ ಪೂಜಯೇದ್ಯಸ್ತು ಪಾಠಕಂ ।
ಗೋಭೂಹಿರಣ್ಯವಸ್ತ್ರೈಶ್ಚ ವಿಷ್ಣುತುಲ್ಯೋ ಯತೋ ಹಿ ಸಃ ॥ ೪೨ ॥
ಧರ್ಮಶಾಸ್ತ್ರಂ ಪುರಾಣಂ ಚ ವೇದವಿದ್ಯಾದಿಕಂ ಚ ಯತ್ ।
ಪುಸ್ತಕಂ ವಾಚಕಾಯೈವ ದಾತವ್ಯಂ ಧರ್ಮಮಿಚ್ಛತಾ ।
ಪುರಾಣವಿದ್ಯಾದಾತಾರೋ ಹ್ಯನಂತಫಲಭೋಗಿನಃ ॥ ೪೩ ॥
ಇದಂ ಯಃ ಪಠತೇ ಭಕ್ತ್ಯಾ ಶೃತ್ವಾ ಚೈವಾವಧಾರಯೇತ್ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೪೪ ॥

---

೩೯. ಯಾವನು ಈ ಕಾರ್ತಿಕಮಾಹಾತ್ಮ್ಯವನ್ನು ಕೇಳುತ್ತಾನೆಯೋ, ಇತರರಿಗೆ ಕೇಳಿಸುತ್ತಾನೆಯೋ ಅವನು ತೀರ್ಥರಾಜ (ಪ್ರಯಾಗ) ಮತ್ತು ಬದರೀ ಗಮನಗಳ ಫಲವನ್ನು ಪಡೆಯುತ್ತಾನೆ.

೪೦. ಈ ಮಾಹಾತ್ಮ್ಯವು ಸರ್ವರೋಗಗಳನ್ನೂ ಪರಿಹರಿಸುವಂತಹುದು; ಸರ್ವಪಾಪಗಳನ್ನೂ ನಾಶಪಡಿಸತಕ್ಕದ್ದು ಮತ್ತು ಶುಭವಾದುದು.

೪೧. ಯಾವನು ಅಗಮ್ಯಾಗಮನದಲ್ಲಿ ನಿರತನೋ, ಕನ್ಯೆ ಮತ್ತು ಸೋದರಿಯರನ್ನು ವಿಕ್ರಯಿಸುವವನೋ ಅವನು ಕೂಡ ಇದನ್ನು ಕೇಳಿದರೆ ಕಥಾಶ್ರವಣದ ಪುಣ್ಯವು ಅವನನ್ನು ಇಬ್ಬಗೆಯ ಪಾಪಗಳಿಂದಲೂ ಬಿಡುಗಡೆ ಮಾಡುತ್ತದೆ.

೪೨. ಈ ಮಾಹಾತ್ಮ್ಯವನ್ನಾಲಿಸಿ ಯಾವನು ಪುರಾಣಿಕನನ್ನು ಗೋವು, ಭೂಮಿ, ಚಿನ್ನ ಮತ್ತು ವಸ್ತ್ರಗಳಿಂದ ಪೂಜಿಸುತ್ತಾನೋ ಅವನು ವಿಷ್ಣುವಿಗೆ ಎಣೆಯಾದವನೇ ಸರಿ.

೪೩. ಧರ್ಮಶಾಸ್ತ್ರ, ಪುರಾಣ, ವೇದವಿದ್ಯೆ, ಮೊದಲಾದ ಪುಸ್ತಕವಾವುದಾದರೂ ಇದ್ದರೆ ಧರ್ಮವನ್ನಪೇಕ್ಷಿಸುವವನು ಅದನ್ನು ವಾಚಕನಿಗೆ ಕೊಡಬೇಕು. ಪುರಾಣ ವಿದ್ಯೆಗಳನ್ನು ದಾನಮಾಡುವವರು ಅನಂತಫಲಗಳನ್ನು ಭೋಗಿಸುವವರಾಗುತ್ತಾರೆ.

೪೪. ಈ ಮಾಹಾತ್ಮ್ಯವನ್ನು ಯಾವನು ಭಕ್ತಿಯಿಂದ ಓದುತ್ತಾನೆಯೋ, ಕೇಳಿ ಮನಸ್ಸಿನಲ್ಲಿಡುತ್ತಾನೆಯೋ ಅವನು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆಯಲ್ಲದೆ ವಿಷ್ಣುಲೋಕಕ್ಕೂ ಹೋಗುತ್ತಾನೆ.

ನ ಕಸ್ಯಾಪೀದಮಾಖ್ಯೇಯಂ ಶ್ರದ್ಧಾಹೀನಾಯ ದುರ್ಮತೇಃ ॥ ೪೫ ॥
ಅಪೂಜಯಿತ್ವಾ ಗುರುಮುಗ್ರಬುದ್ಧ್ಯಾ
ಧರ್ಮಪ್ರವಕ್ತಾರಮನನ್ಯಬುದ್ಧಿಃ ।
ಭುಕ್ತ್ವಾ ತು ಭೋಗಾನ್ನರಕೇಷು ಚೈವ
ತತೋ ಹಿ ಜನ್ಮಾಂತರದುಃಖಭೋಗೀ ॥ ೪೬ ॥
ತಸ್ಮಾತ್ಸಂಪೂಜಯೇದ್ಭಕ್ತ್ಯಾ ಗುರುಂ ತತ್ತ್ವಪ್ರಬೋಧಕಂ ।
ಮಾಹಾತ್ಮ್ಯಸ್ಯ ಚ ಲೇಶೋಽಯಂ ತವ ಚೋಕ್ತೋ ಮಯಾನಘ ॥ ೪೭ ॥
ನ ಶಕ್ಯತೇ ಹಿ ಸಂಪೂರ್ಣಂ ವಕ್ತುಂ ವರ್ಷಶತೈರಪಿ ।
ಪುರಾ ಕೈಲಾಸಶಿಖರೇ ಪಾರ್ವತ್ಯೈ ಪ್ರೋಕ್ತವಾಂಛಿವಃ ॥ ೪೮ ॥
ಕಾರ್ತಿಕಸ್ಯ ತು ಮಾಹಾತ್ಮ್ಯಂ ಯಾವದ್ವರ್ಷಶತಂ ವದನ್ ।
ತಥಾಪಿ ನಾಂತಮಗಮದಶಕ್ತೋ ವಿರರಾಮ ಹ ॥ ೪೯ ॥
ಪುತ್ರಾರ್ಥೀ ಚ ಧನಾರ್ಥೀ ಚ ರಾಜ್ಯಾರ್ಥೀ ಸ್ವಫಲಂ ಲಭೇತ್ ।
ಕಿಮತ್ರ ಬಹುನೋಕ್ತೇನ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥ ೫೦ ॥

ಸೂತ ಉವಾಚ :—

ಇತ್ಯುಕ್ತೋ ಬ್ರಹ್ಮಣಾ ಚೈವ ನಾರದಃ ಪ್ರೇಮನಿರ್ಭರಃ ।
ಭೂಯೋ ಭೂಯೋ ನಮಸ್ಕೃತ್ಯ ಯಯೌ ಯಾದೃಚ್ಛಿಕೋ ಮುನಿಃ ॥

---

೪೫-೪೬. ಶ್ರದ್ಧಾಹೀನನೂ, ದುರ್ಮತಿಯೂ ಆದ ಯಾವನೊಬ್ಬನಿಗೂ ಇದನ್ನು ಹೇಳಲಾಗದು. ಧರ್ಮವನ್ನು ವಿವರಿಸಿ ಹೇಳುವ ಗುರುವನ್ನು ಶ್ರೇಷ್ಠನೆಂದು ಭಾವಿಸಿ ಅನನ್ಯಬುದ್ಧಿಯುಳ್ಳವನಾಗಿ ಪೂಜಿಸದೆ ಇದ್ದರೆ, ನರಕಗಳಲ್ಲಿ ಭೋಗಗಳನ್ನು ಭೋಗಿಸಿ ಆ ಬಳಿಕ ಜನ್ಮಾಂತರದುಃಖಕ್ಕೆ ಭಾಗಿಯಾಗುತ್ತಾನೆ.

೪೭. ಆದ್ದರಿಂದ ತತ್ತ್ವಬೋಧಕನಾದ ಗುರುವನ್ನು ಭಕ್ತಿಯಿಂದ ಪೂಜಿಸಬೇಕು. ಎಲೈ ಪಾಪರಹಿತನೇ! ಮಾಹಾತ್ಮ್ಯದಲ್ಲಿ ಈ ಒಂದು ಲೇಶಾಂಶವನ್ನು ನಿನಗೆ ನಾನು ಹೇಳಿದ್ದೇನೆ.

೪೮-೫೦. ಸಂಪೂರ್ಣವಾಗಿ ಹೇಳುವುದಕ್ಕೆ ನೂರು ವರ್ಷಗಳಾದರೂ ಶಕ್ಯವಾಗುವುದಿಲ್ಲ. ಪೂರ್ವದಲ್ಲಿ ಕೈಲಾಸಶಿಖರದಲ್ಲಿ ಪಾರ್ವತಿಗೆ ಶಿವನು ಕಾರ್ತಿಕಮಾಸದ ಮಾಹಾತ್ಮ್ಯವನ್ನು ನೂರು ವರ್ಷದವರೆಗೂ ಹೇಳುತ್ತ ತಿಳಿಸಿದನು. ಆದರೂ ಅದು ಕೊನೆಮುಟ್ಟಲಿಲ್ಲ. ತರುವಾಯ ಆತನು ಅಶಕ್ತನಾಗಿ ಸುಮ್ಮನಾದನು. ಇದನ್ನಾಲಿಸಿ ಕೇಳಿದರೆ ಪುತ್ರರು ಬೇಕೆನ್ನುವವನೂ, ಧನಾಪೇಕ್ಷೆಯುಳ್ಳವನೂ, ರಾಜ್ಯಾರ್ಥಿಯಾದವನೂ ತಮ್ಮತಮ್ಮ ಇಷ್ಟಫಲಗಳನ್ನು ಪಡೆಯುತ್ತಾರೆ. ಹೆಚ್ಚು ಮಾತಿನಿಂದೇನು? ಮೋಕ್ಷಾರ್ಥಿಯು ಮೋಕ್ಷವನ್ನೂ ಪಡೆಯುತ್ತಾನೆ.

೫೧. ಸೂತಪುರಾಣಿಕನು ಹೇಳುತ್ತಾನೆ:—ಬ್ರಹ್ಮನು ಈ ರೀತಿ ನುಡಿಯಲು

ಕಥಿತಂ ಶಂಕರೇಣಾಪಿ ಪುತ್ರಾಯ ಹಿತಕಾಮ್ಯಯಾ ।
ಪಿತುಸ್ತದ್ವಾಕ್ಯಮಾಕರ್ಣ್ಯ ಷಣ್ಮುಖೋ ಹರ್ಷನಿರ್ಭರಃ ॥ ೫೨ ॥
ಕೃಷ್ಣೇನ ಸತ್ಯಭಾಮಾಯೈ ಕಾರ್ತಿಕಸ್ಯ ಚ ವೈಭವಃ ।
ಕಥಿತಸ್ತೇನ ಸಂತುಷ್ಟಾ ಸತ್ಯಾ ವ್ರತಮಥಾಽಕರೋತ್ ॥ ೫೩ ॥
ಋಷಯೋ ವಾಲಖಿಲ್ಯೇಭ್ಯಃ ಶ್ರುತ್ವಾ ಮಾಹಾತ್ಮ್ಯಮುತ್ತಮಂ ।
ಊರ್ಜವ್ರತಪರಾ ಜಾತಾಃ ತಸ್ಮಾದೂರ್ಜೋಽತಿವಲ್ಲಭಃ ॥ ೫೪ ॥
ಅಧೀತ್ಯ ಸರ್ವಶಾಸ್ತ್ರಾಣಿ ಪಯಸ್ಸಾರಮಿವೋದ್ಧೃತಂ ।
ನಾಽನೇನ ಸದೃಶಂ ಶಾಸ್ತ್ರಂ ವಿಷ್ಣುಪ್ರೀತಿಕರಂ ಶುಭಂ ॥ ೫೫ ॥

ವ್ಯಾಸ ಉವಾಚ :—

ಇತ್ಯುಕ್ತ್ವಾ ತಾನೃಷೀನ್ಸರ್ವಾನ್ ಸೂತೋ ವೈ ಧರ್ಮವಿತ್ತಮಃ ।
ವಿರರಾಮ ತತಸ್ತೇ ತು ಪೂಜಾಂ ಚಕ್ರುಸ್ತದಾಸ್ಯ ಚ ॥ ೫೬ ॥
ತೇ ಪುನಃ ಸ್ವಾಶ್ರಮಂ ಗತ್ವಾ ಹೃಷ್ಟಾಸ್ತೇ ಪರಮರ್ಷಯಃ ।
ಯಥಾ ಸೂತೇನೋಪದಿಷ್ಟಂ ತಥಾ ಚಕ್ರುರ್ವ್ರತಂ ಶುಭಂ ॥ ೫೭ ॥

---

ನಾರದನು ಪ್ರೇಮಪೂರ್ಣನಾಗಿ ಮತ್ತೆ ಮತ್ತೆ ನಮಸ್ಕಾರ ಮಾಡಿದನು. ಬಳಿಕ ಆ ಮುನಿಯು ಇಚ್ಛೆಬಂದೆಡೆ ಹೊರಟುಹೋದನು.

೫೨. ಶಂಕರನು ಕೂಡ ಹಿತವೆಸಗಬೇಕೆಂದು ಬಯಸಿ ತನ್ನ ಪುತ್ರ (ಷಣ್ಮುಖ)ನಿಗೆ ಇದನ್ನು ತಿಳಿಸಿದನು. ತಂದೆಯ ಆ ಮಾತನ್ನಾಲಿಸಿ ಷಣ್ಮುಖನು ಹರ್ಷದಿಂದ ತುಂಬಿ ತುಳುಕಿದನು.

೫೩. ಕೃಷ್ಣನಿಂದ ಸತ್ಯಭಾಮೆಗೆ ಕಾರ್ತಿಕದ ವೈಭವವು ಹೇಳಲ್ಪಟ್ಟಿತು. ಅದರಿಂದ ಸಂತುಷ್ಟಳಾಗಿ ಸತ್ಯಭಾಮೆಯು ಆ ವ್ರತವನ್ನು ಮಾಡಿದಳು.

೫೪-೫೫. ಋಷಿಗಳು ವಾಲಖಿಲ್ಯರಿಂದ ಉತ್ತಮವಾದ ಈ ಮಾಹಾತ್ಮ್ಯವನ್ನು ಕೇಳಿ ಕಾರ್ತಿಕವ್ರತದಲ್ಲಿ ತೊಡಗಿದವರಾದರು. ಆದ್ದರಿಂದ ಕಾರ್ತಿಕವು ಅತಿ ಮೆಚ್ಚಾದದ್ದು. ಸರ್ವಶಾಸ್ತ್ರಗಳನ್ನೂ ಅಧ್ಯಯನಮಾಡಿ ಅಮೃತಸಾರವೆಂಬಂತೆ ಇದನ್ನು ಎತ್ತಿ ರಚಿಸಲಾಗಿದೆ. ವಿಷ್ಣುವಿಗೆ ಪ್ರೀತಿಕರವಾಗಿ ಶುಭವಾದ ಈ ಶಾಸ್ತ್ರಕ್ಕೆ ಎಣೆಯಾದ ಮತ್ತೊಂದು ಶಾಸ್ತ್ರವಿಲ್ಲ.

೫೬. ವ್ಯಾಸನು ಹೇಳುತ್ತಾನೆ:—ಧರ್ಮಜ್ಞರಲ್ಲಿ ಶ್ರೇಷ್ಠನಾದ ಸೂತಪುರಾಣಿಕನು ಆ ಎಲ್ಲ ಋಷಿಗಳನ್ನೂ ಕುರಿತು ಈ ರೀತಿ ಹೇಳಿ ಸುಮ್ಮನಾದನು. ಬಳಿಕ ಅವರು ಅವನಿಗೆ ಪೂಜೆಯನ್ನು ಸಲ್ಲಿಸಿದರು.

೫೭. ಆ ಪರಮಋಷಿಗಳು ಸಂತುಷ್ಟರಾಗಿ ತಮ್ಮ ತಮ್ಮ ಆಶ್ರಮಗಳಿಗೆ ಮತ್ತೆ ಪ್ರಯಾಣಮಾಡಿದರು. ಅಲ್ಲಿಗೆ ಹೋಗಿ ಸೂತನು ಯಾವರೀತಿ ಉಪದೇಶಿಸಿದನೋ ಅದೇ ರೀತಿ ಶುಭಕರವಾದ ಕಾರ್ತಿಕವ್ರತವನ್ನು ಆಚರಿಸಿದರು.

ಅನೇನ ವಿಧಿನಾ ಯೇ ವೈ ಕುರ್ವಂತಿ ಕಾರ್ತಿಕವ್ರತಂ ।
ತೇ ಸರ್ವಪಾಪನಿರ್ಮುಕ್ತಾ ಗಚ್ಛಂತಿ ವಿಷ್ಣುಮಂದಿರಂ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಕಾರ್ತಿಕಮಾಸಮಾಹಾತ್ಮ್ಯೇ "ಪುಷ್ಕರಿಣೀಸಂಜ್ಞಿಕಾಂತಿಮತಿಥಿತ್ರಯಮಾಹಾತ್ಮ್ಯಕಥನಪೂರ್ವಕ ಪುರಾಣಶ್ರವಣ ಮಹಿಮಾ ವರ್ಣನಂ" ನಾಮ ಷಟ್‌ತ್ರಿಂಶೋಽಧ್ಯಾಯಃ

## ಕಾರ್ತಿಕಮಾಸಮಾಹಾತ್ಮ್ಯಂ ಸಂಪೂರ್ಣಂ

---

೫೮. ಈ ವಿಧಿಯಿಂದ ಯಾರು ಕಾರ್ತಿಕವ್ರತವನ್ನು ಮಾಡುತ್ತಾರೆಯೋ ಅವರು ಸರ್ವ ಪಾಪಗಳಿಂದಲೂ ವಿಮೋಚನೆಹೊಂದಿ ವಿಷ್ಣುಮಂದಿರವನ್ನು ಹೋಗಿ ಸೇರುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಕಾರ್ತಿಕಮಾಸಮಾಹಾತ್ಮ್ಯದಲ್ಲಿ "ಪುಷ್ಕರಿಣೀಸಂಜ್ಞೆಯ ಕೊನೆಯ ಮೂರು ತಿಥಿಗಳ ಮಾಹಾತ್ಮ್ಯಕಥನಪೂರ್ವಕ ಪುರಾಣಶ್ರವಣಮಹಿಮಾವರ್ಣನ"ವೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು

## ಕಾರ್ತಿಕಮಾಸಮಾಹಾತ್ಮ್ಯವು ಮುಗಿದುದು

